ವಿಷಯಾನುಕ್ರಮಣಿಕೆ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೩೮

# ಶ್ರೀಮದ್ವಾಯುಮಹಾಪುರಾಣಂ

(ಕನ್ನಡ ಅನುವಾದ ಸಹಿತ)

ಸಂಚಿಕೆ ೨


ಅನುವಾದಕ :

ಸಾಹಿತ್ಯ, ವೇದಾಂತ, ಕರ್ಣಾಟಕ, ಆಸ್ಥಾನ, ವಿದ್ವಾನ್

**ಆರ್. ಸೇತುಮಾಧವಾಚಾರ್**

ಪಂಡಿತ, ಗೌ॥ ಟ್ರೈನಿಂಗ್ ಕಾಲೇಜ್, ಮೈಸೂರು.



ಮೈಸೂರು :

ಶ್ರೀ ಶಾರದಾ ಎಲೆಕ್ಟ್ರಿಕ್ ಪ್ರೆಸ್

# ಉಪೋದ್ಘಾತ

ಶ್ರೀ ಭಗವಂತನು ಸೃಷ್ಟಿಸಿರುವ ಜೀವರಾಶಿಗಳಲ್ಲಿ ಮನುಷ್ಯಜನ್ಮವೇ ಉತ್ತಮ ವಾದುದೆಂದು ಸರ್ವರಿಗೂ ವಿದಿತವಾದ ವಿಷಯವಾಗಿದೆ. ಹೀಗೆ ಪೂರ್ವಾರ್ಜಿತವಾದ ಕರ್ಮಾನುಗುಣವಾಗಿ ನಾನಾಯೋನಿಗಳಲ್ಲಿ ಜನನಮರಣಗಳನ್ನು ಹೊಂದಿದ ಜೀವನು, ದೈವವಶಾತ್ ಪುಣ್ಯಕರ್ಮವಿಶೇಷದಿಂದಲೂ, ಭಗವದನುಗ್ರಹದಿಂದಲೂ ಉತ್ತಮ ವಾದ ಮನುಷ್ಯಜನ್ಮವನ್ನು ಹೊಂದುವನು. ಆಗ ಸದ್ವಿದ್ಯೆ, ಬುದ್ಧಿ, ಜ್ಞಾನ, ಐಶ್ವರ್ಯ, ವಿವೇಕ, ಇವೇ ಮೊದಲಾದ ಸದ್ಗುಣಗಳು ಉಂಟಾಗುವುವು. ಇಂತಹ ಉತ್ತಮವಾದ ಶರೀರವನ್ನು ಪಡೆದ ಪ್ರತಿಯೊಬ್ಬ ಜೀವನೂ, ತನಗೆ ಸರ್ವದಾ ಸುಖವೇ ಉಂಟಾಗಬೇಕಲ್ಲದೇ, ಯಾವಾಗಲೂ ಲೇಶಮಾತ್ರ ದುಃಖವು ಉಂಟಾಗಬಾರದೆಂದು ಯೋಚಿಸುವನು. ಹೀಗೆ ಸರ್ವಪ್ರಜೆಗಳಿಂದಲೂ ಅಪೇಕ್ಷಿತ ವಾದ ಸುಖವು ದುಃಖಸಹಿತವಾಗಿಯೂ, ಅನಿತ್ಯವಾಗಿಯೂ, ಇದೆ. ಹೇಗೆಂದರೆ ಒಬ್ಬ ಶ್ರೀಮಂತನಿಗೆ ಐಶ್ವರ್ಯ, ಸಂತಾನ, ಇವೇ ಮೊದಲಾದ ಸರ್ವಾನುಕೂಲ ಗಳಿದ್ದರೂ, ದೇಹಾರೋಗ್ಯವಿಲ್ಲದಿದ್ದರೆ ಅವನಿಗೆ ಅವೆಲ್ಲವೂ, ದುಃಖಮಯವಾಗಿಯೇ ಪರಿಣಮಿಸುವುದು. ಇದರಂತೆಯೇ ಸಂತಾನವಿಲ್ಲದ ಕೊರತೆಯು ಮತ್ತೆ ಕೆಲವರಿಗೂ, ಐಶ್ವರ್ಯವಿಲ್ಲದ ಕೊರತೆಯು ಮತ್ತೆ ಕೆಲವರಿಗೂ, ಪತ್ನಿವಿಯೋಗಾದಿ ನ್ಯೂನತೆಯು ಮತ್ತೆ ಕೆಲವರಿಗೂ ಉಂಟಾಗುತ್ತವೆ. ಆದುದರಿಂದ ಈ ಜೀವಮಾನದಲ್ಲಿ ಸುಖಕ್ಕಿಂತಲೂ, ದುಃಖವೇ ಅಧಿಕವಾಗಿರುವುದು ಅನುಭವಸಿದ್ಧವಾಗಿದೆ. ಆದುದರಿಂದ ಪ್ರತಿಯೊಬ್ಬ ಜೀವನೂ ದುಃಖರಹಿತವಾದ ಪರಮಸುಖವನ್ನು ಪಡೆಯಲು ಪ್ರಯತ್ನಿಸ ಬೇಕು. ಇಂತಹ ನಿತ್ಯಸುಖವು, ಮುಕ್ತಿಯಲ್ಲಿ ಭಗವದನುಗ್ರಹದಿಂದ ಉದ್ಭವಿಸು ವುದು. ಆ ಭಗವಂತನ ಅನುಗ್ರಹವು ಜ್ಞಾನಭಕ್ತಿವೈರಾಗ್ಯಗಳಿಂದಲೂ, ಶಾಸ್ತ್ರ ಶ್ರವಣಾದಿಗಳಿಂದಲೂ, ಸಂಭವಿಸುತ್ತದೆ. ಇಂತಹ ಜ್ಞಾನ, ಭಕ್ತಿ, ವೈರಾಗ್ಯಾದಿಗಳನ್ನು ಪುರಾಣಗಳು ವರ್ಣಿಸುತ್ತವೆ. ಅಂತಹ ಪುರಾಣಗಳು ಸಾತ್ವಿಕ, ರಾಜಸ, ತಾಮಸ ಗಳೆಂದು ಮೂರು (3) ವಿಧಗಳಾಗಿವೆ. ಪರಮಸುಖವಾದ ಮೋಕ್ಷವನ್ನು ಕೊಡುವುದು ಸಾತ್ವಿಕಪುರಾಣವು. ಅನಿತ್ಯವಾದ ಸ್ವರ್ಗಾದಿಸುಖವನ್ನು ಕೊಡುವುದೇ ರಾಜಸ ಪುರಾಣವು. ನರಕಾದ್ಯನರ್ಥಗಳನ್ನು ಕೊಡುವ ಪುರಾಣವೇ ತಾಮಸಪುರಾಣವಾಗಿದೆ. ಈ ರೀತಿಯಾಗಿ ದಶಲಕ್ಷಣಗಳಿಂದ ಯುಕ್ತವಾದ ಮಹಾಪುರಾಣಗಳಲ್ಲಿ ವಾಯು ಪುರಾಣವು ಒಂದಾಗಿದೆ.

ಈ ವಾಯುಮಹಾಪುರಾಣದಲ್ಲಿ ಪ್ರಥಮ, ಮತ್ತು ದ್ವಿತೀಯವೆಂದು ಎರಡು ಖಂಡಗಳಿರುತ್ತವೆ. ಪೂರ್ವಖಂಡದಲ್ಲಿ ಅರವತ್ತೊಂದು (61) ಅಧ್ಯಾಯಗಳೂ, ಉತ್ತರಖಂಡದಲ್ಲಿ ಐವತ್ತು (50) ಅಧ್ಯಾಯಗಳೂ ಇರುತ್ತವೆ. ಒಟ್ಟಿನಲ್ಲಿ ಈ ಪುರಾಣ ದಲ್ಲಿ ಹನ್ನೆರಡುಸಾವಿರ (12000) ಶ್ಲೋಕಗಳಿರುತ್ತವೆ. ಆದರೆ ವಾಯುಪುರಾಣದಲ್ಲಿ ಇಪ್ಪತನಾಲ್ಕುಸಾವಿರ (24000) ಶ್ಲೋಕಗಳಿವೆಯೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಮತ್ತೆ ಕೆಲವರು, ಲಕ್ಷ್ಮೀಸ್ತೋತ್ರ, ವಾಯುದೇವನ ಅವತಾರಗಳೇ ಮೊದಲಾದ ಮಹಿಮೆಗಳಿವೆಯೆಂದು ಹೇಳುವರು. ಆದರೆ ಈಗ ಮುದ್ರಿತವಾಗಿರುವ ವಾಯುಪುರಾಣದಲ್ಲಿ ಈ ಭಾಗಗಳು ಉಪಲಬ್ಧಿಯಿಲ್ಲ. ಮೇಲೆ ತಿಳಿಸಿದಂತೆ ಹನ್ನೆರಡುಸಾವಿರ (12000) ಶ್ಲೋಕಗಳು ಮಾತ್ರ ಇರುತ್ತವೆ.

ಈ ಪುರಾಣವನ್ನು ಮೊದಲು ವಾಯುದೇವನು ಶಾಂಶಪಾಯನಮುನಿಗೆ ತಿಳಿಸಿದನು. ತರುವಾಯ ಸೂತಪುರಾಣಿಕನು ನೈಮಿಶಾರಣ್ಯವಾಸಿಗಳಾದ ಮುನಿಗಳಿಗೆ ನಿರೂಪಿಸಿದನು.

ಈ ಮಹಾಪುರಾಣದಲ್ಲಿ ಅನೇಕ ಧರ್ಮಗಳು, ಆಚಾರವ್ಯವಹಾರಗಳು, ರಾಜಧರ್ಮಗಳು, ನೀತಿಗಳು, ಭೂಗೋಳ ಖಗೋಳಾದಿಗಳು ಇವೇ ಮೊದಲಾದ ಅನೇಕವಿಷಯಗಳು ವರ್ಣಿತವಾಗಿವೆ. ಪ್ರಥಮ ಸಂಚಿಕೆಯಲ್ಲಿ ದ್ವಾದಶವಾರ್ಷಿಕ ಸತ್ರನಿರೂಪಣ, ಸೃಷ್ಟಿಕ್ರಮ, ಚತುರಾಶ್ರಮವಿಭಾಗ, ಮನ್ವಂತರಾದಿವರ್ಣನ, ಕಲ್ಪನಿರೂಪಣ, ಪಾಶುಪತಯೋಗ, ಶಾರ್ವಸ್ತವ, ಮಧುಕೈಟಭರ ಉತ್ಪತ್ತಿ, ವಿನಾಶ ಇವೇ ಮೊದಲಾದ ವಿಷಯಗಳು ವರ್ಣಿತವಾಗಿವೆ.

ಎರಡನೆಯ ಸಂಚಿಕೆಯಲ್ಲಿ ಸ್ವರವರ್ಣೋತ್ಪತ್ತಿ, ಬ್ರಹ್ಮಸ್ವರೂಪ, ರುದ್ರದೇವನ ಅಷ್ಟಮೂರ್ತಿಗಳು, ಅಗ್ನಿವಂಶ, ಪ್ರಾಚೀನಬರ್ಹಿಷನ ವಂಶದಲ್ಲಿ ದಕ್ಷಪ್ರಜಾಪತಿಯ ಜನನ, ಸತೀದೇವಿಯ ಉತ್ಪತ್ತಿ, ಈಶ್ವರನು ದಕ್ಷನಿಗೆ ಕೊಟ್ಟ ಶಾಪ, ಕೃತ ತ್ರೇತಾ ದ್ವಾಪರ ಕಲಿಯುಗಗಳು, ಅವುಗಳ ಪ್ರಮಾಣ, ಸ್ವಾಯಂಭುವಾದಿ ಮನುಗಳ ಉತ್ಪತ್ತಿ, ಜಂಬೂದ್ವೀಪ ಮತ್ತು ಕೈಲಾಸಗಿರಿ, ಇವೇ ಮೊದಲಾದ ವಿಷಯಗಳು ವಿಶೇಷವಾಗಿ ವರ್ಣಿತವಾಗಿವೆ. ಕೈಲಾಸದ ಪೂರ್ವಭಾಗದಲ್ಲಿ ದಿವ್ಯವಾದ ಗಂಧರ್ವ ನಗರಗಳು, ಪಶ್ಚಿಮದಲ್ಲಿ ಯಕ್ಷೇಶ್ವರನ ಪಟ್ಟಣಗಳು, ದಕ್ಷಿಣದಲ್ಲಿ ಉಮಾವನವು, ಮತ್ತು ಕುಮಾರಸ್ವಾಮಿಯು ಜನಿಸಿದ ಶರವಣವು, ಮಿಕ್ಕಭಾಗಗಳಲ್ಲಿ ವಸಿಷ್ಠಾಶ್ರಮಾದಿ ಗಳು, ಶ್ರೀಮನ್ನಾರಾಯಣ, ಬ್ರಹ್ಮದೇವ, ಪರಮೇಶ್ವರ, ಇವರ ದಿವ್ಯಭವನಗಳು. ಇವೇ ಮೊದಲಾದ ವಿಷಯಗಳು ವರ್ಣಿತವಾಗಿವೆ.

ಈ ವಿಜ್ಞಾನಯುಗದಲ್ಲಿ ಅನೇಕ ವೈಜ್ಞಾನಿಕರು, ವಿಮಾನವೇ ಮೊದಲಾದ ಸಹಾಯಸಂಪತ್ತಿನಿಂದ ಹಿಮಾಲಯದ ಕೆಲವು ಪ್ರದೇಶಗಳನ್ನು ಮಾತ್ರ ತಿಳಿಯಲು

ಶಕ್ತರಾಗಿರುವರು. ಆದರೆ ಹಿಂದಿನ ಮಹಾಮುನಿಗಳು ಅಂತಹ ಹಿಮಾಲಯದ ಸರ್ವಭಾಗಗಳಲ್ಲಿರುವ ಸರ್ವವಿಷಯಗಳನ್ನೂ ಸಂಪೂರ್ಣವಾಗಿ, ಕರತಲಾಮಲಕ ದಂತೆ, ತಿಳಿದಿರುವರೆಂಬ ವಿಷಯಗಳು ಈ ಪುರಾಣದಿಂದ ವ್ಯಕ್ತವಾಗುತ್ತದೆ. ಮತ್ತು ಆಧುನಿಕ ವೈಜ್ಞಾನಿಕರು ಹಡಗು, ವಿಮಾನ ಇವೇ ಮೊದಲಾದುವುಗಳ ಸಹಾಯ ದಿಂದ, ಲವಣಸಮುದ್ರದ ತುದಿಯನ್ನು ಮುಟ್ಟಿರುವರೆಂಬುದಕ್ಕೆ ಯಾವ ನಿದರ್ಶನ ಗಳೂ ದೊರೆತಿಲ್ಲ. ಆದರೆ ನಮ್ಮ ಮಹರ್ಷಿಗಳಾದರೋ ಲವಣಸಮುದ್ರವೇ ಮೊದ ಲಾದ ಸಪ್ತಸಮುದ್ರಗಳು, ಸಪ್ತದ್ವೀಪಗಳು, ಅವುಗಳ ಆಯಾಮ ವಿಶಾಲತೆಗಳು, ಪರಸ್ಪರ ಸಂಬಂಧಗಳು, ಇವೇ ಮೊದಲಾದ ವಿಷಯಗಳನ್ನು ಸ್ಪಷ್ಟವಾಗಿ ತಿಳಿದಿದ್ದ ರೆಂಬ ಅಂಶವು ಈ ಪುರಾಣದಿಂದ ವ್ಯಕ್ತವಾಗುತ್ತದೆ. ಆ ಮಹಾತ್ಮರು ಭೋಗೋಳ ಖಗೋಳಗಳು ಮಾತ್ರವಲ್ಲದೆ ಪರತತ್ವಗಳ ವಿಚಾರದಲ್ಲಿಯೂ ಸಹ ಉಚ್ಚಪದವಿ ಯನ್ನು ಹೊಂದಿದ್ದರೆಂಬ ವಿಷಯಗಳು ಸ್ಪಷ್ಟವಾಗುತ್ತವೆ.

ಇಂತಹ ಪುರಾಣಗಳನ್ನು ಕನ್ನಡಕ್ಕೆ ಪರಿವರ್ತಿಸಿರುವುದು ಬಹು ಮಾನ್ಯವಾಗಿದೆ. ಹೀಗೆ ಎರಡನೆಯ ವಾಯುಕುಮಾರನಿಗೆ ಸರ್ವಮಾನ್ಯಳಾದ ದೇವವಾಣಿಯು ಸಿರಿಮುಡಿಯ ದಿವ್ಯಪರಿಮಳವನ್ನು ದಿಙ್ಮಂಡಲದಲ್ಲಿ ಬೀರುವ ಸುಯೋಗವು, ರಾಜರ್ಷಿಗಳೂ, ಧರ್ಮಪರಾಯಣರೂ, ಕರ್ಣಾಟಕ ವಾಙ್ಮಯೋಜ್ಜೀವಕರೂ ಆದ ಆಳುವ ಮಹಾಪ್ರಭುಗಳಲ್ಲಿರುವ ಔದಾರ್ಯಾದಿ ಮಹಾಗುಣಗಳಿಂದ ಉಂಟಾಗಿದೆ. ಆದುದರಿಂದ ಆಳುವ ಮಹಾಸ್ವಾಮಿಗಳಾದ ಶ್ರೀಮಜ್ಜಯಚಾಮರಾಜೇಂದ್ರ ವೊಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ., ರವರು ಪುತ್ರ ಪೌತ್ರಾದಿ ಗಳೊಡನೆ ಆಚಂದ್ರಾರ್ಕಪರ್ಯಂತವಾಗಿ ಕನ್ನಡನಾಡನ್ನು ಆಳಲೆಂದು ಭಗವಂತ ನನ್ನು ಪ್ರಾರ್ಥಿಸುವ.

| | |
|---|---|
| ಸರ್ವಜಿನ್ನಾಮ ಸಂವತ್ಸರ, | **ಆರ್. ಸೇತುಮಾಧವಾಚಾರ್,** |
| ವೈಶಾಖ ಶುದ್ಧ ಅಷ್ಟಮಿ ಸೋಮವಾರ. | **ಅನುವಾದಕ.** |
| 28—4—1947 | |

# ವಿಷಯಾನುಕ್ರಮಣಿಕೆ

| ಅಧ್ಯಾಯ | ವಿಷಯ | ಪುಟ |
|---|---|---|

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಷಡ್ವಿಂಶೋಽಧ್ಯಾಯಃ

॥ ಸೂತ ಉವಾಚ ॥

**ಅಹೋ ವಿಸ್ಮಯನೀಯಾನಿ ರಹಸ್ಯಾನಿ ಮಹಾಮತೇ ।**
**ತ್ವಯೋಕ್ತಾನಿ ಯಥಾತತ್ತ್ವಂ ಲೋಕಾನುಗ್ರಹಕಾರಣಾತ್ ॥ ೧ ॥**

**ತತ್ರ ವೈ ಸಂಶಯೋ ಮಹ್ಯಮವತಾರೇಷು ಶೂಲಿನಃ ।**
**ಕಿಂ ಕಾರಣಂ ಮಹಾದೇವಃ ಕಲಿಂ ಪ್ರಾಪ್ಯ ಸುದಾರುಣಂ ॥**
**ಹಿತ್ವಾ ಯುಗಾನಿ ಪೂರ್ವಾಣಿ ಅವತಾರಂ ಕರೋತಿ ವೈ ॥ ೨ ॥**

---

## ಇಪ್ಪತ್ತಾರನೆಯ ಅಧ್ಯಾಯವು

೧. ಸೂತನು ಹೇಳಿದನು :—ಎಲೈ ಮಹಾಜ್ಞಾನಿಯಾದ ಮಹರ್ಷಿಯೇ ಲೋಕಾನುಗ್ರಹಕ್ಕಾಗಿ ತಾವು ನಿರೂಪಿಸಿದ ಯಥಾರ್ಥವೂ, ರಹಸ್ಯವೂ ಆದ ತತ್ತ್ವಗಳನ್ನು ಕೇಳಿ ನಮಗೆ ಬಹಳ ಆಶ್ಚರ್ಯವುಂಟಾಗಿದೆ ಎಂದರು.

೨. ಶೂಲಪಾಣಿಯಾದ ಮಹಾದೇವನು ಉತ್ತಮವಾದ ಕೃತಾದಿಯುಗಗಳನ್ನು ಬಿಟ್ಟು ಅತ್ಯಂತ ಭಯಂಕರವಾದ ಈ ಕಲಿಯುಗದಲ್ಲಿ ಅವತರಿಸಲು ಕಾರಣವೇನು ? ಈ ವಿಷಯದಲ್ಲಿ ನಮಗೆ ಸಂದೇಹವುಂಟಾಗಿದೆ. ಇದನ್ನು ತಾವು ಪರಿಹರಿಸಬೇಕೆಂದು ಮಹರ್ಷಿಗಳು ಸೂತರನ್ನು ಬೇಡಿಕೊಂಡರು

ಅಸ್ಮಿನ್ಮನ್ವಂತರೇ ಚೈವ ಪ್ರಾಪ್ತೇ ವೈವಸ್ವತೇ ಪ್ರಭೋ ।
ಅವತಾರಂ ಕಥಂ ಚಕ್ರೇ ಏತದಿಚ್ಛಾಮಿ ವೇದಿತುಂ ॥ ೩ ॥

ನ ತೇಸ್ತ್ಯವಿದಿತಂ ಕಿಂಚಿದಿಹಲೋಕೇ ಪರತ್ರ ಚ ।
ಭಕ್ತಾನಾಮುಪದೇಶಾರ್ಥಂ ವಿನಯಾತ್ ಪೃಚ್ಛತೋ ಮಮ ॥
ಕಥಯಸ್ವ ಮಹಾಪ್ರಾಜ್ಞ ಯದಿ ಶ್ರಾವ್ಯಂ ಮಹಾಮತಂ ॥ ೪ ॥

॥ ಲೋಮಶ ಉವಾಚ ॥

ಏವಂ ಪೃಷ್ಟೋಽಥ ಭಗವಾನ್ ವಾಯುರ್ಲೋಕಹಿತೇ ರತಃ ।
ಇದಮಾಹ ಮಹಾತೇಜಾಃ ವಾಯುರ್ಲೋಕನಮಸ್ಕೃತಃ ॥ ೫ ॥

ಏತದ್ಗುಪ್ತತಮಂ ಲೋಕೇ ಯನ್ಮಾಂತ್ವಂ ಪರಿಪೃಚ್ಛಸಿ ।
ತತ್ಸರ್ವಂ ಶೃಣು ಗಾಥೇಯ ಉಚ್ಯಮಾನಂ ಯಥಾಕ್ರಮಂ ॥ ೬ ॥

---

೩. ಎಲೈ ಜ್ಞಾನಿಯಾದ ಮುನಿಯೇ, ಈಶ್ವರನು ಈ ವೈವಸ್ವತಮನ್ವಂತರ ದಲ್ಲಿ ಅವತರಿಸಲು ಕಾರಣವೇನು? ಇದನ್ನು ಕೇಳಲು ಬಯಸುತ್ತೇವೆ. ತಿಳಿಸ ಬೇಕೆಂದರು.

೪. ಎಲೈ ಸೂತಪುರಾಣಿಕನೇ, ಈ ಲೋಕದಲ್ಲಿ ನಿನಗೆ ತಿಳಿಯದ ವಿಷಯವು ಯಾವುದೂ ಇಲ್ಲ. ವಿನಯದಿಂದ ಪ್ರಾರ್ಥಿಸುವ ಭಕ್ತರಾದ ನಮಗೆ ಪ್ರಾಜ್ಞನಾದ ನೀನು ಅದನ್ನು ತಿಳಿಸಬೇಕೆಂದು ಕೇಳಿಕೊಂಡರು

೫. ಲೋಮಶಮುನಿಯು ಹೇಳಿದನು:—ಪೂರ್ವದಲ್ಲಿ ನಿಮ್ಮಂತೆಯೇ ಮಹರ್ಷಿಗಳಿಂದ ಕೇಳಲ್ಪಟ್ಟವನೂ, ಲೋಕಹಿತೈಷಿಯೂ, ಲೋಕವಂದಿತನೂ, ಮಹಾತೇಜಸ್ವಿಯೂ ಆದ ವಾಯುದೇವನು ಯಾವ ವಿಷಯವನ್ನು ಹೇಳಿದನೋ, ಅದೇ ವಿಷಯವನ್ನೇ ನಿಮಗಾಗಿ ಹೇಳುವೆನು ಕೇಳಿರೆಂದನು.

೬. ಗಾಥಾಪುತ್ರನಾದ ಸೂತನೇ, ನೀನು ಕೇಳಿದ ವಿಷಯವು ಈ ಲೋಕದಲ್ಲಿ ಅತಿರಹಸ್ಯವಾಗಿರುವುದು. ಆದರೂ ಅದನ್ನು ನಿನಗಾಗಿ ಕ್ರಮವಾಗಿ ನಿರೂಪಿಸುವೆನು. ಎಲ್ಲವನ್ನೂ ಸಾವಧಾನವಾಗಿ ಕೇಳು ಎಂದನು.

ಪುರಾ ಹ್ಯೇಕಾರ್ಣವೇ ವೃತ್ತೇ ದಿವ್ಯೇ ವರ್ಷಸಹಸ್ರಕೇ ।
ಸ್ರಷ್ಟುಕಾಮಃ ಪ್ರಜಾ ಬ್ರಹ್ಮಾ ಚಿಂತಯಾಮಾಸ ದುಃಖಿತಃ ॥ ೭ ॥

ತಸ್ಯ ಚಿಂತಯಮಾನಸ್ಯ ಪ್ರಾದುರ್ಭೂತಃ ಕುಮಾರಕಃ ।
ದಿವ್ಯಗಂಧಃ ಸುಧಾಪೇಕ್ಷೀ ದಿವ್ಯಾಂ ಶ್ರುತಿಮುದೀರಯನ್ ॥ ೮ ॥

ಅಶಬ್ದಸ್ಪರ್ಶರೂಪಾಂ ತಾಮಗಂಧಾಂ ರಸವರ್ಜಿತಾಂ ।
ಶ್ರುತಿಂ ಹ್ಯುದೀರಯನ್ ದೇವೋ ಯಾಮವಿಂದಚ್ಚತುರ್ಮುಖಃ ॥ ೯ ॥

ತತಸ್ತು ಧ್ಯಾನಸಂಯುಕ್ತಸ್ತಪ ಆಸ್ಥಾಯ ಭೈರವಂ ।
ಚಿಂತಯಾಮಾಸ ಮನಸಾ ತ್ರಿತಯಂ ಕೋನ್ವಯಂತ್ವಿತಿ ॥ ೧೦ ॥

ತಸ್ಯ ಚಿಂತಯಮಾನಸ್ಯ ಪ್ರಾದುರ್ಭೂತಂ ತದಕ್ಷರಂ ।
ಅಶಬ್ದಸ್ಪರ್ಶರೂಪಂ ಚ ರಸಗಂಧವಿವರ್ಜಿತಂ ॥ ೧೧॥

---

೭. ಪೂರ್ವಕಾಲದ ದೇವಮಾನದಲ್ಲಿ ಒಂದುಸಹಸ್ರ ವರ್ಷಗಳಕಾಲ ಪ್ರಲಯೋದಕವು ಎಲ್ಲಾ ಲೋಕಗಳನ್ನೂ ಆವರಿಸಿಕೊಂಡಿರಲಾಗಿ, ಪ್ರಜೆಗಳನ್ನು ಸೃಷ್ಟಿಸಲಿಚ್ಛೆಯುಳ್ಳ ಬ್ರಹ್ಮದೇವನು ಬಹಳವಾಗಿ ಆಲೋಚಿಸಿ ಖಿನ್ನನಾದನು.

೮. ಹೀಗೆ ಬ್ರಹ್ಮದೇವನು ಯೋಚಿಸಲಾಗಿ ಅವನಿಗೆ ಸುವಾಸನೆಯುಳ್ಳವನೂ, ಅಮೃತಾಪೇಕ್ಷಿಯೂ ಆದ ಕುಮಾರನು ದಿವ್ಯವಾದ ವೇದಗಳನ್ನುಚ್ಚರಿಸುತ್ತಾ ಆವಿರ್ಭವಿಸಿದನು.

೯. ಚತುರ್ಮುಖನೂ, ದೇವನೂ ಆದ ಬ್ರಹ್ಮನು ರೂಪ, ರಸ, ಗಂಧ, ಶಬ್ದ, ಸ್ಪರ್ಶ ಇವುಗಳಿಂದ ರಹಿತವೂ, ಉತ್ತಮವೂ ಆದ ಯಾವ ಶ್ರುತಿಯನ್ನು ಹೊಂದಿದ್ದನೋ, ಅದನ್ನು ಹೇಳುತ್ತಾ ಆ ಕುಮಾರನು ಬಂದನು.

೧೦. ಅನಂತರ ಬ್ರಹ್ಮದೇವನು ತಪೋನಿಷ್ಠನಾಗಿ ಹೃದಯದಲ್ಲಿ ಭೈರವೇಶ್ವರನನ್ನು ಧ್ಯಾನಿಸಿ ಮೂರನೆಯವನಾದ ಇವನು ಯಾರೆಂದು ಕೇಳಿದನು.

೧೧. ಬ್ರಹ್ಮದೇವನು ಹೀಗೆ ಯೋಚಿಸಲಾಗಿ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಿಂದ ರಹಿತವೂ, ಅಕ್ಷರಶಬ್ದವಾಚ್ಯವೂ ಆದ ಒಂದು ಭೂತವು ಆವಿರ್ಭವಿಸಿತು.

ಅಥೋತ್ತಮಂ ಸ ಲೋಕೇಷು ಸ್ವಮೂರ್ತಿಂ ಚಾಪಿ ಪಶ್ಯತಿ ।
ಧ್ಯಾಯನ್ ವೈ ಸ ತದಾ ದೇವಮಥೈನಂ ಪಶ್ಯತೇ ಪುನಃ ॥ ೧೨ ॥

ತಂ ಶ್ವೇತಮಥ ರಕ್ತಂ ಚ ಪೀತಂ ಕೃಷ್ಣಂ ತದಾ ಪುನಃ ।
ವರ್ಣಸ್ಥಂ ತತ್ರ ಪಶ್ಯೇತ ನ ಸ್ತ್ರೀ ನ ಚ ನಪುಂಸಕಂ ॥ ೧೩ ॥

ತತ್ಸರ್ವಂ ಸುಚಿರಂ ಜ್ಞಾತ್ವಾ ಚಿಂತಯನ್ ಹಿ ತದಕ್ಷರಂ ।
ತಸ್ಯ ಚಿಂತಯಮಾನಸ್ಯ ಕಂಠಾದುತ್ತಿಷ್ಠತೇಽಕ್ಷರಃ ॥ ೧೪ ॥

ಏಕಮಾತ್ರೋ ಮಹಾಘೋಷಃ ಶ್ವೇತವರ್ಣಃ ಸುನಿರ್ಮಲಃ ।
ಸ ಓಂಕಾರೋ ಭವೇದ್ವೇದಃ ಅಕ್ಷರಂ ವೈ ಮಹೇಶ್ವರಃ ॥ ೧೫ ॥

ತತಶ್ಚಿಂತಯಮಾನಸ್ಯ ತ್ವಕ್ಷರಂ ವೈ ಸ್ವಯಂಭುವಃ ।
ಪ್ರಾದುರ್ಭೂತಂ ತು ರಕ್ತಂ ತು ಸ ದೇವಃ ಪ್ರಥಮಃ ಸ್ಮೃತಃ ॥ ೧೬ ॥

---

೧೨. ಅನಂತರ ಬ್ರಹ್ಮನು ಲೋಕದಲ್ಲಿ ಅತ್ಯುತ್ತಮವಾದ ತನ್ನ ಮೂರ್ತಿಯನ್ನೇ ನೋಡಿದನು. ಆ ಮೂರ್ತಿಯನ್ನು ಧ್ಯಾನಿಸುತ್ತಾ ಪುನಃ ಪುನಃ ಅದನ್ನೇ ನೋಡುತ್ತಿದ್ದನು

೧೩-೧೪. ಬ್ರಹ್ಮದೇವನು ಬಿಳುಪು, ಕೆಂಪು, ಹಳದಿ, ಕಪ್ಪು ಈ ಬಣ್ಣಗಳುಳ್ಳದ್ದೂ, ಸ್ತ್ರೀಲಿಂಗ, ನಪುಂಸಕಲಿಂಗವಲ್ಲದ್ದೂ, ವರ್ಣಗತವೂ ಆದ ಅಕ್ಷರವನ್ನು ಧ್ಯಾನಿಸಲಾಗಿ ಅವನ ಕಂಠದಿಂದ ಆ ಅಕ್ಷರನಾಮಕವಾದ ರೂಪವು ಉತ್ಪನ್ನವಾಯಿತು.

೧೫ ಏಕಮಾತ್ರೆಯೂ, ಮಹಾಘೋಷವೂ, ಶ್ವೇತವರ್ಣವೂ, ಇವುಗಳುಳ್ಳ, ಓಂಕಾರವೇ ವೇದವಾಗಿಯೂ, ಅಕ್ಷರವೇ ಮಹೇಶ್ವರನಾಗಿಯೂ, ಇರುತ್ತವೆ.

೧೬. ಬ್ರಹ್ಮದೇವನು, ಹೀಗೆ ಅಕ್ಷರಸ್ವರೂಪವನ್ನು ಧ್ಯಾನಿಸಲಾಗಿ, ಆ ರಕ್ತವರ್ಣವುಳ್ಳ ಆ ದೇವನು ಆವಿರ್ಭವಿಸಿದನು. ಆ ಮಹಾದೇವನೇ ಅಗ್ರಜನೆಂದು ಪ್ರಖ್ಯಾತಿಗೊಂಡಿರುವನು.

ಋಗ್ವೇದಂ ಪ್ರಥಮಂ ತಸ್ಯ ತ್ವಮಗ್ನಿಮೀಳೇ ಪುರೋಹಿತಂ ।
ಏತಾಂ ದೃಷ್ಟ್ವಾ ಋಚಂ ಬ್ರಹ್ಮಾ ಚಿಂತಯಾಮಾಸ ವೈ ಪುನಃ ॥
ತದಕ್ಷರಂ ಮಹಾತೇಜಾಃ ಕಿಮೇತದಿತಿ ಲೋಕಕೃತ್ ॥ ೧೭ ॥

ತಸ್ಯ ಚಿಂತಯಮಾನಸ್ಯ ತಸ್ಮಿನ್ನಥ ಮಹೇಶ್ವರಃ ।
ದ್ವಿಮಾತ್ರಮಕ್ಷರಂ ಜಜ್ಞೇ ಈಶಿತ್ವೇನ ದ್ವಿಮಾತ್ರಿಕಂ ॥ ೧೮ ॥

ತತಃ ಪುನರ್ದ್ವಿಮಾತ್ರಂ ತು ಚಿಂತಯಾಮಾಸ ಚಾಕ್ಷರಂ ।
ಪ್ರಾದುರ್ಭೂತಂ ಚ ರಕ್ತಂ ತಚ್ಛೇದನೇ ಗೃಹ್ಯ ಸಾ ಯಜುಃ ॥ ೧೯ ॥

ಇಷೇ ತ್ವೋರ್ಜೇತ್ವಾ ವಾಯುವಸ್ಥ ದೇವೋಃ ವಃ ಸವಿತಾ ಪುನಃ ।
ಋಗ್ವೇದ ಏಕಮಾತ್ರಸ್ತು ದ್ವಿಮಾತ್ರಂ ತು ಯಜುಃ ಸ್ಮೃತಂ ॥ ೨೦ ॥

ತತೋ ದೇವಂ ದ್ವಿಮಾತ್ರಂ ತು ದೃಷ್ಟ್ವಾ ಚೈವ ತದಕ್ಷರಂ ।
ದ್ವಿಮಾತ್ರಂ ಚಿಂತಯನ್ ಬ್ರಹ್ಮಾ ತ್ವಕ್ಷರಂ ಪುನರೀಶ್ವರಃ ॥ ೨೧ ॥

ತಸ್ಯ ಚಿಂತಯಮಾನಸ್ಯ ಚೋಂಕಾರಃ ಸಂಬಭೂವ ಹ ।
ತತಸ್ತದಕ್ಷರಂ ಬ್ರಹ್ಮಾ ಓಂಕಾರಂ ಸಮಚಿಂತಯನ್ ॥ ೨೨ ॥

---

೧೭. ಅವನ ಮುಖದಿಂದ ಪ್ರಥಮತಃ "ಅಗ್ನಿಮೀಳೇ ಪುರೋಹಿತಂ" ಎಂಬ ಋಗ್ವೇದವು ಉತ್ಪನ್ನವಾಯಿತು. ಆ ಋಕ್ಕನ್ನು ನೋಡಿ ಬ್ರಹ್ಮದೇವನು ಪುನಃ ಚಿಂತಿಸಿದನು ಆ ಅಕ್ಷರವು ಮಹಾತೇಜಸ್ವಿಯಾಗಿ ಹೊಳೆಯಿತು. ಸೃಷ್ಟಿಕರ್ತನಾದ ಬ್ರಹ್ಮನು ಈ ತೇಜಸ್ಸು ಯಾವುದೆಂದು ಯೋಚಿಸಿದನು.

೧೮. ಹೀಗೆ ಬ್ರಹ್ಮನು ಯೋಚಿಸಲು ಅದರಲ್ಲಿ ಮಹೇಶ್ವರನು, ಎರಡು ಮಾತ್ರೆಯುಳ್ಳ ಅಕ್ಷರನಾಗಿ ಜನಿಸಿದನು. ಅವನ ಯಾಜಮಾನ್ಯದಿಂದ ಅದು ದ್ವಿಮಾತ್ರೆಯುಳ್ಳದ್ದಾಯಿತು.

೧೯-೨೦. ಅನಂತರ ಬ್ರಹ್ಮನು ದ್ವಿಮಾತ್ರೆಯುಳ್ಳ ಅಕ್ಷರವನ್ನು ಧ್ಯಾನಿಸಿ, ಅದನ್ನು ಬಿಡಿಸಲಾಗಿ ರಕ್ತವರ್ಣವುಳ್ಳ "ಇಷೇತ್ವೋರ್ಜೇತ್ವಾ" ಎಂಬುದೇ ಆದಿಯಾಗಿರುವ ಯಜುರ್ವೇದವು ಉತ್ಪನ್ನವಾಯಿತು. ಋಗ್ವೇದವು ಏಕಮಾತ್ರೆಯುಳ್ಳದ್ದಾಗಿಯೂ, ಯಜುರ್ವೇದವು ದ್ವಿಮಾತ್ರೆಯುಳ್ಳದ್ದಾಗಿಯೂ ಇರುತ್ತವೆ.

೨೧-೨೨. ಅನಂತರ ದ್ವಿಮಾತ್ರೆಯುಳ್ಳ ಮಂತ್ರರೂಪವಾದ ಅಕ್ಷರವನ್ನು ನೋಡಿ ಚಿಂತಿಸಲಾಗಿ ದ್ವಿಮಾತ್ರೆಯುಳ್ಳ ಈಶ್ವರನು ಓಂಕಾರರೂಪನಾಗಿ ಆವಿರ್ಭವಿಸಿದನು. ಅನಂತರ ಬ್ರಹ್ಮನು ಆ ಓಂಕಾರವನ್ನು ಧ್ಯಾನಿಸಿದನು.

ಅಥಾಪಶ್ಯತ್ತತಃ ಪೀತಾಮ್ಬ್ರಚಂ ಚೈವ ಸಮುತ್ಥಿತಾಂ ।
ಅಗ್ನ ಆಯಾಹಿ ವೀತಯೇ ಗೃಣಾನೋ ಹವ್ಯದಾತಯೇ ॥ ೨೩ ॥

ತತಸ್ತು ಸ ಮಹಾತೇಜಾ ದೃಷ್ಟ್ವಾ ವೇದಾನುಪಸ್ಥಿತಾನ್ ।
ಚಿಂತಯಿತ್ವಾ ಚ ಭಗವಾನ್ ತ್ರಿಸಂಧ್ಯಂ ಯತ್ತ್ರಿರಕ್ಷರಂ ॥
ತ್ರಿವರ್ಣಂ ಯತ್ ತ್ರಿಷವಣಮೋಂಕಾರಂ ಬ್ರಹ್ಮಸಂಜ್ಞಿತಂ ॥ ೨೪ ॥

ತತಶ್ಚೈವ ತ್ರಿಸಂಯೋಗಾತ್ ತ್ರಿವರ್ಣಂ ತು ತದಕ್ಷರಂ ।
ಲಕ್ಷ್ಯಾಲಕ್ಷ್ಯಪ್ರದೃಶ್ಯಂ ಚ ಸಹಿತಂ ತ್ರಿದಿವಂ ತ್ರಿಕಂ ॥ ೨೫ ॥

ತ್ರಿಮಾತ್ರಂ ತ್ರಿಪದಂ ಚೈವ ತ್ರಿಯೋಗಂ ಚೈವ ಶಾಶ್ವತಂ ।
ತಸ್ಮಾತ್ತದಕ್ಷರಂ ಬ್ರಹ್ಮಾ ಚಿಂತಯಾಮಾಸ ವೈ ಪ್ರಭುಃ ॥ ೨೬ ॥

ತಸ್ಮಾತ್ತದಕ್ಷರಂ ಸೋಽಥ ಬ್ರಹ್ಮರೂಪಂ ಸ್ವಯಂಭುವಃ ।
ಚತುರ್ದಶಮುಖಂ ದೇವಂ ಪಶ್ಯತೇ ದೀಪ್ತತೇಜಸಂ ॥
ತಮೋಂಕಾರಂ ಸ ಕೃತ್ವಾದೌ ವಿಜ್ಞೇಯಃ ಸ ಸ್ವಯಂಭುವಃ ॥ ೨೭ ॥

---

೨೩. ತರುವಾಯ ಬ್ರಹ್ಮನು ಪೀತವರ್ಣವೂ, ಅವ್ಯಕ್ತಸ್ವರೂಪವೂ ಆಗಿ ಆವಿರ್ಭವಿಸಿದ “ಅಗ್ನ ಆಯಾಹಿವೀತಯೇ” ಎಂಬ ಮಂತ್ರವು ಜನಿಸಲು ಅದನ್ನು ನೋಡಿದನು.

೨೪. ಅನಂತರ ಮಹಾತೇಜಸ್ವಿಯಾದ ಬ್ರಹ್ಮನು ಉಪಸ್ಥಿತಿಗಳಾದ ವೇದಗಳನ್ನು ಧ್ಯಾನಮಾಡಿ, ಪುನಃ ತ್ರಿಸಂಖ್ಯೆಯಾದ ಸಂಧಿ, ಅಕ್ಷರ ವರ್ಣ ಮತ್ತು ಯಾಗ ಇವುಗಳುಳ್ಳ ಓಂಕಾರರೂಪವಾದ ಪರಬ್ರಹ್ಮಸ್ವರೂಪವನ್ನು ತಿಳಿದನು.

೨೫–೨೬. ತರುವಾಯ ಸ್ವಾಮಿಯಾದ ಭಗವಂತನು ಮೂರಾದ ಸಂಬಂಧ, ವರ್ಣ, ಅಕ್ಷರ, ಮಾತ್ರೆ, ಪದ, ಯೋಗ, ಸ್ವರ್ಗ, ಸಂಖ್ಯೆ ಇವುಗಳುಳ್ಳ ಲಕ್ಷ್ಯಾಲಕ್ಷ್ಯಸ್ವರೂಪನೂ, ಓಂಕಾರರೂಪನೂ ಆದ ಭಗವಂತನನ್ನು ಧ್ಯಾನಿಸಿದನು.

೨೭. ಆದುದರಿಂದ ಪುರುಷನು, ಬ್ರಹ್ಮಪ್ರತಿಪಾದಕವೂ, ಹದಿನಾಲ್ಕುಮುಖವುಳ್ಳದ್ದೂ, ಪ್ರಕಾಶಕವೂ, ಕಾಂತಿಯುತವೂ, ಓಂಕಾರರೂಪವೂ, ಆದ ಅಕ್ಷರವನ್ನು ಮೊದಲು ಉಚ್ಚರಿಸಿ ಬ್ರಹ್ಮಸ್ವರೂಪವನ್ನು ತಿಳಿಯುವನು.

**ಚತುರ್ಮುಖಮುಖಾತ್ತಸ್ಮಾದಜಾಯಂತ ಚತುರ್ದಶ ।**
**ನಾನಾವರ್ಣಾಃ ಸ್ವರಾ ದಿವ್ಯಮಾದ್ಯಂ ತಚ್ಚ ತದಕ್ಷರಂ ॥**
**ತಸ್ಮಾತ್ ತ್ರಿಷಷ್ಟಿವರ್ಣಾ ವೈ ಅಕಾರಪ್ರಭವಾಃ ಸ್ಮೃತಾಃ ॥ ೨೮ ॥**

**ತತಃ ಸಾಧಾರಣಾರ್ಥಾಯ ವರ್ಣಾನಾಂ ತು ಸ್ವಯಂಭುವಃ ।**
**ಅಕಾರರೂಪ ಆದೌ ತು ಸ್ಥಿತಃ ಸ ಪ್ರಥಮಃ ಸ್ವರಃ ॥ ೨೯ ॥**

**ತತಸ್ತೇಭ್ಯಃ ಸ್ವರೇಭ್ಯಸ್ತು ಚತುರ್ದಶ ಮಹಾಮುಖಾಃ ।**
**ಮನವಃ ಸಂಪ್ರಸೂಯಂತೇ ದಿವ್ಯಾ ಮನ್ವಂತರೇ ಸ್ವರಾಃ ॥ ೩೦ ॥**

**ಚತುರ್ದಶಮುಖೋ ಯಶ್ಚ ಅಕಾರೋ ಬ್ರಹ್ಮಸಂಜ್ಞಿತಃ ।**
**ಬ್ರಹ್ಮಕಲ್ಪಃ ಸಮಾಖ್ಯಾತಃ ಸರ್ವವರ್ಣಃ ಪ್ರಜಾಪತಿಃ ॥ ೩೧ ॥**

---

೨೮. ಬ್ರಹ್ಮದೇವನ ನಾಲ್ಕುಮುಖಗಳಿಂದಲೂ ನಾನಾವರ್ಣರೂಪಗಳಾದ ಹದಿನಾಲ್ಕು ಸ್ವರಗಳು ಹುಟ್ಟಿದುವು. ಅವುಗಳಲ್ಲಿ ಅಕಾರವು ಮೊದಲನೆಯ ಅಕ್ಷರವಾಗಿದೆ. ಆ ಅಕಾರದಿಂದಲೇ ಅರವತ್ತಮೂರುವರ್ಣಗಳೂ (೬೩) ಹುಟ್ಟಿರುತ್ತವೆಯೆಂದು ಜ್ಞಾನಿಗಳು ಹೇಳುವರು.

೨೯. ಬ್ರಹ್ಮನು ಸಾಮಾನ್ಯವಾಗಿ ಸಕಲಶಬ್ದವಾಚ್ಯನಾಗಿದ್ದರೂ ವಿಶೇಷಾಕಾರವಾಗಿ ಅಕಾರಶಬ್ದವಾಚ್ಯನಾಗಿರುವನು. ಆದುದರಿಂದ ಅಕಾರರೂಪವಾದ ಸ್ವರವನ್ನು ವರ್ಣಗಳ ಆದಿಯಲ್ಲಿ ಪಠನಮಾಡಿರುತ್ತಾರೆ

೩೦. ಅನಂತರ ಆ ಹದಿನಾಲ್ಕುಸ್ವರಗಳಿಂದ ಉತ್ತಮವಾದ ಮುಖಗಳುಳ್ಳ ಚತುರ್ದಶಮನುಗಳು ಜನಿಸಿದರು. ಆ ಮನ್ವಂತರಗಳಲ್ಲಿ ಹದಿನಾಲ್ಕುಸ್ವರಗಳೂ ದಿವ್ಯರಾದ ಹದಿನಾಲ್ಕು ಜನ ಮನುಗಳಾಗಿ ಜನಿಸಿದುವು.

೩೧. ಹದಿನಾಲ್ಕು ಮುಖಗಳುಳ್ಳ ಅಂದರೆ ಹದಿನಾಲ್ಕುವರ್ಣಗಳಿಗೆ ಆದಿಯಾದ ಬ್ರಹ್ಮಸಂಜ್ಞಿಕವಾದ ಅಕಾರವು ಯಾವಾಗ ಹುಟ್ಟಿತೋ ಆಗಲೇ ಸರ್ವವರ್ಣವಾಚ್ಯನಾದ ಬ್ರಹ್ಮನು ಹುಟ್ಟಿದನು. ಆದರಿಂದ ಆ ಕಲ್ಪಕ್ಕೆ ಬ್ರಹ್ಮಕಲ್ಪವೆಂಬ ನಾಮವು ಪ್ರಾಪ್ತವಾಗಿದೆ

ಮುಖಾತ್ತು ಪ್ರಥಮಾತ್ತಸ್ಯ ಮನುಃ ಸ್ವಾಯಂಭುವಃ ಸ್ಮೃತಃ ।
ಅಕಾರಸ್ತು ಸ ವಿಜ್ಞೇಯಃ ಶ್ವೇತವರ್ಣಃ ಸ್ವಯಂಭುವಃ ॥ ೩೨ ॥

ದ್ವಿತೀಯಾತ್ತು ಮುಖಾತ್ತಸ್ಯ ಆಕಾರೋ ವೈ ಮುಖಃ ಸ್ಮೃತಃ ।
ನಾಮ್ನಾ ಸ್ವಾರೋಚಿಷೋ ನಾಮ ವರ್ಣಃ ಪಾಂಡುರ ಉಚ್ಯತೇ ॥ ೩೩ ॥

ತೃತೀಯಾತ್ತು ಮುಖಾತ್ತಸ್ಯ ಇಕಾರೋ ಯಜುಷಾಂ ವರಃ ।
ಯಜುರ್ಮಯಃ ಸ ಚಾದಿತ್ಯೋ ಯಜುರ್ವೇದೋ ಯತಃ ಸ್ಮೃತಃ ॥ ೩೪ ॥

ಈಕಾರಃ ಸ ಮನುರ್ಜ್ಞೇಯೋ ರಕ್ತವರ್ಣಃ ಪ್ರತಾಪವಾನ್ ।
ತತಃ ಕ್ಷತ್ರಂ ಪ್ರವರ್ತಂತ ತಸ್ಮಾದ್ರಕ್ತಸ್ತು ಕ್ಷತ್ರಿಯಃ ॥ ೩೫ ॥

ಚತುರ್ಥಾತ್ತು ಮುಖಾತ್ತಸ್ಯ ಉಕಾರಃ ಸ್ವರ ಉಚ್ಯತೇ ।
ವರ್ಣತಸ್ತು ಸ್ಮೃತಸ್ತಾಮ್ರಃ ಸ ಮನುಸ್ತಾಮಸಃ ಸ್ಮೃತಃ ॥ ೩೬ ॥

---

೩೨. ಆ ಬ್ರಹ್ಮದೇವನ ಮೊದಲನೆಯ ಮುಖದಿಂದ ಸ್ವಾಯಂಭುವನೆಂಬ ಮನುವು ಹುಟ್ಟಿದನು. ಅವನನ್ನು ಬ್ರಹ್ಮನ ಶ್ವೇತವರ್ಣವುಳ್ಳ ಅಕಾರರೂಪವಾದ ಮೊದಲನೆಯ ಸೃಷ್ಟಿಯೆಂದು ತಿಳಿಯಬೇಕು.

೩೩. ತರುವಾಯ ಬ್ರಹ್ಮದೇವನ ಎರಡನೆಯ ಮುಖದಿಂದ ಆಕಾರವು ಜನಿಸಿತು. ಅದರಿಂದ ಪಾಂಡುರ-ವರ್ಣವುಳ್ಳ ಸ್ವಾರೋಚಿಷ ನಾಮಕನಾದ ಎರಡನೆಯ ಮನುವು ಹುಟ್ಟಿದನು.

೩೪. ಬ್ರಹ್ಮದೇವನ ಮೂರನೆಯ ಮುಖದಿಂದ ಯಜುರ್ವೇದಕ್ಕೆ ಆದಿಯೂ, ಉತ್ತಮವೂ ಆದ ಇಕಾರವು ಜನಿಸಿತು. ಆದರಿಂದ ಯಜುರ್ವೇದಾಭಿಮಾನಿಯೂ, ಆದಿತ್ಯನಾಮಕನೂ ಆದ ಮೂರನೆಯ ಮನುವು ಜನಿಸಿ ಯಜುರ್ವೇದದ್ರಷ್ಟನಾದನು.

೩೫. ಆ ಮನುವೇ ರಕ್ತವರ್ಣವುಳ್ಳವನೂ, ಪ್ರತಾಪಶಾಲಿಯೂ, ಆದ ಈಕಾರರೂಪನಾಗಿ ಜನಿಸಿದನು. ಅವನಿಂದ ಕ್ಷತ್ರಿಯಜಾತಿಯು ಉತ್ಪನ್ನವಾಯಿತು. ಕ್ಷತ್ರಿಯರು ರಕ್ತವರ್ಣಿಗಳಾದರು.

೩೬. ಆ ಬ್ರಹ್ಮನ ನಾಲ್ಕನೇ ಮುಖದಿಂದ ಉಕಾರರೂಪವಾದ ಸ್ವರವು ಜನಿಸಿತು. ಅದರಿಂದ ತಾಮ್ರವರ್ಣವುಳ್ಳವನೂ, ತಾಮಸನಾಮಕನೂ, ನಾಲ್ಕನೆಯವನೂ ಆದ ಮನುವು ಜನಿಸಿದನು.

ಪಂಚಮಾತ್ತು ಮುಖಾತ್ತಸ್ಯ ಊಕಾರೋ ನಾಮ ಜಾಯತೇ ।
ಪೀತಕೋ ವರ್ಣತಶ್ಚೈವ ಮನುಶ್ಚಾಪಿ ಚರಿಷ್ಣವಃ ॥ ೩೭ ॥

ತತಃ ಷಷ್ಠಾನ್ಮುಖಾತ್ತಸ್ಯ ಓಂಕಾರಃ ಕಪಿಲಃ ಸ್ಮೃತಃ ।
ವರಿಷ್ಟಶ್ಚ ತತಃ ಷಷ್ಠೋ ವಿಜಯಃ ಸ ಮಹಾತಪಾಃ ॥ ೩೮ ॥

ಸಪ್ತಮಾತ್ತು ಮುಖಾತ್ತಸ್ಯ ತತೋ ವೈವಸ್ವತೋ ಮನುಃ ।
ಋಕಾರಶ್ಚ ಸ್ವರಸ್ತತ್ರ ವರ್ಣತಃ ಕೃಷ್ಣ ಉಚ್ಯತೇ । ॥ ೩೯ ॥

ಅಷ್ಟಮಾತ್ತು ಮುಖಾತ್ತಸ್ಯ ಋೂಕಾರಃ ಶ್ಯಾಮವರ್ಣತಃ ।
ಶ್ಯಾಮಾಕ್ಷರಸವರ್ಣಶ್ಚ ತತಃ ಸಾವರ್ಣಿರುಚ್ಯತೇ ॥ ೪೦ ॥

ಮುಖಾತ್ತು ನವಮಾತ್ತಸ್ಯ ಲೃಕಾರೋ ನವಮಃ ಸ್ಮೃತಃ ।
ಧೂಮ್ರೋ ವೈ ವರ್ಣತಶ್ಚಾಪಿ ಧೂಮ್ರಶ್ಚ ಮನುರುಚ್ಯತೇ ॥ ೪೧ ॥

---

೩೭. ಚತುರ್ಮುಖನ ಐದನೆಯ ಮುಖದಿಂದ ಊಕಾರವು ಹುಟ್ಟಿತು. ಆದರಿಂದ ಪೀತವರ್ಣವುಳ್ಳ ಚರಿಷ್ಣುನಾಮಕನಾದ ಮನುವು ಜನಿಸಿದನು.

೩೮. ಅನಂತರ ಬ್ರಹ್ಮನ ಆರನೆಯ ಮುಖದಿಂದ ಕಪಿಲವರ್ಣದ ಓಂಕಾರವು ಜನಿಸಿತು.ಅದರಿಂದ ಶ್ರೇಷ್ಠನೂ, ಮಹಾತಪಸ್ವಿಯೂ, ಆರನೆಯವನೂ, ವಿಜಯ ನಾಮಕನೂ ಆದ ಮನುವು ಪ್ರಾದುರ್ಭೂತನಾದನು.

೩೯–೪೦ ಆ ಬ್ರಹ್ಮದೇವನ ಏಳನೆಯ ಮುಖದಿಂದ ಏಳನೆಯ ವೈವಸ್ವತ ಮನುವೂ ಮತ್ತು ಕೃಷ್ಣವರ್ಣವುಳ್ಳ ಋಕಾರವೂ ಜನಿಸಿದುವು ಹಾಗೆಯೇ ಎಂಟನೆಯ ಮುಖದಿಂದಲೂ ಶ್ಯಾಮವರ್ಣವುಳ್ಳ ಋೂಕಾರವೂ ಅದರ ಸಮಾನ ಬಣ್ಣ ವುಳ್ಳ ಎಂಟನೆಯ ಸಾವರ್ಣಿನಾಮಕಮನುವೂ ಜನಿಸಿದರು.

೪೧. ಬ್ರಹ್ಮನ ಒಂಭತ್ತನೆಯ ಮುಖದಿಂದ ಒಂಭತ್ತನೆಯದೂ, ಧೂಮ್ರ ವರ್ಣವೂವುಳ್ಳ ಲೃ ಕಾರವೂ, ಅದರಿಂದ ಧೂಮ್ರನಾಮಕ ಒಂಭತ್ತನೆಯ ಮನುವೂ ಹುಟ್ಟಿದರು

ದಶಮಾತ್ತು ಮುಖಾತ್ತಸ್ಯ ಲೃಕಾರಃ ಪ್ರಭುರುಚ್ಯತೇ ।
ಸಮಶ್ಚೈವ ಸವರ್ಣಶ್ಚ ಬಭೌ ಸಾವರ್ಣಿಕೋ ಮನುಃ ॥ ೪೨ ॥

ಮುಖಾದೇಕಾದಶಾತ್ತಸ್ಯ ಏಕಾರೋ ಮನುರುಚ್ಯತೇ ।
ಪಿಶಂಗೋ ವರ್ಣತಶ್ಚೈವ ಪಿಶಂಗೋ ವರ್ಣ ಉಚ್ಯತೇ ॥ ೪೩ ॥

ದ್ವಾದಶಾತ್ತು ಮುಖಾತ್ತಸ್ಯ ಐಕಾರೋ ನಾಮ ಉಚ್ಯತೇ ।
ಪಿಶಂಗೋ ಭಸ್ಮವರ್ಣಾಭಃ ಪಿಶಂಗೋ ಮನುರುಚ್ಯತೇ ॥ ೪೪ ॥

ತ್ರಯೋದಶಾನ್ಮುಖಾತ್ತಸ್ಯ ಓಕಾರೋ ವರ್ಣ ಉಚ್ಯತೇ ।
ಪಂಚವರ್ಣಸಮಾಯುಕ್ತ ಓಕಾರೋ ವರ್ಣ ಉತ್ತಮಃ ॥ ೪೫ ॥

ಚತುರ್ದಶಮುಖಾತ್ತಸ್ಯ ಔಕಾರೋ ವರ್ಣ ಉಚ್ಯತೇ ।
ಕರ್ಬುರೋ ವರ್ಣತಶ್ಚೈವ ಮನುಃ ಸಾವರ್ಣಿರುಚ್ಯತೇ ॥ ೪೬ ॥

ಇತ್ಯೇತೇ ಮನವಶ್ಚೈವ ಸ್ವರಾ ವರ್ಣಾಶ್ಚ ಕಲ್ಪಿತಃ ।
ವಿಜ್ಞೇಯಾ ಹಿ ಯಥಾತತ್ತ್ವಂ ಸ್ವರತೋ ವರ್ಣತಸ್ತಥಾ ॥ ೪೭ ॥

---

೪೨. ಹತ್ತನೆಯ ಮುಖದಿಂದ ಸಮಾನ ವರ್ಣವುಳ್ಳ ಲೃ ಕಾರವೂ ಅದರಿಂದ ಸಮಾನಕಾಂತಿಯುಳ್ಳ ಸಾವರ್ಣಿಕಮನುವೂ ಉತ್ಪನ್ನರಾದರು.

೪೩. ಬ್ರಹ್ಮನ ಹನ್ನೊಂದನೆಯ ಮುಖದಿಂದ ಏ ಕಾರವೂ, ಅದರಿಂದ ಹೊಂಬಣ್ಣವುಳ್ಳ ಪಿಶಂಗನಾಮಕಮನುವೂ ಜನಿಸಿದರು.

೪೪. ಅವನ ಹನ್ನೆರಡನೆಯ ಮುಖದಿಂದ ಭಸ್ಮಕಾಂತಿಯುಳ್ಳ ಐಕಾರವೂ ಅದರಿಂದ ಅದೇ ಕಾಂತಿಯುಳ್ಳ ಪಿಶಂಗನಾಮಕಮನುವೂ ಹುಟ್ಟಿದರು.

೪೫. ಹದಿಮೂರನೆಯ ಮುಖದಿಂದ ಪಂಚವರ್ಣಗಳಿಂದ ಕೂಡಿದ ಓ ಕಾರವೂ ಅದರಿಂದ ಅದೇ ವರ್ಣವಿರುವ ಉತ್ತಮನಾಮಕನಾದ ಮನುವೂ ಕೂಡ ಅವತರಿಸಿದರು.

೪೬. ಬ್ರಹ್ಮನ ಹದಿನಾಲ್ಕನೆಯ ಮುಖದಿಂದ ಚಿತ್ರವರ್ಣವುಳ್ಳ ಔಕಾರವೂ ಅದರಿಂದ ಅದೇ ಬಣ್ಣವುಳ್ಳ ಸಾವರ್ಣಿಕಮನುವೂ ಜನಿಸಿದರು.

೪೭–೪೮. ಈ ಮೇಲೆ ಹೇಳಿದ ಹದಿನಾಲ್ಕು ಮನುಗಳೂ, ಸ್ವರವರ್ಣಗಳೂ, ಕಲ್ಪಾನುಗುಣವಾಗಿ ಸ್ವರ ಮತ್ತು ವರ್ಣಗಳಿಂದ ತಿಳಿಯತಕ್ಕವುಗಳಾಗಿವೆ. ಅಕ್ಷರ

ಪರಸ್ಪರಸವರ್ಣಾಶ್ಚ ಸ್ವರಾ ಯಸ್ಮಾದ್ವೃತಾ ಹಿ ವೈ ।
ತಸ್ಮಾತ್ತೇಷಾಂ ಸವರ್ಣತ್ವಾದನ್ವಯಸ್ತು ಪ್ರಕೀರ್ತಿತಃ ॥ ೪೮ ॥

ಸವರ್ಣಾಃ ಸದೃಶಾಶ್ಚೈವ ಯಸ್ಮಾಜ್ಜಾತಾಸ್ತು ಕಲ್ಪಜಾಃ ।
ತಸ್ಮಾತ್ ಪ್ರಜಾನಾಂ ಲೋಕೇಸ್ಮಿನ್ ಸವರ್ಣಾಃ ಸರ್ವಸಂಧಯಃ ॥ ೪೯ ॥

ಭವಿಷ್ಯಂತಿ ಯಥಾ ಶೈಲಂ ವರ್ಣಾಶ್ಚ ನ್ಯಾಯತೋರ್ಥತಃ ।
ಅಭ್ಯಾಸಾತ್ಸಂಧಯಶ್ಚೈವ ತಸ್ಮಾಜ್ಜ್ಞೇಯಾಃ ಸ್ವರಾ ಇತಿ ॥ ೫೦ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಸ್ವರೋತ್ಪತ್ತಿರ್ನಾಮ"
ಷಡ್ವಿಂಶೋಽಧ್ಯಾಯಃ

---

ಗಳು ಒಂದಕ್ಕೊಂದು ಸವರ್ಣಗಳಾಗಿರುವುದರಿಂದ ವಂಶಗಳೂ ಕೂಡ ಸುವರ್ಣವಾಗಿಯೇ ಇದ್ದುವು.

೪೯. ಆ ಕಲ್ಪದಲ್ಲಿ ಹುಟ್ಟಿದ ಅಕ್ಷರಗಳು ಯಾವ ಕಾರಣಗಳಿಂದ ಸುವರ್ಣವಾಗಿಯೂ, ಸಮಾನಗಳಾಗಿಯೂ ಇದ್ದುವೋ ಅದರಿಂದಲೇ ಆ ಲೋಕದ ಜನರೂ ಕೂಡ ಸವರ್ಣವಾಗಿಯೂ ಸಮಾನಗಳಾಗಿಯೂ, ಸಮಸಂಬಂಧಿಗಳಾಗಿಯೂ ಆದರು.

೫೦. ವರ್ಣಗಳು ನ್ಯಾಯಾನುಗುಣವಾಗಿಯೂ, ಅರ್ಥಾನುಸಾರವಾಗಿಯೂ ಸ್ವಭಾವಾನುಗುಣವಾಗಿಯೂ ಇರುತ್ತವೆ. ಅದರಂತೆಸಂಧಿಗಳೂಕೂಡ ಅಭ್ಯಾಸಾನುಗುಣವಾಗಿಯೇ ಇರುವುವು. ಆದುದರಿಂದ ಸ್ವಾನುಗುಣಗಳಾಗಿ ಅರ್ಥಸಂಧಿಗಳು ಉಂಟಾಗುವುದರಿಂದ ಸ್ವರಗಳೆಂದು ಲೋಕದಲ್ಲಿ ಪ್ರಖ್ಯಾತವಾಗಿವೆ.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಸ್ವರೋತ್ಪತ್ತಿಯೆಂಬ"
ಇಪ್ಪತ್ತಾರನೆಯ ಅಧ್ಯಾಯವು ಸಮಾಪ್ತವು.

## ಇಪ್ಪತ್ತಾರನೆಯ ಅಧ್ಯಾಯದ ಸಾರಾಂಶವು

ಪ್ರಳಯಕಾಲದಲ್ಲಿ ಜಲವು ಜಗತ್ತನ್ನು ವ್ಯಾಪಿಸಲು ಶ್ರೀಹರಿಯು ಆ ಪ್ರಲಯೋದಕದಲ್ಲಿ ಶೇಷಶಾಯಿಯಾಗಿ ಯೋಗನಿದ್ರೆಯಲ್ಲಿ ಆಸಕ್ತನಾದನು. ಹೀಗೆ ಒಂದು ಸಹಸ್ರವರ್ಷಗಳು ಕಳೆಯಲು ಬ್ರಹ್ಮನು ಸೃಷ್ಟಿಸಲುಪಕ್ರಮಿಸಿ ಧ್ಯಾನಿಸಿದನು. ಆಗ ವಿಚಿತ್ರವರ್ಣಗಳಿಂದ ಯುಕ್ತನಾದ ಭಗವಂತನು ಕುಮಾರರೂಪಿಯಾದ ವೇದಗಳನ್ನುಚ್ಚರಿಸುತ್ತಾ ಆವಿರ್ಭವಿಸಿದನು.

ಅನಂತರ ತ್ರಿವರ್ಣರೂಪಿಯಾದ ಓಂಕಾರೋತ್ಪತ್ತಿಯೂ, ಅದರಿಂದ ನಾಲ್ಕು ವೇದಗಳ ಸೃಷ್ಟಿಯೂ ಆದುವು. ಪುನಃ ಧ್ಯಾನಮಾಡತಕ್ಕ ಚತುರ್ಮುಖನ ಹದಿನಾಲ್ಕು ಮುಖಗಳಿಂದ ಅಕಾರಾದಿ ಹದಿನಾಲ್ಕು ಸ್ವರಗಳೂ, ಹದಿನಾಲ್ಕು ಮನುಗಳೂ ಜನಿಸಿದರು. ಇದಕ್ಕೆ ಬ್ರಹ್ಮಕಲ್ಪವೆಂದು ಹೆಸರು. ಅವರು ಯಾರೆಂದರೆ ಸ್ವಾಯಂಭುವ, ಸ್ವಾರೋಚಿಷ, ಆದಿತ್ಯ, ತಾಮಸ, ಚಾರಿಷ್ಣವ, ವಿಜಯ, ಕೃಷ್ಣ, ಸಾವರ್ಣಿ, ಧೂಮ್ರ, ದಕ್ಷ, ಸಾವರ್ಣಿ, ಪಿಶಂಗ, ಬ್ರಹ್ಮಸಾವರ್ಣಿ, ರುದ್ರಸಾವರ್ಣಿ. ಇವರೇ ಹದಿನಾಲ್ಕು ಮನುಗಳು. ಆ ಕಲ್ಪಜನ್ಯರಾದ ಪ್ರಜೆಗಳೆಲ್ಲರೂ ಸಮಾನ ವರ್ಣರೂ, ಸಮಾನರೂಪಿಗಳೂ ಆಗಿದ್ದರೆಂದು ಈ ಅಧ್ಯಾಯದಲ್ಲಿ ಉಕ್ತವಾಗಿದೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಸಪ್ತವಿಂಶೋಽಧ್ಯಾಯಃ

॥ ಋಷಯ ಊಚುಃ ॥

ಅಸ್ಮಿನ್ ಕಲ್ಪೇ ತ್ವಯಾ ಚೋಕ್ತಃ ಪ್ರಾದುರ್ಭಾವೋ ಮಹಾತ್ಮನಃ ।
ಮಹಾದೇವಸ್ಯ ರುದ್ರಸ್ಯ ಸಾಧಕೈರ್ಮುನಿಭಿಃ ಸಹ ॥ ೧ ॥

॥ ಸೂತ ಉವಾಚ ॥

ಉತ್ಪತ್ತಿರಾದಿಸರ್ಗಸ್ಯ ಮಯಾ ಪ್ರೋಕ್ತಾ ಸಮಾಸತಃ ।
ವಿಸ್ತರೇಣಾಸ್ಯ ವಕ್ಷ್ಯಾಮಿ ನಾಮಾನಿ ತನುಭಿಃ ಸಹ ॥ ೨ ॥

---

## ಇಪ್ಪತ್ತೇಳನೆಯ ಅಧ್ಯಾಯವು

೧. ಋಷಿಗಳು ಹೇಳಿದರು :—ಈ ಕಲ್ಪದಲ್ಲಿ ಸಾಧಕರಾದ ಮುನಿಗಳ ಸಂಗಡ ಮಹಾತ್ಮನೂ, ಮಹಾದೇವನೂ ಆದ ರುದ್ರದೇವನು ಅವತರಿಸಿದನು ಎಂದು ಹೇಳಿರುತ್ತೀರಿ. ಈಗ ಅವನಿಗೆ ಯಾವ ಯಾವ ನಾಮಗಳು ಬಂದಿವೆ ಎಂಬುದನ್ನು ತಿಳಿಸಬೇಕೆಂದು ಮುನಿಗಳು ಸೂತರನ್ನು ಪ್ರಾರ್ಥಿಸಿದರು

೨. ಸೂತಮುನಿಯು ಹೇಳಿದನು :—ಎಲೈ ಮಹರ್ಷಿಗಳೇ, ನಾನು ನಿಮಗಾಗಿ ಆದಿಯಲ್ಲಿ ಸೃಷ್ಟಿಕ್ರಮವನ್ನು ವಿಸ್ತಾರವಾಗಿ ಹೇಳಿರುತ್ತೇನೆ. ಈಗ ಆ ಮಹಾದೇವನ ಅವತಾರಗಳನ್ನೂ, ನಾಮಗಳನ್ನೂ ವಿಸ್ತಾರವಾಗಿ ಹೇಳುವೆನು ಕೇಳೆಂದನು.

ಪತ್ನೀಷು ಜನಯಾಮಾಸ ಮಹಾದೇವಃ ಸುತಾನ್ ಬಹೂನ್ ।
ಕಲ್ಪೇಷ್ವನೇ ವ್ಯತೀತೇ ತು ಯಸ್ಮಿನ್ ಕಲ್ಪೇ ತು ತಚ್ಛೃಣು ॥ ೩ ॥

ಕಲ್ಪಾದೌ ಚಾತ್ಮನಸ್ತುಲ್ಯಂ ಸುತಂ ಪ್ರಧ್ಯಾಯತಃ ಪ್ರಭೋಃ ।
ಪ್ರಾದುರಾಸೀತ್ತತೋಂಕೇಸ್ಯ ಕುಮಾರೋ ನೀಲಲೋಹಿತಃ ॥
ತಂ ದಧೇ ಸುಸ್ವರಂ ಘೋರಂ ನಿರ್ದಹನ್ನಿವ ತೇಜಸಾ ॥ ೪ ॥

ದೃಷ್ಟ್ವಾ ರುದಂತಂ ಸಹಸಾ ಕುಮಾರಂ ನೀಲಲೋಹಿತಂ ।
ಕಿಂ ರೋದಿಷಿ ಕುಮಾರೇತಿ ಬ್ರಹ್ಮಾ ತಂ ಪ್ರತ್ಯಭಾಷತ ॥ ೫ ॥

ಸೋಬ್ರವೀದ್ದೇಹಿ ಮೇ ನಾಮ ಪ್ರಥಮಂ ವೈ ಪಿತಾಮಹ ।
ರುದ್ರಸ್ತ್ವಂ ದೇವ ನಾಮ್ನಾಸಿ ಇತ್ಯುಕ್ತಃ ಸೋರುದತ್ಪುನಃ ॥ ೬ ॥

ಕಿಂ ರೋದಿಷೀತಿ ತಂ ಬ್ರಹ್ಮಾ ರುದಂತಂ ಪುನರಬ್ರವೀತ್ ।
ನಾಮ ದೇಹಿ ದ್ವಿತೀಯಂ ಮೇ ಇತ್ಯುವಾಚ ಸ್ವಯಂಭುವಂ ॥ ೭ ॥

---

೩. ಎಂಟನೆಯ ಕಲ್ಪವು ಕಳೆಯಲು ಮುಂದಿನ ಕಲ್ಪದಲ್ಲಿ ಯಾವ ಯಾವ ಪತ್ನಿಯರಲ್ಲಿ ಯಾವ ಯಾವ ಮಕ್ಕಳನ್ನು ಈಶ್ವರನು ಸೃಷ್ಟಿಸಿದನು ಎಂಬುದನ್ನು ವಿಸ್ತಾರವಾಗಿ ಹೇಳುವೆನು ಕೇಳೆಂದನು.

೪. ಬ್ರಹ್ಮನು ಕಲ್ಪದ ಆದಿಯಲ್ಲಿ ತನಗೆ ಸಮನಾದ ಪುತ್ರನು ಜನಿಸಬೇಕೆಂದು ಯೋಚಿಸುತ್ತಿರಲು, ನೀಲಲೋಹಿತನಾದ ಕುಮಾರನು ಅವನ ತೊಡೆಯಿಂದ ಜನಿಸಿದನು. ಮಹಾತೇಜಸ್ವಿಯೂ, ಘೋರರೂಪನೂ, ಸುಸ್ವರವುಳ್ಳವನೂ ಆದ ಕುಮಾರನನ್ನು ತೊಡೆಯಮೇಲೆ ಧರಿಸಿದನು.

೫. ನೀಲಲೋಹಿತನಾದ ಆ ಕುಮಾರನು ಅಳುತ್ತಿರಲು ಅವನನ್ನು ಕುರಿತು ಎಲೈ ಪುತ್ರನೇ, ಏಕೆ ಅಳುತ್ತೀಯೆ ? ಎಂದು ಬ್ರಹ್ಮದೇವನು ಕೇಳಿದನು.

೬. ಎಲೈ ಬ್ರಹ್ಮದೇವನೇ, ನನಗೆ ನಾಮಕರಣವನ್ನು ಮಾಡು ಎಂದು ಆ ಕುಮಾರನು ಹೇಳಲು ದೇವನೇ ನೀನು ರೋದನಮಾಡಿದ್ದರಿಂದ ರುದ್ರನಾಮಕನಾಗಿರುತ್ತೀಯೆ ಎಂದು ಬ್ರಹ್ಮನು ಹೇಳಿದನು. ಆಗ ಕುಮಾರನು ಪುನಃ ಅತ್ತನು.

೭. ಆಗ ಬ್ರಹ್ಮನು ಏಕೆ ಅಳುತ್ತೀಯೆ ? ಎಂದು ಪುನಃ ಕುಮಾರನನ್ನು ಕೇಳಲು ಆ ಕುಮಾರನು ನನಗೆ ಎರಡನೆಯ ನಾಮವನ್ನು ಕೊಡು ಎಂದು ಹೇಳಿದನು.

ಭವಸ್ತ್ವಂ ದೇವ ನಾಮ್ನಾಸಿ ಇತ್ಯುಕ್ತಃ ಸೋಽರುದತ್ಪುನಃ ।
ಕಿಂ ರೋದಿಷೀತಿ ತಂ ಬ್ರಹ್ಮಾ ಪ್ರತ್ಯುವಾಚಾಥ ಶಂಕರಂ ॥ ೮ ॥

ತೃತೀಯಂ ದೇಹಿ ಮೇ ನಾಮ ಇತ್ಯುಕ್ತಃ ಪ್ರತ್ಯುವಾಚ ತಂ ।
ಶಿವಸ್ತ್ವಂದೇವ ನಾಮ್ನಾಸಿ ಇತ್ಯುಕ್ತಃ ಸೋಽರುದತ್ಪುನಃ ॥ ೯ ॥

ಕಿಂ ರೋದಿಷೀತಿ ತಂ ಬ್ರಹ್ಮಾ ರುದಂತಂ ಪುನರಬ್ರವೀತ್ ।
ಚತುರ್ಥಂ ದೇಹಿ ಮೇ ನಾಮ ಇತ್ಯುವಾಚ ಸ್ವಯಂಭುವಂ ॥ ೧೦ ॥

ಪಶೂನಾಂ ತ್ವಂ ಪತಿರ್ದೇವ ಇತ್ಯುಕ್ತಃ ಸೋಽರುದತ್ಪುನಃ ।
ಕಿಂ ರೋದಿಷೀತಿ ತಂ ಬ್ರಹ್ಮಾ ರುದಂತಂ ಪುನರಬ್ರವೀತ್ ॥ ೧೧ ॥

ಪಂಚಮಂ ದೇಹಿ ಮೇ ನಾಮ ಇತ್ಯುಕ್ತಃ ಪ್ರತ್ಯುವಾಚ ತಂ ।
ಈಶಸ್ತ್ವಂ ದೇವ ನಾಮ್ನಾಸಿ ಇತ್ಯುಕ್ತಃ ಸೋಽರುದತ್ಪುನಃ ॥ ೧೨ ॥

---

೮. ಎಲೈ ದೇವನೇ ಭವ ಎಂಬ ಹೆಸರನ್ನು ಪಡೆ ಎಂದು ಬ್ರಹ್ಮನು ಹೇಳಲು ಕುಮಾರನು ಪುನಃ ಅತ್ತನು. ಏತಕ್ಕೆ ಅಳುತ್ತೀಯೆ ಎಂದು ಬ್ರಹ್ಮನು ಕುಮಾರನನ್ನು ಕೇಳಿದನು

೯. ಆಗ ಕುಮಾರನು ನನಗೆ ಮೂರನೆಯ ಹೆಸರನ್ನು ಕೊಡು ಎಂದು ಕೇಳಲು ಶಿವನಾಮಕನಾಗಿರುತ್ತೀಯೆ ಎಂದು ಬ್ರಹ್ಮನು ಪುನಃ ಹೇಳಿದನು.

೧೦. ಎಲೈ ದೇವನೇ ಏಕೆ ಅಳುತ್ತೀಯೆ? ಎಂದು ಕೇಳಲು ನನಗೆ ನಾಲ್ಕನೆಯ ನಾಮವನ್ನು ಕೊಡೆಂದು ಕುಮಾರನು ಕೇಳಿದನು.

೧೧. ಎಲೈ ದೇವನೇ ನೀನು ಪಶುಪತಿಯಾಗಿ ಇರುತ್ತೀಯೆ, ಎನಲು ಪುನಃ ರೋದಿಸಿದನು. ಏತಕ್ಕೆ ರೋದಿಸುತ್ತೀಯೆ? ಎಂದು ಬ್ರಹ್ಮನು ಕೇಳಲು ಕುಮಾರನು ಇಂತೆಂದನು.

೧೨-೧೪. ದೇವನೇ ನನಗೆ ಐದನೆಯ ನಾಮವನ್ನು ಕೊಡು ಎಂದು ಕೇಳಲು ನೀನು ಈಶನಾಮಕನಾಗಿ ಇರುತ್ತೀಯೆ ಎಂದು ಬ್ರಹ್ಮನು ಹೇಳಲಾಗಿ ಪುನಃ ರೋದನ

ಕಿಂ ರೋದಿಷೀತಿ ತಂ ಬ್ರಹ್ಮಾ ರುದಂತಂ ಪುನರಬ್ರವೀತ್ ।
ಷಷ್ಠಂ ಮೇ ನಾಮ ದೇಹೀತಿ ಇತ್ಯುವಾಚಾಥ ತಂ ಪ್ರಭುಂ ॥ ೧೩ ॥

ಭೀಮಸ್ತ್ವಂ ದೇವ ನಾಮ್ನಾಸಿ ಇತ್ಯುಕ್ತಃ ಸೋऽರುದತ್ಪುನಃ ।
ಕಿಂ ರೋದಿಷೀತಿ ತಂ ಬ್ರಹ್ಮಾ ರುದಂತಂ ಪುನರಬ್ರವೀತ್ ॥ ೧೪ ॥

ಸಪ್ತಮಂ ದೇಹಿ ಮೇ ನಾಮ ಇತ್ಯುಕ್ತಃ ಪ್ರತ್ಯುವಾಚ ತಂ ।
ಉಗ್ರಸ್ತ್ವಂ ದೇವಂ ನಾಮ್ನಾಸಿ ಇತ್ಯುಕ್ತಃ ಸೋऽರುದತ್ಪುನಃ ॥ ೧೫ ॥

ಕಿಂ ರೋದಿಷೀತಿ ತಂ ಬ್ರಹ್ಮಾ ರುದಂತಂ ಪುನರಬ್ರವೀತ್ ।
ಅಷ್ಟಮಂ ದೇಹಿ ಮೇ ನಾಮ ತ್ವಂ ವಿಭೋ ಪುನರಬ್ರವೀತ್ ॥
ಮಹಾದೇವಸ್ತು ನಾಮ್ನಾಸಿ ಇತ್ಯುಕ್ತೋ ವಿರರಾಮ ಹ ॥ ೧೬ ॥

ಲಬ್ಧ್ವಾ ನಾಮಾನಿ ಚೈತಾನಿ ಬ್ರಹ್ಮಣೋ ನೀಲಲೋಹಿತಃ ।
ಪ್ರೋವಾಚ ನಾಮ್ನಾಮೇತೇಷಾಂ ಭೂತಾನಿ ಪ್ರದಿಶೇತಿ ಹ ॥ ೧೭ ॥

---

ಮಾಡಿದನು. ಏಕೆ ಹೀಗೆ ಮಾಡುತ್ತೀಯೆ ಎಂದು ಬ್ರಹ್ಮನು ಕೇಳಿದನು. ನನಗೆ ಆರನೆಯ ನಾಮವನ್ನು ಕೊಡು ಎನಲು ನೀನು ಭೀಮನಾಮಕನಾಗಿರುತ್ತೀಯೆ ಎಂದು ಹೇಳಲು ಪುನಃ ರೋದಿಸಿದನು. ಆಗಲೂ ಸಹ ಪೂರ್ವದಂತೆಯೇ ಪ್ರಶ್ನೆ ಮಾಡಿದನು.

೧೫. ದೇವನೇ ನನಗೆ ಏಳನೆಯ ನಾಮವನ್ನು ಇಡು ಎಂದು ಕೇಳಲು ಬ್ರಹ್ಮನು ನೀನು ಉಗ್ರನಾಮಕನಾಗು ಎಂದು ತಿಳಿಸಲು ಪುನಃ ಪೂರ್ವದಂತೆಯೇ ರೋದಿಸಲುಪಕ್ರಮಿಸಿದನು.

೧೬. ಪುನಃ ಏತಕ್ಕೆ ಅಳುತ್ತೀಯೆ ಎಂದು ಬ್ರಹ್ಮನು ಕೇಳಲು ನನಗೆ ಎಂಟನೆಯ ನಾಮವನ್ನು ವಿಧಿಸು ಎಂದು ಕುಮಾರನು ಕೇಳಿದನು. ದೇವನೇ ನೀನು ಮಹಾದೇವನಾಮಕನಾಗಿರುತ್ತೀಯೆ ಎಂದು ಬ್ರಹ್ಮನು ಹೇಳಲು ಕುಮಾರನು ಸುಮ್ಮನಾದನು.

೧೭. ನೀಲಲೋಹಿತನಾದ ಈಶ್ವರನು ಆಗ ಚತುರ್ಮುಖನಾದ ಬ್ರಹ್ಮನಿಂದ ನಾನಾ ನಾಮಗಳನ್ನು ಪಡೆದು ಈ ನಾಮಗಳಿಗೆ ತಕ್ಕ ಪಂಚಭೂತಗಳಿಂದ ಕೂಡಿದ ವಸ್ತುಗಳನ್ನು ಕೊಡು ಎಂದು ಕೇಳಿದನು.

ತತೋಽಭಿಸೃಷ್ಟ್ವಾಸ್ತನವ ಏಷಾಂ ನಾಮ್ನಾಂ ಸ್ವಯಂಭುವಾ ।
ಸೂರ್ಯೋ ಮಹೀ ಜಲಂ ವಹ್ನಿರ್ವಾಯುರಾಕಾಶಮೇವ ಚ ॥ ೧೮ ॥

ದೀಕ್ಷಿತೋ ಬ್ರಾಹ್ಮಣಶ್ಚಂದ್ರ ಇತ್ಯೇತೇ ಬ್ರಹ್ಮಧಾತವಃ ।
ತೇಷು ಪೂಜ್ಯಶ್ಚ ವಂದ್ಯಃ ಸ್ಯಾದ್ರುದ್ರಸ್ತಾನ್ನ ಹಿನಸ್ತಿ ವೈ ॥ ೧೯ ॥

ತತೋಽಬ್ರವೀತ್ ಪುನರ್ಬ್ರಹ್ಮಾ ತಂ ದೇವಂ ನೀಲಲೋಹಿತಂ ।
ದ್ವಿತೀಯಂ ನಾಮಧೇಯಂ ತೇ ಮಯಾ ಪ್ರೋಕ್ತಂ ಭವೇತಿ ಯತ್ ॥
ಏತಸ್ಯಾಪೋ ದ್ವಿತೀಯಾ ತೇ ತನುರ್ನಾಮ್ನಾ ಭವಿಷ್ಯತಿ ॥ ೨೦ ॥

ಇತ್ಯುಕ್ತೇ ಯತ್ ಸ್ಥಿರಂ ತಸ್ಯ ಶರೀರಸ್ಥಂ ರಸಾತ್ಮಕಂ ।
ತದ್ವಿವೇಶ ತತಸ್ತ್ವೇಯಂ ತಸ್ಮಾದಾಪೋ ಭವಃ ಸ್ಮೃತಃ ॥ ೨೧ ॥

ಯಸ್ಮಾದ್ಭವಂತಿ ಭೂತಾನಿ ತಾಭ್ಯಸ್ತಾ ಭಾವಯಂತಿ ಚ ।
ಭವನಾದ್ಭಾವನಾಚ್ಚೈವ ಭೂತಾನಾಂ ಸಂಭವಃ ಸ್ಮೃತಃ ॥ ೨೨ ॥

---

೧೮–೧೯. ಅನಂತರ ಬ್ರಹ್ಮನು ನಿಯಮಿಸಿದ ನಾಮಾನುಗುಣವಾಗಿ ಸೂರ್ಯ, ಮಹೀ, ಜಲ, ಅಗ್ನಿ, ವಾಯು, ಆಕಾಶ, ಚಂದ್ರ, ಯಜ್ಞದೀಕ್ಷಿತ ಎಂಬ ಈ ಎಂಟು ಸ್ಥಾನಗಳನ್ನು ಈಶ್ವರನು ವಾಸಿಸಲು ಏರ್ಪಡಿಸಿದನು. ಆಗ ಪೂಜ್ಯನೂ, ಸ್ತುತ್ಯನೂ ಆದ ರುದ್ರದೇವನು ಅವುಗಳಲ್ಲಿ ವಾಸಿಸಿದನು. ಯಾರಿಗೂ ಹಿಂಸೆಯನ್ನು ಕೊಡಲಿಲ್ಲ.

೨೦. ಅನಂತರ ಬ್ರಹ್ಮನು ದೇವನಾದ ಈಶನನ್ನು ಕುರಿತು ನಿನ್ನ ಭವವೆಂಬ ಎರಡನೆಯ ನಾಮಕ್ಕೆ ಜಲವೇ ದ್ವಿತೀಯ ಶರೀರವೂ ಆಶ್ರಯವೂ, ಆಗಿದೆಯೆಂದು ಹೇಳಿದನು.

೨೧. ಬ್ರಹ್ಮನು ಹೀಗೆ ಹೇಳಲಾಗಿ ಈಶ್ವರನು ತನ್ನ ಶರೀರದಲ್ಲಿ ಸ್ಥಿರವೂ ರಸಾತ್ಮಕವೂ ಆದ ಯಾವ ಜಲವು ಇತ್ತೋ, ಅದನ್ನು ಅವನು ಪ್ರವೇಶಿಸಿದನು. ಇದರಿಂದ ಜಲವು ಈಶ್ವರನ ಎರಡನೆಯ ಶರೀರವಾಯಿತು.

೨೨. ಚರಚರಾತ್ಮಕವಾದ ಸಕಲ ಭೂತಗಳು ಈಶ್ವರನಿಂದ ಹುಟ್ಟಿ ಅವನ ಎರಡನೆಯ ಶರೀರವಾದ ಜಲವನ್ನು ಪಾನಮಾಡಿ ಜೀವಿಸುತ್ತವೆ. ಈ ಎರಡು ಕಾರಣ ಗಳಿಂದ ಈಶ್ವರನು ಭೂತಗಳಿಗೆ ನಿಯಾಮಕನಾಗಿರುವನು.

ತಸ್ಮಾನ್ಮೂತ್ರಂ ಪುರೀಷಂಚ ನಾಪ್ಸು ಕುರ್ವೀತ ಸರ್ವದಾ ।
ನ ಸ್ನಾಯೇದಪ್ಸು ನಗ್ನಶ್ಚ ನ ನಿಷ್ಠೀವೇತ್ ಕದಾಚನ ॥ ೨೩ ॥

ಮೈಥುನಂ ನೈವ ಸೇವೇತ ಶಿರಃಸ್ನಾನಂಚ ವರ್ಜಯೇತ್ ।
ನ ಪ್ರೀತಃ ಪರಿಚಕ್ಷೀತ ವಹನ್ನ ಸಂಸ್ಥಿತೋಽಪಿ ವಾ ॥ ೨೪ ॥

ಮೇಧ್ಯಾಮೇಧ್ಯಶರೀರತ್ವಾನ್ನೈವ ದುಷ್ಯಂತ್ಯಪಃ ಕ್ವಚಿತ್ ।
ವಿವರ್ಣರಸಗಂಧಾಶ್ಚ ಅಲ್ಪಾಶ್ಚ ಪರಿವರ್ಜಯೇತ್ ॥ ೨೫ ॥

ಅಪಾಂಯೋನಿಃ ಸಮುದ್ರಶ್ಚ ತಸ್ಮಾತ್ತಂ ಕಾಮಯಂತಿ ತಾಃ ।
ಮೇಧ್ಯಾಶ್ಚೈವಾಮೃತಾಶ್ಚೈವ ಭವಂತಿ ಪ್ರಾಪ್ಯ ಸಾಗರಂ ॥ ೨೬ ॥

ತಸ್ಮಾದಪೋ ನ ರುಂಧೀತ ಸಮುದ್ರಂ ಕಾಮಯಂತಿ ತಾಃ ।
ನ ಹಿನಸ್ತಿ ಭವೋ ದೇವಃ ಸದೈವಂ ಯೋಽಪ್ಸು ವರ್ತತೇ ॥ ೨೭ ॥

---

೨೩-೨೪. ಆದುದರಿಂದ ಜಲವು ಈಶ್ವರನಿಗೆ ದ್ವಿತೀಯ ಶರೀರವಾಗಿರುವುದು. ಅದರಲ್ಲಿ ಜಲಮಲಗಳು, ನಗ್ನಸ್ನಾನ, ಉಗುಳುವುದು, ಮೈಥುನ, ಶಿರಃಸ್ನಾನ ಇವುಗಳನ್ನು ಯಾವಾಗಲೂ ಮಾಡಬಾರದು. ಪುಣ್ಯತೀರ್ಥದಲ್ಲಿ ಪ್ರೀತನಾಗಿ ಚಿರಕಾಲ ವಾಸಿಸಿದರೂಕೂಡ ಮೂಲಪರೀಕ್ಷೆಯನ್ನು ಮಾಡಬಾರದು.

೨೫. ಹೀಗೆ ಜಲವು ಶುದ್ಧಾಶುದ್ಧವಾದ ಈಶ್ವರನ ಶರೀರವಾಗಿರುವುದರಿಂದ ಎಂದಿಗೂ ದೂಷ್ಯವಾಗುವುದಿಲ್ಲ ವರ್ಣಹೀನವೂ, ದುರ್ಗಂಧವೂ, ಅರುಚಿಯೂ ಅಲ್ಪವೂ ಆಗಿರುವ ಜಲವನ್ನು ತ್ಯಜಿಸಬೇಕು.

೨೬. ಸಮುದ್ರವು ಜಲಕ್ಕೆ ಆಧಾರವಾಗಿದೆ. ಆದುದರಿಂದ ಜಲವು ಸಮುದ್ರಕ್ಕೆ ಹೋಗಲು ಬಯಸುತ್ತದೆ ಜಲವು ಸಮುದ್ರವನ್ನು ಹೊಂದಿ ಪವಿತ್ರವೂ ಅಮೃತವೂ ಆಗಿರುತ್ತದೆ.

೨೭. ಆದ್ದರಿಂದ ಸಮುದ್ರಕ್ಕೆ ಹೋಗುವ ಜಲವನ್ನು ಯಾರೂ ತಡೆಯಬಾರದು. ಅದು ಸರ್ವದಾ ಸಮುದ್ರಕ್ಕೆ ಹೋಗಲು ಇಚ್ಛಿಸುತ್ತದೆ. ಯಾವ ಈಶ್ವರನು ಸರ್ವದಾ ಜಲದಲ್ಲಿ ವಾಸಿಸುವನೋ ಅಂಥ ದೇವನು ಅವರಿಗೆ ಹಿಂಸೆಯನ್ನು ಮಾಡುವುದಿಲ್ಲ.

ತತೋಽಬ್ರವೀತ್ ಪುನರ್ಬ್ರಹ್ಮಾ ತಂ ದೇವಂ ಕೃಷ್ಣಲೋಹಿತಂ ।
ಶರ್ವಸ್ತ್ವಮಿತಿ ಯನ್ನಾಮ ತೃತೀಯಂ ಸಮುದಾಹೃತಂ ॥
ತಸ್ಯ ಭೂಮಿಸ್ತೃತೀಯಾ ತು ತನುರ್ನಾಮಾ ಭವತ್ವಿಯಂ ॥ ೨೮ ॥

ಇತ್ಯುಕ್ತೇ ಯತ್ ಸ್ಥಿರಂ ತಸ್ಯ ಶರೀರಸ್ಯಾಸ್ಥಿಸಂಜ್ಞಿತಂ ।
ತದ್ವಿವೇಶ ತತೋ ಭೂಮಿಸ್ತಸ್ಮಾದ್ಭೂಃ ಶರ್ವ ಉಚ್ಯತೇ ॥ ೨೯ ॥

ತಸ್ಮಾತ್ಕುರ್ವೀತ ನೋ ವಿದ್ವಾನ್ ಪುರೀಷಂ ಮೂತ್ರಮೇವ ವಾ ।
ನ ಛಾಯಾಯಾಂ ನ ಸೋಪಾನೇ ಸ್ವಚ್ಛಾಯಾಂ ನಾಪಿ ಮೋಹಯೇತ್ ॥

ಶಿರಃ ಪ್ರಾವೃತ್ಯ ಕುರ್ವೀತ ಅಂತರ್ಧಾಯ ತೃಣೈರ್ಮಹೀಂ ।
ಯ ಏವಂ ವರ್ತತೇ ಶರ್ವೋ ಭೂಮೌ ತಂ ನ ಹಿನಸ್ತಿ ವೈ ॥ ೩೦ ॥

---

೨೮. ಅನಂತರ ಬ್ರಹ್ಮನು ಕೃಷ್ಣಲೋಹಿತನೂ, ದೇವನೂ ಆದ ಈಶ್ವರನನ್ನು ಕುರಿತು ಎಲೈ ಸ್ವಾಮಿಯೇ, ಭೂಮಿಯು ಶರ್ವನಾಮಕವಾದ ನಿನ್ನ ಮೂರನೆಯ ಶರೀರವಾಗಿದೆ.

೨೯. ಹೀಗೆ ಬ್ರಹ್ಮನು ಹೇಳಲಾಗಿ ಭೂಮಿಯು ಆ ಪರಮೇಶ್ವರನ ಸ್ಥಿರವೂ, ಅಸ್ಥಿಸಂಜ್ಞಿಕವೂ ಆದ ದೇಹವನ್ನು ಪ್ರವೇಶಮಾಡಿತು. ಆದ್ದರಿಂದ ಆ ಭೂಮಿಗೆ ಶರ್ವವೆಂಬ ನಾಮವು ಪ್ರಾಪ್ತವಾಗಿದೆ.

೩೦. ಆದುದರಿಂದ ಜ್ಞಾನಿಯಾದವನು ಭೂಮಿಯನ್ನು ಈಶ್ವರನ ಶರೀರ ವೆಂದು ತಿಳಿದು ಅದರಲ್ಲಿ ಜಲಮಲಗಳನ್ನು ಸ್ವೇಚ್ಛೆಯಾಗಿ ವಿಸರ್ಜಿಸಬಾರದು. ಹಾಗೆಯೇ ಛಾಯೆಯಲ್ಲಿಯೂ, ಸೋಪಾನಗಳಲ್ಲಿಯೂ, ಪರಿಶುದ್ಧವಾದ ಸ್ಥಳ ದಲ್ಲಿಯೂ ಜಲಮಲಗಳನ್ನು ವಿಸರ್ಜಿಸಕೂಡದು.

೩೧. ಪುರುಷನು ತನ್ನ ತಲೆಗೆ ವಸ್ತ್ರವನ್ನು ಸುತ್ತಿಕೊಂಡು ಹುಲ್ಲುಕಡ್ಡಿ ಗಳಿಂದ ಭೂಮಿಯನ್ನು ಮುಚ್ಚಿ ಅದರಲ್ಲಿ ಜಲಮಲಗಳನ್ನು ಬಿಡಬೇಕು. ಹೀಗೆ ಯಾವನು ಮಾಡುವನೋ ಅವನಿಗೆ ಈಶ್ವರನು ಯಾವ ವಿಧವಾದ ಹಿಂಸೆಯನ್ನೂ ಮಾಡುವುದಿಲ್ಲ.

ತತೋಽಬ್ರವೀತ್ ಪುನರ್ಬ್ರಹ್ಮಾ ತಂ ದೇವಂ ನೀಲಲೋಹಿತಂ ।
ಈಶಾನ ಇತಿ ಯತ್ಪ್ರೋಕ್ತಂ ಚತುರ್ಥಂ ನಾಮ ತೇ ಮಯಾ ॥ ೩೨ ॥

ಚತುರ್ಥಸ್ಯ ಚತುರ್ಥೀ ಸ್ಯಾದ್ವಾಯುರ್ನಾಮ್ನಾ ತನುಸ್ತವ ।
ಇತ್ಯುಕ್ತೇ ಯಚ್ಛರೀರಸ್ಥಂ ಪಂಚಧಾ ಪ್ರಾಣಸಂಜ್ಞಿತಂ ॥ ೩೩ ॥

ವಿವೇಶ ತಂ ತದಾ ವಾಯುರೀಶಾನೋ ವಾಯುರುಚ್ಯತೇ ।
ತಸ್ಮಾದೇನಂ ಪರಿವದೇದಾಯತಂ ವಾಯುಮೀಶ್ವರಂ ॥
ಏವಂ ಯುಕ್ತಮಥೇಶಾನೋ ನೈವ ದೇವೋ ಹಿನಸ್ತಿ ತಂ ॥ ೩೪ ॥

ತತೋಽಬ್ರವೀತ್ ಪುನರ್ಬ್ರಹ್ಮಾ ತಂ ದೇವಂ ಧೂಮ್ರಲೋಹಿತಂ ।
ಯತ್ತೇ ಪಶುಪತೀತ್ಯುಕ್ತಂ ಮಯಾ ನಾಮೇಹ ಪಂಚಮಂ ।
ಪಂಚಮೀ ಪಂಚಮಸ್ಯೈವ ತನುರ್ನಾಮ್ನಾಗ್ನಿರಸ್ತು ತೇ ॥ ೩೫ ॥

---

೩೨. ಅನಂತರ ಬ್ರಹ್ಮದೇವನು ನೀಲಲೋಹಿತನಾದ ಈಶ್ವರನನ್ನು ಕುರಿತು ಈಶಾನನಾಮಕವಾದ ನಾಲ್ಕನೆಯ ಯಾವ ಶರೀರವಿದೆಯೋ ಅದರ ವಿಚಾರವನ್ನು ಹೇಳುವೆನು ಕೇಳು ಎಂದನು.

೩೩. ಎಲೈ ಪರಮೇಶ್ವರನೇ, ನಿನ್ನ ನಾಲ್ಕನೆಯ ಶರೀರವು ವಾಯುನಾಮಕ ವಾಗಿದೆ ಎಂದು ಬ್ರಹ್ಮನು ಹೇಳಲು ವಾಯುವು ಪಂಚಪ್ರಾಣಗಳಿರುವ ಈಶ್ವರನ ದೇಹವನ್ನು ಪ್ರವೇಶಿಸಿತು.

೩೪. ಆಗ ವಾಯುದೇವನು ಈಶ್ವರನ ದೇಹವನ್ನು ಪ್ರವೇಶಮಾಡಿದ್ದರಿಂದ ವಾಯುವಿಗೆ ಈಶಾನವೆಂಬ ನಾಮವು ಪ್ರಾಪ್ತವಾಗಿದೆ. ಹೀಗೆ ಈಶ್ವರನು ವಾಯು ಶರೀರದಿಂದ ಸರ್ವತ್ರ ವ್ಯಾಪ್ತನಾಗಿರುವನೆಂದು ಯಾರು ತಿಳಿಯುವರೋ ಅವರನ್ನು ಈಶ್ವರನು ಹಿಂಸೆಮಾಡುವುದಿಲ್ಲ.

೩೫. ಅನಂತರ ಬ್ರಹ್ಮನು, ಎಲೈ ಈಶ್ವರನೇ, ಯಾವ ನಿನ್ನ ಧೂಮ್ರ ಲೋಹಿತನಾಮಕವೂ, ಪಂಚಮವೂ ಆದ ಶರೀರಕ್ಕೆ ಪಶುಪತಿಯೆಂಬ ನಾಮವನ್ನು ಕೊಟ್ಟಿರುತ್ತೇನೆಯೋ ಆ ಶರೀರವು ಅಗ್ನಿನಾಮಕವಾಗಿದೆ.

ಇತ್ಯುಕ್ತೇ ಯಚ್ಛರೀರಸ್ಥಂ ತೇಜಸ್ತಸ್ಯೋಪಸಂಜ್ಞಿತಂ ।
ವಿವೇಶ ತತ್ತದಾ ಹ್ಯಗ್ನಿಸ್ತಸ್ಮಾತ್ಪಶುಪತಿಃ ಪತಿಃ ॥ ೩೬ ॥

ಚಂದ್ರಮಾಸ್ತು ಸ್ಮೃತಃ ಸೋಮಃ ತಸ್ಯಾತ್ಮಾ ಹ್ಯೋಷಧೀಗಣಃ ।
ಏವಂ ಯೋ ವರ್ತತೇ ವಿದ್ವಾನ್ ಸದಾ ಪರ್ವಣಿ ಪರ್ವಣಿ ॥
ನ ಹಂತಿ ತಂ ಮಹಾದೇವ ಏವಂ ಪಂದೇತ ತಂ ಪ್ರಭುಂ ॥ ೩೭ ॥

ಗೋಪಾಯತಿ ದಿವಾದಿತ್ಯಃ ಪ್ರಜಾ ನಕ್ತಂತು ಚಂದ್ರಮಾಃ ।
ಏಕರಾತ್ರೇ ಸಮೇಯಾತಾಂ ಸೂರ್ಯಾಚಂದ್ರಮಸಾವುಭೌ ॥
ಅಮಾವಾಸ್ಯಾನಿಶಾಯಾಂ ತು ತಸ್ಯಾಂ ಯುಕ್ತಃ ಸದಾ ವಸೇತ್ ॥ ೩೮ ॥

ತತ್ರಾವಿಷ್ಟಂ ಸರ್ವಮಿದಂ ತನುಭಿರ್ನಾಮಭಿಃ ಸಹ ।
ಏಕಾಕೀ ಯಶ್ಚರತ್ಯೇಷಃ ಸೂರ್ಯೋಽಸೌ ಚಂದ್ರ ಉಚ್ಯತೇ ॥ ೩೯ ॥

---

೩೬. ಹೀಗೆ ಬ್ರಹ್ಮನು ಹೇಳಲಾಗಿ ಪಶುಪತಿನಾಮಕನಾದ ಈಶ್ವರನ ಶರೀರದಲ್ಲಿ ಯಾವ ಅಗ್ನಿಯು ಇತ್ತೋ, ಆ ಅಗ್ನಿಯನ್ನು ಭೂತಾಗ್ನಿಯು ಪ್ರವೇಶಿಸಿತು.

೩೭. ಪ್ರಸಿದ್ಧನಾದ ಚಂದ್ರನು ಸೋಮನಾಮಕನಾದ ಈಶ್ವರನಿಗೆ ಶರೀರನಾಗಿರುತ್ತಾನೆ. ಅವನಿಗೆ ಓಷಧಿಗಳ ಗಣವೇ ಆತ್ಮವಾಗಿದೆ. ಹೀಗೆ ಯಾವ ಜ್ಞಾನಿಯು ಪ್ರತಿಯೊಂದು ಪರ್ವಕಾಲದಲ್ಲಿಯೂ ಧ್ಯಾನಿಸುತ್ತಾನೋ, ಅವನನ್ನು ಮಹಾದೇವನು ಹಿಂಸಿಸುವುದಿಲ್ಲ. ಹೀಗೆ ತಿಳಿದವನು ಆ ಪ್ರಭುವನ್ನು ಹೊಂದುವನು.

೩೮. ಸೂರ್ಯನು ಹಗಲಿನಲ್ಲಿಯೂ ಚಂದ್ರನು ರಾತ್ರಿಯಲ್ಲಿಯೂ ಪ್ರಜೆಗಳನ್ನು ಕಾಪಾಡುವರು. ಹೀಗೆ ಸೂರ್ಯಚಂದ್ರರಿಬ್ಬರೂ ಒಂದುದಿವಸ ರಾತ್ರಿಯಲ್ಲಿ ಕೂಡುವರು. ಅದೇ ಅಮಾವಾಸ್ಯೆಯು. ಪ್ರತಿ ಅಮಾವಾಸ್ಯೆಯ ರಾತ್ರಿಯಲ್ಲಿ ಅವರಿಬ್ಬರೂ ಕೂಡುವರು.

೩೯. ಇವೆಲ್ಲವೂ ಆ ಈಶ್ವರನ ನಾಮರೂಪಗಳಿಂದ ವ್ಯಾಪ್ತವಾಗಿವೆ. ಏಕಾಂಗಿಯಾಗಿ ಯಾವ ಈಶ್ವರನು ಸಂಚರಿಸುವನೋ ಅವನಿಗೆ ಸೂರ್ಯಚಂದ್ರನೆಂಬ ನಾಮವು ಪ್ರಾಪ್ತವಾಗಿದೆ.

ಸೂರ್ಯಸ್ಯ ಯತ್ ಪ್ರಕಾಶೇನ ವೀಕ್ಷ್ಯಂತೇ ಚಕ್ಷುಷಾ ಪ್ರಜಾಃ ।
ಶುಕ್ಲಾತ್ಮಾ ಸಂಸ್ಥಿತೋ ರುದ್ರಃ ಪಿಬತ್ಯಂಭೋ ಗಭಸ್ತಿಭಿಃ ॥ ೪೦ ॥

ಅದ್ಯತೇ ಪೀಯತೇ ಚೈವಾಪ್ಯನ್ನಪಾನಾತ್ಮಕಾನಿ ಯಾ ।
ತನುರಾತ್ಮಭವಾ ಸಾ ವೈ ದೇಹೇಷ್ವೇವೋಪಚೀಯತೇ ॥ ೪೧ ॥

ಯಯಾ ಧತ್ತೇ ಪ್ರಜಾಃ ಸರ್ವಾಃ ಸ್ಥಿರೀಭೂತೇನ ಚೇತಸಾ ।
ಪಾರ್ಥಿವೀ ಸಾ ತನುಸ್ತಸ್ಯ ಶಾರ್ವೀ ಧಾರಯತಿ ಪ್ರಜಾಃ ॥ ೪೨ ॥

ಯಾವತ್ ಸ್ಥಿತಾ ಶರೀರೇಷು ಭೂತಾನಾಂ ಪ್ರಾಣವೃತ್ತಿಭಿಃ ।
ವಾಯ್ವಾತ್ಮಿಕಾ ತು ಐಶಾನಿ ಸಾ ಪ್ರಾಣಾಃ ಪ್ರಾಣಿನಾ ಸಹ ॥ ೪೩ ॥

ಪೀತಾಶಿತಾನಿ ಪಚತಿ ಭೂತಾನಾಂ ಜಠರೇಷು ಯಾ ।
ತತಃ ಪಾಶುಪತೀ ತಸ್ಯ ಪಾಚಿಕಾ ಶಕ್ತಿರುಚ್ಯತೇ ॥ ೪೪ ॥

---

೪೦. ಸೂರ್ಯನ ಯಾವ ಪ್ರಕಾಶದಿಂದ ಪ್ರಜೆಗಳು ತಮ್ಮ ನೇತ್ರಗಳ ಮೂಲಕ ಪದಾರ್ಥಗಳನ್ನು ನೋಡುತ್ತಾರೋ, ಅಲ್ಲಿ ಶುಕ್ಲರೂಪನಾಗಿರತಕ್ಕ ರುದ್ರದೇವನು ಕಿರಣಗಳ ಮೂಲಕ ಜಲವನ್ನು ಹೀರುತ್ತಾನೆ.

೪೧. ಈಶ್ವರನ ಯಾವ ಶರೀರವು ಅನ್ನವನ್ನು ಭಕ್ಷಿಸುತ್ತದೆಯೋ ಮತ್ತು ಜಲವನ್ನು ಪಾನಮಾಡುತ್ತದೆಯೋ ಅಂತಹ ಶರೀರವು ಬ್ರಹ್ಮನ ಮೂಲಕ ಬೇರೆ ದೇಹಗಳಲ್ಲಿಯೇ ವೃದ್ಧಿಯಾಗುತ್ತವೆ.

೪೨. ಈಶ್ವರನು ಸ್ಥಿರಮನಸ್ಕನಾಗಿ ಯಾವ ಶರೀರದಿಂದ ಸರ್ವಪ್ರಜೆಗಳನ್ನು ಧರಿಸುತ್ತಾನೋ ಅಂತಹ ಪಾರ್ಥಿವಶರೀರವು ಸರ್ವಪ್ರಜೆಗಳಿಗೆ ಆಶ್ರಯವಾಗಿದೆ.

೪೩-೪೪. ಈಶ್ವರನು ಪಂಚಪ್ರಾಣಗಳ ಸಹಿತನಾಗಿ ಐಶಾನೀನಾಮಕವಾದ ತನ್ನ ವಾಯುರೂಪದಿಂದ ಸರ್ವಪ್ರಾಣಿಗಳ ಶರೀರಗಳಲ್ಲಿ ಎಲ್ಲಿಯವರೆಗೂ ವಾಸಮಾಡುವನೋ ಅಲ್ಲಿಯವರೆಗೂ ಪ್ರಾಣಿಗಳು ಭಕ್ಷಿಸಿದ ಅನ್ನವೂ, ಪಾನಮಾಡಿದ ಜಲಾದಿಗಳೂ, ಉದರಗಳಲ್ಲಿ ಪಚನವಾಗುವುದು. ಆದುದರಿಂದ ಪಚನಮಾಡುವ ಆ ಶಕ್ತಿಯು ಪಶುಪತಿಯ ಶಕ್ತಿಯಾಗಿದೆಯೆಂದು ಜ್ಞಾನಿಗಳು ಹೇಳುವರು.

ಯಾನೀಹ ಸುಷಿರಾಣಿ ಸ್ಯುರ್ದೇಹೇಷ್ವಂತರ್ಗತಾನಿ ವೈ ।
ವಾಯೋಃ ಸಂಚರಣಾರ್ಥಾಯ ಸಾ ಭೀಮಾ ಚೋಚ್ಯತೇ ತನುಃ ॥ ೪೫ ॥

ವೈತಾನದೀಕ್ಷಿತಾನಾಂ ತು ಯಾ ಸ್ಥಿತಿರ್ಬ್ರಹ್ಮವಾದಿನಾಂ ।
ತನುರುಗ್ರಾತ್ಮಿಕಾ ಸಾ ತು ತೇನೋಗ್ರೋ ದೀಕ್ಷಿತಃ ಸ್ಮೃತಃ ॥ ೪೬ ॥

ಯತ್ತು ಸಂಕಲ್ಪಕಂ ತಸ್ಯ ಪ್ರಜಾಸ್ವಿಹ ಸಮಂ ಸ್ಥಿತಂ ।
ಸಾ ತನುರ್ಮಾನಸೀ ತಸ್ಯ ಚಂದ್ರಮಾಃ ಪ್ರಾಣಿಷು ಸ್ಥಿತಃ ॥ ೪೭ ॥

ನವೋ ನವೋ ಭವತಿ ಹಿ ಜಾಯಮಾನಃ ಪುನಃ ಪುನಃ ।
ನೀಯತೇ ಯೋ ಯಥಾಕಾಮಂ ವಿಭುದ್ಯೈಃ ಪಿತೃಭಿಃ ಸಹ ॥
ಮಹಾದೇವೋಽಮೃತಾತ್ಮಾಸೌ ಹ್ಯಮ್ಮಯಶ್ಚಂದ್ರಮಾಃ ಸ್ಮೃತಃ ॥ ೪೮ ॥

---

೪೫. ದೇಹದಲ್ಲಿ ವಾಯುಸಂಚಾರಕ್ಕಾಗಿ ಯಾವ ಯಾವ ರಂಧ್ರಗಳಿವೆಯೋ ಅಂತಹ ಶರೀರವು ಈಶ್ವರನ ಭೀಮನಾಮಕ ಶರೀರವಾಗಿದೆಯೆಂದು ಹೇಳುವರು.

೪೬. ವೈತಾನನಾಮಕಯಾಗವಿಶೇಷದಲ್ಲಿ ದೀಕ್ಷಿತರೂ, ಬ್ರಹ್ಮವಾದಿಗಳೂ ಆದ ಜ್ಞಾನಿಗಳ ಉಗ್ರರೂಪಗಳೂ ದೀಕ್ಷಾನಾಮಕಗಳೂ ಆದ ಯಾವ ಶರೀರಗಳಿವೆಯೋ ಅಂಥಹ ದೀಕ್ಷಾಶರೀರವೇ ಪರಮೇಶ್ವರನ ಉಗ್ರನಾಮಕವಾದ ಶರೀರವಾಗಿದೆ.

೪೭. ಪ್ರಜೆಗಳಲ್ಲಿ ಸಂಕಲ್ಪರೂಪವಾದ ಯಾವ ದೇಹವಿದೆಯೋ ಅದು ಈಶ್ವರನ ಮಾನಸಿಕ ಶರೀರವಾಗಿದೆ. ಆ ಪ್ರಾಣಿಗಳ ಮನಸ್ಸಿನಲ್ಲಿ ಚಂದ್ರನು ಸಂಕಲ್ಪರೂಪನಾಗಿರುವನು.

೪೮. ದೇವತೆಗಳೂ ಮತ್ತು ಪಿತೃಗಳು ಯಾವ ಚಂದ್ರನನ್ನು ಅಮೃತಪಾನಮಾಡುವದಕ್ಕೋಸ್ಕರ ಸ್ವೇಚ್ಛೆಯಾಗಿ ಒಯ್ಯುತ್ತಾರೋ ಅಂಥ ಚಂದ್ರನು ಪ್ರತಿದಿನದಲ್ಲಿಯೂ ಹೊಸಬನಾಗಿ ಪುನಃಪುನಃ ಜನಿಸುವನು. ಅಮೃತಸ್ವರೂಪಿಯಾದ ಮಹಾದೇವನೇ, ಜಲಮಯನಾದ ಚಂದ್ರನಾಗಿರುವನು

ತಸ್ಯ ಯಾ ಪ್ರಥಮಾ ನಾಮ್ನಾ ತನೂ ರೌದ್ರೀ ಪ್ರಕೀರ್ತಿತಾ ।
ಪತ್ನೀ ಸುವರ್ಚಲಾ ತಸ್ಯ ಪುತ್ರಸ್ತಸ್ಯಾಃ ಶನೈಶ್ಚರಃ ॥ ೪೯ ॥

ಭವಸ್ಯ ಯಾ ದ್ವಿತೀಯಾ ತು ತನುರಾಪಃ ಸ್ಮೃತಾ ತು ವೈ ।
ತಸ್ಯೋಷಾತ್ರ ಸ್ಮೃತಾ ಪತ್ನೀ ಪುತ್ರಶ್ಚಾಪ್ಯುಶನಾ ಸ್ಮೃತಃ ॥ ೫೦ ॥

ಶರ್ವಸ್ಯ ಯಾ ತೃತೀಯಾ ತು ನಾಮ ಭೂಮಿಸ್ತನುಃ ಸ್ಮೃತಾ ।
ಪತ್ನೀ ತಸ್ಯ ವಿಕೇಶೀತಿ ಪುತ್ರಶ್ಚಾಂಗಾರಕಃ ಸ್ಮೃತಃ ॥ ೫೧ ॥

ಈಶಾನಸ್ಯ ಚತುರ್ಥಸ್ಯ ಸ್ವರ್ಗತಸ್ಯ ಚ ಯಾ ತನುಃ ।
ತಸ್ಯ ಪತ್ನೀ ಶಿವಾ ನಾಮ ಪುತ್ರಶ್ಚಾಸ್ಯ ಮನೋಜವಃ ॥ ೫೨ ॥

ನಾಮ್ನಾ ಪಶುಪತೇರ್ಯಾ ತು ತನುರಗ್ನಿರ್ದ್ವಿಜೈಃ ಸ್ಮೃತಾ ।
ತಸ್ಯ ಪತ್ನೀ ಸ್ಮೃತಾ ಸ್ವಾಹಾ ಸ್ಕಂಧಶ್ಚಾಪಿ ಸುತಃ ಸ್ಮೃತಃ ॥ ೫೩ ॥

---

೪೯. ಅಂಥ ಪರಮೇಶ್ವರನಿಗೆ ರೌದ್ರೀನಾಮಕವೂ ಪ್ರಥಮವೂ ಆದ ಯಾವ ಶರೀರವಿದೆಯೋ ಆ ಶರೀರಧಾರಿಯಾದ ಈಶ್ವರನಿಗೆ ಸುವರ್ಚಲಾನಾಮಕಳಾದ ಪತ್ನಿಯೂ ಶನೈಶ್ಚರನಾಮಕಪುತ್ರನೂ ಇರುವರು.

೫೦. ಈಶ್ವರನ ಎರಡನೆಯದೂ ಜಲಮಯವೂ ಆದ ಯಾವ ಶರೀರವಿರುತ್ತದೆಯೋ ಅದಕ್ಕೆ ಉಷಾನಾಮಕಪತ್ನಿಯೂ ಉಶನೋನಾಮಪುತ್ರನೂ ಇರುತ್ತಾರೆಂದು ಜ್ಞಾನಿಗಳು ಹೇಳುವರು

೫೧. ಈಶ್ವರನು ಪೃಥಿವೀನಾಮಕ ಮೂರನೆಯ ಶರೀರವನ್ನು ಪಡೆದಾಗ ವಿಕೇಶೀನಾಮಕಭಾರ್ಯೆಯೂ ಅಂಗಾರಕನೆಂಬ ಸುತನೂ ಇದ್ದರು.

೫೨. ಈಶ್ವರನು ನಾಲ್ಕನೆಯದೂ ಈಶಾನನಾಮಕವೂ ಸ್ವರ್ಗಗತವೂ ಆದ ಶರೀರವನ್ನು ಹೊಂದಿದಾಗ ಅವನಿಗೆ ಶಿವಾನಾಮಕಪತ್ನಿಯಲ್ಲಿ ಮನ್ಮಥನಾಮಕ ಕುಮಾರನು ಉತ್ಪನ್ನನಾದನು.

೫೩. ಐದನೆಯ ಅಗ್ನಿರೂಪವಾದ ಶರೀರವನ್ನು ಹೊಂದಿದ ಈಶ್ವರನಿಗೆ ಸ್ವಾಹಾನಾಮಕಪತ್ನಿಯಲ್ಲಿ ಸ್ಕಂದನಾಮಕಸುತನು ಜನಿಸಿದನು.

ನಾಮ್ನಾ ಷಷ್ಠಸ್ಯ ಯಾ ಭೀಮಾ ತನುರಾಕಾಶ ಉಚ್ಯತೇ ।
ದಿಶಃ ಪತ್ನ್ಯಃ ಸ್ಮೃತಾಸ್ತಸ್ಯ ಸ್ವರ್ಗಶ್ಚಾಸ್ಯ ಸುತಃ ಸ್ಮೃತಃ ॥ ೫೪ ॥

ಉಗ್ರಾ ತನುಃ ಸಪ್ತಮೀ ಯಾ ದೀಕ್ಷಿತೈರ್ಬ್ರಾಹ್ಮಣೈಃ ಸ್ಮೃತಾ ।
ದೀಕ್ಷಾ ಪತ್ನೀ ಸ್ಮೃತಾ ತಸ್ಯ ಸಂತಾನಃ ಪುತ್ರ ಉಚ್ಯತೇ ॥ ೫೫ ॥

ನಾಮ್ನಾಷ್ಟಮಸ್ಯ ಮಹತಸ್ತನುರ್ಯಾ ಚಂದ್ರಮಾಃ ಸ್ಮೃತಃ ।
ಪತ್ನೀ ತು ರೋಹಿಣೀ ತಸ್ಯ ಪುತ್ರಶ್ಚಾಸ್ಯ ಬುಧಃ ಸ್ಮೃತಃ ॥ ೫೬ ॥

ಇತ್ಯೇತಾಸ್ತನವಸ್ತಸ್ಯ ನಾಮಭಿಃ ಪರಿಕೀರ್ತಿತಾಃ ।
ತಾಸ್ತು ವಂದ್ಯಾ ನಮಸ್ಯಾಶ್ಚ ಪ್ರತಿನಾಮ ತನೂಷು ವೈ ॥ ೫೭ ॥

ಭಕ್ತೈಃ ಸೂರ್ಯೇಽಪ್ಸು ಪೃಥಿವ್ಯಾಂ ವಾಯ್ವಗ್ನಿವ್ಯೋಮದೀಕ್ಷಿತೇ ।
ತಥಾ ಚ ವೈ ಚಂದ್ರಮಸಿ ತನುಭಿರ್ನಾಮಭಿಃ ಸಹ ॥
ಪ್ರಜಾವಾನೇತಿ ಸಾಯುಜ್ಯಮೀಶ್ವರಸ್ಯ ನರೋ ಹಿ ಸಃ ॥ ೫೮ ॥

---

೫೪. ರುದ್ರದೇವನು ಆರನೆಯ ಆಕಾಶನಾಮಕಶರೀರವನ್ನು ಪಡೆದಾಗ ದಿಕ್ಕೆಂಬ ಪತ್ನಿಯಲ್ಲಿ ಸ್ವರ್ಗನಾಮಕಪುತ್ರನು ಹುಟ್ಟಿದನು.

೫೫. ಈಶ್ವರನು ಏಳನೆಯದೂ, ಉಗ್ರರೂಪವೂ, ಯಜ್ಞದೀಕ್ಷಿತವೂ, ಯಜಮಾನರೂಪವೂ ಆದ ಯಾವ ಶರೀರವನ್ನು ಪಡೆದನೋ ಆಗ ಅವನಿಗೆ ದೀಕ್ಷಾನಾಮಕ ಪತ್ನಿಯಲ್ಲಿ ಸಂತಾನವೆಂಬ ಪುತ್ರನು ಜನಿಸಿದನು.

೫೬. ಈಶ್ವರನು ಎಂಟನೆಯದೂ ಮಹತ್ತೂ ಆದ ಚಂದ್ರರೂಪಶರೀರವನ್ನು ಯಾವಾಗ ಪಡೆದನೋ ಆಗ ರೋಹಿಣೀನಾಮಕಪತ್ನಿಯೂ ಬುಧನೆಂಬ ಸುತನೂ ಹುಟ್ಟಿದರು.

೫೭. ಹೀಗೆ ಈಶ್ವರನ ಅಷ್ಟಶರೀರಗಳನ್ನೂ ಅವುಗಳ ನಾಮಗಳನ್ನೂ ತಿಳಿಸಿರುತ್ತೇನೆ. ಈಶ್ವರನ ಆ ರೂಪಗಳು ಮಂಗಳಕರವೂ ವಂದ್ಯಗಳೂ ಸ್ತುತ್ಯಗಳೂ ಆಗಿವೆ.

೫೮. ಭಕ್ತರಾದ ಜನರು ಈಶ್ವರನ ಸೂರ್ಯ, ಚಂದ್ರ, ಜಲ, ಭೂಮಿ, ಆಕಾಶ, ವಾಯು, ಅಗ್ನಿ, ಯಜಮಾನ ಎಂಬ ಅಷ್ಟ ಶರೀರಗಳೂ, ನಾಮಗಳೂ, ಪತ್ನೀ ಸುತರೂ ಇವುಗಳನ್ನು ತಿಳಿದರೆ ಈಶ್ವರನ ಸಾಯುಜ್ಯರೂಪವಾದ ಮೋಕ್ಷವನ್ನು ಪಡೆಯುವರು.

ಇತ್ಯೇತದ್ವೋ ಮಯಾಖ್ಯಾತಂ ಗುಹ್ಯಂ ಭೀಮಸ್ಯ ತದ್ಯಶಃ ।
ಶನ್ನೋಽಸ್ತು ದ್ವಿಪದೇ ನಿತ್ಯಂ ಶನ್ನೋಽಸ್ತು ಚ ಚತುಷ್ಪದೇ ॥ ೫೯ ॥

ಏತತ್ ಪ್ರೋಕ್ತಂ ನಿದಾನಂ ವಸ್ತೂನಾಂ ನಾಮಭಿಃ ಸಹ ।
ಮಹಾದೇವಸ್ಯ ದೇವಸ್ಯ ಭೃಗೋಽಸ್ತು ಶೃಣುತ ಪ್ರಜಾಃ ॥ ೬೦ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಮಹಾದೇವ ತನುವರ್ಣನಂ" ನಾಮ ಸಪ್ತವಿಂಶೋಽಧ್ಯಾಯಃ

---

೫೯. ಈರೀತಿಯಾಗಿ ನಿಮಗೆ ಪರಮೇಶ್ವರನ ಭಯಂಕರವೂ ರಹಸ್ಯವೂ ಆದ ರೂಪನಾಮಗಳನ್ನೂ ಪತ್ನೀಸುತರನ್ನೂ ಅವನ ಕೀರ್ತಿಯನ್ನೂ ನಿರೂಪಿಸಿರುತ್ತೇನೆ. ಅದನ್ನು ಕೇಳಿದ ನಿಮಗೆ ನಿರಂತರಮಂಗಳವೂ ಪುನಃಪುನಃ ಮಾರ್ಗದಲ್ಲಿಯೂ ಚೌಕದಲ್ಲಿಯೂ ಶುಭವೂ ಆಗಲಿ ಎಂದು ಕೋರುವೆನು.

೬೦. ಈರೀತಿಯಾಗಿ ಈಶ್ವರನಿಗೆ ಬಂದ ಅನೇಕ ಶರೀರಗಳೂ ನಾಮಗಳೂ ಪತ್ನೀಸುತರೂ ಇವರನ್ನು ನಿಮಗಾಗಿ ನಿರೂಪಿಸಿರುವೆನು. ಈಗ ಭೃಗುವಿನ ಪ್ರಜಾಸೃಷ್ಟಿಯನ್ನು ಹೇಳುವೆನು ಕೇಳಿ ಎಂದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಮಹಾದೇವನ" ಅವತಾರವರ್ಣನವೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

# ಇಪ್ಪತ್ತೇಳನೆಯ ಅಧ್ಯಾಯದ ಸಾರಾಂಶ

ಅಷ್ಟಮಕಲ್ಪವು ಕಳೆಯಲು ಸೃಷ್ಟಿಕರ್ತನಾದ ಬ್ರಹ್ಮನು ಪುನಃ ಸೃಷ್ಟಿಯನ್ನು ಮಾಡಲಿಚ್ಛಿಸಿ ಧ್ಯಾನಿಸಿದನು. ಆಗ ನೀಲಲೋಹಿತನಾದ ದೇವನು ಕುಮಾರರೂಪ ವನ್ನು ಹೊಂದಿ ಪುನಃಪುನಃ ರೋದಿಸಿದನು. ಅದರಿಂದ ಈಶ್ವರನಿಗೆ ರುದ್ರ, ಭವ, ಶಿವ, ಪಶುಪತಿ, ಈಶ, ಭೀಮ, ಉಗ್ರ ಮತ್ತು ಮಹಾದೇವ ಎಂಬ ಅಷ್ಟನಾಮಗಳೂ ಆ ರೂಪಗಳಿಗೆ ಕ್ರಮವಾಗಿ ಸೂರ್ಯ, ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಯಜಮಾನ, (ದೀಕ್ಷಿತ) ಚಂದ್ರ ಎಂಬ ಸ್ಥಾನಗಳೂ, ಸುವರ್ಚಲಾ, ಉಷಾ, ವಿಕೇಶೀ, ಶಿವಾ, ಸ್ವಾಹಾ, ದೀಕ್ಷಾ, ದಿಕ್ಕು, ರೋಹಿಣೀ ಎಂಬ ಪತ್ನಿಯರೂ, ಶನೈಶ್ಚರ, ಉಶನಸ್ಸು, ಅಂಗಾರಕ, ಮನ್ಮಥ, ಸ್ಕಂದ, ಸ್ವರ್ಗ, ಸಂತಾನ, ಬುಧರೆಂಬ ಮಕ್ಕಳೂ ಉತ್ಪನ್ನರಾದರು ಎಂಬ ವಿಷಯಗಳು ವರ್ಣಿತವಾಗಿವೆ.

— || ಹರಿಃ ಓಮ್ ||—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀ ಮ ದ್ವಾ ಯು ಪು ರಾ ಣಂ

## ಅಷ್ಟಾವಿಂಶೋಽಧ್ಯಾಯಃ

**|| ಸೂತ ಉವಾಚ ||**

**ಭೃಗೋಃ ಖ್ಯಾತಿರ್ವಿಜಜ್ಞೇಥ ಈಶ್ವರೌ ಸುಖದುಃಖಯೋಃ ।**
**ಶುಭಾಶುಭಪ್ರದಾತಾರೌ ಸರ್ವಪ್ರಾಣಭೃತಾಮಿಹ ||**
**ದೇವೌ ಧಾತಾವಿಧಾತಾರೌ ಮನ್ವಂತರ ವಿಚಾರಿಣೌ || ೧ ||**

**ತಯೋರ್ಜ್ಯೇಷ್ಠಾ ತು ಭಗಿನೀ ದೇವೀ ಶ್ರೀರ್ಲೋಕಭಾವಿನೀ ।**
**ಸಾ ತು ನಾರಾಯಣಂ ದೇವಂ ಪತಿಮಾಸಾದ್ಯ ಶೋಭನಂ ||**
**ನಾರಾಯಣಾತ್ಮಜೌ ಸಾಧ್ವೀ ಬಲೋತ್ಸಾಹೌ ವ್ಯಜಾಯತ || ೨ ||**

---

## ಇಪ್ಪತ್ತೆಂಟನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :— ಭೃಗುಮಹರ್ಷಿಗೆ ಖ್ಯಾತಿಯೆಂಬ ಪುತ್ರನು ಹುಟ್ಟಿದನು. ಅವನಿಗೆ ಒಡೆಯರೂ, ಶುಭಾಶುಭಕರ್ಮಾನುಸಾರವಾಗಿ ಸರ್ವಪ್ರಾಣಿಗಳಿಗೂ ಸುಖದುಃಖಗಳನ್ನು ಕೊಡುವವರೂ ಮನ್ವಂತರಸಂಚಾರಿಗಳೂ ಆದ ಧಾತ ವಿಧಾತರೆಂಬ ಇಬ್ಬರು ಮಕ್ಕಳು ಜನಿಸಿದರು.

೨. ಅವರಿಬ್ಬರಿಗೂ ಜ್ಯೇಷ್ಠಳೂ ಸಹೋದರಿಯೂ ಲೋಕಪವಿತ್ರೆಯೂ ಆದ ಶ್ರೀದೇವಿಯು ಜನಿಸಿ ಮಂಗಳಾಂಗನೂ ಸ್ವಾಮಿಯೂ ಆದ ನಾರಾಯಣನನ್ನು ಪತಿಯನ್ನಾಗಿ ಹೊಂದಿದಳು. ಆ ದಂಪತಿಗಳಿಗೆ ಬಲ, ಉತ್ಸಾಹರೆಂಬ ಇಬ್ಬರು ಮಕ್ಕಳು ಜನಿಸಿದರು.

ತಸ್ಯಾಸ್ತು ಮಾನಸಾಃ ಪುತ್ರಾ ಯೇ ಚಾನ್ಯೇ ದಿವ್ಯಚಾರಿಣಃ ।
ಯೇ ವಹಂತಿ ವಿಮಾನಾನಿ ದೇವಾನಾಂ ಪುಣ್ಯಕರ್ಮಣಾಂ ॥ ೩ ॥

ದ್ವೇ ತು ಕನ್ಯೇ ಸ್ಮೃತೇ ಭಾರ್ಯೇ ವಿಧಾತುರ್ಧಾತುರೇವ ಚ ।
ಆಯತಿರ್ನಿಯತಿಶ್ಚೈವ ತಯೋಃ ಪುತ್ರೌ ದೃಢವ್ರತೌ ॥ ೪ ॥

ಪಾಂಡುಶ್ಚೈವ ಮೃಕಂಡೋಶ್ಚ ಬ್ರಹ್ಮಕೋಶೌ ಸನಾತನೌ ।
ಮನಸ್ವಿನ್ಯಾಂ ಮೃಕಂಡೋಶ್ಚ ಮಾರ್ಕಂಡೇಯೋ ಬಭೂವ ಹ ॥ ೫ ॥

ಸುತೋ ವೇದಶಿರಾಸ್ತಸ್ಯ ಮೂರ್ಧನ್ಯಾಯಾಮಜಾಯತ ।
ಪೀವರ್ಯಾಂ ವೇದಶಿರಸಃ ಪುತ್ರಾ ವಂಶಕರಾಃ ಸ್ಮೃತಾಃ ॥
ಮಾರ್ಕಂಡೇಯಾ ಇತಿಖ್ಯಾತಾ ಋಷಯೋ ವೇದಪಾರಗಾಃ ॥ ೬ ॥

ಪಾಡೋಶ್ಚ ಪುಂಡರೀಕಾಯಾಂ ದ್ಯುತಿಮಾನಾತ್ಮಜೋಽಭವತ್ ।
ಉತ್ಪನ್ನೌ ದ್ಯುತಿಮಂತಶ್ಚ ಸೃಜವಾನಶ್ಚ ತಾವುಭೌ ।

---

೩. ಆ ಶ್ರೀದೇವಿಗೆ ಭಾಗ್ಯಶಾಲಿಗಳೂ ದೇವವಿಮಾನಗಳನ್ನು ನಡೆಸುವವರೂ ಗಗನಸಂಚಾರಿಗಳೂ ಆದ ಬೇರೆ ಮಾನಸಪುತ್ರರು ಜನಿಸಿದರು.

೪-೫. ಆ ಶ್ರೀದೇವಿಗೆ ಆಯತಿ, ನಿಯತಿಯರೆಂಬ ಇಬ್ಬರು ಮಕ್ಕಳು ಹುಟ್ಟಿದರು. ಅವರಿಬ್ಬರನ್ನೂ ಕ್ರಮವಾಗಿ ಧಾತ ಮತ್ತು ವಿಧಾತ ಇವರಿಗೆ ಕೊಟ್ಟು ಲಗ್ನ ಮಾಡಿದರು. ಮತ್ತು ಅವರಿಬ್ಬರಿಗೆ ದೃಢವ್ರತರೂ ಬ್ರಹ್ಮಜ್ಞಾನಿಗಳೂ ಸನಾತನರೂ ಆದ ಪಾಂಡು, ಮೃಕಂಡುವೆಂಬ ಇಬ್ಬರು ಮಕ್ಕಳು ಹುಟ್ಟಿದರು. ಆ ಮೃಕಂಡುವಿಗೆ ಮನಸ್ವಿಯಲ್ಲಿ ಮಾರ್ಕಂಡೇಯನೆಂಬ ಪುತ್ರನು ಜನಿಸಿದನು.

೬. ಮಾರ್ಕಂಡೇಯನಿಗೆ ಮೂರ್ಧನ್ಯೆಯಲ್ಲಿ ವೇದಶಿರಸನೆಂಬ ಮಗನೂ ಆ ಮಗನಿಗೆ ಪೀವರಿಯಲ್ಲಿ ವಂಶಕರರೂ ವೇದಪಾರಂಗತರೂ ಮಹರ್ಷಿಗಳೂ ಮಾರ್ಕಂಡೇಯರೆಂದು ಪ್ರಖ್ಯಾತರೂ ಆದ ಮಕ್ಕಳು ಉತ್ಪನ್ನರಾದರು.

೭. ಪಾಂಡುವಿಗೆ ಪುಂಡರೀಕೆಯಲ್ಲಿ ದ್ಯುತಿಮಂತ ಮತ್ತು ಸೃಜವಾನರೆಂಬ ಇಬ್ಬರು ಮಕ್ಕಳು ಹುಟ್ಟಿದರು. ಅವರಿಬ್ಬರಿಗೂ ಮಕ್ಕಳೂ ಮೊಮ್ಮಕ್ಕಳೂ ಜನಿಸಿ

ತಯೋಃ ಪುತ್ರಾಶ್ಚ ಪೌತ್ರಾಶ್ಚ ಭಾರ್ಗವಾಣಾಂ ಪರಸ್ಪರಂ ।
ಸ್ವಾಯಂಭುವೇಽಂತರೇತೀತೇ ಮರಿಚೇಃ ಶೃಣುತ ಪ್ರಜಾಃ ॥ ೭ ॥

ಪತ್ನೀ ಮರಿಚೇಃ ಸಂಭೂತಿರ್ವಿಜಜ್ಞೇ ಸಾತ್ಮಸಂಭವಂ ।
ಪ್ರಜಾಯತೇ ಪೂರ್ಣಮಾಸಂ ಕನ್ಯಾಶ್ಚೇಮಾ ನಿಬೋಧತ ॥
ಕುಷ್ಟಿಃ ಪೃಷ್ಟಿಸ್ತ್ವಿಷಾಂ ಚೈವ ತಥಾ ಚಾಪಚಿತಿಃ ಶುಭಾ ॥ ೮ ॥

ಪೂರ್ಣಮಾಸಃ ಸರಸ್ವತ್ಯಾಂ ದ್ವೌ ಪುತ್ರಾವುದಪಾಯತ್
ವಿರಜಂಚೈವ ಧರ್ಮಿಷ್ಟಂ ಪರ್ವಸಂಚೈವ ತಾವುಭೌ ॥ ೯ ॥

ವಿರಜಸ್ಯಾತ್ಮಜೋ ವಿದ್ವಾನ್ ಸುಧಾಮಾ ನಾಮ ವಿಶ್ರುತಃ ।
ಸುಧಾಮಸುತವೈರಾಜಃ ಪ್ರಾಚ್ಯಾಂದಿಶಿ ಸಮಾಶ್ರಿತಃ ॥ ೧೦ ॥

ಲೋಕಪಾಲಃ ಸುಧರ್ಮಾತ್ಮಾ ಗೌರೀಪುತಃ ಪ್ರತಾಪವಾನ್ ।
ಪರ್ವಸಃ ಸರ್ವಗಣಾನಾಂಪ್ರವಿಷ್ಟಃ ಸ ಮಹಾಯಶಾಃ ॥ ೧೧ ॥

---

ಭೃಗುವಂಶವು ವಿಸ್ತಾರವಾಯಿತು. ಹೀಗೆ ಸ್ವಾಯಂಭುವ ಮನ್ವಂತರವು ಕಳೆಯುಲಾಗಿ ಮರೀಚಿಋಷಿಯ ವಂಶದ ವಿಚಾರವನ್ನು ಹೇಳುವೆನು ಕೇಳಿ ಎಂದನು.

೮. ಮರೀಚಿಋಷಿಗೆ ಬ್ರಹ್ಮದೇವನ ಮಾನಸಪುತ್ರಿಯಾದ ಸಂಭೂತಿ ಎಂಬುವಳು ಪತ್ನಿಯಾದಳು. ಅವರಿಗೆ ಪೂರ್ಣಮಾಸನೆಂಬ ಮಗನೂ, ಕುಷ್ಟಿ, ಪುಷ್ಟಿ, ತ್ವಿಷಾ, ಅಪಚಿತಿ ಎಂಬ ಮಂಗಳಾಂಗಿಯರಾದ ನಾಲ್ವರು ಕುಮಾರಿಯರೂ ಜನಿಸಿದರು.

೯. ಪೂರ್ಣಮಾಸನು ಸರಸ್ವತಿಯಲ್ಲಿ ಧರ್ಮಿಷ್ಠರಾದ ವಿರಜ, ಪರ್ವಸರೆಂಬ ಇಬ್ಬರು ಮಕ್ಕಳನ್ನು ಪಡೆದನು.

೧೦. ಆ ವಿರಜನಿಗೆ ಮಹಾಜ್ಞಾನಿಯೂ ಲೋಕವಿಖ್ಯಾತನೂ ಆದ ಸುಧಾಮನೆಂಬ ಪುತ್ರನು ಜನಿಸಿದನು. ಅವನಿಗೆ ವೈರಾಜನೆಂಬ ಸುತನು ಜನಿಸಿ ಪೂರ್ವ ದಿಕ್ಕಿಗೆ ಯಜಮಾನನಾಗಿ ಆಳುತ್ತಿದ್ದನು.

೧೧. ಲೋಕಪಾಲಕನೂ ಅತ್ಯಂತ ಧರ್ಮಿಷ್ಠನೂ ಗೌರೀಪುತ್ರನೂ ಪ್ರತಾಪಶಾಲಿಯೂ ಮಹಾಕೀರ್ತಿವಂತನೂ ಆದ ಪರ್ವಸನು ಸರ್ವಗಣಗಳಿಗೂ ಅಧಿಪತಿಯಾಗಿ ಪ್ರಕಾಶಿಸಿದನು.

ಪರ್ವಸಃ ಪರ್ವಸಾಯಾಂತು ಜನಯಾಮಾಸ ವೈ ಸುತೌ ।
ಯಜ್ಞವಾಮಂಚ ಶ್ರೀಮಂತಂ ಸುತಂ ಕಾಶ್ಯಪಮೇವ ಚ ॥
ತಯೋರ್ಗೋತ್ರಕೃತಾ ಪುತ್ರೌ ತೌ ಜಾತೌ ಧರ್ಮನಿಶ್ಚಿತೌ ॥ ೧೨ ॥

ಸ್ಮೃತಿಶ್ಚಾಂಗಿರಸಃ ಪತ್ನೀ ಜಜ್ಞೇ ತಾವಾತ್ಮಸಂಭವೌ ।
ಪುತ್ರೌ ಕನ್ಯಾಶ್ಚತಸ್ರಶ್ಚ ಪುಣ್ಯಾಸ್ತಾ ಲೋಕವಿಶ್ರುತಾಃ ॥ ೧೩ ॥

ಸಿನೀವಾಲೀ ಕುಹೂಶ್ಚೈವ ರಾಕಾ ಚಾನುಮತಿಸ್ತಥಾ ।
ತಥೈವ ಭರತಾಗ್ನಿಂಚ ಕೀರ್ತಿಮಂತಂಚ ತಾವುಭೌ ॥ ೧೪ ॥

ಅಗ್ನೇಃ ಪುತ್ರಂತು ಪರ್ಜನ್ಯಂ ಸಂಹೂತೀ ಸುಷುವೇ ಪ್ರಭುಂ ।
ಹಿರಣ್ಯರೋಮಾ ಪರ್ಜನ್ಯೋ ಮಾರೀಚ್ಯಾಮುದಪಾದಯತ್ ॥
ಆಭೂತಸಂಪ್ಲವಸ್ಥಾಯೀ ಲೋಕಪಾಲಃ ಸ ವೈ ಸ್ಮೃತಃ ॥ ೧೫ ॥

---

೧೨. ಪರ್ವಸನು ಪರ್ವಸೆಯಲ್ಲಿ ಶ್ರೀಮಂತರಾದ ಯಜ್ಞವಾಮ ಕಾಶ್ಯಪರೆಂಬ ಇಬ್ಬರು ಮಕ್ಕಳನ್ನು ಪಡೆದನು ಅವರಿಬ್ಬರಿಗೂ ವಂಶವರ್ಧಕರೂ ಧರ್ಮರತರೂ ಆದ ಇಬ್ಬರು ಮಕ್ಕಳು ಹುಟ್ಟಿದರು.

೧೩-೧೪. ಆಂಗೀರಸನ ಪತ್ನಿಯಾದ ಸ್ಮೃತಿಯು ಲೋಕವಿಖ್ಯಾತರೂ ಪುಣ್ಯಾತ್ಮರೂ ಕೀರ್ತಿವಂತರೂ ಆದ ಭರತ, ಅಗ್ನಿ ಎಂಬ ಇಬ್ಬರು ಪುತ್ರರನ್ನೂ ಸುಂದರಿಯರಾದ ಸಿನೀವಾಲೀ, ಕುಹೂ, ರಾಕಾ ಮತ್ತು ಅನುಮತಿಯರೆಂಬ ನಾಲ್ವರು ಪುತ್ರಿಯರನ್ನೂ ಪಡೆದಳು.

೧೫. ಅಗ್ನಿಯ ಪತ್ನಿಯಾದ ಸಂಹೂತೀದೇವಿಯು ಪ್ರಭುವೂ ಪರ್ಜನ್ಯನಾಮಕನೂ ಆದ ಪುತ್ರನನ್ನು ಪಡೆದಳು. ಸುವರ್ಣಕೇಶಿಯಾದ ಆ ಪರ್ಜನ್ಯನು ಮಾರೀಚಿಯೆಂಬ ಪತ್ನಿಯಲ್ಲಿ ಪ್ರಲಯದವರೆಗೂ ಸ್ಥಾಯಿಯೂ ಪ್ರಖ್ಯಾತನೂ ಆದ ಲೋಕಪಾಲಕನೆಂಬ ಸುತನನ್ನು ಹೊಂದಿದನು.

ಜಜ್ಞೇ ಕೀರ್ತಿಮತಶ್ಚಾಪಿ ಧೇನುಕಾ ತಾವಕಲ್ಮಷೌ ।
ವರಿಷ್ಠಂ ಧೃತಿಮಂತಂಚಾಪ್ಯುಭಾವಂಗಿರಸಾಂ ವರೌ ॥ ೧೬ ॥

ತಯೋಃ ಪುತ್ರಾಶ್ಚ ಪೌತ್ರಾಶ್ಚ ಯೇತೀತಾ ವೈ ಸಹಶ್ರಶಃ ।
ಅನಸೂಯಾಪಿ ಜಜ್ಞೇತಾನ್ ಪಂಚಾತ್ರೇಯಾನಕಲ್ಮಷಾನ್ ॥ ೧೭ ॥

ಕನ್ಯಾಂಚೈವ ಶ್ರುತಿಂ ನಾಮ ಮಾತಾ ಶಂಖಪದಸ್ಯಯಾ ।
ಕರ್ದಮಸ್ಯ ತು ಯಾ ಪತ್ನೀ ಪುಲಹಸ್ಯ ಪ್ರಜಾಪತೇಃ ॥ ೧೮ ॥

ಸತ್ಯನೇತ್ರಸ್ತು ಪಂಚಮಸ್ತೇಷಾಮಾಸೀತ್ ಸ್ವಾಯಂಭುವೇಂತರೇ ।
ಯಾಮೇ ತೀತೇ ಸಹಾತೀತಾಃ ಪಂಚಾತ್ರೇಯಾಃ ಪ್ರಕೀರ್ತಿತಾಃ ॥ ೧೯ ॥

ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಹ್ಯತ್ರಿಣಾ ವೈ ಮಹಾತ್ಮನಾ ।
ಸ್ವಾಯಂಭುವೇಂತರೇ ಯಾಮೇ ಶತಶೋಥ ಸಹಸ್ರಶಃ ॥ ೨೦ ॥

---

೧೬-೧೭. ಕೀರ್ತಿಮತನಿಗೆ ಧೇನುಕೆಯಲ್ಲಿ ನಿರ್ದೋಷಿಗಳೂ ಆಂಗಿರಸ ವಂಶಿಕರಲ್ಲಿ ಉತ್ತಮರೂ ಆದ ವರಿಷ್ಠ, ಧೃತಿಮಂತರೆಂಬ ಇಬ್ಬರು ಕುಮಾರರು ಜನಿಸಿದರು. ಅವರಿಗೆ ಸಹಸ್ರಾರು ಮಕ್ಕಳೂ ಮೊಮ್ಮಕ್ಕಳೂ ಹುಟ್ಟಿ ಲೋಕ ವಿಖ್ಯಾತರಾಗಿ ಗತಿಸಿದರು. ಅನುಸೂಯಾದೇವಿಯೂ ಸಹ ಅತ್ರಿಮಹರ್ಷಿಯಿಂದ ದೋಷರಹಿತರಾದ ಐದುಜನ ಮಕ್ಕಳನ್ನು ಪಡೆದಳು.

೧೮. ಅನುಸೂಯೆಯು ಶ್ರುತಿನಾಮಕಳಾದ ಕುಮಾರಿಯನ್ನು ಹೆತ್ತಳು. ಅವಳು ಶಂಖಪದನ ಮಾತೆಯೂ ಕರ್ದಮನಾಮಕನಾದ ಪುಲಹಪ್ರಜಾಪತಿಯ ಪತ್ನಿಯೂ ಆಗಿದ್ದಳು.

೧೯. ಅತ್ರಿಮಹರ್ಷಿಗಳಿಗೆ ಸತ್ಯನೇತ್ರ, ಹವ್ಯ, ಆಪೋಮೂರ್ತಿ, ಶನೇಶ್ವರ, ಸೋಮ ಎಂಬ ಐದು ಜನ ಮಕ್ಕಳು ಸ್ವಾಯಂಭುವಮನ್ವಂತರದಲ್ಲಿ ಉತ್ಪನ್ನರಾದರು. ಅವರು ಆತ್ರೇಯರೆಂದು ಪ್ರಖ್ಯಾತರಾಗಿದ್ದು ಆ ಮನ್ವಂತರವು ಕಳೆಯಲು ಅವರು ನಾಮಾವಶೇಷರಾದರು.

೨೦. ಮಹಾತ್ಮರಾದ ಅತ್ರಿಮಹರ್ಷಿಗಳಿಗೆ ಸ್ವಾಯಂಭುವಮನ್ವಂತರದಲ್ಲಿ ಸತ್ಯನೇತ್ರನೇ ಮೊದಲಾದ ಸಾವಿರಾರು ಮಕ್ಕಳೂ ಮೊಮ್ಮಕ್ಕಳೂ ಹುಟ್ಟಿ ವಿಖ್ಯಾತ ರಾಗಿದ್ದರು.

ಪ್ರೀತ್ಯಾಂ ಪುಲಸ್ತ್ಯಭಾರ್ಯಾಯಾಂ ದತ್ತಾಲಿಸ್ತತ್ಸುತೋ ಭವತ್ ।
ಪೂರ್ವಜನ್ಮನಿ ಸೋಗಸ್ತ್ಯಃ ಸ್ಮೃತಃ ಸ್ವಾಯಂಭುವೇಂತರೇ ॥
ಮಧ್ಯಮೋ ದೇವಬಾಹುಶ್ಚ ವಿನೀತೋ ನಾಮ ತೇ ತ್ರಯಃ ॥ ೨೧ ॥

ಸ್ವಸಾ ಯವೀಯಸೀ ತೇಷಾಂ ಸದ್ವತೀ ನಾಮ ವಿಶ್ರುತಾ ।
ಪರ್ಜನ್ಯಜನನೀ ಶುಭ್ರಾ ಪತ್ನೀ ಸ್ವಾಗ್ನೇಃ ಸ್ಮೃತಾ ಶುಭಾ ॥ ೨೨ ॥

ಪೌಲಸ್ತ್ಯಸ್ಯ ಋಷೇಶ್ಚಾಪಿ ಪ್ರೀತಿಪುತ್ರಸ್ಯ ಧೀಮತಃ ।
ದತ್ತಾಲೇಃ ಸುಷುವೇ ಪತ್ನೀ ಸುಜಂಘಾದೀನ್ ಬಹೂನ್ ಸುತಾನ್ ।
ಪೌಲಸ್ತ್ಯಾ ಇತಿ ವಿಖ್ಯಾತಾಃ ಸ್ಮೃತಾಃ ಸ್ವಾಯಂಭುವೇಂತರೇ ॥ ೨೩ ॥

ಕ್ಷಮಾ ತು ಸುಷುವೇ ಪುತ್ರಾನ್ ಪುಲಹಸ್ಯ ಪ್ರಜಾಪತೇಃ ।
ತೇ ಚಾಗ್ನಿವರ್ಚಸಃ ಸರ್ವೇ ಯೇಷಾಂ ಕೀರ್ತಿಃ ಪ್ರತಿಷ್ಠಿತಾ ॥ ೨೪ ॥

---

೨೧-೨೨. ಪುಲಸ್ತ್ಯಋಷಿಯ ಭಾರ್ಯೆಯಾದ ಪ್ರೀತಿಯಲ್ಲಿ ದತ್ತಾಲಿನಾಮಕನಾದ ಸುತನು ಹುಟ್ಟಿದನು. ಅವನು ಹಿಂದಿನ ಸ್ವಾಯಂಭುವಮನ್ವಂತರದಲ್ಲಿ ಅಗಸ್ತ್ಯನಾಮಕನಾಗಿದ್ದನು. ಅವನಿಗೆ ಮಧ್ಯಮ, ದೇವಬಾಹು, ವಿನೀತರೆಂಬ ಮೂವರು ಪುತ್ರರು ಜನಿಸಿದರು. ಅವರಿಗೆ ಸದ್ವತೀನಾಮಕಳೂ, ಪ್ರಸಿದ್ಧಳೂ ಆದ ಭಗಿನಿಯು ಜನಿಸಿದಳು. ಸುಂದರಿಯೂ ಶುಭ್ರಳೂ ಆದ ಆಕೆಯು ಅಗ್ನಿದೇವನ ಪತ್ನಿಯೂ, ಪರ್ಜನ್ಯನಮಾತೆಯೂ ಆಗಿದ್ದಳು.

೨೩. ಪೌಲಸ್ತ್ಯಮಹರ್ಷಿಗೆ ಪ್ರೀತಿಪುತ್ರನೂ, ಜ್ಞಾನಿಯೂ ಆದ ದತ್ತಾಲಿಯ ಪತ್ನಿಯು ಸುಜಂಘನೇ ಮೊದಲಾದ ಅನೇಕ ಮಕ್ಕಳನ್ನು ಪಡೆದಳು. ಅವರೆಲ್ಲರೂ ಸ್ವಾಯಂಭುವಮನ್ವಂತರದಲ್ಲಿ ಪೌಲಸ್ತ್ಯರೆಂದು ಪ್ರಖ್ಯಾತರಾಗಿದ್ದರು.

೨೪. ಪುಲಹಪ್ರಜಾಪತಿಯ ಪತ್ನಿಯಾದ ಕ್ಷಮೆಯು ಅಗ್ನಿಗೆ ಸಮವಾದ ಕಾಂತಿಯುಳ್ಳವರೂ, ಲೋಕವಿಖ್ಯಾತಕೀರ್ತಿವಂತರೂ ಆದ ಅನೇಕ ಪುತ್ರರನ್ನು ಪಡೆದಳು.

ಕರ್ದಮುಶ್ಚಾಂಬರೀಷಶ್ಚ ಸಹಿಷ್ಣುಶ್ಚೇತಿ ತೇ ತ್ರಯಃ ।
ಋಷಿರ್ಧನಕಪೀವಾಂಶ್ಚ ಶುಭಾ ಕನ್ಯಾ ಚ ಪೀವರೀ ॥ ೧೫ ॥

ಕರ್ದಮಸ್ಯ ಶ್ರುತಿಃ ಪತ್ನೀ ಆತ್ರೇಯ್ಯಜನಯತ್ಸುತಾನ್ ।
ಪುತ್ರಂ ಶಂಖಪದಂಚೈವ ಕನ್ಯಾಂ ಕಾಮ್ಯಾಂ ತಥೈವ ಚ ॥ ೧೬ ॥

ಸ ವೈ ಶಂಖಪದಃ ಶ್ರೀಮಾನ್ ಲೋಕಪಾಲಃ ಪ್ರಜಾಪತಿಃ ।
ದಕ್ಷಿಣಸ್ಯಾಂ ದಿಶಿ ರತಃ ಕಾಮ್ಯಾಂ ದತ್ವಾ ಪ್ರಿಯವ್ರತೇ ॥ ೧೭ ॥

ಕಾಮ್ಯಾ ಪ್ರಿಯವ್ರತಾಲ್ಲೇಭೇ ಸ್ವಾಯಂಭುವ ಸಮಾನ್ ಸುತಾನ್ ।
ದಶಕನ್ಯಾದ್ವಯಂ ಚೈವ ಯೈಃ ಕ್ಷತ್ರಂ ಸಂಪ್ರವರ್ತಿತಂ ॥ ೧೮ ॥

ಪುತ್ರೋ ಧನಕಪೀವಾಂಶ್ಚ ಸಹಿಷ್ಣುರ್ನಾಮ ವಿಶ್ರುತಃ ।
ಯಶೋಧಾರೀ ವಿಜಜ್ಞೇ ವೈ ಕಾಮದೇವಃ ಸುಮಧ್ಯಮಃ ॥ ೧೯ ॥

---

೧೫. ಆ ಪುಲಹನಿಗೆ ಕರ್ದಮ, ಅಂಬರೀಷ, ಸಹಿಷ್ಣುವೆಂಬ ಮೂವರು ಕುಮಾರರೂ, ಧನಕಪೀವಂತನೆಂಬ ಋಷಿಯೂ, ಮಂಗಳಾಂಗಿಯೂ, ಪೀವರೀ ನಾಮಕಳೂ ಆದ ಪುತ್ರಿಯೂ ಜನಿಸಿದರು.

೧೬. ಕರ್ದಮನ ಪತ್ನಿಯೂ, ಶ್ರುತಿನಾಮಕಳೂ ಆದ ಆತ್ರೇಯಿಯು ಶಂಖ ಪದನೆಂಬ ಪುತ್ರನನ್ನೂ, ಕಾಮ್ಯಾನಾಮಕಕುಮಾರಿಯನ್ನೂ ಪಡೆದಳು.

೧೭. ಆ ಶಂಖಪಾದನು ಶ್ರೀಮಂತನೂ, ಲೋಕಪಾಲಕನೂ, ಪ್ರಜಾ ಪತಿಯೂ ಆಗಿ ದಕ್ಷಿಣದಿಕ್ಕಿಗೆ ರಾಜನಾಗಿದ್ದನು. ಕಾಮ್ಯಾನಾಮಕಕುಮಾರಿಯನ್ನು ಪ್ರಿಯವ್ರತರಾಜನಿಗೆ ಕೊಟ್ಟು ವಿವಾಹಮಾಡಿದನು.

೧೮. ಪ್ರಿಯವ್ರತನು ಕಾಮ್ಯೆಯಲ್ಲಿ ಸ್ವಾಯಂಭುವಮನುವಿಗೆ ಸಮಾನರಾದ ಹತ್ತು ಜನ ಗಂಡುಮಕ್ಕಳನ್ನೂ, ಇಬ್ಬರು ಕುಮಾರಿಯರನ್ನೂ ಪಡೆದನು. ಆ ಮಕ್ಕ ಳಿಂದ ಕ್ಷತ್ರಿಯವಂಶವು ಲೋಕವಿಖ್ಯಾತವಾಯಿತು

೧೯. ಧನಕಪೀವನೆಂಬ ಪುತ್ರನು ಸಹಿಷ್ಣುನಾಮದಿಂದ ಪ್ರಖ್ಯಾತನಾದನು. ನಂತರ ಯಶೋಧರಿಯೆಂಬ ಕುಮಾರಿಯೂ, ಕಾಮದೇವ, ಸುಮಧ್ಯರೆಂಬ ಇಬ್ಬರು ಕುಮಾರರೂ ಜನಿಸಿದರು.

ಋತೋಃ ಕ್ರತುಸಮಃ ಪುತ್ರೋ ವಿಜಜ್ಞೇ ಸಂತತಿಃ ಶುಭಾ ।
ನೈಷಾಂ ಭಾರ್ಯಾಸ್ತಿ ಪುತ್ರೋ ವಾ ಸರ್ವೇ ತೇ ಹ್ಯೂರ್ಧ್ವರೇತಸಃ ॥
ಷಷ್ಟ್ಯೇತಾನಿ ಸಹಸ್ರಾಣಿ ವಾಲಖಿಲ್ಯಾ ಇತಿ ಶ್ರುತಾಃ ॥ ೩೦ ॥

ಅರುಣಸ್ಯಾಗ್ರತೋ ಯಾಂತಿ ಪರಿವಾರ್ಯ ದಿವಾಕರಂ ।
ಆಭೂತಸಂಪ್ಲವಾತ್ಸರ್ವೇ ಪತಂಗಸಹಚಾರಿಣಃ ॥ ೩೧ ॥

ಸ್ವಸಾರೌ ತು ಯವೀಯಸ್ಯೌ ಪುಣ್ಯಾತ್ಮಸುಮತೀ ಚ ತೇ ।
ಪರ್ವಸಸ್ಯ ಸ್ನುಷೇ ತೇ ವೈ ಪೂರ್ಣಮಾಸಸುತಸ್ಯ ವೈ ॥ ೩೨ ॥

ಊರ್ಜಾಯಾಂ ತು ವಸಿಷ್ಠಸ್ಯ ಪುತ್ರಾ ವೈ ಸಪ್ತ ಜಜ್ಞಿರೇ ।
ಜ್ಯಾಯಸೀ ಚ ಸ್ವಸಾ ತೇಷಾಂ ಪುಂಡರೀಕಾ ಸುಮಧ್ಯಮಾ ॥ ೩೩ ॥

ಜನನೀ ಸಾ ದ್ಯುತಿಮತಃ ಪಾಂಡೋಸ್ತು ಮಹಿಷೀ ಪ್ರಿಯಾ ।
ಅಸ್ಯಾಂ ತ್ವಿಮೇ ಯವೀಯಾಂಸೋ ವಾಸಿಷ್ಠಾಃ ಸಪ್ತ ವಿಶ್ರುತಾಃ ॥ ೩೪ ॥

---

೩೦ ಋತುವಿಗೆ, ಕ್ರತುವಿಗೆ ಸಮನಾದ ಶುಭಸಂತಾನವಾಯಿತು. ಅವರಿಗೆ ಪತ್ನಿಯರೂ, ಮಕ್ಕಳು ಇರಲಿಲ್ಲ. ಅವರೆಲ್ಲರೂ ಊರ್ಧ್ವರೇತಸ್ಕರೂ, ಅರವತ್ತು ಸಹಸ್ರ ಸಂಖ್ಯಾಕರೂ, ವಾಲಖಿಲ್ಯಾನಾಮಕರೂ, ಪ್ರಖ್ಯಾತರೂ ಆಗಿದ್ದರು.

೩೧. ಅವರೆಲ್ಲರೂ ಸೂರ್ಯನನ್ನು ಸುತ್ತಿಕೊಂಡು ಅರುಣನ ಮುಂಭಾಗದಲ್ಲಿ ಸಂಚರಿಸುತ್ತಿದ್ದರು. ಹೀಗೆ ಅವರು ಪ್ರಲಯಕಾಲದವರೆಗೂ ಸೂರ್ಯನ ಸಂಗಡ ಸಂಚರಿಸುತ್ತಿದ್ದರು.

೩೨. ಸಹೋದರಿಯರೂ, ಚಿಕ್ಕವರೂ ಆದ ಪುಣ್ಯಾತ್ಮಸುಮತಿಯರೆಂಬ ಇಬ್ಬರು ಕುಮಾರಿಯರು ಪೂರ್ಣಮಾಸನ ಸುತನಾದ ಪರ್ವಸನಿಗೆ ಸೊಸೆಯರಾಗಿದ್ದರು.

೩೩. ವಸಿಷ್ಠನಿಗೆ ಊರ್ಜೆಯೆಂಬುವಳಲ್ಲಿ ಏಳುಜನ ಪುತ್ರರೂ, ಸುಂದರಿಯೂ, ಹಿರಿಯವಳೂ ಆದ ಪುಂಡರೀಕೆಯೆಂಬ (ಸಹೋದರಿಯೂ) ಜನಿಸಿದರು.

೩೪. ಅವಳು ದ್ಯುತಿಮಂತನಿಗೆ ಜನನಿಯೂ, ಪಾಂಡುವಿಗೆ ಪ್ರಿಯಳಾದ ಪತ್ನಿಯೂ ಆಗಿದ್ದಳು. ಅವಳಲ್ಲಿ ಕಿರಿಯವರೂ, ವಾಸಿಷ್ಠನಾಮಕರೂ, ಸಪ್ತಸಂಖ್ಯಾಕರೂ, ಪ್ರಖ್ಯಾತರೂ ಆದ ಈ ಪುತ್ರರು ಜನಿಸಿದರು.

ರಜಃ ಪುತ್ರೋರ್ಧ್ವಬಾಹುಶ್ಚ ಸವನಶ್ಚಾಧನಶ್ಚ ಯಃ ।
ಸುತಪಾಃ ಶುಕ್ಲ ಇತ್ಯೇತೇ ಸರ್ವೇ ಸಪ್ತರ್ಷಯಃ ಸ್ಮೃತಾಃ ॥ ೩೫ ॥

ರಜಸೋ ವಾಪ್ಯಜನಯನ್ಮಾರ್ಕಂಡೇಯಿಯಾ ಯಶಸ್ವಿನೀ ।
ಪ್ರತೀಚ್ಯಾಂ ದಿಶಿ ರಾಜನ್ಯಂ ಕೇತುಮಂತಂ ಪ್ರಜಾಪತಿಂ ॥ ೩೬ ॥

ಗೋತ್ರಾಣಿ ನಾಮಭಿಸ್ತೇಷಾಂ ವಸಿಷ್ಠಾನಾಂ ಮಹಾತ್ಮನಾಂ ।
ಸ್ವಾಯಂಭುವೇಂತರೇsತೀತಾಸ್ತ್ವಗ್ರೇಸ್ತು ಶೃಣುತ ಪ್ರಜಾಃ ॥ ೩೭ ॥

ಇತ್ಯೇಷ ಋಷಿಸರ್ಗಸ್ತು ಸಾನುಬಂಧಃ ಪ್ರಕೀರ್ತಿತಃ ।
ವಿಸ್ತರೇಣಾನುಪೂರ್ವ್ಯಾ ಚಾಪ್ಯಗ್ನೇಸ್ತು ಶೃಣುತ ಪ್ರಜಾಃ ॥ ೩೮ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಋಷಿವಂಶಾನುಕೀರ್ತನಂ" ನಾಮ ಅಷ್ಟಾವಿಂಶೋಧ್ಯಾಯಃ.

---

೩೫ ರಜ, ಪುತ್ರ, ಅರ್ಧಬಾಹು, ಸವನ, ಅಧನ, ಸುತಪಸ, ಶುಕ್ಲ ಎಂಬ ಈ ಮಕ್ಕಳು ಲೋಕದಲ್ಲಿ ಸಪ್ತರ್ಷಿಗಳೆಂದು ಪ್ರಖ್ಯಾತರಾಗಿದ್ದರು.

೩೬. ಕೀರ್ತಿವಂತಳಾದ ಮಾರ್ಕಂಡೇಯಿಯು ರಜೋವಂತನಿಂದ ಕೇತುಮಂತನೆಂಬ ಪುತ್ರನನ್ನು ಪಡೆದಳು. ಅವನು ಪಶ್ಚಿಮದಿಕ್ಕಿಗೆ ಒಡೆಯನಾಗಿ ರಾಜ್ಯವನ್ನು ಪಾಲಿಸುತ್ತಿದ್ದನು.

೩೭. ವಸಿಷ್ಠವಂಶೀಕರೂ, ಮಹಾತ್ಮರೂ ಆದ ಅವರ ನಾಮಗೋತ್ರಗಳನ್ನು ತಿಳಿಸಿರುವೆನು. ಅವರು ಸ್ವಾಯಂಭುವಮನ್ವಂತರದಲ್ಲಿ ಅತೀತರಾದರು. ಈಗ ಅಗ್ನಿಯ ಸಂತಾನವನ್ನು ತಿಳಿಸುವೆನು ಕೇಳಿ ಎಂದನು.

೩೮. ಹೀಗೆ ಋಷಿಗಳ ಸೃಷ್ಟಿಯನ್ನು ಸಂಬಂಧದೊಡನೆ ವಿವರಿಸಿರುತ್ತೇನೆ. ಈಗ ಅಗ್ನಿಯ ವಂಶವನ್ನು ಕ್ರಮವಾಗಿಯೂ, ವಿಸ್ತಾರವಾಗಿಯೂ ಹೇಳುವೆನು ಕೇಳಿ ಎಂದು ಸೂತಮುನಿಯು ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ".ಋಷಿವಂಶವರ್ಣನೆಯೆಂಬ" ಇಪ್ಪತ್ತೆಂಟನೆಯ ಅಧ್ಯಾಯವು ಸಮಾಪ್ತವಾದುದು.

## ಇಪ್ಪತ್ತೆಂಟನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಭೃಗು ಮಹರ್ಷಿಗಳ ವಂಶವು ನಿರೂಪಿತವಾಗಿದೆ. ಭೃಗು ಋಷಿಗಳಿಗೆ ಧಾತ, ವಿಧಾತರೆಂಬ ಇಬ್ಬರು ಪುತ್ರರೂ, ಶ್ರೀ ನಾಮಕಳಾದ ಕುಮಾರಿಯೂ ಇದ್ದರು. ಆ ಶ್ರೀದೇವಿಯು ನಾರಾಯಣನನ್ನು ಮದುವೆಯಾಗಿ ಬಲೋತ್ಸಾಹರೆಂಬ ಮಕ್ಕಳನ್ನು ಪಡೆದಳು. ಧಾತ, ವಿಧಾತರೆಂಬುವರು ಆಯತಿ, ನಿಯತಿಯರನ್ನು ವಿವಾಹಮಾಡಿಕ್ಕೊಂಡು ಪಾಂಡು, ಮೃಕಂಡುವೆಂಬ ಮಕ್ಕಳನ್ನು ಪಡೆದರು. ಮೃಕಂಡುವಿನ ವಂಶದವರು ಮಾರ್ಕಂಡೇಯರೆಂದು ಪ್ರಖ್ಯಾತರಾದರು. ಪಾಂಡುವಿನ ವಂಶದಲ್ಲಿ ವೈರಾಜನಾಮಕಪುತ್ರರು ಜನಿಸಿದರು. ಅವರ ವಂಶದಲ್ಲಿ ಅಗ್ನಿಯೂ ಮರೀಚ್ಯಾದಿ ಪುತ್ರರೂ ಜನಿಸಿ ವಿಖ್ಯಾತರಾದರು. ಈ ಸಂತತಿಯಲ್ಲಿ ವಸಿಷ್ಠರು ಜನಿಸಿ ಪುತ್ರರೊಂದಿಗೆ ವಿಖ್ಯಾತರಾದರು. ಇವೇ ಮೊದಲಾದ ವಿಷಯವು ನಿರೂಪಿತವಾಗಿವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಏಕೋನತ್ರಿಂಶೋಽಧ್ಯಾಯಃ

ಯೋಽಸಾವಗ್ನೇರಭೀಮಾನೀ ಹ್ಯಾಸೀತ್ ಸ್ವಾಯಂಭುವೇಂತರೇ ।
ಬ್ರಹ್ಮಣೋ ಮಾನಸಃ ಪುತ್ರಸ್ತಸ್ಮಾತ್ಸ್ವಾಹಾ ವ್ಯಜಾಯತ ॥ ೧ ॥

ಪಾವಕಃ ಪವಮಾನಶ್ಚ ಪಾವಮಾನಾಶ್ಚ ಯಃ ಸ್ಮೃತಃ ।
ಶುಚಿಃ ಸೌರಸ್ತು ವಿಜ್ಞೇಯಃ ಸ್ವಾಹಾಪುತ್ರಾಸ್ತ್ರಯಸ್ತು ತೇ ॥ ೨ ॥

ನಿರ್ಮಥ್ಯಃ ಪವಮಾನಸ್ತು ಶುಚಿಃ ಸೌರಸ್ತು ಯಃ ಸ್ಮೃತಃ ।
ಪಾವಕಾ ವೈದ್ಯುತಾಶ್ಚೈವ ತೇಷಾಂ ಸ್ಥಾನಾನಿ ಯಾನಿ ವೈ ॥ ೩ ॥

---

### ಇಪ್ಪತ್ತೊಂಬತ್ತನೆಯ ಅಧ್ಯಾಯವು

೧. ಸ್ವಾಯಂಭುವಮನ್ವಂತರದಲ್ಲಿ ಬ್ರಹ್ಮದೇವನ ಮಾನಸಪುತ್ರನೂ, ಅಭಿಮಾನಿಯೂ, ಆದ ಯಾವ ಅಗ್ನಿದೇವನಿದ್ದನೋ ಅವನಿಗೆ ಸ್ವಾಹಾದೇವಿಯಲ್ಲಿ ಮೂರುಜನ ಮಕ್ಕಳು ಉತ್ಪನ್ನರಾದರು.

೨. ಪಾವಕ, ಪವಮಾನ, ಶುಚಿ, ಎಂಬ ಮೂವರು ಪುತ್ರರು ಸ್ವಾಹಾದೇವಿಗೆ ಜನಿಸಿದರು. ಪವಮಾನನಿಗೆ ಪಾವಮಾನನೆಂತಲೂ, ಶುಚಿಗೆ ಸೌರನೆಂತಲೂ, ನಾಮಾಂತರಗಳಿದ್ದುವು.

೩. ಪವಮಾನಾಗ್ನಿಯು ಅರಣಿಯ ಮಥನದಿಂದ ಜನ್ಯವಾಗಿದೆ. ಶುಚಿಯೆಂಬ ಅಗ್ನಿಯು ಸೂರ್ಯನಿಂದ ಜನ್ಯವಾಗಿದೆ. ಪಾವಕಾಗ್ನಿಯು ಮಿಂಚಿನಿಂದ ಉತ್ಪನ್ನವಾಗಿದೆ ಹೀಗೆ ಮೂರುವಿಧವಾದ ಅಗ್ನಿಗಳಿಗೂ ಮೂರು ಸ್ಥಾನಗಳು ಕ್ಲಿಪ್ತವಾಗಿವೆ.

**ಪವಮಾನಾತ್ಮಜಶ್ಚೈವ ಕವ್ಯವಾಹನ ಉಚ್ಯತೇ ।**
**ಪಾವಕಾತ್ ಸಹರಕ್ಷಸ್ತು ಹವ್ಯವಾಹಃ ಶುಚೇಃ ಸುತಃ ॥ ೪ ॥**

**ದೇವಾನಾಂ ಹವ್ಯವಾಹೋಗ್ನಿಃ ಪಿತ್ರ್ಯಾಣಾಂ ಕವ್ಯವಾಹನಃ ।**
**ಸಹರಕ್ಷೋಽಸುರಾಣಾಂತು ತ್ರಯಾಣಾಂತು ತ್ರಯೋಗ್ನಯಃ ॥ ೫ ॥**

**ಏತೇಷಾಂ ಪುತ್ರಪೌತ್ರಾಸ್ತು ಚತ್ವಾರಿಂಶನ್ನವೈವ ತು ।**
**ವಕ್ಷ್ಯಾಮಿ ನಾಮತಸ್ತೇಷಾಂ ಪ್ರವಿಭಾಗಂ ಪೃಥಕ್ ಪೃಥಕ್ ॥ ೬ ॥**

**ವೈದ್ಯುತೋ ಲೌಕಿಕಾಗ್ನಿಸ್ತು ಪ್ರಥಮೋ ಬ್ರಹ್ಮಣಃ ಸುತಃ ।**
**ಬ್ರಹ್ಮೌದನಾಗ್ನಿಸ್ತತ್ಪುತ್ರೋ ಭರತೋ ನಾಮ ವಿಶ್ರುತಃ ॥ ೭ ॥**

**ವೈಶ್ವಾನರಮುಖಸ್ತಸ್ಯ ಮಹಃ ಕಾವ್ಯೋ ಹ್ಯಪಾಂ ರಸಃ ।**
**ಅಮೃತೋಽಥರ್ವಣಾ ಪೂರ್ವಂ ಮಥಿತಃ ಪುಷ್ಕರೋದಧೌ ।**
**ಸೋಽಥರ್ವಾ ಲೌಕಿಕಾಗ್ನಿಸ್ತು ದಧ್ಯಂಚಾಥರ್ವಣಃ ಸುತಃ ॥ ೮ ॥**

---

೪. ಪವಮಾನನ ಮಗನಿಗೆ ಕವ್ಯವಾಹನನೆಂದು ಹೆಸರು ಬಂದಿದೆ. ಪಾವಕನಿಗೆ ಸಹರಕ್ಷನೆಂಬ ಸುತನೂ, ಶುಚಿಗೆ ಹವ್ಯವಾಹನೆಂಬ ಕುಮಾರನೂ ಜನಿಸಿದರು.

೫. ದೇವತೆಗಳಿಗೆ ಹವ್ಯವಾಹಾಗ್ನಿಯೂ, ಪಿತೃಗಳಿಗೆ ಕವ್ಯವಾಹನಾಗ್ನಿಯೂ, ಅಸುರರಿಗೆ ಸಹರಕ್ಷೋಗ್ನಿಯೂ, ಅವರವರ ಕರ್ಮಗಳಿಗೆ ಸಾಧಕಗಳಾಗಿವೆ. ಹೀಗೆ ಮೂರು ಜನಗಳಿಗೂ ಮೂರು ವಿಧವಾದ ಅಗ್ನಿಗಳ ಕಾರ್ಯಸಾಧಕಗಳಾಗಿವೆ.

೬. ಇವರ ಪುತ್ರ ಪೌತ್ರರು ನಲವತ್ತೊಂಭತ್ತು ಸಂಖ್ಯಾಕರಾಗಿರುವರು. ಅವರ ನಾಮ ವಿಭಾಗಗಳನ್ನು ಪ್ರತ್ಯೇಕವಾಗಿಯೂ, ಕ್ರಮವಾಗಿಯೂನಿರೂಪಿಸುವೆನು ಕೇಳೆಂದನು.

೭. ವೈದ್ಯುತನೆಂಬ ಲೌಕಿಕಾಗ್ನಿಯು ಬ್ರಹ್ಮದೇವನ ಮೊದಲನೆಯ ಮಾನಸ ಪುತ್ರನಾಗಿರುವನು. ಆ ವೈದ್ಯುತನಿಗೆ ಬ್ರಹ್ಮೌದನಾಗ್ನಿಯೆಂಬ ಪುತ್ರನು ಜನಿಸಿ ಭರತ ನೆಂಬ ನಾಮದಿಂದ ಪ್ರಖ್ಯಾತನಾಗಿದ್ದನು.

೮ ಆ ಭರತನಿಗೆ ವೈಶ್ವಾನರನೇ ಮೊದಲಾದ ಮಕ್ಕಳಿದ್ದರು. (ಅವರು ಯಾರೆಂದರೆ ವೈಶ್ವಾನರ, ಹವ್ಯ, ಕವ್ಯ, ಮತ್ತು ಅಮೃತರೆಂಬುವರು,) ಆ ಅಮೃತಾಗ್ನಿಯು ಪೂರ್ವದಲ್ಲಿ ಪುಷ್ಕರ ಸಮುದ್ರದಲ್ಲಿ ಅಥರ್ವಋಷಿಯಿಂದ ಕಡೆಯಲ್ಪಟ್ಟು ಜನಿಸಿದ್ದಾಗಿದೆ. ಆ ಅಥರ್ವಾಗ್ನಿಯು ಲೌಕಿಕಾಗ್ನಿಯಾಗಿದೆ. ಅವನಿಗೆ ದಧ್ಯಂಭನೆಂಬ ಪುತ್ರನು ಜನಿಸಿದನು.

ಅಥರ್ವಾ ತು ಭೃಗುರ್ಜ್ಞೇಯೋಽಪ್ಯಂಗಿರಾಥರ್ವಣಃ ಸುತಃ ।
ತಸ್ಮಾತ್ ಸ ಲೌಕಿಕಾಗ್ನಿಸ್ತು ದಧ್ಯಂಚಾಥರ್ವಣಃ ಸುತಃ ॥ ೯ ॥

ಅಥ ಯಃ ಪವಮಾನೋಽಗ್ನಿರ್ನಿರ್ಮಥ್ಯಃ ಕವಿಭಿಃ ಸ್ಮೃತಃ ।
ಸ ಜ್ಞೇಯೋ ಗಾರ್ಹಪತ್ಯೋಽಗ್ನಿಸ್ತತಃ ಪುತ್ರದ್ವಯಂ ಸ್ಮೃತಂ ॥ ೧೦ ॥

ಶಂಸ್ಯಸ್ತ್ವಾಹವನೀಯೋಽಗ್ನಿರ್ಯಃ ಸ್ಮೃತೋ ಹವ್ಯವಾಹನಃ ।
ದ್ವಿತೀಯಸ್ತು ಸುತಃ ಪ್ರೋಕ್ತಃ ಶುಕ್ರೋಽಗ್ನಿರ್ಯಃ ಪ್ರಣೀಯತೇ ॥ ೧೧ ॥

ತಥಾ ಸಭ್ಯಾವಸಥ್ಯೌ ವೈ ಶಂಸಸ್ಯಾಗ್ನೇಃ ಸುತಾವುಭೌ ।
ಶಂಸ್ಯಾಸ್ತು ಷೋಡಶ ನದೀಶ್ಚಕಮೇ ಹವ್ಯವಾಹನಃ ।
ಯೋಽಸೌ ವಾಹವನೀಯೋಽಗ್ನಿರಭಿಮಾನೀ ದ್ವಿಜೈಃ ಸ್ಮೃತಃ ॥ ೧೨ ॥

---

೯. ಅಥರ್ವನು ಭೃಗುವಾಗಿರುವನು. ಅವನಿಗೆ ಅಂಗಿರಸನೆಂಬ ಪುತ್ರನು ಜನಿಸಿದನು ಆದ್ದರಿಂದ ಅಥರ್ವಣನ ಸುತನಾದ ದಧ್ಯಂಚನು ಲೌಕಿಕಾಗ್ನಿಯಾಗಿರುವನು.

೧೦. ಪವಮಾನಾಗ್ನಿಯನ್ನು ಕವಿಗಳು ಅರಣಿಯ ಮಥನದಿಂದ ಜನಿಸಿದೆಯೆಂದು ಹೇಳುವರು. ಅದು ಗಾರ್ಹಪತ್ಯಾಗ್ನಿಯಾಗಿದೆ. ಅವನಿಗೆ ಇಬ್ಬರು ಪ್ರಖ್ಯಾತರಾದ ಪುತ್ರರು ಜನಿಸಿದರು.

೧೧. ಆ ಮಕ್ಕಳಲ್ಲಿ ಮೊದಲನೆಯವನು ಶಂಸ್ಯನು. ಅವನಿಗೆ ಆಹವನೀಯನೆಂದೂ. ಹವ್ಯವಾಹನನೆಂದೂ, ನಾಮಗಳಿವೆ. ಎರಡನೆಯವನು ಶುಕ್ರನು. ಅವನು ಪ್ರಣಯನವೆಂಬ ಸಂಸ್ಕಾರವುಳ್ಳವನಾಗಿರುವನು.

೧೨ ಶಂಸ್ಯಾಗ್ನಿಗೆ ಸಭ್ಯ, ಅವಸಥ್ಯರೆಂಬ ಇಬ್ಬರು ಮಕ್ಕಳು ಜನಿಸಿದರು. ಹವ್ಯವಾಹನನೆಂದು ಪ್ರಖ್ಯಾತನಾದ ಶಂಸ್ಯನು ನದಿಗಳಿಗೆ ಅಭಿಮಾನಿಗಳಾದ ಹದಿನಾರು ಜನ ನಾರಿಯರನ್ನು ಮದುವೆಯಾಗಲು ಬಯಸಿದನು. ಅವನನ್ನೇ ಬ್ರಾಹ್ಮಣರು ಆಹವನೀಯಾಗ್ನಿಗೆ ಅಭಿಮಾನಿ ಎಂದು ಹೇಳುವರು.

ಕಾವೇರೀಂ ಕೃಷ್ಣವೇಣೀಂಚ ನರ್ಮದಾಂ ಯಮುನಾಂ ತಥಾ ।
ಗೋದಾವರೀಂ ವಿತಸ್ತಾಂಚ ಚಂದ್ರಭಾಗಾಮಿರಾವತೀಂ ॥ ೧೩ ॥

ವಿಪಾಶಾಂ ಕೌಶಿಕೀಂಚೈವ ಶತದ್ರುಂ ಸರಯೂಂ ತಥಾ ।
ಸೀತಾಂ ಸರಸ್ವತೀಂಚೈವ ಹ್ರಾದಿನೀಂ ಪಾವನೀಂ ತಥಾ ॥ ೧೪ ॥

ತಾಸು ಷೋಡಶಧಾತ್ಮಾನಂ ಪ್ರವಿಭಜ್ಯ ಪೃಥಕ್ ಪೃಥಕ್ ।
ಆತ್ಮಾನಂ ವ್ಯದಧಾತ್ತಾಸು ಧಿಷ್ಣೀಷ್ವಥ ಬಭೂವ ಸಃ ॥ ೧೫ ॥

ಧಿಷ್ಣ್ಯೋ ದಿವ್ಯಭಿಚಾರಿಣ್ಯಸ್ತಾಸೂತ್ಪನ್ನಾಸ್ತು ಧಿಷ್ಣಯಃ ।
ಧಿಷ್ಣೀಷು ಜಜ್ಞಿರೇ ಯಸ್ಮಾದ್ಧಿಷ್ಣಯಸ್ತೇನ ಕೀರ್ತಿತಾಃ ॥ ೧೬ ॥

ಇತ್ಯೇತೇ ವೈ ನದೀಪುತ್ರಾ ಧಿಷ್ಣೀಷ್ವೇವ ವಿಜಜ್ಞಿರೇ ।
ತೇಷಾಂ ವಿಹರಣೀಯಾ ಯೇ ಉಪಸ್ಥೇಯಾಶ್ಚ ಯೇಽಗ್ನಯಃ ।
ತಾಂ ಶೃಣುಧ್ವಂ ಸಮಾಸೇನ ಕೀರ್ತ್ಯಮಾನಾನ್ ಯಥಾ ತಥಾ ॥ ೧೭ ॥

---

೧೩-೧೪. ಆ ಶಂಸ್ಯನು ಕಾವೇರಿ, ಕೃಷ್ಣವೇಣಿ, ನರ್ಮದೇ, ಯಮುನೇ, ಗೋದಾವರಿ, ವಿತಸ್ತೇ, ಚಂದ್ರಭಾಗೇ, ಐರಾವತೀ, ವಿಪಾಶೆ, ಕೌಶಿಕಿ, ಶತದ್ರು, ಸರಯು, ಸೀತೆ, ಸರಸ್ವತಿ, ಹ್ರಾದಿನಿ ಪಾವನಿಯೆಂದು ಪ್ರಸಿದ್ಧರಾದ ಹದಿನಾರುಜನ ನದ್ಯಭಿಮಾನಿ ಸ್ತ್ರೀಯರನ್ನು ವರಿಸಿದನು

೧೫. ಆ ಶಂಸ್ಯನು ಹದಿನಾರು ರೂಪಗಳನ್ನು ಹೊಂದಿ ಹದಿನಾರುಜನ ಸ್ತ್ರೀಯರನ್ನು ಪ್ರತ್ಯೇಕ ಪ್ರತ್ಯೇಕವಾಗಿ ಪ್ರೀತಿಸಿ, ಅವರಲ್ಲಿ ಧಿಷ್ಣೀನಾಮಕರಾದ ಪುತ್ರರನ್ನು ಪಡೆದನು. ಆ ಪುತ್ರರು ಕೋಣಾಕಾರವಾದ ಆಶ್ರಯದಲ್ಲಿ ಜನ್ಮವನ್ನು ಪಡೆದಿದ್ದರಿಂದ ಧಿಷ್ಣಿನಾಮಕರಾದರು.

೧೬. ಆ ಹದಿನಾರುಜನ ಮಕ್ಕಳು ಕೋಣಾಕಾರವಾದ ತ್ರಿಭುಜದಲ್ಲಿ ಹುಟ್ಟಿದ್ದರಿಂದಲೂ, ಸ್ವರ್ಗದಲ್ಲಿ ಸ್ವೇಚ್ಛೆಯಾಗಿ ಸಂಚಾರಮಾಡಿದ್ದರಿಂದಲೂ ಧಿಷ್ಣಿಗಳೆಂದು ಪ್ರಖ್ಯಾತರಾಗಿರುವರು.

೧೭. ನದೀಪುತ್ರರಾದ ಇವರು ತ್ರಿಭುಜದಲ್ಲಿ ಹುಟ್ಟಿರುವುದರಿಂದ ಧಿಷ್ಣಿಗಳಾಗಿರುವರು. ಅವರಲ್ಲಿ ಕೆಲವರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಪ್ರಣಯನ ಸಂಸ್ಕಾರಕ್ಕಾಗಿ ಒಯ್ಯಲ್ಪಡುವುದರಿಂದ ವಿಹರಣೀಯರಾಗಿಯೂ ಮತ್ತೆ ಕೆಲವರು ಉಪಸ್ಥಾನಕ್ಕಾಗಿ (ಸ್ತೋತ್ರಕ್ಕಾಗಿ) ಸ್ಥಾಪಿಸಲ್ಪಟ್ಟಿರುವದರಿಂದ ಉಪಸ್ಥೇಯಾಗ್ನಿಗಳಾಗಿಯೂ ಇರುವರು. ಅವರ ಸ್ವರೂಪವನ್ನು ಸಂಕ್ಷೇಪವಾಗಿಯೂ, ಕ್ರಮವಾಗಿಯೂ ವಿವರಿಸುವೆನು ಕೇಳಿ ಎಂದನು.

ಋತುಃ ಪ್ರವಾಹಣೋಽಗ್ನೀಧ್ರಃ ಪುರಸ್ತಾದ್ಧಿಷ್ಣಯೋಽಪರೇ ।
ವಿಧೀಯಂತೇ ಯಥಾಸ್ಥಾನಂ ಸೌತ್ಯೇಽಹ್ನಿ ಸವನಕ್ರಮಾತ್ ॥ ೧೮ ॥

ಅನಿರ್ದೇಶ್ಯಾನ್ಯವಾಚ್ಯಾನಾಮಗ್ನೀನಾಂ ಶೃಣುತ ಕ್ರಮಂ ।
ಸಮ್ರಾಡಗ್ನಿಃ ಕುಶಾನುರ್ಯೋ ದ್ವಿತೀಯೋತ್ತರ ವೇದಿಕಃ ॥ ೧೯ ॥

ಸಮ್ರಾಡಗ್ನಿಃ ಸ್ಮೃತಾ ಹ್ಯಷ್ಟೌ ಉಪತಿಷ್ಠಂತಿ ತಾನ್ ದ್ವಿಜಾಃ ।
ಅಧಸ್ತಾತ್ಪರ್ಷದನ್ಯಸ್ತು ದ್ವಿತೀಯಃ ಸೋಽತ್ರ ದೃಶ್ಯತೇ ॥ ೨೦ ॥

ಪ್ರತದ್ಯೋಚೇ ನಭೋ ನಾಮ ಚತ್ವಾರಿ ಸ ವಿಭಾವ್ಯತೇ ।
ಬ್ರಹ್ಮಜ್ಯೋತಿರ್ವಸುರ್ನಾಮ ಬ್ರಹ್ಮಸ್ಥಾನೇ ಸ ಉಚ್ಯತೇ ॥ ೨೧ ॥

ಹವ್ಯಸೂರ್ಯಾದ್ಯಸಂಸ್ಪೃಷ್ಟಃ ಶಾಮಿತ್ರೇ ಸ ವಿಭಾವ್ಯತೇ ।
ವಿಶ್ವಸ್ಯಾಥ ಸಮುದ್ರೋಽಗ್ನಿ ಬ್ರಹ್ಮಸ್ಥಾನೇ ಸ ಕೀರ್ತ್ಯತೇ ॥ ೨೨ ॥

---

೧೮. ಋತು, ಪ್ರವಾಹಣ, ಅಗ್ನೀಧ್ರ ಮತ್ತು ಮೇಲೆ ಹೇಳಿದ ಧಿಷ್ಣಿಗಳು ಎಂಬ ಅಗ್ನಿಗಳು ಯಾಗದ ಪ್ರಧಾನಕರ್ಮದ ದಿವಸದಲ್ಲಿ ಆಯಾ ಸ್ಥಾನಗಳಲ್ಲಿ ಕ್ರಮವಾಗಿ ಸ್ಥಾಪಿಸಲ್ಪಡುತ್ತವೆ.

೧೯. ಆವಾಹನೋದ್ದೇಶವಿಲ್ಲದ ಸ್ತೋತ್ರಕ್ಕಾಗಿ ಸ್ಥಾಪಿಸಲ್ಪಟ್ಟ ಅಗ್ನಿಗಳ ಕ್ರಮವು ಈ ರೀತಿಯಾಗಿ ಇರುವುದು. ಅದನ್ನು ತಿಳಿಸುವೆನು ಕೇಳಿರಿ. ವೇದಿಕೆಯ ಮಧ್ಯದಲ್ಲಿ ಸಮ್ರಾಟ್‌ನಾಮಕವಾದ ಒಂದು ಅಗ್ನಿಯು ಇರುವುದು.

೨೦-೨೪. ಆ ಸಮ್ರಾಡಗ್ನಿಯು ಎಂಟು ವಿಧವಾಗಿರುವುದು. ದ್ವಿಜರು ಆ ಅಗ್ನಿಗಳನ್ನು ಉಪಸ್ಥಾನಮಾಡುತ್ತಾರೆ. ಅವುಗಳಲ್ಲಿ ಮೊದಲನೆಯದು ಪರ್ಷದಗ್ನಿಯು. ಎರಡನೆಯದು ಚತ್ವರದಲ್ಲಿ ಇರಿಸಲ್ಪಡುವ ನಭವೆಂಬ ಅಗ್ನಿಯು. ಮೂರನೆಯದು ಬ್ರಹ್ಮಸ್ಥಾನದಲ್ಲಿರುವ ಬ್ರಹ್ಮಜ್ಯೋತಿಯಿಂದ ಪ್ರಕಾಶಿಸುವ ವಸುನಾಮಕಾಗ್ನಿಯು. ನಾಲ್ಕನೆಯದು ಸಂಮಾರ್ಜನವೆಂಬ ಸಂಸ್ಕಾರವಿಲ್ಲದ ಮತ್ತು ಸೂರ್ಯಾದಿ ಸಂಪರ್ಕವಿಲ್ಲದ ಶಾಮಿತ್ರಸ್ಥಾನದಲ್ಲಿರುವ ಹವ್ಯಾಗ್ನಿಯು. ಐದನೆಯದು ಬ್ರಹ್ಮಸ್ಥಾನದಲ್ಲಿ ಪ್ರಖ್ಯಾತವೂ, ಜಗತ್ತಿಗೆ ಉಪಯುಕ್ತವೂ ಆದ ಸಮುದ್ರಾಗ್ನಿಯು.

ಋತುಧಾಮಾ ಚ ಸುಜ್ಯೋತಿರೌದುಂಬರ್ಯಾಂ ಸ ಕೀರ್ತ್ಯತೇ ।
ಬ್ರಹ್ಮಜ್ಯೋತಿರ್ವಸುರ್ನಾಮ ಬ್ರಹ್ಮಸ್ಥಾನೇ ಸ ಉಚ್ಯತೇ ॥ ೨೩ ॥

ಅಜೈಕಪಾದುಪಸ್ಥೇಯಃ ಸ ವೈ ಶಾಲಾಮುಖೀಯಕಃ ।
ಅನುದ್ದೇಶ್ಯೋಽಪ್ಯಹಿರ್ಬುಧ್ನ್ಯಃ ಸೋಽಗ್ನಿರ್ಗೃಹಪತಿಃ ಸ್ಮೃತಃ ॥ ೨೪ ॥

ಶಂಸಸ್ಯೈವ ಸುತಾಃ ಸರ್ವೇ ಉಪಸ್ಥೇಯಾ ದ್ವಿಜೈಃ ಸ್ಮೃತಾಃ ।
ತತೋ ವಿಹರಣೀಯಾಂಶ್ಚ ವಕ್ಷ್ಯಾಮ್ಯಷ್ಟೌ ತು ತತ್ಸುತಾನ್ ॥ ೨೫ ॥

ಕ್ರತುಪ್ರವಾಹಣೋಽಗ್ನೀಧ್ರಸ್ತತ್ರಸ್ಥಾ ಧಿಷ್ಣಯೋಽಪರೇ ।
ವಿಹ್ರಿಯಂತೇ ಯಥಾಸ್ಥಾನಂ ಸೌತ್ಯೇಽಹ್ನಿ ಸಮನಕ್ರಮಾತ್ ॥ ೨೬ ॥

ಪೌತ್ರೇಯಸ್ತು ತತೋ ಹ್ಯಗ್ನಿಃ ಸ್ಮೃತೋ ಯೋ ಹವ್ಯವಾಹನಃ ।
ಶಾಂತಿಶ್ಚಾಗ್ನಿಃ ಪ್ರಚೇತಾಸ್ತು ದ್ವಿತೀಯಃ ಸತ್ಯ ಉಚ್ಯತೇ ॥ ೨೭ ॥

---

ಆರನೆಯದು ಔದಂಬರಶಾಖೆಯ ಸನ್ನಿಧಿಯಲ್ಲಿರುವ ಜ್ಯೋತಿರ್ಮಯವಾದ ಕ್ರತುಧಾಮಾಗ್ನಿಯು. ಏಳನೆಯದು ಶಾಲಾಮುಖೀಯವೆಂಬ ಬೇರೆ ಹೆಸರಿರುವ ಅಜೈಕಪಾದಅಗ್ನಿಯು. ಎಂಟನೆಯದು ಅಹಿರ್ಬುಧ್ನ್ಯವೆಂಬ ಪರ್ಯಾಯನಾಮವುಳ್ಳ ಗೃಹಪತಿ ಎಂಬ ಅಗ್ನಿಯು. ಈರೀತಿ ಎಂಟು ಅಗ್ನಿಗಳು ಶಂಸ್ಯನ ಪುತ್ರರಾಗಿರುವರು.

೨೫. ಇವರೆಲ್ಲರೂ ಶಂಸ್ಯನ ಮಕ್ಕಳಾಗಿರುವರು. ಬ್ರಾಹ್ಮಣರು ಯಾವಾಗಲೂ ಈ ಎಂಟು ಜನರನ್ನು ಪೂಜಿಸಬೇಕು. ಈಗ ವಿಹರಣೀಯರನ್ನೂ ಅವರ ಎಂಟು ಜನ ಪುತ್ರರನ್ನೂ ಕ್ರಮವಾಗಿ ಹೇಳುವೆನು ಕೇಳಿ ಎಂದನು.

೨೬. ಕ್ರತು, ಪ್ರವಾಹಣ, ಅಗ್ನೀಧ್ರವೆಂಬ ಅಗ್ನಿಗಳೂ. ತ್ರಿಭುಜದಲ್ಲಿರುವ ಬೇರೆಯಾದ ಧಿಷ್ಣಿನಾಮಕವಾದ ಅಗ್ನಿಗಳೂ ಕೂಡ ಯಾಗದ ಪ್ರಧಾನಕರ್ಮವನ್ನು ಮಾಡುವ ದಿವಸದಲ್ಲಿ ಆಯಾ ಸ್ಥಾನಗಳಲ್ಲಿ ಸ್ಥಾಪಿಸಲ್ಪಡುತ್ತವೆ.

೨೭. ಈ ಎಂಟು ಅಗ್ನಿಗಳ ನಾಮವು ಪರ್ಯಾಯವಾಗಿ ಈರೀತಿಯಲ್ಲಿದೆ. ಮೊದಲನೆಯದು ಹವ್ಯವಾಹನನೆಂಬ ಪರ್ಯಾಯನಾಮವುಳ್ಳ ಪೌತ್ರೇಯಾಗ್ನಿಯು. ಎರಡನೆಯ ಅಗ್ನಿಗೆ ಶಾಂತಿ, ಪ್ರಚೇತಸ್ಸು, ಸತ್ಯ ಎಂಬುದಾಗಿ ನಾಮತ್ರಯಗಳಿವೆ.

ತಥಾಗ್ನಿರ್ವಿಶ್ವದೇವಸ್ತು ಬ್ರಹ್ಮಸ್ಥಾನೇ ಸ ಉಚ್ಯತೇ ।
ಅವಕ್ಷುರಚ್ಛಾವಾಕಸ್ತು ಭುವಃ ಸ್ಥಾನೇ ವಿಭಾವ್ಯತೇ ॥ ೨೮ ॥

ಉಶೀರಾಗ್ನಿಃ ಸವೀರ್ಯಸ್ತು ನೈಷ್ಟೀಯಃ ಸಂವಿಭಾವ್ಯತೇ ।
ಅಷ್ಟಮಸ್ತು ವ್ಯರತ್ರಿಸ್ತು ಮಾರ್ಜಾಲೀಯಃ ಪ್ರಕೀರ್ತಿತಃ ॥ ೨೯ ॥

ಧಿಷ್ಣ್ಯಾ ವಿಹರಣೀಯಾ ಯೇ ಸೌಮ್ಯೇನಾನ್ಯೇನ ಚೈವ ಹಿ ।
ತಯೋರ್ಯಃ ಪಾವಕೋ ನಾಮ ಸ ಚಾಪಾಂ ಗರ್ಭ ಉಚ್ಯತೇ ॥ ೩೦ ॥

ಅಗ್ನಿಃ ಸೋಽವಭೃಥೋ ಜ್ಞೇಯಃ ಸಂಮ್ಯಕ್ ಪ್ರಾಪ್ಯಾಸ್ತು ಹೂಯತೇ ।
ಹೃಚ್ಛಯಸ್ತಸ್ಸುತೋ ಹ್ಯಗ್ನಿರ್ಜಠರೇ ಯೋ ನೃಣಾಂ ಸ್ಥಿತಃ ॥ ೩೧ ॥

ಮನ್ಯುಮಾನ್ ಜಾಠರಸ್ಯಾಗ್ನೇರ್ವಿದ್ವಾನಗ್ನಿಃ ಸುತಃ ಸ್ಮೃತಃ ।
ಪರಸ್ಪರೋಚ್ಛ್ರಿತಃ ಸೋಗ್ನಿರ್ಭೂತಾನಾಂ ಹ ವಿಭುರ್ಮಹಾನ್ ॥ ೩೨ ॥

---

೨೮-೨೯. ಮೂರನೆಯ ಅಗ್ನಿಗೆ ಬ್ರಹ್ಮಸ್ಥಾನಾಗ್ನಿ ಮತ್ತು ವೈಶ್ವದೇವಾಗ್ನಿ ಯೆಂಬ ನಾಮಗಳಿವೆ. ಭೂಮಿಯಲ್ಲಿ ಸ್ಥಾಪಿಸಲ್ಪಡುವ ಅವಕ್ಷುರಚ್ಛಾವಾಕವೆಂಬ ಅಗ್ನಿಯು ನಾಲ್ಕನೆಯದಾಗಿದೆ. ವೀರ್ಯವತ್ತೂ ನೈಷ್ಟೀಯನಾಮಕವೂ ಆದ ಉಶೀರಾಗ್ನಿಯು ಐದನೆಯದಾಗಿದೆ. ಆರನೆಯದಾದರೋ ವ್ಯರಕ್ತಿ ಮತ್ತು ಮಾರ್ಜಾಲೀನಾಮಕಅಗ್ನಿಯಾಗಿದೆ.

೩೦. ಧಿಷ್ಣಿ, ವಿಹರಣೀಯಾಗ್ನಿಗಳು ಕೂಡಿ ಅಷ್ಟಾಗ್ನಿಗಳಾಗಿವೆ. ಈ ಅಗ್ನಿಗಳನ್ನು ಧಿಷ್ಣ್ಯಸ್ಥಾನಗಳಲ್ಲಿ ಆವಾಹಿಸಿ ಯಾಗಮಾಡುತ್ತಾರೆ. ಧಿಷ್ಣಿ, ವಿಹರಣೀಯಾಗ್ನಿಗಳಿಗೆ ಪಾವಕನಾಮಕವಾದ ಅಗ್ನಿಯು ಜನಿಸಿ ಜಲಗರ್ಭನಾಮದಿಂದ ಪ್ರಖ್ಯಾತವಾಗಿದೆ.

೩೧. ಯಾವ ಅಗ್ನಿಯನ್ನು ಕ್ರಮವಾಗಿ ಪೂಜಿಸಿ ಜಲದಲ್ಲಿ ಹಾಕುತ್ತಾರೋ ಅದಕ್ಕೆ ಅವಭೃತಾಗ್ನಿ ಎಂದು ನಾಮವು ಪ್ರಾಪ್ತವಾಗಿದೆ. ಅದು ಅವಭೃತಕರ್ಮದಲ್ಲಿ ಉಪಯೋಗವಾಗುವುದು. ಆ ಪಾವಕಾಗ್ನಿಯ ಸುತನೂ ಪ್ರತಿಯೊಬ್ಬ ಪುರುಷನ ಹೃದಯದಲ್ಲಿಯೂ ಇರುವವನೂ ಆದ ಅಗ್ನಿಗೆ ಜಾಠರಾಗ್ನಿ ಎಂದು ನಾಮವು ಪ್ರಾಪ್ತವಾಗಿದೆ.

೩೨. ಈ ಜಾಠರಾಗ್ನಿಗೆ ಮೃತ್ಯುಮಾನ್ ಮತ್ತು ವಿದ್ವಾನ್ ನಾಮಕನಾದ ಸುತನಿರುವನು. ಅನ್ಯೋನ್ಯಸಹಾಯವುಳ್ಳ ಆ ಅಗ್ನಿಯು ಸರ್ವಭೂತಗಳ ಹೃದಯದಲ್ಲಿ ಮಹತ್ತಾಗಿಯೂ, ವ್ಯಾಪಕವಾಗಿಯೂ ಇದೆ.

ಪುತ್ರಃ ಸೋಽಗ್ನೇರ್ಮನ್ಯುಮತೋ ಘೋರಃ ಸಂವರ್ತಕಃ ಸ್ಮೃತಃ ।
ಪಿಬನ್ನಪಃ ಸ ವಸತಿ ಸಮುದ್ರೇ ವಡವಾಮುಖಃ ॥ ೩೩ ॥

ಸಮುದ್ರವಾಸಿನಃ ಪುತ್ರಃ ಸಹರಕ್ಷೋ ವಿಭಾವ್ಯತೇ ।
ಸಹರಕ್ಷಸುತಃ ಕ್ಷಾಮೋ ಗೃಹಾಣಿ ಸ ದಹೇನ್ನೃಣಾಂ ॥ ೩೪ ॥

ಕ್ರವ್ಯಾದೋಽಗ್ನಿಃ ಸುತಸ್ತಸ್ಯ ಪುರುಷಾನತ್ತಿ ಯೋ ಮೃತಾನ್ ।
ಇತ್ಯೇತೇ ಪಾವಕಸ್ಯಾಗ್ನೇಃ ಪುತ್ರಾ ಹ್ಯೇವಂ ಪ್ರಕೀರ್ತಿತಾಃ ॥ ೩೫ ॥

ತತಃ ಶುಚೇಸ್ತು ಯೈಃ ಸೌರೇರ್ಗಂಧರ್ವೈರಸುರಾವೃತೈಃ ।
ಮಥಿತೋ ಯಸ್ತ್ವರಣ್ಯಾಂ ವೈ ಸೋಽಗ್ನಿರಗ್ನಿಃ ಸಮಿಧ್ಯತೇ ॥ ೩೬ ॥

ಆಯುರ್ನಾಮಾಥ ಭಗವಾನ್ ಪಶೌ ಯಸ್ತು ಪ್ರಣೀಯತೇ ।
ಆಯುಷೋ ಮಹಿಮಾನ್ ಪುತ್ರಃ ಸ ಶಾವಾನ್ನಾಮತಃ ಸುತಃ ॥ ೩೭ ॥

---

೩೩. ಆ ಮನ್ಯುಮಂತನಾಮಕವಾದ ಅಗ್ನಿಗೆ ಭಯಂಕರನೂ, ಸಂವರ್ತಕ ನಾಮಕನೂ ಆದ ಪುತ್ರನು ಹುಟ್ಟಿದನು. ಅವನು ಜಲವನ್ನು ಪಾನಮಾಡುತ್ತಾ ಬಡಬಾಗ್ನಿ ಎಂಬ ಪ್ರಸಿದ್ಧಿಯಿಂದ ಸಮುದ್ರದಲ್ಲಿ ವಾಸಿಸುವನು.

೩೪. ಸಮುದ್ರವಾಸಿಯಾದ ಆ ಬಡಬಾಗ್ನಿಗೆ ಸಹರಕ್ಷಕನೆಂಬ ಪುತ್ರನು ಇರುವನು. ಆ ಸಹರಕ್ಷಕನಿಗೆ ಕ್ಷಾಮನೆಂಬ ಪುತ್ರನು ಜನಿಸಿ ಮನುಷ್ಯರ ಮನೆ ಮಠಗಳನ್ನು ದಹಿಸುವನು.

೩೫. ಆ ಕ್ಷಾಮಾಗ್ನಿಗೆ ಕ್ರವ್ಯಾದನಾಮಕಾಗ್ನಿಯು ಪುತ್ರನಾಗಿ ಹುಟ್ಟಿದನು. ಅವನು ಮೃತಪುರುಷರನ್ನು ಭಕ್ಷಿಸುವನು. ಈ ಮೇಲೆ ನಿರೂಪಿಸಿರುವ ಮಕ್ಕಳು ಪಾವಕಾಗ್ನಿಯ ಮಕ್ಕಳೆಂದು ಪ್ರಖ್ಯಾತರಾಗಿರುವರು.

೩೬. ಅನಂತರ ಸೂರ್ಯನ ಸಂಬಂಧಿಯಾದ ಶುಚಿ ಎಂಬ ಅಗ್ನಿಯನ್ನು ಗಂಧರ್ವರೂ, ಅಸುರರೂ ಇವರೇ ಮೊದಲಾದವರು ಅರುಣಿಯಲ್ಲಿ ಮಥಿಸಲಾಗಿ ಆಯುನಾಮಕವಾದ ಅಗ್ನಿಯು ಉತ್ಪನ್ನವಾಯಿತು.

೩೭. ಅವನು ಪೂಜ್ಯನೂ, ಪಶುಪ್ರಣಯನದಲ್ಲಿ ಉಪಯುಕ್ತನೂ, ಆಗಿರುವನು. ಆ ಆಯುಷನಿಗೆ ಮಹಿಮಂತನೆಂಬ ಪುತ್ರನೂ, ಅವನಿಗೆ ಶಾವಂತನೆಂಬ ಮಗನೂ ಜನಿಸಿದರು.

ಪಾಕಯಜ್ಞೇಷ್ವಭಿಮಾನೀ ಸೋಽಗ್ನಿಸ್ತು ಸವನಃ ಸ್ಮೃತಃ ।
ಪುತ್ರಶ್ಚ ಸವನಸ್ಯಾಗ್ನೇರದ್ಭುತಃ ಸಃ ಮಹಾಯಶಾಃ ॥ ೩೮ ॥

ವಿವಿಚಿಸ್ತ್ವದ್ಭುತಸ್ಯಾಪಿ ಪುತ್ರೋಽಗ್ನೇಃ ಸ ಮಹಾನ್ ಸ್ಮೃತಃ ।
ಪ್ರಾಯಶ್ಚಿತ್ತೇಽಥ ಭೀಮಾನಾಂ ಹುತಂ ಭುಂಕ್ತೇ ಹವಿಃ ಸದಾ ॥ ೩೯ ॥

ವಿವಿಚೇಸ್ತು ಸುತೋ ಹ್ಯರ್ಕೋ ಯೋಽಗ್ನಿಸ್ತಸ್ಯ ಸುತಾಸ್ತ್ವಮೀ ।
ಅನೀಕವಾನ್ ವಾ ಸೃಜವಾಂಶ್ಚ ರಕ್ಷೋಹ ಪಿತೃಕೃತ್ತಥಾ ।
ಸುರಭಿರ್ವಸುರನ್ನಾದೌ ಪ್ರವಿಷ್ಟೋ ಯಶ್ಚ ರುಕ್ಮವಾನ್ ॥ ೪೦ ॥

ಶುಚೇರಗ್ನೇಃ ಪ್ರಜಾ ಹ್ಯೇಷಾ ವಹ್ನಯಸ್ತು ಚತುರ್ದಶ ।
ಇತ್ಯೇತೇ ವಹ್ನಯಃ ಪ್ರೋಕ್ತಾಃ ಪ್ರಣೀಯಂತೇಽಧ್ವರೇಷು ಯೇ ॥ ೪೧ ॥

ಆದಿಸರ್ಗೇ ಹ್ಯತೀತಾ ವೈ ಯಾಮೈಃ ಸಹ ಸುರೋತ್ತಮೈಃ ।
ಸ್ವಾಯಂಭುವೇಽಂತರೇ ಪೂರ್ವಮಗ್ನಯಸ್ತೇಽಭಿಮಾನಿನಃ ॥ ೪೨ ॥

---

೩೮-೩೯. ಆ ಶಾವಂತನು ಶ್ರೋತ್ರಿಯರು ಮಾಡುವ ಪಾಕಯಜ್ಞಗಳಲ್ಲಿ ಅಭಿಮಾನಿಯಾಗಿಯೂ, ಸವನನಾಮಕನಾಗಿಯೂ ಇರುವನು. ಆ ಸವನಾಗ್ನಿಗೆ ಕೀರ್ತಿವಂತನಾದ ಅದ್ಭುತಾಗ್ನಿಯೆಂಬ ಸುತನೂ, ಆ ಅದ್ಭುತಾಗ್ನಿಗೆ ವಿವಿಚಿ ಎಂಬ ಮಹಾತ್ಮನಾದ ಪುತ್ರನೂ ಜನಿಸಿದರು. ಆ ವಿವಿಚಾಗ್ನಿಯು ಪ್ರಾಯಶ್ಚಿತ್ತಕರ್ಮದಲ್ಲಿ ಅಭಿಮಾನಿಯಾಗಿದ್ದು ಹೋಮಮಾಡಿದ ಹವಿಸ್ಸನ್ನು ಸರ್ವದಾ ಭುಂಜಿಸುವನು.

೪೦. ಆ ವಿವಿಚಾಗ್ನಿಗೆ ಅರ್ಕನಾಮಕ ಪುತ್ರನು ಇರುವನು. ಆ ಅರ್ಕಾಗ್ನಿಗೆ ಅನೀಕವಂತ, ಸೃಜವಂತ, ರಕ್ಷೋಹಣ, ಪಿತೃಕೃತ್, ಸುರಭಿ, ವಸು, ಅನ್ನಾದ ಅಥವಾ ರುಕ್ಮವಂತ ಎಂಬ ಮಕ್ಕಳು ಜನಿಸಿದರು.

೪೧. ಈ ರೀತಿಯಾಗಿ ಈ ಹದಿನಾಲ್ಕು ಜನಗಳು ಶುಚಿನಾಮಕಾಗ್ನಿಗೆ ಪ್ರಜೆಗಳಾಗಿರುವರು. ಈ ಅಗ್ನಿಗಳೆಲ್ಲವೂ ಯಾಗಗಳಲ್ಲಿ ಪ್ರಣಯನದಿಂದ ಸಂಸ್ಕಾರ್ಯಗಳಾಗಿರುವುವು.

೪೨. ಇವರೆಲ್ಲರೂ ಅಗ್ನ್ಯಭಿಮಾನಿ ದೇವತೆಗಳಾಗಿ ಸ್ವಾಯಂಭುವ ಮನ್ವಂತರದಲ್ಲಿ ತಮ್ಮ ಅಧಿಕಾರವನ್ನು ನಡೆಸಿ ಹಿಂದಿನ ಸೃಷ್ಟಿಯಲ್ಲಿ ಅತೀತರಾಗಿರುವರು.

ಏತೇ ವಿಹರಣೀಯಾಸ್ತು ಚೇತನಾಚೇತನೇಷ್ವಿಹ ।
ಸ್ಥಾನಾಭಿಮಾನಿನೋ ಲೋಕೇ ಪ್ರಾಗಾಸನ್ ಹವ್ಯವಾಹನಾಃ ॥ ೪೩ ॥

ಕಾಮ್ಯನೈಮಿತ್ತಿಕಾಜಸ್ರೇಷ್ವೇತೇ ಕರ್ಮಸ್ವವಸ್ಥಿತಾಃ ।
ಪೂರ್ವಮನ್ವಂತರೇಽತೀತೇ ಶುಕ್ರೈರ್ಯಾಮೈಃ ಸುತೈಃ ಸಹ ।
ದೇವೈರ್ಮಹಾತ್ಮಭಿಃ ಪುಣ್ಯೈಃ ಪ್ರಥಮಸ್ಯಾಂತರೇ ಮನೋಃ ॥ ೪೪ ॥

ಇತ್ಯೇತಾನಿ ಮಯೋಕ್ತಾನಿ ಸ್ಥಾನಾನಿ ಸ್ಥಾನಿನಶ್ಚ ಹ ।
ತೈರೇವ ತು ಪ್ರಸಂಖ್ಯಾತಮತೀತಾನಾಗತೇಷ್ವಪಿ ॥ ೪೫ ॥

ಮನ್ವಂತರೇಷು ಸರ್ವೇಷು ಲಕ್ಷಣಂ ಜಾತವೇದಸಾಂ ।
ಸರ್ವೇ ತಪಸ್ವಿನೋ ಹ್ಯೇತೇ ಸರ್ವೇ ಹ್ಯವಭೃಥಾಸ್ತಥಾ ।
ಪ್ರಜಾನಾಂ ಪತಯಃ ಸರ್ವೇ ಜ್ಯೋತಿಷ್ಮಂತಶ್ಚ ತೇ ಸ್ಮೃತಾಃ ॥ ೪೬ ॥

---

೪೩. ಈ ಅಗ್ನ್ಯಭಿಮಾನಿದೇವತೆಗಳು ವಿಹರಣಸ್ಥಾನಗಳಲ್ಲಿಯೂ, ಚೇತನಾ ಚೇತನಗಳಲ್ಲಿಯೂ, ಸ್ಥಾನಾಭಿಮಾನಿಗಳಾಗಿ ಪೂರ್ವಕಲ್ಪದಲ್ಲಿ ಹವಿಸ್ಸನ್ನು ಸ್ವೀಕರಿಸುವ (ಒಯ್ಯುವ) ಅಧಿಕಾರದಲ್ಲಿ ಆಸಕ್ತರಾಗಿದ್ದರು.

೪೪ ಕಾಮ್ಯನೈಮಿತ್ತಿಕಗಳಾದ ಯಜ್ಞಕರ್ಮಗಳಲ್ಲಿ ಈ ಅಗ್ನಿಗಳು ಪೂರ್ವ ಮನ್ವಂತರದಲ್ಲಿದ್ದು ಆಯಾ ಕರ್ಮಗಳನ್ನು ಶುಕ್ರಾದಿಗ್ರಹಗಳೊಡನೆ ನೆರವೇರಿಸುತ್ತಾ ಅವುಗಳ ಜೊತೆಯಲ್ಲೇ ಕಳೆದುಹೋಗಿರುವುವು. ಮತ್ತು ಅವರು ಪ್ರಥಮಮನ್ವಂತರದಲ್ಲಿ ತಮ್ಮ ಮಕ್ಕಳು ಮಹಾತ್ಮರು, ಪುಣ್ಯಪುರುಷರು ಆದ ದೇವತೆಗಳು ಇವರ ಸಂಗಡ ಅತೀತರಾಗಿರುವರು.

೪೫. ಈ ರೀತಿಯಲ್ಲಿ ಸ್ಥಾನಗಳು ಮತ್ತು ಸ್ಥಾನಾಭಿಮಾನಿದೇವತೆಗಳು ಇವರನ್ನೂ, ಅವರ ಸಂಖ್ಯೆಯನ್ನೂ, ಮತ್ತು ಸಂತತಿಯನ್ನೂ, ಅತೀತಾನಾಗತಮನ್ವಂತರಗಳ ವಿಷಯಗಳನ್ನೂ ನಿಮಗಾಗಿ ತಿಳಿಸಿರುವೆನು.

೪೬. ಭೂತಭವಿಷ್ಯದ್ವರ್ತಮಾನ ಸರ್ವ ಮನ್ವಂತರಗಳಲ್ಲಿರುವ ಅಗ್ನ್ಯಭಿಮಾನಿದೇವತೆಗಳ ಸ್ವರೂಪವನ್ನು ತಿಳಿಸಿರುವೆನು. ಅವರೆಲ್ಲರೂ ಮಹಾತಪಸ್ವಿಗಳೂ, ಬ್ರಹ್ಮಜ್ಞಾನಿಗಳೂ, ಅವಭೃತಸ್ನಾಯಿಗಳೂ, ಪ್ರಜಾಪತಿಗಳೂ, ತೇಜೋವಂತರೂ ಆಗಿರುವರೆಂದು ನಿರೂಪಿತವಾಗಿದೆ.

ಸ್ವಾರೋಚಿಷಾದಿಷು ಜ್ಞೇಯಾಃ ಸಾವರ್ಣ್ಯಾಂತೇಷು ಸಪ್ತಸು ।
ಮನ್ವಂತರೇಷು ಸರ್ವೇಷು ನಾನಾರೂಪಪ್ರಯೋಜನೈಃ ॥ ೪೭ ॥

ವರ್ತಂತೇ ವರ್ತಮಾನೈಶ್ಚ ದೇವೈರಿಹ ಸಹಾಗ್ನಯಃ ।
ಅನಾಗತೈಃ ಸುರೈಃ ಸಾರ್ಧಂ ವರ್ತಂತೇಽನಾಗತಾಗ್ನಯಃ ॥ ೪೮ ॥

ಇತ್ಯೇಷ ವಿನಯೋಗ್ನೀನಾಂ ಮಯಾ ಪ್ರೋಕ್ತೋ ಯಥಾತಥಂ ।
ವಿಸ್ತರೇಣಾನುಪೂರ್ವ್ಯಾ ಚ ಪಿತ್ರ್ಯಾಣಾಂ ವಕ್ಷ್ಯತೇ ತತಃ ॥ ೪೯ ॥

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಅಗ್ನಿವಂಶವರ್ಣನಂ "**
**ನಾಮೋನತ್ರಿಂಶೋಽಧ್ಯಾಯಃ.**

---

೪೭. ಸ್ವಾರೋಚಿಷನೇ ಮೊದಲಾದ ಸಾವರ್ಣ್ಯಾಂತವಾದ ಏಳುಜನ ಮನುಗಳ ಅಧಿಕಾರಾವಧಿಯಲ್ಲಿ ಈ ಮೇಲೆ ಹೇಳಿದ ಎಲ್ಲಾ ಅಗ್ನಿಗಳಿಗೂ ನಾಮರೂಪ ಪ್ರಯೋಜನಗಳು ಸಮಾನವಾಗಿಯೇ ಇರುವುವು.

೪೮. ವರ್ತಮಾನಕಾಲದಲ್ಲಿರುವ ಅಗ್ನಿಗಳು ಆ ಕಾಲದಲ್ಲಿರುವ ದೇವತೆಗಳ ಸಂಗಡಲೇ ಇರುವುವು. ಭವಿಷ್ಯತ್ಕಾಲದ ಅಗ್ನಿಗಳು ಭವಿಷ್ಯತ್ಕಾಲದ ದೇವತೆಗಳ ಸಂಗಡಲೇ ಕೂಡಿರುವುವು.

೪೯. ಈರೀತಿಯಾಗಿ ಅಗ್ನಿಗಳ ವಿಷಯಗಳನ್ನು ಅವರ ಸಂತತಿಯೊಡನೆ ಕ್ರಮವಾಗಿಯೂ ವಿಸ್ತಾರವಾಗಿಯೂ ನಿರೂಪಿಸಿರುವೆನು ಮುಂದೆ ಪಿತೃದೇವತೆಗಳ ವಿಷಯಗಳನ್ನು ಕ್ರಮವಾಗಿ ನಿರೂಪಿಸುವೆನು.

ಈರೀತಿಯಾಗಿ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಅಗ್ನಿವಂಶವರ್ಣನ " ವೆಂಬ ಇಪ್ಪತ್ತೊಂಬತ್ತನೆಯ ಅಧ್ಯಾಯವು ಸಮಾಪ್ತವಾದುದು.

ಅಧ್ಯಾಯ ೨೯

## ಇಪ್ಪತ್ತೊಂಭತ್ತನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಅಗ್ನಿವಂಶವು ವರ್ಣಿತವಾಗಿದೆ. ಬ್ರಹ್ಮದೇವನ ಮಾನಸ ಪುತ್ರನಾದ ಅಗ್ನಿದೇವನಿಗೆ ಸ್ವಾಹಾದೇವಿಯಲ್ಲಿ ಪಾವಕ, ಪವಮಾನ, ಶುಚಿ ಎಂಬ ಮೂವರು ಪುತ್ರರು ಜನಿಸಿದರು. ಅವರಿಗೆ ಅಗ್ನಿ, ಮಿಂಚು, ಸೂರ್ಯ ಎಂಬ ಸ್ಥಾನಗಳು ಏರ್ಪಟ್ಟವು. ಆ ವಂಶದಲ್ಲಿ ೪೯ ಜನ ಅಗ್ನಿಗಳು ಅಂದರೆ ಅಭಿಮಾನಿ ದೇವತೆಗಳು ಪ್ರಖ್ಯಾತರಾಗಿದ್ದರು. ಈ ಅಗ್ನಿಗಳೇ ವೈದಿಕಲೌಕಿಕಾದಿ ಸಕಲಕಾರ್ಯಗಳಿಗೆ ಸಾಧಕವಾಗಿಯೂ ಪ್ರಾಣಿಗಳ ಹೃದಯದಲ್ಲಿ ನೆಲಸಿ ಪಚನಕಾರಿಯಾಗಿಯೂ ಇರುತ್ತವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

**ಬ್ರಹ್ಮಣಃ ಸೃಜತಃ ಪುತ್ರಾನ್ ಪೂರ್ವೇ ಸ್ವಾಯಂಭುವೇಽಂತರೇ ।**
**ಅಂಭಾಂಸಿ ಜಜ್ಞಿರೇ ತಾನಿ ಮನುಷ್ಯಾಸುರದೇವತಾಃ ॥ ೧ ॥**

**ಪಿತೃವನ್ಮನ್ಯಮಾನಸ್ಯ ಜಜ್ಞಿರೇ ಪಿತರೋಽಸ್ಯ ವೈ ।**
**ತೇಷಾಂನಿಸರ್ಗಃ ಪ್ರಾಗುಕ್ತೋ ವಿಸ್ತರಸ್ತಸ್ಯ ವಕ್ಷ್ಯತೇ ॥ ೨ ॥**

**ದೇವಾಸುರಮನುಷ್ಯಾಣಾಂ ದೃಷ್ಟ್ವಾ ದೇವೋಽಭ್ಯಭಾಷತ ।**
**ಪಿತೃವನ್ಮನ್ಯಮಾನಸ್ಯ ಜಜ್ಞಿರೇ ಹ್ಯೋಪಪಕ್ಷತಃ ॥ ೩ ॥**

---

## ಮೂವತ್ತನೆಯ ಅಧ್ಯಾಯವು

೧-೨. ಸೂತನು ಹೇಳಿದನು:—ಬ್ರಹ್ಮದೇವನು ಪೂರ್ವದ ಸ್ವಾಯಂಭುವ ಮನ್ವಂತರದಲ್ಲಿ ಪ್ರಜೆಗಳನ್ನು ಸೃಷ್ಟಿಮಾಡಲಿಚ್ಛೆಯುಳ್ಳವನಾಗಿ ಮೊದಲು ಜಲವನ್ನೂ ಅನಂತರ ಮನುಷ್ಯರು, ಅಸುರರು, ದೇವತೆಗಳು ಇವರನ್ನೂ ಸೃಷ್ಟಿಸಿದನು. ಪಿತೃಗಳಂತೆ ಪೂಜ್ಯನಾದ ಬ್ರಹ್ಮದೇವನಿಂದ ಪಿತೃಗಳೂ ಉತ್ಪನ್ನರಾದರು. ಆ ಪಿತೃದೇವತೆಗಳ ಸೃಷ್ಟಿಕ್ರಮವನ್ನು ಮೊದಲು ಸಂಕ್ಷೇಪವಾಗಿ ಹೇಳಿದ್ದೆನು. ಈಗ ವಿಸ್ತಾರವಾಗಿ ನಿರೂಪಿಸುವೆನು ಎಂದನು.

೩-೪. ಪಿತೃಗಳಂತೆ ಪೂಜ್ಯನಾದ ಬ್ರಹ್ಮನು, ದೇವತೆಗಳು, ಅಸುರರು, ಮನುಷ್ಯರು ಇವರನ್ನು ಸೃಷ್ಟಿಸಿ ಅವರ ಸಂಗಡ ಮಾತನಾಡಿದನು. ತರುವಾಯ

ಮಧ್ವಾದಯಃ ಷಡೃತವಸ್ತಾನ್ ಪಿತೄನ್ ಪರಿಚಕ್ಷತೇ ।
ಋತವಃ ಪಿತರೋ ದೇವಾ ಇತ್ಯೇಷಾ ವೈದಿಕೀ ಶ್ರುತಿಃ ॥ ೪ ॥

ಮನ್ವಂತರೇಷು ಸರ್ವೇಷು ಹ್ಯತೀತಾನಾಗತೇಷ್ವಪಿ ।
ಏತೇ ಸ್ವಾಯಂಭುವೇ ಪೂರ್ವಮುತ್ಪನ್ನಾ ಹ್ಯಂತರೇ ಶುಭೇ ॥ ೫ ॥

ಅಯಜ್ವಾನಸ್ತಥಾ ತೇಷಾಮಾಸನ್ ವೈ ಗೃಹಮೇಧಿನಃ ।
ಅಗ್ನಿಷ್ವಾತ್ತಾಃ ಸ್ಮೃತಾಸ್ತೇ ವೈ ಪಿತರೋಽನಾಹಿತಾಗ್ನಯಃ ॥ ೬ ॥

ಯಜ್ವಾನಸ್ತೇಷು ಯೇ ಹ್ಯಾಸನ್ ಪಿತರಃ ಸೋಮಪೀಥಿನಃ ।
ಸ್ಮೃತಾ ಬರ್ಹಿಷದಸ್ತೇ ವೈ ಪಿತರಸ್ತ್ವಗ್ನಿಹೋತ್ರಿಣಃ ।
ಋತವಃ ಪಿತರೋ ದೇವಾಃ ಶಾಸ್ತ್ರೇಽಸ್ಮಿನ್ನಿಶ್ಚಯೋ ಮತಃ ॥ ೭ ॥

---

ಅತ್ಯುಪಯುಕ್ತಗಳಾದ ವಸಂತಾದಿ ಷಟ್ ಋತುಗಳನ್ನೂ ತದಭಿಮಾನ ದೇವತೆಗಳನ್ನೂ ಸೃಷ್ಟಿಸಿದನು. ಅವರನ್ನೇ ಪಿತೃಗಳೆಂದು ಕರೆಯುತ್ತಾರೆ. ಶಾಸ್ತ್ರದಲ್ಲಿ ಪಿತೃಗಳು, ಋತುಗಳು, ದೇವತೆಗಳು ಎಂದು ಪರ್ಯಾಯನಾಮಗಳಾಗಿವೆಯೆಂದು ಉಕ್ತವಾಗಿದೆ. ಒಬ್ಬರಿಗೆ ಈ ಮೂರು ನಾಮಗಳೂ ಪ್ರಖ್ಯಾತವಾಗಿವೆ.

೫. ಭೂತಭವಿಷ್ಯದ್ಮನ್ವಂತರಗಳಂತೆಯೇ ಮಂಗಳಕರವಾದ ಈ ಸ್ವಾಯಂಭುವಮನ್ವಂತರದಲ್ಲಿಯೂ ಕೂಡ ಪೂರ್ವದಲ್ಲಿ ಉತ್ಪನ್ನರಾದ ದೇವತೆಗಳೇ ಪುನಃ ಉತ್ಪನ್ನರಾಗುವರು.

೬. ಆ ದೇವತೆಗಳು ಅಗ್ನಿಷ್ವಾತ್ತರು, ಬರ್ಹಿಷದರು ಎಂದು ಪ್ರಖ್ಯಾತರಾಗಿರುವರು. ಅವರಲ್ಲಿ ಅಗ್ನ್ಯಾಧಾನಪೂರ್ವಕವಾಗಿ ಯಾಗವನ್ನು ಮಾಡದೇ ಕೇವಲ ಗೃಹಸ್ಥರಾಗಿರತಕ್ಕ ಅನಾಹಿತಾಗ್ನಿಗಳಾದ ಪಿತೃಗಳಿಗೆ ಅಗ್ನಿಷ್ವಾತ್ತ ಪಿತೃಗಳೆಂದು ನಾಮವು ಪ್ರಸಿದ್ಧವಾಗಿದೆ.

೭. ಅಗ್ನಿಯನ್ನು ಆಧಾನಮಾಡಿ ಜ್ಯೋತಿಷ್ಟೋಮಾದಿ ಯಾಗವನ್ನು ಮಾಡಿ ಸೋಮಪಾನವನ್ನು ಮಾಡಿದವರೂ ಗೃಹಸ್ಥಾಶ್ರಮಿಗಳೂ ಅಗ್ನಿಹೋತ್ರಿಗಳೂ ಆದ ಪಿತೃಗಳಿಗೆ ಬರ್ಹಿಷದರೆಂಬ ನಾಮವು ಪ್ರಾಪ್ತವಾಗಿದೆ. ಹೀಗೆ ಪಿತೃದೇವತೆಗಳು ಋತುಗಳು ಪಿತೃಗಳು ದೇವತೆಗಳೆಂದೂ ಮೂರು ಪ್ರಕಾರರಾಗಿರುವರೆಂದು ಶಾಸ್ತ್ರದಲ್ಲಿ ಉಕ್ತವಾಗಿದೆ.

ಮಧುಮಾಧವೌ ರಸೌ ಜ್ಞೇಯೌ ಶುಚಿಶುಕ್ರೌ ತು ಶುಷ್ಮಿಣೌ ।
ನಭಶ್ಚೈವ ನಭಸ್ಯಶ್ಚ ಜೀವಾವೇತಾವುದಾಹೃತೌ ॥ ೮ ॥

ಇಷಶ್ಚೈವ ತಥೋರ್ಜಶ್ಚ ಸುಧಾವಂತಾವುದಾಹೃತೌ ।
ಸಹಶ್ಚೈವ ಸಹಸ್ಯಶ್ಚ ಮನ್ಯುಮಂತೌ ತು ತೌ ಸ್ಮೃತೌ ।
ತಪಶ್ಚೈವ ತಪಸ್ಯಶ್ಚ ಘೋರಾವೇತೌ ತು ಶೈಶಿರೌ ॥ ೯ ॥

ಕಾಲಾವಸ್ಥಾಸ್ತು ಷಟ್ ತೇಷಾಮ್ಮಾಸಾಖ್ಯಾ ವೈ ವ್ಯವಸ್ಥಿತಾಃ ।
ತ ಇಮೇ ಋತವಃ ಪ್ರೋಕ್ತಾಶ್ಚೇತನಾಚೇತನಾಸ್ತು ವೈ ॥ ೧೦ ॥

ಋತವೋ ಬ್ರಹ್ಮಣಃ ಪುತ್ರಾ ವಿಜ್ಞೇಯಾಸ್ತೇsಭಿಮಾನಿನಃ ।
ಮಾಸಾರ್ಧಮಾಸಸ್ಥಾನೇಷು ಸ್ಥಾನಂ ಚ ಋತವೋರ್ತವಾಃ ॥ ೧೧ ॥

---

೮. ಚೈತ್ರವೈಶಾಖಗಳಿಗೆ ರಸವೆಂದೂ, ಜ್ಯೇಷ್ಠಾಷಾಢಗಳಿಗೆ ಅಗ್ನಿಯೆಂದೂ ಶ್ರಾವಣಭಾದ್ರಪದಗಳಿಗೆ ಜೀವವೆಂದೂ ಸಂಜ್ಞೆಯು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.

೯. ಆಶ್ವಯುಜ ಕಾರ್ತೀಕಗಳಿಗೆ ಸುಧಾವಂತನೆಂದೂ ಮಾರ್ಗಶಿರ ಪುಷ್ಯಗಳಿಗೆ ಮನ್ಯುಮಂತನೆಂದೂ ಮಾಘಫಾಲ್ಗುಣಗಳಿಗೆ ಘೋರವೆಂದೂ ಸಂಜ್ಞೆಗಳು ಉಂಟಾಗಿವೆ

೧೦. ಈ ಮಾಸಗಳಿಗೆ ಆರು ಋತುಗಳು ಇರುತ್ತವೆಯೆಂಬುದಾಗಿ ಕಾಲಜ್ಞರು ಹೇಳುವರು. ಹೀಗೆ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಬ್ರಹ್ಮಪುತ್ರರಾದ ಋತುಗಳು ಪ್ರಪಂಚದಲ್ಲಿರುವ ಚೇತನಾಚೇತನಾತ್ಮಕವಾದ ಸಮಸ್ತ ಜಗತ್ತಿನಲ್ಲಿಯೂ ಅಭಿಮಾನವನ್ನು ಇಟ್ಟುಕೊಂಡಿರುತ್ತಾರೆ.

೧೧. ಬ್ರಹ್ಮಪುತ್ರರಾದ ಋತುಗಳು ಅಭಿಮಾನಿದೇವತೆಗಳೆಂದು ಪ್ರಖ್ಯಾತರಾಗಿರುವರು. ಆ ಋತುಗಳು ಮಾಸ ಅರ್ಧಮಾಸಗಳೆಂಬ ಸ್ಥಾನಗಳಲ್ಲಿ ವಿಶೇಷವಾದ ಅಭಿಮಾನವುಳ್ಳವರೆಂದು ಶಾಸ್ತ್ರದಲ್ಲಿ ಉಕ್ತವಾಗಿವೆ. ಮಾಸಗಳಿಗೆ ಆರ್ತವವೆಂಬ ನಾಮವು ಉಂಟಾಗಿದೆ.

ಸ್ಥಾನಾನಾಂ ವ್ಯತಿರೇಕೇಣ ಜ್ಞೇಯಾಃ ಸ್ಥಾನಾಭಿಮಾನಿನಃ ।
ಅಹೋರಾತ್ರಂ ಚ ಮಾಸಾಶ್ಚ ಋತವಶ್ಚಾಯನಾನಿ ಚ ॥ ೧೨ ॥

ಸಂವತ್ಸರಾಶ್ಚ ಸ್ಥಾನಾನಿ ಕಾಲಾವಸ್ಥಾಭಿಮಾನಿನಃ ।
ನಿಮೇಷಾಶ್ಚ ಕಲಾಃ ಕಾಷ್ಠಾ ಮುಹೂರ್ತಾ ವೈ ದಿನಕ್ಷಪಾಃ ॥ ೧೩ ॥

ಏತೇಷು ಸ್ಥಾನಿನೋ ಯೇ ತು ಕಾಲಾವಸ್ಥಾಸ್ವವಸ್ಥಿತಾಃ ।
ತನ್ಮಯತ್ವಾತ್ತದಾತ್ಮಾನಸ್ತಾನ್ ವಕ್ಷ್ಯಾಮಿ ನಿಬೋಧತ ॥ ೧೪ ॥

ಪರ್ವಾಣ್ಯಸ್ತಿಥಯಃ ಸಂಧ್ಯಾ ಪಕ್ಷಾ ಮಾಸಾರ್ಧಸಂಜ್ಞಿತಾಃ ।
ದ್ವಾವರ್ಧಮಾಸೌ ಮಾಸಸ್ತು ದ್ವೌ ಮಾಸಾವೃತುರುಚ್ಯತೇ ॥ ೧೫ ॥

ಋತುತ್ರಯಂಚಾಯನಂ ದ್ವೇ ಅಯನೇ ದಕ್ಷಿಣೋತ್ತರೇ ।
ಸಂವತ್ಸರಃ ಸುಮೇಕಸ್ತು ಸ್ಥಾನಾನ್ಯೇತಾನಿ ಸ್ಥಾನಿನಾಂ ॥ ೧೬ ॥

---

೧೨. ಅಹೋರಾತ್ರ್ಯಾದಿ ಕಾಲಕ್ಕಿಂತಲೂ (ಸ್ಥಾನಕ್ಕಿಂತಲೂ) ಸ್ಥಾನಾಭಿಮಾನಿದೇವತೆಗಳು ಬೇರೆಯಾಗಿರುವರು. ಆ ಸ್ಥಾನಗಳು ಅಹಸ್ಸು, ರಾತ್ರಿ, ಮಾಸ, ಋತು, ಅಯನ, ಸಂವತ್ಸರ ಇವುಗಳಾಗಿವೆ. ಇವುಗಳಿಗೆ ಅಭಿಮಾನಿಗಳು ಋತುನಾಮಕದೇವತೆಗಳಾಗಿರುವರು.

೧೩. ನಿಮೇಷ, ಕಾಲ, ಕಾಷ್ಠ, ಮುಹೂರ್ತ, ದಿನ, ರಾತ್ರಿ ಇವು ಕಾಲ ವಾಚಕಗಳು.

೧೪. ಇವುಗಳಲ್ಲಿ ಸ್ಥಾನಿಗಳಾಗಿಯೂ ಅಭಿಮಾನಿಗಳಾಗಿಯೂ ಯಾರು ಇರುತ್ತಾರೆಯೋ ಅವರೂ ಕೂಡ ಆ ರೂಪರಾಗಿರುವುದರಿಂದ ಅವರ ವಿಷಯಗಳನ್ನು ತಿಳಿಸುವೆನು ಕೇಳಿ ಎಂದನು.

೧೫–೧೬. ಪರ್ವತಿಥಿಗಳು ಯಾವುವೆಂದರೆ ಸಂಧ್ಯಾ, ಪಕ್ಷ, ಮಾಸ, ಋತು, ಅಯನ ಮತ್ತು ಸಂವತ್ಸರ ಇವು. ಇವುಗಳು ಅಭಿಮಾನಿದೇವತೆಗಳಿಗೆ ವಿಶೇಷಾಭಿಮಾನಿಯಾದ ಸ್ಥಾನಗಳಾಗಿವೆ. ಎರಡು ಪಕ್ಷಗಳಿಗೆ ಒಂದು ಮಾಸವೆಂದೂ ಎರಡು ಮಾಸಗಳಿಗೆ ಒಂದು ಋತುವೆಂದೂ ಮೂರು ಋತುಗಳಿಗೆ ಒಂದು ಅಯನವೆಂದೂ ದಕ್ಷಿಣೋತ್ತರಗಳೆಂಬ ಎರಡು ಅಯನಗಳಿಗೆ ಸಂವತ್ಸರವೆಂದೂ ಸಂಜ್ಞೆಯು ಉಂಟಾಗಿದೆ. ಇವು ಅಭಿಮಾನಿದೇವತೆಗಳಿಗೆ ಸ್ಥಾನಗಳಾಗಿವೆ.

ಋತವಃ ಸುಮೇಕಪುತ್ರಾ ವಿಜ್ಞೇಯಾ ಹ್ಯಷ್ಟಧಾತು ಷಟ್ ।
ಋತುಪುತ್ರಾಃ ಸ್ಮೃತಾಃ ಪಂಚ ಪ್ರಜಾಸ್ತ್ವಾರ್ತವಲಕ್ಷಣಾಃ ॥ ೧೭ ॥

ಯಸ್ಮಾಚ್ಚೈವಾರ್ತವೇಯಾಸ್ತು ಜಾಯಂತೇ ಸ್ಥಾಣುಜಂಗಮಾಃ ।
ಆರ್ತವಾಃ ಪಿತರಶ್ಚೈವ ಋತವಶ್ಚ ಪಿತಾಮಹಾಃ ॥ ೧೮ ॥

ಸುಮೇಕಾತ್ತು ಪ್ರಸೂಯಂತೇ ಮ್ರಿಯಂತೇ ಚ ಪ್ರಜಾತಯಃ ।
ತಸ್ಮಾತ್ ಸ್ಮೃತಃ ಪ್ರಜಾನಾಂ ವೈ ಸುಮೇಕಃ ಪ್ರಪಿತಾಮಹಃ ॥ ೧೯ ॥

ಸ್ಥಾನೇಷು ಸ್ಥಾನಿನೋ ಹ್ಯೇತೇ ಸ್ಥಾನಾತ್ಮಾನಃ ಪ್ರಕೀರ್ತಿತಾಃ ।
ತದಾಖ್ಯಾಸ್ತನ್ಮಯತ್ವಾಚ್ಚ ತದಾತ್ಮಾನಶ್ಚ ತೇ ಸ್ಮೃತಾಃ ॥ ೨೦ ॥

ಪ್ರಜಾಪತಿಃ ಸ್ಮೃತೋ ಯಸ್ತು ಸ ತು ಸಂವತ್ಸರೋ ಮತಃ ।
ಸಂವತ್ಸರಃ ಸ್ಮೃತೋ ಹ್ಯಗ್ನಿಃ ಋತಮಿತ್ಯುಚ್ಯತೇ ದ್ವಿಜೈಃ ॥ ೨೧ ॥

---

೧೭. ಈ ಆರು ಋತುಗಳೂ ಸುಮೇಕನ ಪುತ್ರರಾಗಿರುವರು. ಆ ಋತುಗಳಿಗೆ ಋತುಲಕ್ಷಣಗಳಿಂದ ಕೂಡಿದ ಆರುಜನ ಮಕ್ಕಳಿರುವರು.

೧೮. ಸ್ಥಾವರಜಂಗಮರೂಪವಾದ ಜಗತ್ತೆಲ್ಲವೂ ಋತುಗಳಿಂದ ಜನ್ಯಗಳಾಗಿವೆ. ಇದರಿಂದ ಋತುಪುತ್ರರಾದ ಐವರು ಪಿತೃಗಳಾಗಿಯೂ ಋತುಗಳು ತಾತಂದಿರಾಗಿಯೂ ಇರುವರು.

೧೯. ಹೀಗೆ ಸುಮೇಕನಿಗೆ ಅನೇಕ ಪ್ರಜೆಗಳು ಹುಟ್ಟಿ ಮೃತರಾದರು. ಆದುದರಿಂದ ಜನಿಸಿದ ಪ್ರಜೆಗಳಿಗೆ ಸುಮೇಕನು ಪ್ರಪಿತಾಮಹನಾಗಿರುವನು. ಅಂದರೆ ಮುತ್ತಾತನಾಗಿರುವನು.

೨೦. ಆ ಸ್ಥಾನಾಭಿಮಾನಿದೇವತೆಗಳು ಆಯಾ ಸ್ಥಾನಗಳಲ್ಲಿ ತಂತಮ್ಮ ಸ್ಥಾನರೂಪರಾಗಿಯೇ ಇರುವರು. ಆಶ್ರಯಿಗಳು, ಆಶ್ರಯಸ್ವರೂಪರಾಗಿಯೇ ಇರುವರು.

೨೧. ಯಾವನಿಗೆ ಪ್ರಜಾಪತಿಯೆಂದು ನಾಮವಿದೆಯೋ ಅವನೇ ಸಂವತ್ಸರನಾಮಕನಾಗಿರುವನು. ಅವನನ್ನೇ ಬ್ರಾಹ್ಮಣರು ಅಗ್ನಿಯೆಂಬುದಾಗಿಯೂ ಋತವೆಂಬುದಾಗಿಯೂ ಕರೆಯುತ್ತಾರೆ.

ಋತಾತ್ತು ಋತವೋ ಯಸ್ಮಾಜ್ಜಜ್ಞಿರೇ ಋತವಸ್ತತಃ ।
ಮಾಸಾಃ ಷಡೃತವೋ ಜ್ಞೇಯಾಸ್ತೇಷಾಂ ಪಂಚಾರ್ತವಾಃ ಸುತಾಃ ॥ ೨೨ ॥

ದ್ವಿಪದಾಂ ಚತುಷ್ಪದಾಂಚೈವ ಪಕ್ಷಿಸಂಸರ್ಪತಾಮಪಿ ।
ಸ್ಥಾವರಾಣಾಂ ಚ ಪಂಚಾನಾಂ ಪುಷ್ಪಂ ಕಾಲಾರ್ತವಂ ಸ್ಮೃತಂ ॥ ೨೩ ॥

ಋತುತ್ವಮಾರ್ತವತ್ವಂ ಚ ಪಿತೃತ್ವಂ ಚ ಪ್ರಕೀರ್ತಿತಂ ।
ಇತ್ಯೇತೇ ಪಿತರೋ ಜ್ಞೇಯಾ ಋತವಶ್ಚಾರ್ತವಾಶ್ಚ ಯೇ ॥ ೨೪ ॥

ಸರ್ವಭೂತಾನಿ ತೇಭ್ಯೋಽಥ ಋತುಕಾಲಾದ್ವಿಜಜ್ಞಿರೇ ।
ತಸ್ಮಾದೇತೇಽಪಿ ಪಿತರ ಆರ್ತವಾ ಇತಿ ನಃ ಶ್ರುತಂ ॥ ೨೫ ॥

ಮನ್ವಂತರೇಷು ಸರ್ವೇಷು ಸ್ಥಿತಾಃ ಕಾಲಾಭಿಮಾನಿನಃ ।
ಸ್ಥಾನಾಭಿಮಾನಿನೋ ಹ್ಯೇತೇ ತಿಷ್ಠಂತೀಹ ಪ್ರಸಂಯಮಾತ್ ॥ ೨೬ ॥

---

೨೨. ಋತುನಾಮಕ ಪಿತೃದೇವನಿಂದ ಷಡೃತುಗಳು ಜನಿಸಿರುವುದರಿಂದ ಆ ಪುತ್ರರಿಗೂ ತಂದೆಯ ನಾಮವೇ ಪ್ರಾಪ್ತವಾಗಿದೆ. ಹೀಗೆ ಆರು ಋತುಗಳೂ ಹನ್ನೆರಡು ಮಾಸಗಳೂ ಅವರಿಗೆ ಐದುಜನ ಆರ್ತನಾಮಕಪುತ್ರರೂ ಜನಿಸಿದರು.

೨೩. ಇವರಿಗೆ ದ್ವಿಪಾದ ಚತುಷ್ಪಾದ ಪ್ರಾಣಿಗಳೂ ಪಕ್ಷಿಗಳೂ ಸರಿಯುವ ಪ್ರಾಣಿಗಳೂ ಸರ್ಪಗಳೂ ಪಂಚವಿಧ ಸ್ಥಾವರವಸ್ತುಗಳೂ ಉದ್ಭವಿಸಿದುವು. ಇವುಗಳು ಕಾಲಾರ್ತವವೆಂಬುದಾಗಿಯೂ ಪುಷ್ಪವೆಂಬುದಾಗಿಯೂ ಪ್ರಖ್ಯಾತವಾಗಿರುವುವು.

೨೪. ಋತುಕಾಲವನ್ನನುಸರಿಸಿ ಸರ್ವಪ್ರಾಣಿಗಳ ಸೃಷ್ಟಿಯಾಗಿರುವುದರಿಂದ ಋತತ್ವ, ಆರ್ತವತ್ವ, ಪಿತೃತ್ವ, ಇವು ಮೂರು ಸಂಜ್ಞೆಯು ಪಿತೃದೇವತೆಗಳಿಗೆ ಪ್ರಾಪ್ತವಾಗಿದೆ.

೨೫. ಸಮಸ್ತ ಭೂತಗಳೂ ಋತುಕಾಲಗಳಿಂದಲೇ ಜನ್ಯಗಳಾಗಿವೆ. ಅವರು ಆದುದರಿಂದ ಈ ಋತುಕಾಲಗಳಿಗೂ ಕೂಡ ಪಿತೃಗಳೆಂಬ ನಾಮವು ಪ್ರಾಪ್ತವಾಗಿದೆ. ಅವರು ಆರ್ತವರೆಂದೂ ಪ್ರಖ್ಯಾತಿಗೊಂಡಿದ್ದಾರೆ.

೨೬. ಈ ಮೇಲೆ ನಿರೂಪಿಸಿರುವ ಕಾಲಾಭಿಮಾನಿಗಳೂ ಮತ್ತು ಸ್ಥಾನಾಭಿಮಾನಿಗಳೂ ಆದ ದೇವತೆಗಳೂ ಕೂಡ ಸರ್ವಮನ್ವಂತರಗಳಿಲ್ಲಿಯೂ ಜನಿಸಿ ತಮ್ಮ ಕಾರ್ಯಗಳನ್ನು ಮಾಡುತ್ತಾ ಪ್ರಲಯದವರೆಗೂ ಸ್ಥಾಯಿಯಾಗಿಯೂ ಪ್ರಸಿದ್ಧರಾಗಿಯೂ ಇರುವರು.

ಅಗ್ನಿಷ್ವಾತ್ತಾ ಬರ್ಹಿಷದಃ ಪಿತರೋ ದ್ವಿವಿಧಾಃ ಸ್ಮೃತಾಃ ।
ಜಜ್ಞಾತೇ ಚ ಪಿತೃಭ್ಯಸ್ತು ದ್ವೇ ಕನ್ಯೇ ಲೋಕವಿಶ್ರುತೇ ॥ ೨೭ ॥

ಮೇನಾ ಚ ಧಾರಿಣೀ ಚೈವ ಯಾಭ್ಯಾಂ ವಿಶ್ವಮಿದಂ ಧೃತಂ ।
ಪಿತರಸ್ತೇ ನಿಜೇ ಕನ್ಯೇ ಧರ್ಮಾರ್ಥಂ ಪ್ರಾದದುಃ ಶುಭೇ ॥
ತ ಉಭೇ ಬ್ರಹ್ಮವಾದಿನ್ಯೌ ಯೋಗಿನ್ಯೌ ಚೈವ ತೇ ಉಭೇ ॥ ೨೮ ॥

ಅಗ್ನಿಷ್ವಾತ್ತಾಸ್ತು ಯೇ ಪ್ರೋಕ್ತಾಸ್ತೇಷಾಂ ಮೇನಾ ತು ಮಾನಸೀ ।
ಧಾರಣೀ ಮಾನಸೀ ಚೈವ ಕನ್ಯಾ ಬರ್ಹಿಷದಾಂ ಸ್ಮೃತಾ ॥ ೨೯ ॥

ಮೇರೋಸ್ತು ಧಾರಣೀಂ ನಾಮ ಪತ್ನ್ಯರ್ಥಂ ವ್ಯಸೃಜನ್ ಶುಭಾಂ ।
ಪಿತರಸ್ತೇ ಬರ್ಹಿಷದಃ ಸ್ಮೃತಾ ಯೇ ಸೋಮಪೀಥಿನಃ ॥ ೩೦ ॥

ಅಗ್ನಿಷ್ವಾತ್ತಾಸ್ತು ತಾಂ ಮೇನಾಂ ಪತ್ನೀಂ ಹಿಮವತೇ ದದುಃ ।
ಸ್ಮೃತಾಸ್ತೇ ವೈ ತು ದೌಹಿತ್ರಾಸ್ತದ್ದೌಹಿತ್ರಾನ್ ನಿಬೋಧತ ॥ ೩೧ ॥

---

೨೭–೨೮. ಪಿತೃಗಳು ಅಗ್ನಿಷ್ವಾತ್ತರು, ಬರ್ಹಿಷದರು ಎಂದು ಎರಡು ವಿಧಗಳಾಗಿರುತ್ತಾರೆ. ಅಂತಹ ಪಿತೃಗಳಿಗೆ ಲೋಕವಿಖ್ಯಾತರಾದ ಮೇನೆ, ಧಾರಿಣಿಯೆಂಬ ಇಬ್ಬರು ಪುತ್ರಿಯರು ಜನಿಸಿದರು. ಅವರ ಸಂತಾನಗಳಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿದೆ. ಪಿತೃಗಳು ಮಂಗಳಾಂಗಿಯರಾದ ಆ ಮಕ್ಕಳನ್ನು ಧರ್ಮಾರ್ಥವಾಗಿ ಕನ್ಯಾದಾನಮಾಡಿದರು. ಅವರಿಬ್ಬರೂ ಬ್ರಹ್ಮಜ್ಞಾನಿಗಳೂ ಯೋಗಾಭ್ಯಾಸನಿರತರೂ ಆಗಿರುವರು.

೨೯. ಅಗ್ನಿಷ್ವಾತ್ತರು ಎಂಬುದಾಗಿ ಯಾರು ಹಿಂದೆ ನಿರೂಪಿಸಲ್ಪಟ್ಟರೋ ಅವರಿಗೆ ಮೇನೆಯು ಮಾನಸಿಕಪುತ್ರಿಯಾಗಿದ್ದಳು. ಬರ್ಹಿಷದರಿಗಾದರೋ ಧಾರಣೀ ದೇವಿಯು ಮಾನಸಕನ್ಯೆಯಾಗಿದ್ದಳು.

೩೦. ಸೋಮಪಾಯಿಗಳೂ ಬರ್ಹಿಷದರೂ ಆದ ಯಾವ ಪಿತೃಗಳು ಪ್ರಸಿದ್ಧರಾಗಿದ್ದರೋ ಅವರು ಕಲ್ಯಾಣಿಯಾದ ಧಾರಣಿಯನ್ನು ಮೇರುಪರ್ವತನಿಗೆ ಕೊಟ್ಟು ವಿವಾಹವನ್ನು ನೆರವೇರಿಸಿದರು.

೩೧. ಅಗ್ನಿಷ್ವಾತ್ತರಾದರೋ ಪ್ರಖ್ಯಾತಳಾದ ಮೇನಕೆಯನ್ನು ಹಿಮವಂತನಿಗೆ ಕೊಟ್ಟು ಲಗ್ನಮಾಡಿದರು. ಆ ಪಿತೃಗಳ ಮೊಮ್ಮಕ್ಕಳು ಲೋಕದಲ್ಲಿ ಪ್ರಸಿದ್ಧರಾಗಿರುವರು. ಅವರನ್ನು ನಿರೂಪಿಸುವೆನು ಕೇಳಿರೆಂದನು.

ಮೇನಾ ಹಿಮವತಃ ಪತ್ನೀ ಮೈನಾಕಂ ಸಾನ್ನಸೂಯುತ ।
ಗಂಗಾ ಸರಿದ್ವರಾ ಚೈವ ಪತ್ನೀ ಯಾ ಲವಣೋದಧೇಃ ॥
ಮೈನಾಕಸ್ಯಾನುಜಃ ಕ್ರೌಂಚಃ ಕ್ರೌಂಚದ್ವೀಪೋ ಯತಃ ಸ್ಮೃತಃ ॥ ೩೨ ॥

ಮೇರೋಸ್ತು ಧಾರಣೀ ಪತ್ನೀ ದಿವ್ಯೌಷಧಿಸಮನ್ವಿತಂ ।
ಮಂದರಂ ಸುಷುವೇ ಪುತ್ರಂ ತಿಸ್ರಃ ಕನ್ಯಾಶ್ಚ ವಿಶ್ರುತಾಃ ॥ ೩೩ ॥

ವೇಲಾ ಚ ನಿಯತಿಶ್ಚೈವ ತೃತೀಯಾ ಚಾಯತಿಃ ಪುನಃ ।
ಧಾತುಶ್ಚೈವಾಯತಿಃ ಪತ್ನೀ ವಿಧಾತುರ್ನಿಯತಿಃ ಸ್ಮೃತಾ ॥ ೩೪ ॥

ಸ್ವಾಯಂಭುವೇಽಂತರೇ ಪೂರ್ವಂ ತಯೋರ್ವೈ ಕೀರ್ತಿತಾಃ ಪ್ರಜಾಃ ।
ಸುಷುವೇ ಸಾಗರಾದ್ವೇಲಾ ಕನ್ಯಾಮೇಕಾಮನಿಂದಿತಾಂ ॥ ೩೫ ॥

---

೩೨. ಹಿಮವಂತನ ಪತ್ನಿಯಾದ ಮೇನಕಾದೇವಿಯು ಮೈನಾಕನೆಂಬ ಪುತ್ರನನ್ನು ಪಡೆದಳು. ಮತ್ತು ನದಿಗಳಲ್ಲಿ ಉತ್ತಮಳಾದ ಗಂಗೆಯನ್ನು ಪಡೆದು ಸಮುದ್ರರಾಜನಿಗೆ ಕೊಟ್ಟು ಲಗ್ನಮಾಡಿದನು. ಆ ಮೈನಾಕನ ತಮ್ಮನು ಕ್ರೌಂಚನು. ಅವನ ನಾಮದಿಂದಲೇ ಅವನು ಆಳಿದ ದ್ವೀಪವೂ ಕೂಡ ಕ್ರೌಂಚದ್ವೀಪವೆಂದು ಪ್ರಖ್ಯಾತವಾಗಿದೆ.

೩೩–೩೪ ಮೇರುಪರ್ವತನ ಪತ್ನಿಯಾದ ಧಾರಣೀದೇವಿಯು ದಿವ್ಯೌಷಧಿಗಳಿಗೆ ಆಶ್ರಯನಾದ ಮಂದರಪರ್ವತನೆಂಬ ಪುತ್ರನನ್ನೂ ವೇಲಾ, ನಿಯತಿ, ಆಯತಿ ಎಂದು ಪ್ರಖ್ಯಾತರಾದ ಮೂರುಜನ ಪುತ್ರಿಯರನ್ನೂ ಪಡೆದಳು. ತರುವಾಯ ಮೇರುಪುರುಷನು ಆಯತಿಯನ್ನು ಧಾತನಿಗೂ ನಿಯತಿ ಎಂಬುವಳನ್ನು ವಿಧಾತನೆಂಬುವನಿಗೂ ಕೊಟ್ಟು ವಿವಾಹಮಹೋತ್ಸವವನ್ನು ನೆರವೇರಿಸಿದನು.

೩೫. ಪೂರ್ವದ ಸ್ವಾಯಂಭುವಮನ್ವಂತರದಲ್ಲಿ ನಿಯತಿ ಮತ್ತು ಆಯತಿಯರ ಮಕ್ಕಳಿಂದ ಲೋಕವೆಲ್ಲವೂ ಪ್ರಖ್ಯಾತವಾಗಿತ್ತು. ಆ ವೇಲೆಯನ್ನು ಸಮುದ್ರರಾಜನಿಗೆ ಕೊಟ್ಟು ಲಗ್ನವಾಗಿತ್ತು. ಹೀಗೆ ವಿವಾಹಿತಳಾದ ವೇಲಾದೇವಿಯು ಸಮುದ್ರರಾಜನಿಂದ ನಿರ್ದೋಷಿಯಾದ ಕನ್ಯಾರತ್ನವನ್ನು ಪಡೆದಳು.

ಸಾವರ್ಣಿನಾ ಚ ಸಾಮುದ್ರೀ ಪತ್ನೀ ಪ್ರಾಚೀನಬರ್ಹಿಷಃ ।
ಸವರ್ಣಾ ಸಾಥ ಸಾಮುದ್ರೀ ದಶಪ್ರಾಚೀನಬರ್ಹಿಷಃ
ಸರ್ವೇ ಪ್ರಚೇತಸೋ ನಾಮ ಧನುರ್ವೇದಸ್ಯ ಪಾರಗಾಃ ॥ ೩೬ ॥

ತೇಷಾಂ ಸ್ವಾಯಂಭುವೋ ದಕ್ಷಃ ಪುತ್ರತ್ವೇ ಜಜ್ಞಿವಾನ್ ಪ್ರಭುಃ ।
ತ್ರ್ಯಂಬಕಸ್ಯಾಭಿಶಾಪೇನ ಚಾಕ್ಷುಷಸ್ಯಾಂತರೇ ಮನೋಃ ॥ ೩೭ ॥

ಏತಚ್ಛ್ರುತ್ವಾ ತತಃ ಸೂತಮಪೃಚ್ಛಚ್ಛಾಂಶಪಾಯನಃ ।
ಉತ್ಪನ್ನಃ ಸ ಕಥಂ ದಕ್ಷೋ ಹ್ಯಭಿಶಾಪಾದ್ಭವಸ್ಯ ತು ॥
ಚಾಕ್ಷುಷಸ್ಯಾನ್ವಯೇ ಪೂರ್ವಂ ತನ್ನಃ ಪ್ರಬ್ರೂಹಿ ಪೃಚ್ಛತಾಂ ॥ ೩೮ ॥

ಇತ್ಯುಕ್ತಃ ಕಥಯಾಮಾಸ ಸೂತೋ ದಕ್ಷಾಶ್ರಿತಾಂ ಕಥಾಂ ।
ಶಾಂಶಪಾಯನಮಾಮಂತ್ರ್ಯ ತ್ರ್ಯಂಬಕಾಚ್ಛಾಪಕಾರಣಂ ॥ ೩೯ ॥

---

೩೬. ಆ ಕುಮಾರಿಯ ನಾಮವು ಸವರ್ಣಾ ಮತ್ತು ಸಾಮುದ್ರೀ ಎಂಬುದಾಗಿತ್ತು. ಆಕೆಯನ್ನು ಪ್ರಾಚೀನಬರ್ಹಿಷನೆಂಬುವನಿಗೆ ಕೊಟ್ಟು ವಿವಾಹವು ನಡೆಯಿತು. ಅವರಿಗೆ ಹತ್ತು ಜನ ಮಕ್ಕಳು ಜನಿಸಿದರು ಅವರೂ ಕೂಡ ಪ್ರಚೇತಸರೆಂದು ಪ್ರಖ್ಯಾತರೂ ಧನುರ್ವಿದ್ಯಾಪಾರಂಗತರೂ ಆಗಿದ್ದರು.

೩೭. ಅವರಿಗೆ ಸ್ವಾಯಂಭುವಮನ್ವಂತರದಲ್ಲಿ ದಕ್ಷನೆಂಬ ಪುತ್ರನು ಹುಟ್ಟಿದನು. ಆ ದಕ್ಷಪ್ರಜಾಪತಿಯು ಈಶ್ವರನ ಶಾಪದಿಂದ ಚಾಕ್ಷುಷಮನ್ವಂತರದಲ್ಲಿ ಪ್ರಚೇತಸರ ಪುತ್ರನಾಗಿ ಜನಿಸಿದನು.

೩೮. ಈ ಮಾತನ್ನು ಕೇಳಿದ ಶಾಂಶಪಾಯನಮುನಿಯು ಸೂತಮಹರ್ಷಿಯನ್ನು ಕುರಿತು ದಕ್ಷಪ್ರಜಾಪತಿಯು ಈಶ್ವರನ ಶಾಪದಿಂದ ಹೇಗೆ ಪ್ರಚೇತಸರ ಪುತ್ರನಾಗಿ ಪೂರ್ವದ ಚಾಕ್ಷುಷಮನ್ವಂತರದಲ್ಲಿ ಜನಿಸಿದನು ತಿಳಿಸಬೇಕೆಂದು ಬೇಡಿಕೊಂಡನು.

೩೯. ಶಾಂಶಪಾಯನನು ಹೀಗೆ ಹೇಳಲಾಗಿ ಸೂತಮುನಿಯು ಮರ್ಯಾದಿಸಿ ದಕ್ಷಬ್ರಹ್ಮನಿಗೆ ಈಶ್ವರನಿಂದ ಶಾಪ ಪ್ರಾಪ್ತವಾಗಲು ಕಾರಣವನ್ನು ಪ್ರಸ್ತಾಪಿಸಿ ದಕ್ಷನ ಕಥೆಯನ್ನು ಸಂಪೂರ್ಣವಾಗಿ ಹೇಳಿದನು.

ದಕ್ಷಸ್ಯಾರ್ಷ ಸುತಾ ಹ್ಯಷ್ಟೌ ಕನ್ಯಾ ಯಾಃ ಕೀರ್ತಿತಾ ಮಯಾ ।
ಸ್ವೇಭ್ಯೋ ಗೃಹೇಭ್ಯೋ ಹ್ಯಾನಾಯ್ಯ ತಾಃ ಪಿತಾಭ್ಯರ್ಚಯದ್ಗೃಹೇ ॥
ತತಸ್ತ್ವಭ್ಯರ್ಚಿತಾಃ ಸರ್ವಾ ನ್ಯವಸಂಸ್ತಾಃ ಪಿತುರ್ಗೃಹೇ ॥ ೪೦ ॥

ತಾಸಾಂ ಜ್ಯೇಷ್ಠಾ ಸತೀ ನಾಮ ಪತ್ನೀ ಯಾ ತ್ರ್ಯಂಬಕಸ್ಯ ವೈ ।
ನಾಜುಹಾವಾತ್ಮಜಾಂ ತಾಂ ವೈ ದಕ್ಷೋ ರುದ್ರಮಭಿದ್ವಿಷನ್ ॥ ೪೧ ॥

ಅಕರೋತ್ಸ ನತಿಂ ದಕ್ಷೇ ನ ಕದಾಚಿನ್ಮಹೇಶ್ವರಃ ।
ಜಾಮಾತ ಶ್ವಶುರೇ ತಸ್ಮಿನ್ ಸ್ವಭಾವಾತ್ ತೇಜಸಿ ಸ್ಥಿತಃ ॥ ೪೨ ॥

ತತೋ ಜ್ಞಾತ್ವಾ ಸತೀ ಸರ್ವಾಃ ಸ್ವಸ್ರಃ ಪ್ರಾಪ್ತಾಃ ಪಿತುರ್ಗೃಹಂ ।
ಜಗಾಮ ಸಾಪ್ಯನಾಹೂತಾ ಸತೀ ತತ್ ಸ್ವಂ ಪಿತುರ್ಗೃಹಂ ॥ ೪೩ ॥

---

೪೦. ದಕ್ಷಬ್ರಹ್ಮನಿಗೆ ಎಂಟು ಜನ ಹೆಣ್ಣುಮಕ್ಕಳಿದ್ದರೆಂದು ನಾನು ಪೂರ್ವದಲ್ಲಿಯೇ ನಿಮಗೆ ತಿಳಿಸಿರುತ್ತೇನೆಯಲ್ಲವೇ ? ಅವನು ಆ ಮಕ್ಕಳನ್ನು ಅವರವರ ಪತಿಗಳ ಅನುಮತಿಯಿಂದ ತನ್ನ ಮನೆಗೆ ಕರೆಕಳಿಸಿ ಮರ್ಯಾದಿಸಿದನು. ಹೀಗೆ ಸತ್ಕರಿಸಲ್ಪಟ್ಟ ಆ ಮಕ್ಕಳು ತಂದೆಯ ಮನೆಯಲ್ಲಿ ಸುಖವಾಗಿದ್ದರು.

೪೧. ದಕ್ಷನು ಇಂಥ ಉತ್ಸವಕಾಲದಲ್ಲಿಯೂ ಕೂಡ ಈಶ್ವರನ ಮೇಲಿನ ಕೋಪದಿಂದ ಪುತ್ರಿಯಾದ ಸತೀದೇವಿಯನ್ನು ಕರೆಯಲಿಲ್ಲ. ರುದ್ರದೇವನ ಮೇಲಿನ ಕೋಪದಿಂದ ಪುತ್ರಿಯನ್ನು ಉದಾಸೀನಮಾಡಿದನು.

೪೨. ದಕ್ಷನಿಗೆ ಈಶ್ವರನ ಮೇಲೆ ಕೋಪಕ್ಕೆ ಕಾರಣವೇನೆಂದರೆ ಸಹಜವಾಗಿ ಮಹಾತೇಜಸ್ವಿಯೂ ಲೋಕೇಶನೂ ಆದ ರುದ್ರದೇವನು ತನ್ನ ಮಾವನಾದ ದಕ್ಷನಿಗೆ ವಿಶೇಷ ಗೌರವವನ್ನೂ ನಮಸ್ಕಾರವನ್ನೂ ಮಾಡುತ್ತಿರಲಿಲ್ಲ.

೪೩. ಅನಂತರ ಸತೀದೇವಿಯು ಸಹೋದರಿಯರೆಲ್ಲರೂ ಉತ್ಸವಕ್ಕಾಗಿ ತಂದೆಯ ಮನೆಗೆ ಹೋಗಿದ್ದಾರೆಂದು ತಿಳಿದು ಕರೆಯದಿದ್ದರೂ ತಾನೂ ಕೂಡ ತಂದೆಯ ಮನೆಗೆ ಹೋದಳು.

ತತೋಽಬ್ರವೀತ್ ಸಾ ಪಿತರಂ ದೇವೀ ಕ್ರೋಧಾದಮರ್ಷಿತಾ ।
ಯವೀಯಸೀಭ್ಯೋ ಜ್ಯಾಯಸೀಂ ಕಿಂ ತು ಪೂಜಾಮಿಮಾಂ ಪ್ರಭೋ ॥
ಅಸಮ್ಮತಾಮವಜ್ಞಾಯ ಕೃತವಾನಸಿ ಗರ್ಹಿತಾಂ ॥ ೪೪ ॥

ಅಹಂ ಜ್ಯೇಷ್ಠಾ ವರಿಷ್ಠಾ ಹಿ ನ ತ್ವಸತ್ಕರ್ತುಮರ್ಹಸಿ ।
ಏವಮುಕ್ತೋಽಬ್ರವೀದೇನಾಂ ದಕ್ಷಃ ಸ್ವಂ ರಕ್ತಲೋಚನಃ ॥ ೪೫ ॥

ತ್ವಂ ತು ಶ್ರೇಷ್ಠಾ ವರಿಷ್ಠಾ ಚ ಪೂಜ್ಯಾ ಬಾಲಾ ಸದಾ ಮಮ ।
ತಾಸಾಂ ಯೇ ಚೈವ ಭರ್ತಾರಸ್ತೇ ಮೇ ಬಹುಮತಾಃ ಸದಾ ॥ ೪೬ ॥

ಬ್ರಹ್ಮಿಷ್ಠಾಶ್ಚ ತಪಿಷ್ಠಾಶ್ಚ ಮಹಾಯೋಗಾಃ ಸುಧಾರ್ಮಿಕಾಃ ।
ಗುಣೈಶ್ಚೈವಾಧಿಕಾಃ ಶ್ಲಾಘ್ಯಾಃ ಸರ್ವೇ ತೇ ತ್ರ್ಯಂಬಕಾತ್ಸತಿ ॥ ೪೭ ॥

ವಸಿಷ್ಠೋಽತ್ರಿಃ ಪುಲಸ್ತ್ಯಶ್ಚ ಅಂಗಿರಾಃ ಪುಲಹಃ ಕ್ರತುಃ ।
ಭೃಗುರ್ಮರೀಚಿಶ್ಚ ತಥಾ ಶ್ರೇಷ್ಠಾ ಜಾಮಾತರೋ ಮಮ ॥ ೪೮ ॥

---

೪೪ ಅನಂತರ ಸತೀದೇವಿಯು ಕೋಪಗೊಂಡು ತಂದೆಯನ್ನು ಕುರಿತು ಎಲೈ ಪೂಜ್ಯನಾದ ತಂದೆಯೇ, ತಾವು ಹಿರಿಯಮಗಳಾದ ನನ್ನನ್ನು ಬಿಟ್ಟು ಕಿರಿಯವರಾದ ನನ್ನ ಸಹೋದರಿಯರಿಗೆ ಮಾತ್ರ ಹೀಗೆ ಮರ್ಯಾದೆಯನ್ನು ಮಾಡುವುದು ಉಚಿತವೇ ? ಇದರಿಂದ ನಾನು ಅನರ್ಹಳೂ ಅಯೋಗ್ಯಳೂ ಎಂದು ತೋರುವುದಿಲ್ಲವೇ ? ಅಗ್ರಜಳಾದ ನನಗಲ್ಲವೇ ಮೊದಲು ಆಹ್ವಾನಮಾಡಬೇಕು. ಹಿರಿಯವರಾದ ತಾವು ಮಕ್ಕಳಲ್ಲಿ ಹೀಗೆ ವೈಷಮ್ಯವನ್ನು ತೋರಿಸುವುದು ಉಚಿತವಲ್ಲವೆಂದಳು.

೪೫. ಅನಂತರ ದಕ್ಷನು ಆ ಸತೀದೇವಿಯ ಮಾತನ್ನು ಕೇಳಿ ಸಿಟ್ಟಿನಿಂದ ಕಣ್ಣುಗಳನ್ನು ಕೆಂಪಗೆಮಾಡಿಕೊಂಡು ಸತಿಯನ್ನು ನೋಡಿ ಇಂತೆಂದನು.

೪೬–೪೭ ಎಲೈ ಸತಿಯೇ, ನೀನು ಹಿರಿಯವಳೂ ಶ್ರೇಷ್ಠಳೂ ಪೂಜ್ಯಳೂ ಆಗಿರುವುದು ನಿಜ. ಆದರೆ ನಿನ್ನ ತಂಗಿಯರು ನಿನಗಿಂತ ಕಿರಿಯವರಾಗಿದ್ದರೂ ಕೂಡ ಅವರ ಪತಿಗಳು ನನಗೆ ಪ್ರಿಯರೂ ಸಮ್ಮತರೂ ಬ್ರಹ್ಮಜ್ಞಾನಿಗಳೂ ತಪಸ್ವಿಗಳೂ ಮಹಾಯೋಗಿಗಳೂ ಅತ್ಯಂತ ಧರ್ಮಿಷ್ಠರೂ ಗುಣಾಧಿಕರೂ ಆಗಿರುತ್ತಾರೆ. ಆದುದರಿಂದ ಅವರೆಲ್ಲರೂ ನಿನ್ನ ಪತಿಯಾದ ಈಶ್ವರನಿಗಿಂತಲೂ ಪೂಜ್ಯರೂ ಮರ್ಯಾದಾರ್ಹರೂ ಆಗಿರುತ್ತಾರೆ ಎಂದನು.

೪೮. ವಸಿಷ್ಠ, ಅತ್ರಿ, ಪುಲಸ್ತ್ಯ, ಪುಲಹ, ಅಂಗಿರಸ, ಕ್ರತು, ಭೃಗು ಮತ್ತು ಮರೀಚಿ ಇವರು ನನಗೆ ಮರ್ಯಾದಾರ್ಹರಾದ ಅಳಿಯಂದಿರಾಗಿರುವರು.

ತಸ್ಮಾತ್ತ್ವಂ ಸ ಚ ತೇ ಶರ್ವೋ ಭಕ್ತಾ ಚಾಸಿ ಹಿ ತಂ ಸದಾ ।
ತೇನ ತ್ವಾಂ ನ ಬುಭೂಷಾಮಿ ಪ್ರತಿಕೂಲೋ ಹಿ ಮೇ ಭವಃ ॥ ೪೯ ॥

ಇತ್ಯುವಾಚ ತದಾ ದಕ್ಷಃ ಸಂಪ್ರಮೂಢೇನ ಚೇತಸಾ ।
ಶಾಪಾರ್ಥಮಾತ್ಮನಶ್ಚೈವ ಯೇ ಚೋಕ್ತಾಃ ಪರಮರ್ಷಯಃ ॥ ೫೦ ॥

ತಥೋಕ್ತಾ ಪಿತರಂ ಸಾ ವೈ ಕ್ರುದ್ಧಾ ದೇವೀದಮಬ್ರವೀತ್ ।
ವಾಙ್ಮನಃ ಕರ್ಮಭಿರ್ಯಸ್ಮಾದದುಷ್ಟಾಂ ಮಾಂ ವಿಗರ್ಹಸೇ ॥
ತಸ್ಮಾತ್ತ್ಯಜಾಮ್ಯಹಂ ದೇಹಮಿದಂ ತಾತ ತವಾತ್ಮಜಂ ॥ ೫೧ ॥

ತತಸ್ತೇನಾವಮಾನೇನ ಸತೀ ದುಃಖಾದಮರ್ಷಿತಾ ।
ಅಬ್ರವೀದ್ವಚನಂ ದೇವೀ ನಮಸ್ಕೃತ್ಯ ಮಹೇಶ್ವರಂ ॥ ೫೨ ॥

---

೪೯. ಎಲೌ ಸತಿಯೇ, ನಿನ್ನ ಪತಿಯಾದ ಈಶ್ವರನಾದರೋ ದುರಭಿಮಾನಿಯೂ ಅಹಂಕಾರಿಯೂ ಆಗಿ ನನಗೆ ಸ್ವಲ್ಪವೂ ಗೌರವವನ್ನು ಕೊಡುವುದಿಲ್ಲ. ಇಂತಹ ಪತಿಗೆ ನೀನು ಪ್ರಿಯಳಾಗಿರುತ್ತೀಯೇ ನೀನಾದರೂ ನಿನ್ನ ಪತಿಗೆ ಬುದ್ಧಿವಾದವನ್ನು ಹೇಳಬಾರದೇ? ಅವನು ಸದಾ ನನಗೆ ವಿರೋಧಿಯಾಗಿರುವುದರಿಂದ ನನಗೆ ನಿನ್ನಲ್ಲಿ ಪ್ರೀತಿಯಿಲ್ಲವೆಂದನು

೫೦. ಹೀಗೆ ದಕ್ಷನು ವಿಚಾರಹೀನನೂ, ವಿವೇಕರಹಿತನೂ ಆಗಿ, ತನಗೆ ಮಾತ್ರವಲ್ಲದೆ ಅಳಿಯಂದಿರಾದ ಮಹರ್ಷಿಗಳಿಗೂ ಕೂಡ ಶಾಪ ಪ್ರಾಪ್ತಿಯಾಗುವಂತೆ ಯೋಚಿಸದೆ (ಇಂತೆಂದನು) ಹೇಳಿದನು.

೫೧. ಹೀಗೆ ದಕ್ಷನು ನುಡಿಯಲು ಕುಪಿತಳಾದ ಸತೀ ದೇವಿಯು, ಮನೋವಾಕ್ಕಾಯ ಕರ್ಮಗಳಿಂದ ಪರಿಶುದ್ಧಳೂ, ನಿರ್ದೋಷಿಯೂ ಆದ ನನಗೆ ನಿಷ್ಕಾರಣವಾಗಿ ನೀವು ಅವಮಾನಮಾಡುವುದು ಸರಿಯಲ್ಲ, ಹೀಗೆ ಅವಮಾನಿತಳಾಗಿ ಬದುಕಿರುವುದಕ್ಕಿಂತಲೂ ತಮ್ಮಿಂದ ಪ್ರಾಪ್ತವಾದ ಈ ದೇಹವನ್ನು ತ್ಯಾಗಮಾಡುವುದೇ ಲೇಸು. ಎಂದು ತಂದೆಯಾದ ದಕ್ಷನಿಗೆ ಹೇಳಿದಳು.

೫೨ ಅನಂತರ ಸತೀದೇವಿಯು ಆ ಅವಮಾನದಿಂದ ದುಃಖಿತಳೂ ಕುಪಿತಳೂ ಆಗಿ, ಪರಮೇಶ್ವರನಿಗೆ ನಮಸ್ಕರಿಸಿ ಇಂತೆಂದಳು.

ಯತ್ರಾಹಮುಪಪತ್ಸ್ಯೇಹಂ ಪುನರ್ದೇಹೇನ ಭಾಸ್ವತಾ ।
ತತ್ರಾಪ್ಯಹಮಸಂಮೂಢಾ ಸಂಭೂತಾ ಧಾರ್ಮಿಕೀ ಪುನಃ ॥
ಗಚ್ಛೇಯಂ ಧರ್ಮಪತ್ನೀ ತ್ವಂ ತ್ರ್ಯಂಬಕಸ್ಯೈವ ಧರ್ಮತಃ ॥ ೫೩ ॥

ತತ್ರೈವಾಥ ಸಮಾಸೀನಾ ಯುಕ್ತಾತ್ಮಾನಂ ಸಮಾದಧೇ ।
ಧಾರಯಾಮಾಸ ಚಾಗ್ನೇಯೀಂ ಧಾರಣಾಂ ಮನಸಾತ್ಮನಃ ॥ ೫೪ ॥

ತತ ಆಗ್ನೇಯೀ ಸಮುತ್ಥೇನ ವಾಯುನಾ ಸಮುದೀರಿತಃ ।
ಸರ್ವಾಂಗೇಭ್ಯೋ ವಿನಿಃ ಸೃತ್ಯ ವಹ್ನಿರ್ಭಸ್ಮ ಚಕಾರತಾಂ ॥ ೫೫ ॥

ತದುಪಶ್ರುತ್ಯ ನಿಧನಂ ಸತ್ಯಾ ದೇವ್ಯೋಽಥ ಶೂಲಧೃಕ್ ।
ಸಂವಾದಂ ಚ ತಯೋರ್ಬುದ್ಧ್ವಾಯಾಥಾತಥ್ಯೇನ ಶಂಕರಃ ॥
ದಕ್ಷಸ್ಯಾಥ ಋಷೀಣಾಂ ಚ ಚುಕೋಪ ಭಗವಾನ್ ಪ್ರಭುಃ ॥ ೫೬ ॥

---

೫೩. ಎಲ್ಲಿ ನಾನು ಪ್ರಕಾಶಮಾನವಾದ ಶರೀರದಿಂದ ಜನಿಸುವೆನೋ ಅಲ್ಲಿಯೂ ಕೂಡ ಧಾರ್ಮಿಕ ಜನನವೂ ಈ ರೀತಿಯಾದ ಅಪಮಾನಕ್ಕೆ ಅವಿಷಯವೂ ಆಗಲಿ ಮತ್ತು ಧಾರ್ಮಿಕ ರೀತಿಯಲ್ಲಿ ಪರಮೇಶ್ವರನ ಧರ್ಮ ಪತ್ನಿತ್ವವೂ ಉಂಟಾಗಲಿ ಎಂದು ಹೇಳಿದಳು.

೫೪. ಸತೀದೇವಿಯು ಹೀಗೆ ಹೇಳಿ ಅಲ್ಲಿಯೇ ಸಮಾಧಾನ ಚಿತ್ತಳೂ, ಆಸನಾರೂಢಳೂ, ಯೋಗಾಸಕ್ತಳೂ ಆಗಿ ಮನಸ್ಸಿನಲ್ಲಿ ಅಗ್ನಿಯನ್ನು ಧಾರಣೆ ಮಾಡಿದಳು.

೫೫. ಅನಂತರ ಆಗ್ನೇಯ ಯೋಗದಿಂದ ಉಂಟಾದ ಅಗ್ನಿಯು ವಾಯುವಿನಿಂದ ಪ್ರೇರಿತವಾಗಿ ಆ ಸತೀ ದೇವಿಯನ್ನು ಸುಟ್ಟು ಭಸ್ಮವನ್ನಾಗಿ ಮಾಡಿತು.

೫೬. ಸತೀ ದೇವಿಯ ಸರ್ವಾಂಗಗಳಿಂದ ಸಂಭೂತವಾದ ಅಗ್ನಿಯು ಆಕೆಯನ್ನು ಭಸ್ಮಮಾಡಿತು. ಅನಂತರ ಶೂಲಪಾಣಿಯಾದ ಈಶ್ವರನು ಸತೀದಕ್ಷರಿಗೆ ನಡೆದ ಸಂವಾದವನ್ನೂ, ಅನಂತರ ಅವಮಾನದಿಂದ ದೇಹತ್ಯಾಗವನ್ನು ಮಾಡಿದ ಸತಿಯ ವೃತ್ತಾಂತವನ್ನೂ, ಕೇಳಿ ದಕ್ಷನ ಮೇಲೂ ಮಹರ್ಷಿಗಳ ಮೇಲೂ ಬಹಳವಾಗಿ ಕೋಪಮಾಡಿದನು.

ಯಸ್ಮಾದವಮತಾ ದಕ್ಷ ಮತ್ಕೃತೇ ನಾಮ ಸಾ ಸತೀ ।
ಪ್ರಶಸ್ತಾಶ್ಚೇತರಾಃ ಸರ್ವಾಃ ಸ್ವಸುತಾ ಭರ್ತೃಭಿಃ ಸಹ ॥ ೫೭ ॥

ತಸ್ಮಾದ್ವೈವಸ್ವತಂ ಪ್ರಾಪ್ಯ ಪುನರೇವ ಮಹರ್ಷಯಃ ।
ಉತ್ಪತ್ಸ್ಯಂತೇ ದ್ವಿತೀಯೇ ವೈ ಮಮ ಯಜ್ಞೇ ಹ್ಯಯೋನಿಜಾಃ ॥ ೫೮ ॥

ಹುತೇ ವೈ ಬ್ರಹ್ಮಣಾ ಶುಕ್ರೇ ಚಾಕ್ಷುಷಸ್ಯಾಂತರೇ ಮನೋಃ ।
ಅಭಿವ್ಯಾಹೃತ್ಯ ಚ ಋಷೀನ್ ದಕ್ಷಮಭ್ಯಗಮತ್ ಪುನಃ ॥ ೫೯ ॥

ಭವಿತಾ ಚಾಕ್ಷುಷೋ ರಾಜಾ ಚಾಕ್ಷುಷಸ್ಯ ಸಮನ್ವಯೇ ।
ಪ್ರಾಚೀನಬರ್ಹಿಷಃ ಪೌತ್ರಃ ಪುತ್ರಶ್ಚೈವ ಪ್ರಚೇತಸಃ ॥ ೬೦ ॥

ದಕ್ಷ ಇತ್ಯೇವ ನಾಮ್ನಾ ತ್ವಂ ಮಾರ್ಷಾಯಾಂ ಜನಯಿಷ್ಯಸಿ ।
ಕನ್ಯಾಯಾಂ ಶಾಖಿನಾಂಚೈವ ಪ್ರಾಪ್ತೇ ವೈ ಚಾಕ್ಷುಷೇಂತರೇ ॥ ೬೧ ॥

---

೫೭-೫೮. ಆಗ ಈಶ್ವರನು ಎಲೈ ದಕ್ಷನೇ ನನ್ನ ಮೇಲಿನ ಕೋಪದಿಂದ ಸಾಧ್ವೀಮಣಿಯಾದ ಸತೀ ದೇವಿಗೆ ಅವಮಾನವನ್ನೂ ಇತರ ಪುತ್ರಿಯರಿಗೆ ಮರ್ಯಾದೆಯನ್ನೂ ಮಾಡಿರುತ್ತೀಯೇ ನಮ್ಮಿಬ್ಬರನ್ನೂ ನಿಂದಿಸಿ ಉಳಿದ ಕನ್ನಿಕೆಯನ್ನೂ ಅವರ ಪತಿಗಳನ್ನೂ ಸತ್ಕರಿಸಿರುವುದರಿಂದ ಆ ಋಷಿಗಳು ವೈವಸ್ವತ ಮನ್ವಂತರದ ನನ್ನ ಎರಡನೆಯ ಯಜ್ಞದಲ್ಲಿ ಅಯೋನಿಜರಾಗಿ ಜನಿಸಲೆಂದು ಅವರಿಗೆ ಶಾಪವನ್ನು ಕೊಟ್ಟನು.

೫೯. ಅನಂತರ ಚಾಕ್ಷುಷ ಮನ್ವಂತರದಲ್ಲಿ ಬ್ರಹ್ಮದೇವನು ಶುಕ್ರೋದ್ದೇಶ್ಯವಾಗಿ ಯಾಗವನ್ನು ಮಾಡಲಾಗಿ ನಿನ್ನ ಅಳಯಿಂದರಾದ ಋಷಿಗಳೆಲ್ಲರೂ ಅಯೋನಿಜರಾಗಿ ಉದ್ಭವಿಸುವರೆಂದು ಶಪಿಸಿ, ಪುನಃ ಈಶನು ದಕ್ಷನಿಗೆ ಇಂತೆಂದನು.

೬೦-೬೧. ಎಲೆ ದಕ್ಷನೇ ನೀನೂ ಕೂಡ ಚಾಕ್ಷುಷ ಮನ್ವಂತರದಲ್ಲಿ ಆ ಮನುವಿನ ವಂಶದಲ್ಲಿ ಜನಿಸಿದ ಪ್ರಾಚೀನ ಬರ್ಹಿಷನ ಪೌತ್ರನೂ ಪ್ರಚೇತಸನ ಪುತ್ರನೂ ದಕ್ಷನಾಮಕನೂ ವೃಕ್ಷಗಳ ಕನ್ಯೆಯಾದ ಮಾರಿಷೆಗೆ ಪುತ್ರನೂ ಆಗಿ ಜನಿಸುವನಾಗು ಎಂದ ಶಾಪವನ್ನು ಕೊಟ್ಟನು.

॥ ದಕ್ಷ ಉವಾಚ ॥

ಅಹಂ ತತ್ರಾಪಿ ತೇ ವಿಘ್ನಮಾಚರಿಷ್ಯಾಮಿ ದುರ್ಮತೇ ।
ಧರ್ಮಾರ್ಥಕಾಮಯುಕ್ತೇಷು ಕರ್ಮಸ್ವಿಹ ಪುನಃ ಪುನಃ ॥ ೬೨ ॥

ಯಸ್ಮಾತ್ ತ್ವಂ ಮತ್ಕೃತೇ ಕ್ರೂರಮೃಷೀನ್ ವ್ಯಾಹೃತವಾನಸಿ ।
ತಸ್ಮಾತ್ತ್ವಾರ್ಧಂ ಸುರೈರ್ಯಜ್ಞೇ ನ ತ್ವಾ ಯಕ್ಷ್ಯಂತಿ ವೈ ದ್ವಿಜಾಃ ॥ ೬೩ ॥

ಹುತ್ವಾಹುತಿಂ ತತಃ ಕ್ರೂರಃ ಅಪಸ್ತ್ಯಕ್ಷ್ಯಂತಿ ಕರ್ಮಸು ।
ಇಹೈವ ವತ್ಸ್ಯಸಿ ತಥಾ ದಿವಂ ಹಿತ್ವಾ ಯುಗಕ್ಷಯಾತ್ ॥ ೬೪ ॥

---

೬೨. ದಕ್ಷ ಪ್ರಜಾಪತಿಯು ಇಂತೆಂದನು :—ಎಲೈ ದುರಭಿಮಾನಿಯಾದ ಈಶ್ವರನೇ ಆ ಜನ್ಮದಲ್ಲಿಯೂ ಕೂಡ ನಾನು ಧರ್ಮಾರ್ಥ ಕಾಮಗಳಿಂದ ಕೂಡಿರುವ ಆ ನಿನ್ನ ಯಜ್ಞ ಕರ್ಮಗಳಿಗೆ ಪದೇ ಪದೇ ವಿಘ್ನಕಾರಿಯಾಗುವೆನೆಂದು ದಕ್ಷನು ಈಶ್ವರನಿಗೆ ಹೇಳಿದನು.

೬೩. ಎಲೈ ಕ್ರೂರಿಯಾದ ಈಶ್ವರನೇ ನೀನು ನನ್ನ ಮೇಲಿನ ಕೋಪದಿಂದ ಜ್ಞಾನಿಗಳಾದ ಮಹರ್ಷಿಗಳಿಗೂ ಶಾಪವನ್ನು ಕೊಟ್ಟಿರುತ್ತೀಯೇ. ಇದರಿಂದ ಬ್ರಾಹ್ಮಣರು ದೇವತೋದ್ದೇಶ್ಯಕವಾಗಿ ಮಾಡತಕ್ಕ ಯಜ್ಞಗಳಲ್ಲಿ ದೇವತೆಗಳೊಡನೆ ನಿನಗೆ ಹವಿರ್ದಾನವು ಇಲ್ಲದೆಯೇ ಹೋಗಲಿ ಎಂದನು.

೬೪. ಒಂದು ವೇಳೆ ಯಾರಾದರೂ ತಿಳಿಯದೆ ಕ್ರೂರನಾದ ನಿನಗೆ ಆಹುತಿಯನ್ನು ಕೊಟ್ಟರೆ ಆ ಪ್ರಾಯಶ್ಚಿತ್ತಕ್ಕಾಗಿ, ಕರ್ಮಗಳನ್ನು ಮಾಡಿದನಂತರ ಜಲಸ್ಪರ್ಶ ಮಾಡಿ ಶುದ್ಧರಾಗಲಿ ಮತ್ತು ನೀನು ಪ್ರಲಯ ಕಾಲದವರೆಗೂ ದೇವಲೋಕಗಳಿಗೆ ಹೋಗದೆ ಈ ಲೋಕದಲ್ಲಿಯೇ ವಾಸಮಾಡುವನಾಗು ಎಂದು ಪ್ರತಿಶಾಪವನ್ನು ಕೊಟ್ಟನು.

॥ ರುದ್ರ ಉವಾಚ ॥

**ಸರ್ವೇಷಾಮೇವ ಲೋಕಾನಾಂ ಭೂಲೋಕಸ್ತ್ವಾದಿರುಚ್ಯತೇ ।**
**ತಮಹಂ ಧಾರಯಿಷ್ಯಾಮಿ ನಿದೇಶಾತ್ ಪರಮೇಷ್ಠಿನಃ ॥ ೬೫ ॥**

**ಅಸ್ಯಾಂ ಕ್ಷಿತೌ ವೃತಾ ಲೋಕಾಃ ಸರ್ವೇತಿಷ್ಠಂತಿ ಭಾಸ್ಕರಾಃ ।**
**ತಾನಹಂ ಧಾರಯಾಮೀಹ ಸತತಂ ನ ತವಾಜ್ಞಯಾ ॥ ೬೬ ॥**

**ಚಾತುರ್ವರ್ಣ್ಯಂ ಹಿ ದೇವಾನಾಂ ತೇ ಚಾಪ್ಯೇಕತ್ರ ಭುಂಜತೇ ।**
**ನಾಹಂ ತೈಃ ಸಹ ಭೋಕ್ಷ್ಯಾಮಿ ತತೋ ದಾಸ್ಯಂತಿ ತೇ ಪೃಥಕ್ ।**
**ತತೋ ದೇವೈಃ ಸ ತೈಃ ಸಾರ್ಧಂ ನೇಜ್ಯತೇ ಪೃಥಗಿಜ್ಯತೇ ॥ ೬೭ ॥**

**ತತೋಽಭಿವ್ಯಾಹೃತೋ ದಕ್ಷೋ ರುದ್ರೇಣಾಮಿತತೇಜಸಾ ।**
**ಸ್ವಾಯಂಭುವೇಂऽತರೇ ತ್ಯಕ್ತ್ವಾ ಉತ್ಪನ್ನೋ ಮಾನುಷೇಷ್ವಿಹ ॥ ೬೮ ॥**

---

೬೫-೬೬. ಈಶ್ವರನು ಹೇಳಿದನು:—ಎಲೈ ದಕ್ಷನೇ ಈ ಭೂಲೋಕವು ಸರ್ವಲೋಕಗಳಿಗೂ ಆದಿಯಾಗಿರುವುದು. ಬ್ರಹ್ಮನ ಇಷ್ಟದಂತೆ ಆ ಭೂಲೋಕವನ್ನು ನಾನು ಧರಿಸಿರುತ್ತೇನೆ. ಇಂತಹ ಭೂಲೋಕವನ್ನು ಸರ್ವಲೋಕಗಳೂ, ಸೂರ್ಯಾದಿಗಳೂ ಆವರಿಸಿಕೊಂಡಿರುತ್ತಾರೆ. ಅಂಥ ಸಮಸ್ತ ಲೋಕಗಳನ್ನೂ ನಾನು ಸರ್ವದಾ ಧರಿಸಿರುತ್ತೇನೆ. ನಿನ್ನ ಆಜ್ಞೆಯಿಂದ ನಾನು ಧರಿಸುವುದಿಲ್ಲವೆಂದು ಈಶ್ವರನು ದಕ್ಷನಿಗೆ ಹೇಳಿದನು.

೬೭. ದೇವತೆಗಳಲ್ಲಿ ನಾಲ್ಕು ವರ್ಣದವರೂ ಇರುವುದರಿಂದ ಅವರೆಲ್ಲರೂ ಸಾಂಕರ್ಯವನ್ನು ಹೊಂದಿ ಏಕತ್ರ ಭೋಜನ ಮಾಡುತ್ತಾರೆ. ಆದುದರಿಂದ ನಾನು ಅವರ ಸಂಗಡ ಭೋಜನ ಮಾಡುವುದಿಲ್ಲ ನನಗೆ ಪ್ರತ್ಯೇಕವಾಗಿ ವಿಪ್ರರು ಆಹುತಿಯನ್ನು ಕೊಡುತ್ತಾರೆ. ಎಂದು ಹೇಳಿದನು.

೬೮. ಹೀಗೆ ಮಹಾತೇಜಸ್ವಿಯಾದ ಈಶ್ವರನು ದಕ್ಷನನ್ನು ಕುರಿತು ಹೇಳಲಾಗಿ ಸ್ವಾಯಂಭುವಮನ್ವಂತರದಲ್ಲಿ ದಕ್ಷನು ಆ ದೇಹವನ್ನು ಬಿಟ್ಟು, ಚಾಕ್ಷುಷ ಮನ್ವಂತರದಲ್ಲಿ ಮನುಷ್ಯನಾಗಿ ಜನಿಸಿದನು.

ಜ್ಞಾತ್ವಾ ಗೃಹಪತಿಂ ದಕ್ಷಂ ಜ್ಞಾನಾಮೀಶ್ವರಂ ಪ್ರಭುಂ ।
ದಕ್ಷೋನಾಮ ಮಹಾಯಜ್ಞೈಃ ಸೋಽಯಜದ್ದೇವತೈಃ ಸಹ ॥ ೧೯ ॥

ಅಥ ದೇವೀ ಸತೀ ಯಾ ತು ಪ್ರಾಪ್ತೇ ವೈವಸ್ವತೇಂತರೇ ।
ಮೇನಾಯಾಂ ತಾಮುಮಾಂ ದೇವೀಂ ಜನಯಾಮಾಸ ಶೈಲರಾಟ್॥ ೨೦ ॥

ಸಾ ತು ದೇವೀ ಸತೀ ಪೂರ್ವಂ ತತಃ ಪಶ್ಚಾದುಮಾಽಭವತ್ ।
ಸಹವ್ರತಾ ಭವಸ್ಯೈಷಾ ನ ತಯಾ ಮುಚ್ಯತೇ ಭವಃ ॥
ಯಾವದಿಚ್ಛತಿ ಸಂಸ್ಥಾತುಂ ಪ್ರಭುರ್ಮನ್ವಂತರೇಷ್ವಿಹ ॥ ೨೧ ॥

ಮಾರೀಚಂ ಕಶ್ಯಪಂ ದೇವೀ ಯಥಾದಿತಿರನುವ್ರತಾ ।
ಸಾಧ್ಯಂ ನಾರಾಯಣಂ ಶ್ರೀಸ್ತು ಮಘವಂತಂ ಶಚೀ ಯಥಾ ॥ ೨೨ ॥

ವಿಷ್ಣುಂ ಕೀರ್ತೀ ರುಚಿಃ ಸೂರ್ಯಂ ವಸಿಷ್ಠಂ ಚಾಪ್ಯರುಂಧತೀ ।
ನೈತಾಸ್ತು ವಿಜಹತ್ಯೇತಾರ್ ಭರ್ತ್ರ್ ದೇವ್ಯಃ ಕಥಂಚನ ।
ಆವರ್ತಮಾನಕಲ್ಪೇಷು ಪುನರ್ಜಾಯಂತಿ ತೈಃ ಸಹ ॥ ೨೩ ॥

---

೧೯. ಆಗ ದಕ್ಷನು ಯಜ್ಞದಲ್ಲಿ ಯಜಮಾನನಾಗಿ ಸಮಸ್ತ ಯಾಗಗಳಿಗೂ ಈಶ್ವರನೇ ಪ್ರಭುವೆಂದು ತಿಳಿದು, ದೇವತೆಗಳ ಸಂಗಡ ಯಾಗದಲ್ಲಿ ಈಶ್ವರನನ್ನು ಪೂಜಿಸಿದನು.

೨೦. ಪೂರ್ವದಲ್ಲಿ ದಕ್ಷನ ಮಗಳಾಗಿದ್ದ ಸತೀದೇವಿಯು ಮತ್ತೊಂದು ಜನ್ಮದಲ್ಲಿ ಪರ್ವತರಾಜನ ಪತ್ನಿಯಾದ ಮೇನಕೆಗೆ ಪುತ್ರಿಯಾಗಿ ಹುಟ್ಟಿದಳು ಅವಳ ನಾಮವು ಪರ್ವತರಾಜನ ಮಗಳಾದ ಕಾರಣ ಪಾರ್ವತಿಯೆಂದು ಪ್ರಖ್ಯಾತವಾಗಿತ್ತು.

೨೧. ಪೂರ್ವದಲ್ಲಿ ಸತೀ ನಾಮಕಳಾಗಿದ್ದ ದಕ್ಷಕುಮಾರಿಯು ಮೇನಕೆಯಲ್ಲಿ ಜನಿಸಿದಾಗ ಉಮೆಯೆಂಬ ನಾಮವನ್ನು ಪಡೆದಳು. ಆ ಉಮಾದೇವಿಯು ಈಶ್ವರನಿಗೆ ಧರ್ಮಪತ್ನಿಯಾಗಿ ನಿತ್ಯ ಸಂಬದ್ಧಳಾಗಿದ್ದಳು. ವಿಯುಕ್ತಳಾಗಲಿಲ್ಲ.

೨೨-೨೩. ಅದಿತಿಯು ಮರೀಚಿ ಪುತ್ರನಾದ ಕಶ್ಯಪನನ್ನೂ, ಲಕ್ಷ್ಮೀದೇವಿಯು ಶ್ರೀಮನ್ನಾರಾಯಣನನ್ನೂ, ಶಚೀದೇವಿಯು ಇಂದ್ರನನ್ನೂ, ಕೀರ್ತಿಯು ವಿಷ್ಣುವನ್ನೂ ರುಚಿಯು ಸೂರ್ಯನನ್ನೂ, ಅರುಂಧತಿಯು ವಸಿಷ್ಠನನ್ನೂ ಹೇಗೆ ಬಿಡದೇ ಸರ್ವದಾ ಅನುಸರಿಸಿಕೊಂಡಿರುತ್ತಾರೋ ಹಾಗೆಯೇ ಸತಿಯು ಈಶ್ವರನನ್ನು ಎಡಬಿಡದೆ ಅನುಸರಿಸಿ ಕೊಂಡಿದ್ದಳು. ಕಲ್ಪಾಂತರಗಳಲ್ಲಿಯೂ ಕೂಡ ಈಶ್ವರನ ಜೊತೆಯಲ್ಲಿಯೇ ಉದ್ಭವಿಸಿ ಅವಿಯೋಗಿನಿಯಾಗಿರುವಳು.

ಏವಂ ಪ್ರಚೇತಸೋ ದಕ್ಷೋ ಜಜ್ಞೇ ವೈ ಚಾಕ್ಷುಷೇಂತರೇ ।
ಪ್ರಾಚೀನಬರ್ಹಿಷಃ ಪೌತ್ರಃ ಪುತ್ರಶ್ಚೈವ ಪ್ರಚೇತಸಃ ॥ ೭೪ ॥

ದಶಭ್ಯಸ್ತು ಪ್ರಚೇತೇಭ್ಯೋ ಮಾರಿಷಾಯಾಂ ಚ ಪುನರ್ನೃಪಃ ।
ಜಜ್ಞೇ ರುದ್ರಾಭಿಶಾಪೇನ ದ್ವಿತೀಯೇಽಸ್ಮಿನ್ನಿತಿಶ್ರುತಿಃ ॥ ೭೫ ॥

ಭೃಗ್ವಾದಯಸ್ತು ತೇ ಸರ್ವೇ ಜಜ್ಞಿರೇ ವೈ ಮಹರ್ಷಯಃ ।
ಆದ್ಯೇ ತ್ರೇತಾಯುಗೇ ಪೂರ್ವಂ ಮನೋರ್ವೈವಸ್ವತಸ್ಯ ಹ ॥
ದೇವಸ್ಯ ಮಹತೋ ಯಜ್ಞೇ ವಾರುಣೀಂ ಬಿಭ್ರತಸ್ತನುಂ ॥ ೭೬ ॥

ಇತಿ ಸಾನುಶಯೋಽಹ್ಯಾಸೀತ್ ತಯೋರ್ಜಾತ್ಯಂತರಾಗತಃ ।
ಪ್ರಜಾಪತೇಸ್ತು ದಕ್ಷಸ್ಯ ತ್ರ್ಯಂಬಕಸ್ಯ ಚ ಧೀಮತಃ ॥ ೭೭ ॥

ತಸ್ಮಾನ್ನಾನುಶಯಃ ಕಾರ್ಯೋ ವೈರಿಷ್ವಿಹ ಕದಾಚನ ।
ಜಾತ್ಯಂತರಗತಸ್ಯಾಪಿ ಭಾವಿತಸ್ಯ ಶುಭಾ ಶುಭೈಃ ॥
ಜಂತುಂ ನ ಮುಂಚತಿ ಖ್ಯಾತಿಸ್ತತ್ರ ಕಾರ್ಯಂ ವಿಜಾನತಾ ॥ ೭೮ ॥

---

೭೪. ಹೀಗೆ ದಕ್ಷಪ್ರಜಾಪತಿಯು ಚಾಕ್ಷುಷ ಮನ್ವಂತರದಲ್ಲಿ ಪ್ರಚೇತಸನ ಪುತ್ರನೂ, ಪ್ರಾಚೀನ ಬರ್ಹಿಷನ ಮೊಮ್ಮಗನೂ ಆಗಿ ಜನಿಸಿ ಪ್ರಾಚೇತಸನೆಂದು ಪ್ರಖ್ಯಾತನಾದನು.

೭೫. ಹೀಗೆ ದಕ್ಷನು ಈಶ್ವರನ ಶಾಪದಿಂದ ಹತ್ತುಜನ ಪ್ರಚೇತಸರಿಗೂ ಮಾರಿಷಾದೇವಿಯಲ್ಲಿ ಎರಡನೆಯ ಸಲ ಪುತ್ರನಾಗಿ ಜನಿಸಿ ರಾಜನಾಗಿದ್ದನೆಂದು ಶ್ರುತಿಗಳು ಸಾರುತ್ತವೆ.

೭೬. ವೈವಸ್ವತಮನ್ವಂತರದ ಮೊದಲನೆಯ ತ್ರೇತಾಯುಗದಲ್ಲಿ ಈಶ್ವರನಿಂದ ಶಪ್ತರಾದ ಸಪ್ತರ್ಷಿಗಳು, ವರುಣನ ಮೂರ್ತಿಧಾರಿಯಾದ ಈಶ್ವರನ ಯಾಗದ ಸನ್ನಿವೇಶದಲ್ಲಿ ಉದ್ಭವಿಸಿದರು.

೭೭. ಜ್ಞಾನಿಯಾದ ಪರಮೇಶ್ವರ, ಪ್ರಜಾಪತಿಯಾದ ದಕ್ಷ ಇವರಿಬ್ಬರು ಬೇರೆ ಬೇರೆ ಜಾತಿಗಳಲ್ಲಿ ಹುಟ್ಟಿದರೂ ಸಂಸ್ಕಾರದಿಂದ ದ್ವೇಷ ಭಾವನೆಯು ಅವರಿಬ್ಬರಲ್ಲಿಯೂ ಗೋಚರವಾಯಿತು.

೭೮. ಆದುದರಿಂದ ಶುಭಾಶುಭ ಕರ್ಮಾನುಗುಣವಾಗಿ ಜನ್ಮಾಂತರದಲ್ಲಿ ಬೇರೆ ಬೇರೆ ಜಾತಿಯಲ್ಲಿ ಹುಟ್ಟಿದ್ದರೂ ಕೂಡ ಸಂಸ್ಕಾರ ವಶದಿಂದ ಆ ದ್ವೇಷವೂ ಬಿಡದೆ

ಪ್ರಾಚೇತಸಸ್ಯ ದಕ್ಷಸ್ಯ ಕಥಂ ವೈವಸ್ವತೇಽಂತರೇ ।
ವಿನಾಶಮಗಮತ್ ಸೂತ ಹಯಮೇಧಃ ಪ್ರಜಾಪತೇಃ ॥ ೭೯ ॥

॥ ಋಷಯ ಊಚುಃ ॥

ದೇವ್ಯಾ ಮೃತ್ಯುಂ ಕೃತಂ ಮತ್ವಾ ಕ್ರುದ್ಧಂ ಸರ್ವಾತ್ಮಕಂ ಪ್ರಭುಂ ।
ಕಥಂ ಪ್ರಸಾದಯದ್ದಕ್ಷಃ ಸ ಯಜ್ಞಃ ಸಾಧಿತಃ ಕಥಂ ॥
ಏತದ್ವೇದಿತುಮಿಚ್ಛಾಮಸ್ತನ್ನೋ ಬ್ರೂಹಿ ಯಥಾ ತಥಂ ॥ ೮೦ ॥

॥ ಸೂತ ಉವಾಚ ॥

ಪುರಾ ಮೇರೋರ್ದ್ವಿಜಶ್ರೇಷ್ಠಾಃ ಶೃಂಗಂ ತ್ರೈಲೋಕ್ಯವಿಶ್ರುತಂ ।
ಜ್ಯೋತಿಷ್ಕಂ ನಾಮ ಸಾವಿತ್ರಂ ಸರ್ವರತ್ನವಿಭೂಷಿತಂ ॥ ೮೧ ॥

ಅಪ್ರಮೇಯಮನಾಧೃಷ್ಯಂ ಸರ್ವಲೋಕ ನಮಸ್ಕೃತಂ ।
ತಸ್ಮಿನ್ ದೇವೋ ಗಿರಿಶ್ರೇಷ್ಠೇ ಸರ್ವಧಾತು ವಿಭೂಷಿತೇ ॥
ಪರ್ಯಂಕ ಇವ ವಿಭ್ರಾಜಿನ್ನುಪವಿಷ್ಟೋ ಬಭೂವ ಹ ॥ ೮೨ ॥

---

ಅನುಸ್ಯೂತವಾಗಿರುತ್ತದೆ. ಜ್ಞಾನಿಯು ಇದನ್ನು ವಿಚಾರಿಸಿ ದೀರ್ಘ ದ್ವೇಷಗಳಿಗೆ ಅವಕಾಶವನ್ನು ಕೊಡಬಾರದು.

೭೯. ಎಲೈ ಸೂತಮಹಾಮುನಿಯೇ ವೈವಸ್ವತಮನ್ವಂತರದಲ್ಲಿ ಜನಿಸಿದ ಪ್ರಚೇತಸನ ಪುತ್ರನಾದ ದಕ್ಷಪ್ರಜಾಪತಿಯ ಅಶ್ವಮೇಧಯಜ್ಞವು ಹೇಗೆ ನಾಶವಾಯಿತು ತಿಳಿಸಬೇಕೆಂದನು.

೮೦ ಮುನಿಗಳು ಹೇಳಿದರು :—ಸತೀದೇವಿಯು ಮರಣವನ್ನು ಹೊಂದಿದ ಬಳಿಕ ಕುಪಿತನೂ, ಪ್ರಭುವೂ, ಆದ ಈಶ್ವರನಿಗೆ ದಕ್ಷನು ಹೇಗೆ ಸಮಾಧಾನ ಮಾಡಿದನು. ಆ ಅಶ್ವಮೇಧಯಜ್ಞವು ಹೇಗೆ ನೆರವೇರಿತು. ಈ ವಿಷಯಗಳನ್ನು ಯಥಾಸ್ಥಿತವಾಗಿ ಕೇಳಲು ಬಯಸುತ್ತೇವೆ. ಆದುದರಿಂದ ನಡೆದ ಹಾಗೆಯೇ ತಿಳಿಸಬೇಕೆಂದು ಪ್ರಾರ್ಥಿಸಿಕೊಂಡರು.

೮೧-೮೨ ಸೂತಮುನಿಯು ಹೇಳಿದನು :—ಎಲೈ ಮಹರ್ಷಿಗಳೇ, ಪೂರ್ವದಲ್ಲಿ ಮೇರುಪರ್ವತವು, ತ್ರೈಲೋಕ್ಯ ವಿಶ್ರುತವೂ, ಜ್ಯೋತಿರ್ಮಯವೂ, ಪವಿತ್ರವೂ ಸರ್ವರತ್ನಾಲಂಕೃತವೂ, ಅಪ್ರಮೇಯವೂ, ಆಕ್ರಮಿಸಲಸಾಧ್ಯವೂ, ಸರ್ವಜನ

**ಶೈಲರಾಜಸುತಾ ಚಾಸ್ಯ ನಿತ್ಯಂ ಪಾರ್ಶ್ವಸ್ಥಿತಾಽಭವತ್ ।**
**ಆದಿತ್ಯಾಶ್ಚ ಮಹಾತ್ಮಾನೋ ವಸವಶ್ಚಾಮಿ ತೌಜಸಃ ॥ ೮೩ ॥**

**ತಥೈವ ಚ ಮಹಾತ್ಮಾನಾವಶ್ವಿನೌ ಭಿಷಜಾಂ ವರೌ ।**
**ತಥಾ ವೈ ಶ್ರವಣೋ ರಾಜಾ ಗುಹ್ಯಕೈಃ ಪರಿವಾರಿತಃ ॥ ೮೪ ॥**

**ಯಕ್ಷಣಾಮೀಶ್ವರಃ ಶ್ರೀಮಾನ್ ಕೈಲಾಸನಿಲಯಃ ಪ್ರಭುಃ ।**
**ಉಪಾಸತೇ ಮಹಾತ್ಮಾನಂ ಉಶನಾ ಚ ಮಹಾಮುನಿಃ ॥**
**ಸನತ್ಕುಮಾರಪ್ರಮುಖಾಸ್ತೇ ಚೈವ ಪರಮರ್ಷಯಃ ॥ ೮೫ ॥**

**ಅಂಗಿರಃ ಪ್ರಮುಖಾಶ್ಚೈವ ತಥಾ ದೇವರ್ಷಯೋಽಪರೇ ।**
**ವಿಶ್ವಾವಸುಶ್ಚ ಗಂಧರ್ವಸ್ತಥಾನಾರದಪರ್ವತೌ ॥ ೮೬ ॥**

**ಅಪ್ಸರೋಗಣಸಂಘಾಶ್ಚ ಸಮಾಜಗ್ಮುರನೇಕಶಃ ।**
**ವವೌ ಶಿವಃ ಸುಖೋ ವಾಯುರ್ನಾನಾಗಂಧವಃ ಶುಚಿಃ ॥ ೮೭ ॥**

---

ವಂದ್ಯವೂ, ಸರ್ವಧಾತು ಮಂಡಿತವೂ, ಪರ್ವತೋತ್ತಮವೂ ಆಗಿತ್ತು. ಅಂತಹ ಪರ್ವತದ ಅತ್ಯುನ್ನತವಾದ ಶಿಖರದಲ್ಲಿ ಸ್ವಾಮಿಯಾದ ಪರಮೇಶ್ವರನು ಸಿಂಹಾಸನದಲ್ಲಿ ಹೊಳೆಯುವಂತೆ ಪ್ರಕಾಶಿಸುತ್ತಿದ್ದನು.

೮೩--೮೫. ಆಗ ಪರ್ವತರಾಜನ ಪುತ್ರಿಯಾದ ಉಮಾದೇವಿಯು ಈಶ್ವರನ ಬಳಿಯಲ್ಲಿಯೇ ಯಾವಾಗಲೂ ಪ್ರಕಾಶಿಸುತ್ತಿದ್ದಳು. ಮತ್ತು ದ್ವಾದಶಾದಿತ್ಯರೂ ಮಹಾತ್ಮರಾದ ವಸುಗಳೂ, ಅತಿ ಪರಾಕ್ರಮಿಗಳೂ, ವೈದ್ಯೋತ್ತಮರೂ ಆದ ಆಶ್ವಿನೀ ದೇವತೆಗಳೂ, ಗುಹ್ಯಕರಿಂದ ಕೂಡಿದ ಕುಬೇರನೂ, ಯಕ್ಷೇಶ್ವರನೂ, ಕೈಲಾಸ ವಾಸಿಯಾದ ಉಶನಸನೂ, ಸನತ್ಕುಮಾರಾದಿಯಾದ ಋಷಿಗಳೂ, ಇವರು ಕೈಲಾಸ ವಾಸಿಯಾದ ಈಶ್ವರನನ್ನು ನಿತ್ಯವೂ ಸೇವಿಸುತ್ತಿದ್ದರು.

೮೬. ಅಂಗಿರಸರೇ ಮೊದಲಾದ ದೇವರ್ಷಿಗಳೂ ಗಂಧರ್ವರಾಜನಾದ ವಿಶ್ವಾವಸು ಮತ್ತು ನಾರದ, ಪರ್ವತರು ಇವರೂ ಸಹ ಈಶ್ವರನನ್ನು ಸೇವಿಸುತ್ತಿದ್ದರು

೮೭. ಅಪ್ಸರಸ್ತ್ರೀಯರ ಸಂಘಗಳು ಬಹಳವಾಗಿ ಅಲ್ಲಿಗೆ ಬಂದಿದ್ದುವು. ಅಲ್ಲಿ ಮಂದಮಾರುತವು ಸುಖವಾಗಿಯೂ ತಂಪಾಗಿಯೂ ನಾನಾ ಸುಗಂಧಗಳಿಂದ ಕೂಡಿಯೂ ಬೀಸುತ್ತಿತ್ತು

ಸರ್ವರ್ತುಕಕುಸುಮೋಪೇತಾಃ ಪುಷ್ಪವಂತೋ ದ್ರುಮಾಸ್ತಥಾ ।
ತಥಾ ವಿದ್ಯಾಧರಾಶ್ಚೈವ ಸಿದ್ಧಾಶ್ಚೈವ ತಪೋಧನಾಃ ॥ ೮೮ ॥

ಮಹಾದೇವಂ ಪಶುಪತಿಂ ಪರ್ಯುಪಾಸಂತಿ ತತ್ರ ವೈ ।
ಭೂತಾನಿ ಚ ತಥಾನ್ಯಾನಿ ನಾನಾರೂಪಧರಾಣ್ಯಥ ॥ ೮೯ ॥

ರಾಕ್ಷಸಾಶ್ಚ ಮಹಾರೌದ್ರಾಃ ಪಿಶಾಚಾಶ್ಚ ಮಹಾಬಲಾಃ ।
ಬಹುರೂಪಧರಾ ಹೃಷ್ಟಾ ನಾನಾಪ್ರಹರಣೋದ್ಯತಾಃ ॥ ೯೦ ॥

ದೇವಸ್ಯಾನುಚರಾಸ್ತತ್ರ ತಸ್ಥುರ್ವೈಶ್ವಾನರೋಪಮಾಃ ।
ನಂದೀಶ್ವರಶ್ಚ ಭಗವಾನ್ ದೇವಸ್ಯಾನುಮತೇ ಸ್ಥಿತಃ ॥ ೯೧ ॥

ಪ್ರಗೃಹ್ಯ ಜ್ವಲಿತಂ ಶೂಲಂ ದೀಪ್ಯಮಾನಂ ಸ್ವ ತೇಜಸಾ ।
ಗಂಗಾ ಚ ಸರಿತಾಂ ಶ್ರೇಷ್ಠಾ ಸರ್ವತೀರ್ಥಜಲೋದ್ಭವಾ ॥
ಪರ್ಯುಪಾಸತತಂದೇವರೂಪಿಣೀ ದ್ವಿಜಸತ್ತಮಾಃ ॥ ೯೨ ॥

ಏವಂ ಸ ಭಗವಾಂಸ್ತತ್ರ ದೀಪ್ಯಮಾನಃ ಸುರರ್ಷಿಭಿಃ ।
ದೇವೈಶ್ಚ ಸುಮಹಾಭಾಗೈರ್ಮಹಾದೇವೋ ವ್ಯವಸ್ಥಿತಃ ॥ ೯೩ ॥

---

೮೮–೯೦. ಸರ್ವ ಋತುಗಳ ಫಲಪುಷ್ಪಗಳಿಂದಲಂಕೃತಗಳಾದ ವೃಕ್ಷಗಳೂ ವಿದ್ಯಾಧರರೂ ಸಿದ್ಧರೂ ತಪೋಧನರೂ ನಾನಾರೂಪಧಾರಿಗಳಾದ ಭೂತಗಳೂ ಭಯಂಕರಗಳಾದ ಪಿಶಾಚಗಳೂ ಮಹಾಬಲಿಷ್ಠರಾದ ರಾಕ್ಷಸರೂ ನಾನಾ ಕ್ರೀಡೆಗಳಲ್ಲಿ ಆಸಕ್ತರಾದ ಅನೇಕ ಪ್ರಾಣಿಗಳೂ ಕೂಡಿ ಮಹಾದೇವನಾದ ಪರಮೇಶ್ವರನನ್ನು ಸೇವಿಸುತ್ತಿದ್ದುವು

೯೧. ಈಶ್ವರನ ಕಿಂಕರರು ಅಗ್ನಿಗೆ ಸಮವಾದ ತೇಜಸ್ವಿಗಳಾಗಿದ್ದರು. ಪೂಜ್ಯನಾದ ನಂದೀಶ್ವರನು ದೇವನ ಆಜ್ಞೆಯನ್ನು ಎದುರುನೋಡುತ್ತಿದ್ದನು.

೯೨. ಮತ್ತು ಆ ನಂದೀಶ್ವರನು ದೇದೀಪ್ಯಮಾನವಾದ ಶೂಲಪಾಣಿಯಾಗಿ ಪ್ರಜ್ವಲಿಸುತ್ತಿದ್ದನು. ಎಲೈ ವಿಪ್ರೋತ್ತಮರೇ, ನದಿಗಳಲ್ಲಿ ಉತ್ತಮಳೂ ಸಮಸ್ತ ತೀರ್ಥಜಲಗಳಿಂದ ಉದ್ಭೂತಳೂ ಆದ ಗಂಗಾದೇವಿಯು ದಿವ್ಯರೂಪವನ್ನು ಹೊಂದಿ ದೇವನನ್ನು ಸೇವಿಸುತ್ತಿದ್ದಳು.

೯೩. ಹೀಗೆ ಪರಮೇಶ್ವರನು ಪ್ರಕಾಶಿಸುವ ದೇವರ್ಷಿಗಳಿಂದಲೂ, ಭಾಗ್ಯ ಶಾಲಿಗಳಾದ ದೇವತೆಗಳಿಂದಲೂ ಒಡಗೂಡಿ ಅಲ್ಲಿ ಪ್ರಕಾಶಿಸುತ್ತಿದ್ದನು.

ಪುರಾ ಹಿಮವತಃ ಪೃಷ್ಠೇ ದಕ್ಷೋ ವೈ ಯಜ್ಞಮಾರಭತ್ ।
ಗಂಗಾದ್ವಾರೇ ಶುಭೇ ದೇಶೇ ಋಷಿಸಿದ್ಧನಿಷೇವಿತೇ ॥ ೯೪ ॥

ತತಸ್ತಸ್ಯ ಮುಖೇ ದೇವಾಃ ಶತಕ್ರತು ಪುರೋಗಮಾಃ ।
ಗಮನಾಯ ಸಮಾಗಮ್ಯ ಬುದ್ಧಿಮಾಪೇದಿರೇ ತದಾ ॥ ೯೫ ॥

ಸ್ವೈರ್ವಿಮಾನೈರ್ಮಹಾತ್ಮಾನೋ ಜ್ವಲದ್ಭಿರ್ಜ್ವಲನಪ್ರಭಾಃ ।
ದೇವಸ್ಯಾನುಮನೇಗಚ್ಛನ್ ಗಂಗಾದ್ವಾರ ಇತಿ ಶ್ರುತಿಃ ॥ ೯೬ ॥

ಗಂಧರ್ವಾಪ್ಸರಸಾಕೀರ್ಣಂ ನಾನಾದ್ರುಮಲತಾವೃತಂ ।
ಋಷಿಸಂಘೈಃ ಪರಿವೃತಂ ದಕ್ಷಂ ಧರ್ಮಭೃತಾಂ ವರಂ ॥ ೯೭ ॥

ಪೃಥಿವ್ಯಾಮಂತರಿಕ್ಷೇ ವಾ ಯೇ ಚ ಸ್ವರ್ಲೋಕವಾಸಿನಃ ।
ಸರ್ವೇ ಪ್ರಾಂಜಲಯೋ ಭೂತ್ವಾ ಉಪತಸ್ಥುಃ ಪ್ರಜಾಪತಿಂ ॥ ೯೮ ॥

---

೯೪. ಹೀಗಿರಲು ಪೂರ್ವದಲ್ಲಿ ದಕ್ಷಪ್ರಜಾಪತಿಯು ಋಷ್ಯಾದಿಗಳಿಂದಲೂ ತಪಸ್ವಿಗಳಿಂದಲೂ ಸೇವಿಸಲ್ಪಟ್ಟ ಹಿಮಾಲಯದ ತಪ್ಪಲಾಗಿಯೂ ಶುಭಕರವಾಗಿಯೂ ಇರುವ ಗಂಗಾನದಿಯ ತೀರಪ್ರದೇಶದಲ್ಲಿ ಅಶ್ವಮೇಧಯಾಗವನ್ನು ಪ್ರಾರಂಭಿಸಿದನು.

೯೫. ಅನಂತರದಲ್ಲಿ ಇಂದ್ರನೇ ಮೊದಲಾದ ದೇವತೆಗಳು ಆ ದಕ್ಷನ ಯಾಗಕ್ಕೆ ಹೋಗಲು ಇಚ್ಛಿಸಿ ಹೊರಡಲು ಸಿದ್ಧರಾದರು.

೯೬. ಆಗ ದೇವತೆಗಳು ಪ್ರಕಾಶಮಾನಗಳಾದ ತಮ್ಮ ವಿಮಾನಗಳಲ್ಲಿ ಸೂರ್ಯನಂತೆ ಹೊಳೆಯುತ್ತಾ ಗಂಗಾದ್ವಾರಕ್ಕೆ ಬಂದು ಸ್ವಾಮಿಯ ಆಜ್ಞೆಯನ್ನು ನಿರೀಕ್ಷಿಸುತ್ತಿದ್ದರು ಎಂದು ವೇದಗಳು ತಿಳಿಸುತ್ತವೆ.

೯೭–೯೮. ಭೂಲೋಕವೇ ಆದಿಯಾಗಿ ಸಮಸ್ತ ಲೋಕವಾಸಿಗಳಾದ ದೇವತೆಗಳೂ ಋಷಿಗಳೂ ಗಂಧರ್ವರೂ ಅಪ್ಸರಸ್ತ್ರೀಯರೂ ಇವರೇ ಮೊದಲಾದವರು ನಾನಾ ವೃಕ್ಷಗಳಿಂದಲೂ ಲತೆಗಳಿಂದಲೂ ಋಷಿಸಂಘಗಳಿಂದಲೂ ಮಹಾತ್ಮರಿಂದಲೂ ಅಲಂಕೃತವಾದ ದಕ್ಷಬ್ರಹ್ಮನ ಯಾಗಶಾಲೆಗೆ ಬಂದು ಧರ್ಮಾತ್ಮನೂ ಪ್ರಜಾಪತಿಯೂ ಆದ ದಕ್ಷನಿಗೆ ನಮಸ್ಕರಿಸಿ ಸೇವಿಸಿದರು.

ಆದಿತ್ಯಾ ವಸವೋ ರುದ್ರಾಃ ಸಾಧ್ಯಾಃ ಸಹ ಮರುದ್ಗಣೈಃ ।
ಜಿಷ್ಣುನಾ ಸಹಿತಾಃ ಸರ್ವೇ ಆಗತಾ ಯಜ್ಞಭಾಗಿನಃ ॥ ೯೯ ॥

ಊಷ್ಮಪಾಃ ಸೋಮಪಾಶ್ಚೈವ ಆಜ್ಯಪಾ ಧೂಮಪಾಸ್ತಥಾ ।
ಅಶ್ವಿನೌ ಪಿತರಶ್ಚೈವ ಆಗತಾ ಬ್ರಹ್ಮಣಾ ಸಹ ॥ ೧೦೦ ॥

ಏತೇ ಚಾನ್ಯೇ ಚ ಬಹವೋ ಭೂತಗ್ರಾಮಾಸ್ತಥೈವ ಚ ।
ಜರಾಯುಜಾಂಡಜಾಶ್ಚೈವ ಸ್ವೇದಜೋದ್ಭಿಜ್ಜಕಾಸ್ತಥಾ ॥ ೧೦೧ ॥

ಆಹೂತಾ ಮಂತ್ರತಃ ಸರ್ವೇ ದೇವಾಶ್ಚ ಸಹ ಪತ್ನಿಭಿಃ ।
ವಿರಾಜಂತೇ ವಿಮಾನಸ್ಥಾ ದೀಪ್ಯಮಾನಾ ಇವಾಗ್ನಯಃ ॥ ೧೦೨ ॥

ತಾನ್ ದೃಷ್ಟ್ವಾ ಮನ್ಯುಮಾವಿಷ್ಟೋ ದಧೀಚೋ ವಾಕ್ಯಮಬ್ರವೀತ್ ।
ಅಪೂಜ್ಯಪೂಜನೇ ಚೈವ ಪೂಜ್ಯಾನಾಂ ಚಾಪ್ಯಪೂಜನೇ ॥
ನರಃ ಪಾಪಮವಾಪ್ನೋತಿ ಮಹದ್ವೈ ನಾತ್ರ ಸಂಶಯಃ ॥ ೧೦೩ ॥

---

೯೯. ದ್ವಾದಶಾದಿತ್ಯರೂ ಅಷ್ಟವಸುಗಳೂ ಏಕಾದಶರುದ್ರರೂ ಸಾಧ್ಯರೂ ಮರುದ್ಗಣಗಳೂ ಇವರೇ ಮೊದಲಾದವರು ಮಹಾವಿಷ್ಣುವಿನೊಡನೆ ಯಜ್ಞಭಾಗಿಗಳಾಗಲು ಯಾಗಶಾಲೆಗೆ ಬಂದರು.

೧೦೦. ಸೋಮಪಾಯಿಗಳೂ ಆಜ್ಯಪಾಯಿಗಳೂ ಧೂಮಪಾಯಿಗಳೂ ಹಬೆಯನ್ನು ಪಾನಮಾಡುವವರೂ ಆದ ಯೋಗಿಗಳು, ಅಶ್ವಿನೀದೇವತೆಗಳು, ಪಿತೃಗಳು, ಇವರು ಬ್ರಹ್ಮದೇವನೊಡನೆ ದಕ್ಷಬ್ರಹ್ಮನ ಯಾಗಶಾಲೆಗೆ ಬಂದರು.

೧೦೧. ಹೀಗೆ ನಿರೂಪಿಸಿರುವ ಚರಾಚರಜಗತ್ತಿನಲ್ಲಿರುವ ಜನರೂ ಗರ್ಭಜನ್ಯಗಳಾದ ಪ್ರಾಣಿಗಳೂ ಪಕ್ಷಿಗಳೂ ಕ್ರಿಮಿಕೀಟಗಳೂ ವೃಕ್ಷತದಭಿಮಾನಿಗಳೂ ಕೂಡ ದಕ್ಷನ ಯಾಗವನ್ನು ನೋಡಲು ಬಂದರು.

೧೦೨. ದೇವತೆಗಳು ಮಂತ್ರಗಳಿಂದ ಕರೆಯಲ್ಪಟ್ಟು ಪತ್ನಿಯರ ಸಂಗಡ ವಿಮಾನರೂಢರಾಗಿ ಅಗ್ನಿಯಂತೆ ಹೊಳೆಯುತ್ತಾ ಯಾಗಕ್ಕಾಗಿ ಬಂದರು.

೧೦೩. ದಧೀಚಿಯು ಹೀಗೆ ಯಾಗಕ್ಕೆ ಬಂದ ಅವರೆಲ್ಲರನ್ನೂ ನೋಡಿ ಕೋಪಾವಿಷ್ಟನಾಗಿ ಇಂತೆಂದನು. ಅಯೋಗ್ಯರನ್ನು ಪೂಜಿಸುವುದರಿಂದಲೂ ಪೂಜ್ಯರಿಗೆ

ಏವಮುಕ್ತ್ವಾ ತು ವಿಪ್ರರ್ಷಿಃ ಪುನರ್ದಕ್ಷಮಭಾಷತ ।
ಪೂಜ್ಯಂತು ಪಶುಭರ್ತಾರಂ ಕಸ್ಮಾನ್ನಾಹ್ವಯಸೇ ಪ್ರಭುಂ ॥ ೧೦೪ ॥

॥ ದಕ್ಷ ಉವಾಚ ॥

ಸಂತಿ ಮೇ ಬಹವೋ ರುದ್ರಾಃ ಶೂಲಹಸ್ತಾಃ ಕಪರ್ದಿನಃ ।
ಏಕಾದಶಾವಸ್ಥಗತಾ ನಾನ್ಯಂ ವೇದ್ಮಿ ಮಹೇಶ್ವರಂ ॥ ೧೦೫ ॥

॥ ದಧೀಚ ಉವಾಚ ॥

ಸರ್ವೇ ನಿಮಂತ್ರಿತಾ ದೇವಾ ಏನ ಈಶೋ ನಿಮಂತ್ರಿತಃ ।
ಯಥಾಹಂ ಶಂಕರಾದೂರ್ಧ್ವಂ ನಾನ್ಯಂ ಪಶ್ಯಾಮಿ ದೈವತಂ ॥
ತಥಾ ದಕ್ಷಸ್ಯ ವಿಪುಲೋ ಯಜ್ಞೋಽಯಂ ನ ಭವಿಷ್ಯತಿ ॥ ೧೦೬ ॥

---

ಪೂಜೆಯನ್ನು ಮಾಡದಿರುವುದರಿಂದಲೂ ಮಹಾಪಾಪವು ಸಂಭವಿಸುತ್ತದೆ. ಈ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲವೆಂದನು.

೧೦೪. ವಿಪ್ರೋತ್ತಮನಾದ ದಧೀಚಿಯು ಹೀಗೆ ಹೇಳಿ ಎಲೈ ದಕ್ಷನೇ, ನೀನು ಎಲ್ಲರನ್ನೂ ಕರೆದು ಪೂಜ್ಯನೂ ಪಶುಪತಿಯೂ ಸ್ವಾಮಿಯೂ ಆದ ಪರಮೇಶ್ವರನನ್ನು ಏತಕ್ಕಾಗಿ ಕರೆಯಲಿಲ್ಲವೆಂದನು.

೧೦೫. ದಕ್ಷಪ್ರಜಾಪತಿಯು ಹೇಳಿದನು:—ಈ ಯಾಗಕ್ಕಾಗಿ ಶೂಲಪಾಣಿಗಳೂ ಜಟಾಧಾರಿಗಳೂ ಆದ ಏಕಾದಶರುದ್ರರು ಆಹೂತರಾಗಿ ಯಾಗಕ್ಕಾಗಿ ಬಂದಿರುತ್ತಾರೆ. ಇವರಿಗಿಂತಲೂ ಬೇರೆಯಾದ ಮಹಾದೇವನನ್ನು ನಾನು ಕಾಣನೆಂದು ದಕ್ಷನು ಹೇಳಿದನು.

೧೦೬. ದಧೀಚನು ಹೇಳಿದನು:—ಎಲೈ ದಕ್ಷನೇ, ನೀನು ಎಲ್ಲಾ ದೇವತೆಗಳನ್ನೂ ಕರೆದಿರುತ್ತೀಯೆ. ಈಶ್ವರನನ್ನು ಮಾತ್ರ ಕರೆಯಲ್ಲಿಲ್ಲ. ಈಶ್ವರನಿಗಿಂತಲೂ, ಉತ್ತಮನಾದವನು ಯಾರೂ ಇಲ್ಲ. ಇಷ್ಟು ಜನಗಳು ಬಂದಿದ್ದರೂ ಈಶ್ವರನು ಇಲ್ಲದೇ ಇರುವುದರಿಂದ ಈ ಯಾಗಮಂಟಪವು ಶೋಭಿಸುವುದಿಲ್ಲ. ಯಾಗವು ಪೂರ್ಣವೂ ಆಗುವುದಿಲ್ಲವೆಂದನು.

॥ ದಕ್ಷ ಉವಾಚ ॥

ಏತನ್ಮಖೇ ಶೂರ ಸುವರ್ಣ ಪಾತ್ರೇ ।
ಹವಿಃ ಸಮಸ್ತಂ ವಿಧಿಮಂತ್ರಪೂತಂ ॥
ವಿಷ್ಣೋರ್ನಯಾಮ್ಯಪ್ರತಿಮಸ್ಯ ಸರ್ವಂ ।
ಪ್ರಭೋರ್ವಿಭೋ ಹ್ಯಾಹವನೀಯನಿತ್ಯಂ ॥ ೧೦೭ ॥

ಗತಾಸ್ತು ದೇವತಾ ಜ್ಞಾತ್ವಾ ಶೈಲರಾಜಸುತಾ ತದಾ ।
ಉವಾಚ ವಚನಂ ಸಾಧ್ವೀ ದೇವಂ ಪಶುಪತಿಂ ತದಾ ॥ ೧೦೮ ॥

॥ ಉಮೋವಾಚ ॥

ಭಗವನ್ ಕ್ವ ಗತಾ ಹ್ಯೇತೇ ದೇವಾಃ ಶಕ್ರಪುರೋಗಮಾಃ ।
ಬ್ರೂಹಿ ತತ್ವೇನ ತತ್ವಜ್ಞ ಸಂಶಯೋ ಮೇ ಮಹಾನಯಂ ॥ ೧೦೯ ॥

---

೧೦೭. ದಕ್ಷಪ್ರಜೇಶನು ಇಂತೆಂದನು :—ಎಲೈ ದಧೀಚನೇ, ಈ ಯಾಗದಲ್ಲಿ ವಿಧ್ಯುಕ್ತವಾದ ಮಂತ್ರಗಳಿಂದ ಪವಿತ್ರವೂ ಸಂಪೂರ್ಣವೂ ಆದ ಹವಿಸ್ಸನ್ನು ಸುವರ್ಣ ಪಾತ್ರೆಯಲ್ಲಿ ತ.ಂಬಿಕೊಂಡು ಸರ್ವೋತ್ತಮನಾದ ಶ್ರೀಮನ್ನಾರಾಯಣನಿಗಾಗಿ ಒಯ್ಯುತ್ತಿದ್ದೇನೆ. ಈ ಯಾಗದಲ್ಲಿ ಪ್ರಭುವಾದ ಆ ಸ್ವಾಮಿಗಿಂತಲೂ ಉತ್ತಮನಾದವನು ಯಾವನಿರುವನು ಎಂದನು.

೧೦೮. ಪತಿವ್ರತೆಯೂ ಪರ್ವತರಾಜಕುಮಾರಿಯೂ ಆದ ಉಮಾದೇವಿಯು ದೇವತೆಗಳೆಲ್ಲರೂ ಎಲ್ಲಿಗೋ ಹೋಗುತ್ತಿರುವುದನ್ನು ನೋಡಿ ದೇವನಾದ ಪಶುಪತಿಯ ಸಂಗಡ ಇಂತೆಂದಳು.

೧೦೯. ಉಮಾದೇವಿಯು ಹೇಳಿದಳು :—ಎಲೈ ಸ್ವಾಮಿಯೇ, ಈ ಇಂದ್ರಾದಿ ದೇವತೆಗಳೆಲ್ಲರೂ ಎಲ್ಲಿಗೆ ಹೋಗುತ್ತಾರೆ ? ಸರ್ವಜ್ಞನಾದ ನಿನಗೆ ಎಲ್ಲವೂ ತಿಳಿದಿರುತ್ತದೆ. ಈ ವಿಷಯದಲ್ಲಿ ನನಗೆ ಬಹಳ ಸಂದೇಹವುಂಟಾಗಿದೆ ನಿಜವನ್ನು ಹೇಳು ಎಂದಳು.

॥ ಮಹೇಶ್ವರ ಉವಾಚ ॥

ದಕ್ಷೋ ನಾಮ ಮಹಾಭಾಗೋ ಪ್ರಜಾನಾಂ ಪ್ರತಿರುತ್ತಮಃ ।
ಹಯಮೇಧೇನ ಯಜತೇ ತತ್ರ ಯಾಂತಿ ದಿವೌಕಸಃ ॥ ೧೧೦ ॥

॥ ದೇವ್ಯುವಾಚ ॥

ಯಜ್ಞಮೇತಂ ಮಹಾಭಾಗ ಕಿಮರ್ಥಂ ನ ಗತೋಸಿ ವೈ ।
ಕೇನ ವಾ ಪ್ರತಿಷೇಧೇನ ಗಮನಂ ಪ್ರತಿಷಿಧ್ಯತೇ ॥ ೧೧೧ ॥

॥ ಮಹೇಶ್ವರ ಉವಾಚ ॥

ಸುರೈರೇವ ಮಹಾಭಾಗೇ ಸರ್ವಮೇತದನುಷ್ಠಿತಂ ।
ಯಜ್ಞೇಷು ಮಮ ಸರ್ವೇಷು ನ ಭಾಗ ಉಪಕಲ್ಪಿತಃ ॥ ೧೧೨ ॥

ಪೂರ್ವೋಪಾಯೋಪಪನ್ನೇನ ಮಾರ್ಗೇಣ ವರವರ್ಣಿನಿ ।
ನ ಮೇ ಸುರಾಃ ಪ್ರಯಚ್ಛಂತಿ ಭಾಗಂ ಯಜ್ಞಸ್ಯ ಧೀಮತಃ ॥ ೧೧೩ ॥

---

೧೧೦. ಮಹಾದೇವನು ಹೇಳಿದನು :—ಆಗ ಈಶ್ವರನು ಎಲೌ ಸತಿಯೇ, ಕೇಳು ;—ಮಹಾಭಾಗ್ಯವಂತನೂ ಪ್ರಜಾಪತಿಗಳಲ್ಲಿ ಉತ್ತಮನೂ ಆದ ದಕ್ಷನು ಅಶ್ವಮೇಧಯಾಗವನ್ನು ಮಾಡುತ್ತಾನೆ. ಈ ದೇವತೆಗಳೆಲ್ಲರೂ ಅಲ್ಲಿಗೆ ಹೋಗುತ್ತಾರೆ ಎಂದು ಹೇಳಿದನು.

೧೧೧. ಉಮಾದೇವಿಯು ಹೇಳಿದಳು :—ಆಗ ಉಮಾದೇವಿಯು ಎಲೈ ಸ್ವಾಮಿಯೇ, ತಾವು ಆ ಯಾಗಕ್ಕೆ ಏತಕ್ಕಾಗಿ ಹೋಗುವುದಿಲ್ಲ ? ಅಲ್ಲಿಗೆ ಹೋಗಲು ಏನು ಪ್ರತಿಬಂಧಕವಿರುತ್ತದೆ ಇದನ್ನು ತಿಳಿಸಬೇಕೆಂದು ಪ್ರಾರ್ಥಿಸಿದಳು.

೧೧೨. ಮಹೇಶ್ವರನು ಇಂತೆಂದನು :-ಎಲೌ ಭಾಗ್ಯಶಾಲಿಯಾದ ಪ್ರಿಯಳೇ, ದೇವತೆಗಳೆಲ್ಲರೂ ಕೂಡಿ ಈ ಯಾಗದಲ್ಲಿ ಹವಿರ್ಭಾಗಗಳನ್ನು ಅನುಭವಿಸುತ್ತಾರೆ. ನನಗೆ ಭಾಗವನ್ನು ಕೊಡುವುದಿಲ್ಲ. ಎಲ್ಲವನ್ನೂ ಅವರೇ ಸ್ವೀಕರಿಸುತ್ತಾರೆ. ಇದೆಲ್ಲವೂ ಅವರ ಚೇಷ್ಟೆಯೇ ಆಗಿದೆ ಎಂದನು.

೧೧೩. ಎಲೌ ಸುಂದರಾಂಗಿಯೇ, ದೇವತೆಗಳೆಲ್ಲರೂ ಯಾವುದೋ ಒಂದು ಯುಕ್ತಿಯನ್ನು ಹುಡುಕಿ ದಕ್ಷನಿಗೆ ಉಪದೇಶಮಾಡಿ ಹವಿರ್ಭಾಗಗಳೆಲ್ಲವನ್ನೂ ನನಗೆ ಕೊಡದೇ ತಾವೇ ಸ್ವೀಕರಿಸುತ್ತಾರೆ ಎಂದನು.

॥ ದೇವ್ಯುವಾಚ ॥

ಭಗವನ್ ಸರ್ವದೇವೇಷು ಪ್ರಭಾವಾನಾಧಿಕೋ ಗುಣೈಃ ।
ಅಜೇಯಶ್ಚಾಪ್ಯಧೃಷ್ಯಶ್ಚ ತೇಜಸಾ ಯಶಸಾ ಶ್ರಿಯಾ ॥ ೧೧೪ ॥

ಅನೇನ ತು ಮಹಾಭಾಗ ಪ್ರತಿಷೇಧೇನ ನಾಮತಃ ।
ಅತೀವ ದುಃಖಮಾಪನ್ನಾ ವೇಪಥುಶ್ಚ ಮಮಾನಘ ॥ ೧೧೫ ॥

ಕಿಂ ನಾಮ ದಾನಂ ನಿಯಮಂ ತಪೋ ವಾ ।
ಕುರ್ಯಾಮಹಂ ಯೇನ ಪತಿರ್ಮಮಾದ್ಯ ॥
ಲಭೇತ ಭಾಗಂ ಭಗವಾನಚಿಂತ್ಯೋ ।
ಯಜ್ಞಸ್ಯ ಚಾರ್ಧಂ ತ್ವಥವಾ ತೃತೀಯಂ ॥ ೧೧೬ ॥

ಏವಂ ಬ್ರುವಾಣಾಂ ಭಗವಾನಚಿಂತ್ಯಃ ।
ಪತ್ನೀ ಪ್ರಹೃಷ್ಟಃ ಕ್ಷುಭಿತಾಮುವಾಚ ॥
ನ ವೇತ್ಸಿ ದೇವೇಶಿ ಕೃಶೋದರಾಂಗಿ ।
ಕಿಂ ನಾಮ ಯುಕ್ತಂ ವಚನಂ ತವೇದಂ ॥ ೧೧೭ ॥

---

೧೧೪. ಉಮಾದೇವಿಯು ಹೇಳಿದಳು :—ಎಲೈ ಪತಿಯೇ, ತಾವು ಸಮಸ್ತ ದೇವತೆಗಳಿಗಿಂತಲೂ ಗುಣಾಧಿಕರೂ ಜಯಿಸಲಸಾಧ್ಯರೂ ಅಧ್ಯಕ್ಷರೂ ತೇಜೋವಂತರೂ ಕೀರ್ತಿವಂತರೂ ಶ್ರೀಮಂತರೂ ಆಗಿರುತ್ತೀರಿ ಎಂದಳು.

೧೧೫. ಎಲೈ ಮಹಾನುಭಾವನಾದ ಪ್ರಿಯನೇ, ನಿಮ್ಮ ನಾಮನಿರ್ದೇಶ ಪೂರ್ವಕವಾಗಿ ನಿಷೇಧಿಸಿರುವುದು ನನಗೆ ಅತ್ಯಂತ ಖೇದವನ್ನೂ ಕಂಪವನ್ನೂ ಉಂಟು ಮಾಡುತ್ತಿದೆಯೆಂದಳು.

೧೧೬. ಎಲೈ ಸ್ವಾಮಿಯೇ, ನಾನು ಯಾವ ವಿಧವಾದ ತಪಸ್ಸು, ನಿಯಮ, ದಾನ, ವ್ರತ ಇವುಗಳನ್ನು ಮಾಡಿದರೆ ತಮಗೆ ಯಾಗದಲ್ಲಿ ಅರ್ಧಭಾಗವು ಅಥವಾ ಮೂರರಲ್ಲೊಂದು ಭಾಗವು ಪ್ರಾಪ್ತವಾಗುವುದು ಎಂದು ಪಾರ್ವತಿಯು ಹೇಳಿದಳು.

೧೧೭. ಹೀಗೆ ಹೇಳಿದಂಥ ಖಿನ್ನಳಾದ ಪಾರ್ವತಿಯನ್ನು ಕುರಿತು ಅಚಿಂತ್ಯ ಮಹಿಮನೂ ಪೂಜ್ಯನೂ ಆದ ಪರಮೇಶ್ವರನು ಸಂತೋಷಗೊಂಡು ದೇವೋತ್ತಮಳೂ ಸುಂದರಿಯೂ ಆದ ಎಲೌ ಪ್ರಿಯಳೇ, ನೀನು ಹೀಗೆ ಹೇಳಬಹುದೇ ? ಇದು ಯುಕ್ತವೇ ? ನಾನು ಅಂತಹ ಅಸಮರ್ಥನೇ ? ಎಂದು ನುಡಿದನು.

ಅಹಂ ಹಿ ಜಾನಾಮಿ ವಿಶಾಲನೇತ್ರೇ ।
ಧ್ಯಾನೇನ ಸರ್ವಂ ಹಿ ವದಂತಿ ಸಂತಃ ॥
ನ ವಾದ್ಯ ಮೋಹೇನ ಮಹೇಂದ್ರ ದೇವೋ ।
ಲೋಕತ್ರಯಂ ಸರ್ವಥಾ ಸಂಪ್ರಮೂಢಂ ॥ ೧೧೮ ॥

ಮಾಮಧ್ವರೇ ಶಂಸಿತಾರಃ ಸ್ತುವಂತಿ ।
ರಥಂತರೇ ಸಾಮ ಗಾಯಂತಿ ಗೇಯಂ ॥
ಮಾಂ ಬ್ರಾಹ್ಮಣಾ ಬ್ರಹ್ಮಸತ್ರೇ ಯಜಂತೇ ।
ಮಾಧ್ವರ್ಯವಃ ಕಲ್ಪಯಂತೇ ಚ ಭಾಗಂ ॥ ೧೧೯ ॥

॥ ದೇವ್ಯುವಾಚ ॥

ಅಪ್ರಾಕೃತೋಽಪಿ ಭಗವಾನ್ ಸರ್ವಸ್ತ್ರೀಜನಸಂಸದಿ ।
ಸ್ತೌತಿ ಗೋಪಾಯತೇ ವಾಪಿ ಸ್ವಮಾತ್ಮಾನಂ ನ ಸಂಶಯಃ ॥ ೧೨೦ ॥

---

೧೧೮. ಹೇ ವಿಶಾಲಾಕ್ಷಿಯೇ, ನೀನು ಧ್ಯಾನಮಾಡಿದರೆ ಸರ್ವವನ್ನು ತಿಳಿಯುವೆಯೆಂದು ಜ್ಞಾನಿಗಳು ಹೇಳುವರು. ಈಗ ದೇವೇಂದ್ರನೇ ಮೊದಲಾದ ಸಮಸ್ತ ಜನರೂ ಅಜ್ಞಾನದಿಂದ ನನ್ನ ಮಹಿಮೆಗಳನ್ನು ತಿಳಿಯದೇ ಮೂಢರಾಗಿರುವರು.

೧೧೯. ಸ್ತುತಿಪಾಠಕರು ಯಾಗದಲ್ಲಿ ನನ್ನನ್ನು ಹೊಗಳುತ್ತಾರೆ. ಸಾಮಗಳು ರಥಂತರದಲ್ಲಿ ನನ್ನನ್ನು ಗಾನಮಾಡುತ್ತವೆ. ಬ್ರಾಹ್ಮಣರು ನನ್ನನ್ನು ಹೊಗಳುತ್ತಾರೆ. ಅಧ್ವರ್ಯುಗಳು ಹವಿಸ್ಸನ್ನು ನನಗೆ ಕೊಡುತ್ತಾರೆ ಎಂದು ಹೇಳಿದನು.

೧೨೦. ಉಮಾದೇವಿಯು ಇಂತೆಂದಳು :—ಪ್ರಿಯನೇ, ನೀನು ಅಪ್ರಾಕೃತನೂ ಭಗವಂತನೂ ಸರ್ವರಕ್ಷಕನೂ ಆಗಿರುವುದೇನೋ ನಿಜ. ಆದರೆ ಸಮಸ್ತರಾದ ಹೆಣ್ಣು ಮಕ್ಕಳ ಸಂಗಡ ತನ್ನನ್ನು ತಾನೇ ಹೊಗಳಿಕೊಳ್ಳುವುದು ಯುಕ್ತವಾಗಿ ತೋರುವುದಿಲ್ಲ ಕಾರ್ಯಗಳ ಮೂಲಕ ತಿಳಿಸಬೇಕೆಂದಳು.

॥ ಭಗವಾನುವಾಚ ॥

ನಾತ್ಮಾನಂ ಸ್ತೌಮಿ ದೇವೇಶಿ ಪಶ್ಯ ತ್ವಮುಪಗಚ್ಛ ಚ ।
ಯಂ ಸ್ರಕ್ಷ್ಯಾಮಿ ವರಾರೋಹೇ ಭಾಗಾರ್ಥಂ ವರವರ್ಣಿನಿ ॥ ೧೨೧ ॥

ಏವಮುಕ್ತ್ವಾ ತು ಭಗವಾನ್ ಪತ್ನೀಂ ಪ್ರಾಣೈರಪಿ ಪ್ರಿಯಂ ।
ಸೋಽಸೃಜತ್ ಭಗವಾನ್ವಕ್ತ್ರಾದ್ಭೂತಂ ಕ್ರೋಧಾಗ್ನಿಸನ್ನಿಭಂ ॥ ೧೨೨ ॥

ಸಹಸ್ರಶೀರ್ಷಂ ದೇವಂ ಚ ಸಹಸ್ರಚರಣೇಕ್ಷಣಂ ।
ಸಹಸ್ರಮುದ್ಗರಧರಂ ಸಹಸ್ರಶರಪಾಣಿನಂ ॥ ೧೨೩ ॥

ಶಂಖಚಕ್ರಗದಾಪಾಣಿಂ ದೀಪ್ತಕಾರ್ಮುಕಧಾರಿಣಂ ।
ಪರಶ್ವಸಿಧರಂ ದೇವಂ ಮಹಾರೌದ್ರಂ ಭಯಾವಹಂ ॥ ೧೨೪ ॥

ಘೋರರೂಪೇಣ ದೀಪ್ಯಂತಂ ಚಂದ್ರಾರ್ಧಕೃತಭೂಷಣಂ ।
ವಸಾನಂ ಚರ್ಮ ವೈಯಾಘ್ರಂ ಮಹಾರುಧಿರನಿಃಸ್ರವಂ ॥ ೧೨೫ ॥

ದಂಷ್ಟ್ರಾಕರಾಲಂ ವಿಭ್ರಾಂತಂ ಮಹಾವಕ್ತ್ರಂ ಮಹೋದರಂ ।
ವಿದ್ಯುಜ್ಜಿಹ್ವಂ ಪ್ರಲಂಬೋಷ್ಠಂ ಲಂಬಕರ್ಣಂ ದುರಾಸದಂ ॥ ೧೨೬ ॥

---

೧೨೧. ಈಶ್ವರನು ಹೇಳಿದನು;—ಭೋ! ಪ್ರಿಯಳೇ, ನಾನು ನನ್ನನ್ನು ಕೇವಲ ಹೊಗಳಿಕೊಳ್ಳುವುದಿಲ್ಲ. ನನ್ನ ಶಕ್ತಿಯನ್ನು ನೋಡು ಹೇ ಪ್ರಿಯಳೇ, ಒಂದು ಭೂತವನ್ನು ಸೃಷ್ಟಿಸುತ್ತೇನೆ. ಆದರ ಸಾಮರ್ಥ್ಯವನ್ನು ನೋಡು. ಆದರಿಂದ ಯಜ್ಞದಲ್ಲಿ ನನಗೆ ಬರಬೇಕಾದ ಹವಿರ್ಭಾಗವೆಲ್ಲವೂ ತಾನಾಗಿಯೇ ಬರುವುದೆಂದನು.

೧೨೨. ಭಗವಂತನಾದ ಈಶ್ವರನು ಅತಿ ಪ್ರಿಯಳಾದ ಪಾರ್ವತಿಗೆ ಹೀಗೆ ಹೇಳಿ ತನ್ನ ಮುಖದಿಂದ ಪ್ರಲಯಾಗ್ನಿಗೆ ಸಮವಾದ ಮತ್ತು ಭಯಂಕರವಾದ ಭೂತವೊಂದನ್ನು ಸೃಷ್ಟಿಸಿದನು.

೧೨೩-೧೩೨. ಈಶ್ವರನು ಸಹಸ್ರಸಂಖ್ಯಾಕವಾದ ಶಿರಸ್ಸು, ಪಾದ, ನೇತ್ರ, ಇವುಗಳುಳ್ಳವನೂ ಸಹಸ್ರಾರು ಗುದ್ದಲಿ ಬಾಣಗಳು ಶಂಖ, ಚಕ್ರ, ಗದೆಗಳು ಪ್ರಕಾಶಿಸುವ ಧನುಸ್ಸನ್ನು, ಇವುಗಳನ್ನು ಧರಿಸಿರುವ ಸಾವಿರಾರು ಹಸ್ತಗಳುಳ್ಳವನೂ ಮಹಾಭಯಂಕರನೂ ಕೊಡಲಿ ಕತ್ತಿಗಳನ್ನು ಧರಿಸಿರುವವನೂ ರೌದ್ರನೂ ಘೋರ

ಕುಲಿಶೋದ್ಯೋತಿತಕರಂಭಾಭಿರ್ಜ್ವಲಿತ ಮೂರ್ಧಜಂ ।
ಜ್ವಾಲಾಮಾಲಾಪರಿಕ್ಷಿಪ್ತಂ ಮುಕ್ತಾದಾಮವಿಭೂಷಿತಂ ॥ ೧೨೭ ॥

ತೇಜಸಾ ಚೈವ ದೀಪ್ಯಂತಂ ಯುಗಾಂತಮಿವ ಪಾವಕಂ ।
ಆಕರ್ಣದಾರಿತಾಸ್ಯಾಂತಂ ಚತುರ್ದಿಕ್ಷು ಭಯಾನಕಂ ॥ ೧೨೮ ॥

ಮಹಾಬಲಂ ಮಹಾತೇಜಂ ಮಹಾಪುರುಷಮೀಶ್ವರಂ ।
ವಿಶ್ವಹರ್ತುರ್ಮಹಾಕಾಯಂ ಮಹಾನ್ಯಗ್ರೋಧಮಂಡಲಂ ॥
ಯುಗಪಚ್ಚಂದ್ರಶತವದ್ದೀಪ್ಯತಂ ಮನ್ಮಥಾಗ್ನಿವತ್ ॥ ೧೨೯ ॥

ಚತುರ್ಮಹಾಸ್ಯಂ ಸಿತತೀಕ್ಷ್ಣದಂಷ್ಟ್ರಂ ।
ಮಹೋಗ್ರತೇಜೋಬಲ ಕೌತುಕಾಢ್ಯಂ ॥
ಯುಗಾಂತಸೂರ್ಯಾಗ್ನಿ ಸಹಸ್ರಭಾಸಂ ।
ಸಹಸ್ರಚಂದ್ರಾಮಲ ಕಾಂತಿಕಾಂತಂ ॥
ಪ್ರದೀಪ್ತಸರ್ವೌಷಧಿಮಂದರಾಭಂ ।
ಸುಮೇರುಕೈಲಾಸಹಿಮಾದ್ರಿತುಲ್ಯಂ ॥ ೧೩೦ ॥

---

ರೂಪದಿಂದ ಪ್ರಕಾಶಿಸುವವನೂ ಅರ್ಧಚಂದ್ರಾಲಂಕೃತನೂ ಅಧಿಕವಾದ ರಕ್ತ ಸುರಿಯುವ ವ್ಯಾಘ್ರಚರ್ಮಧಾರಿಯೂ ಕೋರೆಹಲ್ಲುಗಳಿಂದ ಭಯಾನಕನೂ ವಿಶಾಲ ಮುಖನೂ ಮಹೋದರನೂ ಮಿಂಚಿಗೆ ಸಮವಾದ ನಾಲಗೆಯುಳ್ಳವನೂ ಲಂಬೋಷ್ಠನೂ ದೀರ್ಘಕರ್ಣನೂ ದುರ್ಧರ್ಷನೂ ದೀರ್ಘಾಸ್ಯನೂ ಭಯಪ್ರದನೂ ಬಲಿಷ್ಠನೂ ತೇಜಸ್ವಿಯೂ ಮಹಾಪುರುಷನೂ ಐಶ್ವರ್ಯವಂತನೂ ಲೋಕನಾಶಕನೂ ಮಹಾಕಾಯನೂ ಆಲದಮರದಂತೆ ಅತಿ ವಿಶಾಲನೂ ನೂರಾರು ಚಂದ್ರಕಾಂತಿಯುಕ್ತನೂ ಮನ್ಮಥನಂತೆ ಹೊಳೆಯುವವನೂ ಚತುರ್ಮುಖನೂ ತೀಕ್ಷ್ಣದಂಷ್ಟ್ರನೂ ಮಹತ್ತಾದ ತೇಜಸ್ಸು, ಬಲ, ಆಶ್ಚರ್ಯ ಇವುಗಳಿಂದ ಕೂಡಿದವನೂ ಪ್ರಳಯಕಾಲದ ಸಹಸ್ರಸೂರ್ಯರಂತೆ ಕಾಂತಿಯುಳ್ಳವನೂ ಸಹಸ್ರಾರು ಚಂದ್ರನಂತೆ ಕಾಂತಿಯುಕ್ತನೂ ಸಕಲೌಷಧಿಗಳಿಂದ ಕೂಡಿದ ಮಂದರ, ಮೇರು, ಕೈಲಾಸ, ಹಿಮಾಲಯ ಇವೇ ಮೊದಲಾದ ಪರ್ವತಗಳಿಗೆ ಸಮಾನನೂ ಮಹಾಪರಾಕ್ರಮಿಯೂ ಸುಂದರನಾಸಿಕನೂ ಭಯಂಕರವಾದ ಕಪೋಲವುಳ್ಳವನೂ ಅಗ್ನಿನೇತ್ರನೂ ಅಗ್ನಿಜ್ವಾಲೆಗಳಿಂದ ಕೂಡಿದವನೂ ಚರ್ಮಾಂಬರನೂ ಮಹಾಸರ್ಪಗಳಿಂದ ಭೂಷಿತನೂ ಚಂದ್ರಮೌಳಿಯೂ

ಯುಗಾಂತಾರ್ಕಾಭಂ ಮಹಾವೀರ್ಯಂ ಚಾರುನಾಸಂ ಮಹಾನನಂ ।
ಪ್ರಚಂಡಗಂಡಂ ದೀಪ್ತಾಕ್ಷಮುಗ್ನಿಜ್ವಾಲಾನನಂ ॥ ೧೩೧ ॥

ಮೃಗೇಂದ್ರಕೃತ್ತಿವಸನಂ ಮಹಾಭುಜಗವೇಷ್ಟಿತಂ ।
ಉಷ್ಣೀಷಿಣಂ ಚಂದ್ರಧರಂ ಕ್ವಚಿದುಗ್ರಂ ಕ್ವಚಿತ್ಸಮಂ ॥ ೧೩೨ ॥

ನಾನಾಕುಸುಮಮೂರ್ಧಾನಂ ನಾನಾಗಂಧಾನು ಲೇಪನಂ ।
ನಾನಾರತ್ನವಿಚಿತ್ರಾಂಗಂ ನಾನಾಭರಣಭೂಷಿತಂ ॥ ೧೩೩ ॥

ಕರ್ಣಿಕಾರಸ್ರಜಂ ದೀಪ್ತಂ ಕ್ರೋಧಾದುದ್ಭ್ರಾಂತಲೋಚನಂ ।
ಕ್ವಚಿನ್ನೃತ್ಯತಿ ಚಿತ್ರಾಂಗಂ ಕ್ವಚಿದ್ವದತಿ ಸುಸ್ವರಂ ॥ ೧೩೪ ॥

ಕ್ವಚಿಧ್ಯಾಯತಿ ಯುಕ್ತಾತ್ಮಾ ಕ್ವಚಿಸ್ಥೂಲಂ ಪ್ರಮಾರ್ಜತಿ ।
ಕ್ವಚಿದ್ಗಾಯತಿ ವಿಶ್ವಾತ್ಮಾ ಕ್ವಚಿದ್ರೌತಿ ಮುಹುರ್ಮುಹುಃ ॥ ೧೩೫ ॥

ಜ್ಞಾನಂ ವೈರಾಗ್ಯಮೈಶ್ವರ್ಯಂ ತಪಃ ಸತ್ಯಂ ಕ್ಷಮಾ ಧೃತಿಃ ।
ಪ್ರಭುತ್ವಮಾತ್ಮಸಂಬಂಧೋ ಹ್ಯಧಿಷ್ಠಾನಗುಣೈರ್ಯುತಃ ॥ ೧೩೬ ॥

ಜಾನುಭ್ಯಾಮವನಿಂ ಗತ್ವಾ ಪ್ರಣತಃ ಪ್ರಾಂಜಲಿಃ ಸ್ಥಿತಃ ।
ಆಜ್ಞಾಪಯ ತ್ವಂ ದೇವೇಶ ಕಿಂ ಕಾರ್ಯಂ ಕರವಾಣಿ ತೇ ॥ ೧೩೭ ॥

---

ನಾನಾಪುಷ್ಪಗಳಿಂದಲಂಕೃತನೂ ನಾನಾಗಂಧಗಳಿಂದ ವಿಲಿಪ್ತನೂ ನಾನಾರತ್ನಗಳಿಂದ ಲಂಕೃತನೂ ನಾನಾಭರಣಗಳಿಂದ ಭೂಷಿತನೂ ಕಣಿಗಲೆಪುಷ್ಪಮಾಲಾಧಾರಿಯೂ ಕೋಪದಿಂದ ತಿರುಗುತ್ತಿರುವ ಗುಡ್ಡೆಗಳುಳ್ಳವನೂ ಆದ ವೀರಭದ್ರನಾಮಕಭೂತ ವನ್ನು ಸೃಷ್ಟಿಸಿದನು.

೧೩೩–೧೩೭. ಆ ವೀರಭದ್ರನು ಕೆಲವುಕಾಲ ಧ್ಯಾನಿಸುತ್ತಲೂ ಗಾನಮಾಡು ತ್ತಲೂ ಕೆಲವುಕಾಲ ಶುದ್ಧಿಮಾಡುತ್ತಲೂ ಪುನಃಪುನಃ ಕೂಗುತ್ತಲೂ ಇರುತ್ತಾ ಜ್ಞಾನ, ಭಕ್ತಿ, ವೈರಾಗ್ಯ, ಐಶ್ವರ್ಯ, ತಪಸ್ಸು, ಸತ್ಯ, ಕ್ಷಮಾ, ಧೈರ್ಯ, ಪ್ರಭುತ್ವ, ಆತ್ಮಸಂಬೋಧ, ಆತ್ಮಜ್ಞಾನ, ಇವೇ ಮೊದಲಾದ ಗುಣಗಳಿಂದ ಯುಕ್ತನೂ ಎರಡು ಮಂಡಿಯನ್ನೂ ನೆಲಕ್ಕೂರಿ ಅಂಜಲಿಬದ್ಧನಾಗಿ ನಮಸ್ಕರಿಸುತ್ತಾ ಎಲೈ ದೇವೋ ತ್ತಮನೇ, ಅಪ್ಪಣೆಯಾಗಬೇಕು. ಯಾವ ಕಾರ್ಯವು ನಡೆಯಬೇಕಾಗಿದೆ ಅಪ್ಪಣೆ ಯಾಗಬೇಕೆಂದು ಈಶ್ವರನನ್ನು ಪ್ರಾರ್ಥಿಸಿದನು.

**ತಮುವಾಚಾಕ್ಷಿಪ ಮುಖಂ ದಕ್ಷಸ್ಯೇಹ ಮಹೇಶ್ವರಃ ।**
**ದೇವಸ್ಯಾನುಮತಿಂ ಶ್ರುತ್ವಾ ವೀರಭದ್ರೋ ಮಹಾಬಲಃ ॥**
**ಪ್ರಣಮ್ಯ ಶಿರಸಾ ಪಾದೌ ದೇವೇಶಸ್ಯ ಉಮಾಪತೇಃ ॥ ೧೩೮ ॥**

**ತತೋ ಬಂಧಾತ್ ಪ್ರಮುಕ್ತೇನ ಸಿಂಹೇನೇವೇಹ ಲೀಲಯಾ ।**
**ದೇವ್ಯಾ ಮನ್ಯುಕೃತಂ ಮತ್ವಾ ಹತೋ ದಕ್ಷಸ್ಯ ಸ ಕ್ರತುಃ ॥ ೧೩೯ ॥**

**ಮನ್ಯುನಾ ಚ ಮಹಾಭೀಮಾ ಭದ್ರಕಾಲೀ ಮಹೇಶ್ವರೀ ।**
**ಆತ್ಮನಃ ಸರ್ವಸಾಕ್ಷಿತ್ವೇ ತೇನ ಸಾರ್ದ್ಧಂ ಸಹಾನುಗಾ ॥ ೧೪೦ ॥**

**ಸ ಏಷ ಭಗವಾನ್ ಕ್ರುದ್ಧಃ ಪ್ರೇತಾವಾಸಕೃತಾಲಯಃ ।**
**ವೀರಭದ್ರ ಇತಿ ಖ್ಯಾತೋ ದೇವ್ಯಾ ಮನ್ಯುಪ್ರಮಾರ್ಜಕಃ ॥ ೧೪೧ ॥**

**ಸೋಽಸೃಜದ್ರೋಮಕೂಪೇಭ್ಯೋ ರೌದ್ರಾನ್ನಾಮ ಗಣೇಶ್ವರಾನ್ ।**
**ರುದ್ರಾನುಗಾ ಮಹಾವೀರ್ಯಾ ರುದ್ರವೀರ್ಯಪರಾಕ್ರಮಾಃ ॥ ೧೪೨ ॥**

---

೧೩೮. ಆಗ ಪರಮೇಶ್ವರನು ದಕ್ಷನ ಮಹಾಯಾಗವನ್ನು ನಾಶಮಾಡು, ಎಂದು ವೀರಭದ್ರನಿಗೆ ಆಜ್ಞಾಪಿಸಲು ಮಹಾಬಲಿಷ್ಠನಾದ ವೀರಭದ್ರನು ಸ್ವಾಮಿಯ ಆಜ್ಞೆಯನ್ನು ಶಿರಸಾವಹಿಸಿಕೊಂಡು ಉಮಾಪತಿಯ ಪಾದಕಮಲಗಳಿಗೆ ವಂದಿಸಿ ಹೊರಟನು.

೧೩೯. ಅನಂತರ ವೀರಭದ್ರನು, ಬಂಧಮುಕ್ತವಾದ ಸಿಂಹದಂತೆ ಅನಾಯಾಸದಿಂದ ಹೊರಟು ಇದು ಉಮಾದೇವಿಯ ಕೋಪದಿಂದಾದ ಕೆಲಸವೆಂದು ತಿಳಿದು, ದಕ್ಷನ ಯಾಗಶಾಲೆಗೆ ಹೋಗಿ ಆ ಯಾಗವನ್ನು ಧ್ವಂಸಮಾಡಿದನು.

೧೪೦. ಆಗ ಕೋಪದಿಂದ ಭಯಂಕರಳೂ, ಭದ್ರಕಾಲಿಯೂ, ಮಹೇಶ್ವರಿಯೂ ಆದ ಉಮಾದೇವಿಯು, ಅದನ್ನು ಪ್ರತ್ಯಕ್ಷವಾಗಿ ನೋಡುವುದಕ್ಕಾಗಿ ಪರಿವಾರ ಸಮೇತನಾದ ಪರಮೇಶ್ವರನ ಸಂಗಡ ಹೊರಟಳು

೧೪೧-೧೪೨. ಸ್ಮಶಾನವಾಸಿಯೂ ಕ್ರುದ್ಧನೂ, ಪೂಜ್ಯನೂ, ಆದ ವೀರಭದ್ರನು ಪಾರ್ವತೀಕೋಪಪರಿಹಾರಕ್ಕಾಗಿ ತನ್ನ ರೋಮಕೂಪಗಳಿಂದ ಭಯಂಕರವಾದ ಪ್ರಮಥಗಣವನ್ನು ಸೃಷ್ಟಿಮಾಡಿದನು. ಅವರೆಲ್ಲರೂ ರುದ್ರದೇವನಿಗೆ ಸಮವಾದ

ರುದ್ರಸ್ಯಾನುಚರಾಃ ಸರ್ವೇ ಸರ್ವೇ ರುದ್ರಸಮಪ್ರಭಾಃ ।
ತೇ ನಿಪೇತುಸ್ತತಸ್ತೂರ್ಣಂ ಶತಶೋऽಥ ಸಹಸ್ರಶಃ ॥ ೧೪೩ ॥

ತತಃ ಕಿಲಕಿಲಾಶಬ್ದ ಆಕಾಶಂ ಪೂರಯನ್ನಿವ ।
ತೇನ ಶಬ್ದೇನ ಮಹತಾ ತ್ರಸ್ತಾಃ ಸರ್ವೇ ದಿವೌಕಸಃ ॥ ೧೪೪ ॥

ಪರ್ವತಾಶ್ಚ ವ್ಯಶೀರ್ಯಂತ ಕಂಪತೇ ಚ ವಸುಂಧರಾ ।
ಮೇರುಶ್ಚ ಘೂರ್ಣತೇ ವಿಪ್ರಾಃ ಕ್ಷುಭ್ಯಂತೇ ವರುಣಾಲಯಾಃ ॥ ೧೪೫ ॥

ಅಗ್ನಯೋ ನೈವ ದೀಪ್ಯಂತೇ ನ ಚ ದೀಪ್ಯಂತಿ ಭಾಸ್ಕರಾಃ ।
ಗ್ರಹಾ ನೈವ ಪ್ರಕಾಶಂತೇ ನಕ್ಷತ್ರಾಣಿ ನ ತಾರಕಾಃ. ॥ ೧೪೬ ॥

ಋಷಯೋ ನಾಭ್ಯಭಾಷಂತ ನ ದೇವಾ ನ ಚ ದಾನವಾಃ ।
ಏವಂ ಹಿ ತಿಮಿರೀಭೂತಂ ನಿರ್ದಹಂತಿ ವಿಮಾನಿತಾಃ ॥ ೧೪೭ ॥

ಸಿಂಹನಾದಂ ಪ್ರಮುಂಚಂತೇ ಘೋರರೂಪಾ ಮಹಾಬಲಾಃ ।
ಪ್ರಭಂಜಂತೇ ಪರೇ ಘೋರಾ ಯೂಪಾನುತ್ಪಾಟಯಂತಿ ಚ ॥ ೧೪೮ ॥

---

ಶೌರ್ಯ, ವೀರ್ಯ, ಖ್ಯಾಂತಿ, ಕಾಂತಿ ಇವುಗಳುಳ್ಳವರೂ ಸಹಸ್ರಸಂಖ್ಯಾಕರೂ ಆಗಿ ಯೊಗಶಾಲೆಗೆ ಬಂದಿಳಿದರು.

೧೪೪ ಅನಂತರ ಕಿಲಕಿಲವೆಂಬ ಕೋಲಾಹಲಧ್ವನಿಯು ಆಕಾಶವನ್ನು (ತುಂಬಿತು) ವ್ಯಾಪಿಸಿತು, ಆ ಮಹಾಶಬ್ದದಿಂದ ಸಮಸ್ತರಾದ ದೇವತೆಗಳೂ ಹೆದರಿದರು.

೧೪೫. ಎಲೈ ವಿಪ್ರರೇ, ಆ ಧ್ವನಿಗೆ ಪರ್ವತಗಳು ಸೀಳಿಹೋದುವು. ಭೂಮಿಯು ಕಂಪಿಸಿತು, ಮೇರುಗಿರಿಯು ನಡುಗಿತು. ಸಮುದ್ರಗಳು ಅಲ್ಲೋಲ ಕಲ್ಲೋಲವಾದುವು.

೧೪೬-೧೪೭. ಆಗ ಅಗ್ನಿಗಳೂ, ಸೂರ್ಯರೂ, ಗ್ರಹಗಳೂ, ನಕ್ಷತ್ರಗಳೂ, ತಾರಕೆಗಳು ಪ್ರಕಾಶಿಸಲಿಲ್ಲ. ಋಷಿಗಳೂ, ದೇವತೆಗಳು ದಾನವರೂ ಇತರರೂ ಕೂಡ, ಮಾತನಾಡಲಿಲ್ಲ. ಜಗತ್ತೆಲ್ಲವೂ ಅಂಧಕಾರಮಯವಾಗಿತ್ತು, ವಿಮಾನಗಳು ಸುಟ್ಟು ಕೆಳಗೆ ಬಿದ್ದುವು.

೧೪೮-೧೫೦. ಭಯಂಕರರೂಪಿಗಳೂ, ಮಹಾಬಲಿಷ್ಠರೂ ಆದ ಕೆಲವರು ಯಾಗ ಶಾಲೆಯನ್ನು ಮುರಿದರು. ಇತರರು ಯೂಪಸ್ತಂಭವನ್ನು ಕಿತ್ತುಹಾಕಿದರು. ಮತ್ತೆ

ಪ್ರಮರ್ದಂತಿ ತಥಾ ಚಾನ್ಯೇ ವಿನೃತ್ಯಂತಿ ತಥಾಪರೇ ।
ಆಧಾವಂತಿ ಪ್ರಧಾವಂತಿ ವಾಯುವೇಗಾ ಮನೋಜವಾಃ ॥ ೧೪೯ ॥

ಚೂರ್ಣಂತೇ ಯಜ್ಞಪಾತ್ರಾಣಿ ಯಾಗಸ್ಯಾಯತನಾನಿ ಚ ।
ಶೀರ್ಯಮಾಣಾನಿ ದೃಶ್ಯಂತೇ ತಾರಾ ಇವ ನಭಸ್ತಲಾತ್ ॥ ೧೫೦ ॥

ದಿವ್ಯಾನ್ನಪಾನಭಕ್ಷ್ಯಾಣಾಂ ರಾಶಯಃ ಪರ್ವತೋಪಮಾಃ ।
ಕ್ಷೀರನದ್ಯಸ್ತಥಾ ಚಾನ್ಯಾ ಘೃತಪಾಯಸಕರ್ದಮಾಃ ॥
ಮಧುಮಂಡೋದಕಾ ದಿವ್ಯಾಃ ಖಂಡಶರ್ಕರವಾಲುಕಾಃ ॥ ೧೫೧ ॥

ಷಡ್ರಸಾನ್ನಿವಹಂತ್ಯನ್ಯಾ ಗುಡಕುಲ್ಯಾ ಮನೋರಮಾಃ ।
ಉಚ್ಚಾವಚಾನಿ ಮಾಂಸಾನಿ ಭಕ್ಷ್ಯಾಣಿ ವಿವಿಧಾನಿ ಚ ॥ ೧೫೨ ॥

ಯಾನಿ ಕಾನಿ ಚ ದಿವ್ಯಾನಿ ಲೇಹ್ಯಂಚೋಷ್ಯಂ ತಥಾಽಪರೇ ।
ಭುಂಜತೇ ವಿವಿಧೈರ್ವಕ್ತ್ರೈರ್ವಿಲುಂಠಂತಿ ಚ ಸರ್ವಶಃ ॥
ಕ್ರೀಡಂತಿ ವಿವಿಧಾಕಾರಾಶ್ಚಿಕ್ಷಿಪುಃ ಸುರಯೋಷಿತಃ ॥ ೧೫೩ ॥

---

ಕೆಲವರು ಮರ್ದನಮಾಡಿದರು. ಅನ್ಯರು ನರ್ತರೆಮಾಡಿದರು. ಕೆಲವರು ವಾಯು ವೇಗವಾಗಿ ಓಡಿಹೋದರು. ಕೆಲವರು ಯಜ್ಞಪಾತ್ರೆಗಳನ್ನು ಒಡೆದುಹಾಕಿದರು. ಇನ್ನು ಕೆಲವರು ಯಾಗಭವನಗಳನ್ನು ಕಿತ್ತುಹಾಕಿದರು, ಆಕಾಶದಿಂದ ನಕ್ಷತ್ರಗಳು ಉದುರುವಂತೆ ತೋರಿತು. ಅಗ ಎಲ್ಲರೂ ಭಯಭೀತರಾದರು.

೧೫೧-೧೫೩. ಆ ಯಾಗದಲ್ಲಿ ದೇವಭೋಗ್ಯವಾದ ಅನ್ನ, ಪಾನ, ಭಕ್ಷ್ಯ, ಭೋಜ್ಯ ಇವುಗಳ ರಾಶಿಗಳು ಪರ್ವತಾಕಾರಿಗಳಾಗಿದ್ದುವು. ಹಾಲು, ಮೊಸರು, ತುಪ್ಪ, ಜೇನು, ಪಾಯಸ ಇವುಗಳ ಕಾಲಿವೆಯು ಹರಿದುಹೋಗುತ್ತಿದ್ದವು, ಜೇನು ಸಕ್ಕರೆಯ ಕೊಡಗಳು ರಾಶಿರಾಶಿಯಾಗಿ ಒಡದುಹೋದವು, ಕೆಲವರು ರುಚಿಯಾದ ಷಡ್ರಸಾನ್ನಗಳನ್ನು ಮಾಡುತ್ತಿದ್ದರು. ಭೂತಪ್ರೇತಪಿಶಾಚಗಳು ನಾನಾ ವಿಧವಾದ ಮಾಂಸ, ಭಕ್ಷ್ಯ, ಭೋಜ್ಯ, ಗೊಜ್ಜು, ಚೆಣ್ಣೆ ಇವುಗಳನ್ನು ನಾನಾ ಮುಖಗಳಿಂದ ತಿನ್ನುತ್ತಲೂ, ಎರಚುತ್ತಲೂ, ವಿವಿಧ ಕ್ರೀಡೆಗಳನ್ನು ಮಾಡುತ್ತಲೂ ದೇವತಾ ಸ್ತ್ರೀಯರನ್ನು ಅಲ್ಲಿಂದಿಲ್ಲಿಗೆ ಎಸೆಯುತ್ತಲೂ ನಾನಾ ರೀತಿಯಲ್ಲಿ ವಿಹರಿಸುತ್ತಲೂ ಇದ್ದವು.

ರುದ್ರಕೋಪಪ್ರಯುಕ್ತಾಸ್ತು ಸರ್ವದೇವೈಃ ಸುರಕ್ಷಿತಂ ।
ತಂ ಯಜ್ಞಮಹನನ್ ಶೀಘ್ರಂ ರುದ್ರಕಲ್ಪಾಃ ಸಮೀಪತಃ ॥ ೧೫೪ ॥

ಚಕ್ರುರನ್ಯೇ ತಥಾ ನಾದಾನ್ ಸರ್ವಭೂತಭಯಂಕರಾನ್ ।
ಛಿತ್ವಾ ಶಿರೋಽನ್ಯೇ ಯಜ್ಞಸ್ಯ ವಿನದಂತಿ ಭಯಂಕರಾಃ ॥ ೧೫೫ ॥

ದಕ್ಷೋ ದಕ್ಷಪತಿಶ್ಚೈವ ದೇವೋ ಯಜ್ಞಪತಿಸ್ತಥಾ ।
ಮೃಗರೂಪೇಣ ಚಾಕಾಶೇ ಪ್ರಪಲಾಯಿತುಮಾರಭತ್ ॥ ೧೫೬ ॥

ವೀರಭದ್ರೋಽಪ್ರಮೇಯಾತ್ಮಾ ಜ್ಞಾತ್ವಾ ತಸ್ಯ ಬಲಂ ತದಾ ।
ಅಂತರಿಕ್ಷಗತಸ್ಯಾಶು ಚಿಚ್ಛೇದಾಸ್ಯ ಶಿರೋ ಮಹಾನ್ ॥ ೧೫೭ ॥

ದಕ್ಷಃ ಪ್ರಜಾಪತಿಶ್ಚೈವ ವಿನಷ್ಟಭ್ರಾಂತಚೇತನಃ ।
ಕ್ರುದ್ಧೇನ ವೀರಭದ್ರೇಣ ಶಿರಃ ಪಾದೇನ ಪೀಡಿತಃ ॥
ಜರಾಭಿಭೂತತೀವ್ರಾತ್ಮಾ ನಿಪಪಾತ ಮಹೀತಲೇ ॥ ೧೫೮ ॥

ತ್ರಯಸ್ತ್ರಿಂಶದ್ದೇವತಾನಾಂ ತಾಃ ಕೋಟ್ಯೋ ವಿಮಲಾತ್ಮಕಾಃ ।
ಪಾಶೇನಾಗ್ನಿಬಲೇನಾಶು ಬದ್ಧಾಃ ಸಿಂಹಬಲೇನ ಚ ॥ ೧೫೯ ॥

---

೧೫೪-೧೫೫. ಆಗ ಸಮಸ್ತರಾದ ದೇವತೆಗಳು ಆ ದಕ್ಷನ ಯಾಗವನ್ನು ರಕ್ಷಿಸಲು ಪ್ರಯತ್ನಮಾಡಿದರೂ ಕೂಡ ವ್ಯರ್ಥವಾಯಿತು. ರುದ್ರಕೋಪಪ್ರೇರಿತರೂ, ರುದ್ರಸಮಾನರೂ ಆದ ಗಣಗಳು ಯಾಗವನ್ನು ಧ್ವಂಸಮಾಡಿದುವು. ಕೆಲವರು ಸರ್ವಪ್ರಾಣಿಗಳಿಗೂ ಭಯವಾಗುವಂತೆ ಘರ್ಜಿಸಿದರು. ಕೆಲವು ಭೂತಗಳು ಯಾಗದ ಪಶುಗಳ ತಲೆಗಳನ್ನು ಕತ್ತರಿಸಿ, ಹಿಡಿದುಕೊಂಡು ಭಯಂಕರಗಳಾಗಿದ್ದುವು.

೧೫೬-೧೬೦. ಹೀಗೆ ಯಾಗವು ನಾಶವಾಗಲು ದಕ್ಷ, ಬ್ರಹ್ಮ, ದೇವತೆ, ಯಜಮಾನ ಇವರೇ ಮೊದಲಾದವರು ಮೃಗಗಳ ರೂಪಗಳನ್ನು ಹೊಂದಿ ಓಡಿ ಹೋಗಲು ಯತ್ನಿಸಿದರು. ಆಗ ಜ್ಞಾನಿಯಾದ ವೀರಭದ್ರನು ಅದನ್ನು ಅರಿತು ಅವರ ತಲೆಗಳನ್ನು ಛೇದಿಸಲು ಯತ್ನಿಸಿದನು. ಅದನ್ನರಿತ ದಕ್ಷನು ಭಯಭ್ರಾಂತನಾಗಲು ವೀರಭದ್ರನು ಕಾಲಿನಿಂದ ದಕ್ಷನ ತಲೆಯಮೇಲೆ ಒದ್ದನು. ಮುಪ್ಪಿನಿಂದ ಪೀಡಿತನಾದ ದಕ್ಷನು ಭೂಮಿಯಲ್ಲಿ ಬಿದ್ದನು, ಆಗ ಸಮಸ್ತರಾದ ದೇವತೆಗಳೂ ಅವನ ಪಾಶಕ್ಕೆ ಸಿಲುಕಿದರು. ಆಗ ದೇವತೆಗಳೆಲ್ಲರೂ ಮಹಾತ್ಮನೂ, ಪರಾಕ್ರಮಿಯೂ

**ತತೋ ಜಗ್ಮುರ್ಮಹಾತ್ಮಾನಂ ಸರ್ವೇ ದೇವಾ ಮಹಾಬಲಂ ।**
**ಪ್ರಸೀದ ಭಗವನ್ ರುದ್ರ ಭೃತ್ಯಾನಾಂ ಮಾ ಕ್ರುಧಃ ಪ್ರಭೋ ॥ ೧೬೦ ॥**

**ತತೋ ಬ್ರಹ್ಮಾದಯೋ ದೇವಾ ದಕ್ಷಶ್ಚೈವ ಪ್ರಜಾಪತಿಃ ।**
**ಊಚುಃ ಪ್ರಾಂಜಲಯೋ ಭೂತ್ವಾ ಕಥ್ಯತಾಂ ಕೋ ಭವಾನಿತಿ ॥ ೧೬೧ ॥**

**॥ ವೀರಭದ್ರ ಉವಾಚ ॥**

**ನ ಚ ದೇವೋ ನ ಚಾದಿತ್ಯೋ ನ ಚ ಭೋಕ್ತುಮಿಹಾಗತಃ ।**
**ನೈವ ದ್ರಷ್ಟುಂ ಹಿ ದೇವೇಂದ್ರಾನ್ನ ಚ ಕೌತೂಹಲಾನ್ವಿತಃ ॥ ೧೬೨ ॥**

**ದಕ್ಷಯಜ್ಞವಿನಾಶಾರ್ಥಂ ಸಂಪ್ರಾಪ್ತಂ ವಿದ್ಧಿ ಮಾಮಿಹ ।**
**ವೀರಭದ್ರ ಇತಿ ಖ್ಯಾತಂ ರುದ್ರಕೋಪಾದ್ವಿನಿರ್ಗತಂ ॥ ೧೬೩ ॥**

**ಭದ್ರಕಾಲೀ ಚ ವಿಜ್ಞೇಯಾ ದೇವ್ಯಾಃ ಕ್ರೋಧಾದ್ವಿನಿರ್ಗತಾ ।**
**ಪ್ರೇಷಿತಾ ದೇವದೇವೇನ ಯಜ್ಞಾಂತಿಕಮಿಹಾಗತಾ ॥ ೧೬೪ ॥**

---

ಆದ ರುದ್ರದೇವನ ಬಳಿಗೆ ಹೋಗಿ ಎಲೈ ಸ್ವಾಮಿಯಾದ ವೀರಭದ್ರನೇ ಭೃತ್ಯರಾದ ನಮ್ಮ ಅಪರಾಧಗಳನ್ನು ಕ್ಷಮಿಸು, ಪ್ರಸನ್ನನಾಗು. ಎಂದು ಬೇಡಿಕೊಂಡರು.

೧೬೧. ಆಗ ಬ್ರಹ್ಮಾದಿದೇವತೆಗಳು ದಕ್ಷಪ್ರಜಾಪತಿಯೊಡನೆ ವೀರಭದ್ರನ ಬಳಿಗೆ ಹೋಗಿ ತಾವು ಯಾರು, ಹೀಗೆ ಮಾಡಲು ಕಾರಣವೇನೆಂದು ಬೇಡಿಕೊಂಡರು.

೧೬೨-೧೬೩. ಆಗ ವೀರಭದ್ರನು ಇಂತೆಂದನು:—ನಾನು ದೇವತೆಯೂ ಅಲ್ಲ, ಸೂರ್ಯನೂ ಆಗಿಲ್ಲ, ಭೋಜನಕ್ಕೂ, ನೋಟಕ್ಕೂ, ಬಂದವನಲ್ಲ, ಕುತೂಹಲ ದಿಂದಲೂ ಬಂದಿಲ್ಲ, ದಕ್ಷಬ್ರಹ್ಮನ ಯಾಗವನ್ನು ನಾಶಮಾಡುವದಕ್ಕಾಗಿ ಬಂದಿರುವೆನು. ನನ್ನ ನಾಮವು ವೀರಭದ್ರನೆಂದಿದೆ. ಕುಪಿತನಾದ ಪರಮೇಶ್ವರನು ನನ್ನನ್ನು ಇಲ್ಲಿಗೆ ಕಳುಹಿಸಿರುವನು ಎಂದು ಹೇಳಿದನು.

೧೬೪. ಈಕೆಯು ಉಮಾದೇವಿಯ ಕೋಪದಿಂದ ಉದ್ಭವಿಸಿದ ಭದ್ರಕಾಳಿ ಯಾಗಿರುವಳು. ದೇವದೇವನಾದ ಈಶ್ವರನು ಈಕೆಯನ್ನು ಯಜ್ಞದರ್ಶನಕ್ಕಾಗಿ ಕಳುಹಿಸಿಕೊಟ್ಟಿರುವನು ಎಂದನು.

ಶರಣಂ ಗಚ್ಛ ರಾಜೇಂದ್ರ ದೇವಂ ತಂ ತ್ವಮುಮಾಪತಿಂ ।
ವರಂ ಕ್ರೋಧೋಽಪಿ ರುದ್ರಸ್ಯ ವರದಾನಂ ನ ದೇವತಃ ॥ ೧೬೫ ॥

ವೀರಭದ್ರವಚಃ ಶ್ರುತ್ವಾ ದಕ್ಷೋ ಧರ್ಮಭೃತಾಂ ವರಃ ।
ತೋಷಯಾಮಾಸ ದೇವೇಶಂ ಶೂಲಪಾಣಿಂ ಮಹೇಶ್ವರಂ ॥ ೧೬೬ ॥

ಪ್ರದುಷ್ಟೇ ಯಜ್ಞವಾದೇ ತು ವಿದ್ರುತೇಷು ದ್ವಿಜಾತಿಷು ।
ತಾರಾಮೃಗಮಯೇ ದೀಪ್ತೇ ರೌದ್ರೇ ಭೀಮಮಹಾನಲೇ ॥ ೧೬೭ ॥

ಶೂಲನಿರ್ಭಿನ್ನವದನೈಃ ಕೂಜದ್ಭಿಃ ಪರಿಚಾರಕೈಃ ।
ನಿಖಾತೋತ್ಪಾಟಿತೈರ್ಯೂಪೈರಪವಿದ್ಧೈರ್ಯತಸ್ತತಃ ॥ ೧೬೮ ॥

ಉತ್ಪತದ್ಭಿಃ ಪತದ್ಭಿಶ್ಚ ಗೃಧ್ರೈರಾಮಿಷಗೃಧ್ನುಭಿಃ ।
ಪಕ್ಷಪಾತವಿನಿರ್ಧೂತೈಃ ಶಿವಾಶತನಿನಾದಿತೈಃ ॥ ೧೬೯ ॥

---

೧೬೫-೧೬೬. ಎಲೈ ರಾಜೇಂದ್ರನಾದ ದಕ್ಷನೇ, ದೇವದೇವನಾದ ಉಮಾಪತಿಗೆ ಶರಣಾಗತನಾಗು. ದೇವತೆಗಳ ವರಕ್ಕಿಂತಲೂ ರುದ್ರದೇವನ ಕೋಪವೇ ಉತ್ತಮವೆಂದು ಹೇಳುವರು. ಆ ವೀರಭದ್ರನ ಮಾತನ್ನು ಕೇಳಿ ಧರ್ಮಿಷ್ಠನಾದ ದಕ್ಷನು ದೇವೇಶನೂ, ಶೂಲಪಾಣಿಯೂ, ಆದ ಮಹೇಶ್ವರನನ್ನು ಸ್ತೋತ್ರಗಳಿಂದ ಸಂತೋಷಪಡಿಸಿದನು.

೧೬೭-೧೬೮. ಯಾಗವು ನಾಶವಾಗಲು ಬ್ರಾಹ್ಮಣರು ಓಡಿಹೋದರು. ಭಯಂಕರವಾದ ಅಗ್ನಿ, ಮತ್ತು ಮೃಗ, ಇವುಗಳಿಂದ ಯಾಗಶಾಲೆಯು ವ್ಯಾಪ್ತವಾಗಲು ವೀರಭದ್ರನ ಭಟರು ಶೂಲಗಳಿಂದ ಪರಿಚಾರಕರನ್ನು ಚುಚ್ಚುತ್ತಲೂ ಯೂಪಸ್ತಂಬಗಳನ್ನು ಕೀಳುತ್ತಲೂ, ಹೊಡೆಯುತ್ತಲೂ ಇದ್ದರು.

೧೬೯. ಆ ಯಾಗಮಂಟಪದ ಮೇಲ್ಭಾಗದಲ್ಲಿ ಮಾಂಸಾಪೇಕ್ಷಿಗಳಾದ ಹದ್ದುಗಳು ಹಾರಾಡುತ್ತಿದ್ದುವು. ಅವುಗಳ ಪಕ್ಷಗಳ ಹೊಡತದಿಂದ ನರಿಗಳು ಅರಚುತ್ತಿದ್ದುವು.

ಪ್ರಾಣಾಪಾನೌ ಸನ್ನಿರುಧ್ಯ ತತಃ ಸ್ಥಾನೇನ ಯತ್ನತಃ ।
ವಿಚಾರ್ಯ ಸರ್ವತೋ ದೃಷ್ಟಿಂ ಬಹುದೃಷ್ಟಿರಮಿತ್ರಜಿತ್ ॥ ೧೭೦ ॥

ಸಹಸಾ ದೇವದೇವೇಶಃ ಅಗ್ನಿಕುಂಡಾದುಪಾಗತಃ ।
ಚಂದ್ರಸೂರ್ಯಸಹಸ್ರಸ್ಯ ತೇಜಃ ಸಂವರ್ತಕೋಪಮಂ ॥ ೧೭೧ ॥

ಪ್ರಹಸ್ಯ ಚೈನಂ ಭಗವಾನಿದಂ ವಚನಮಬ್ರವೀತ್ ।
ನಷ್ಟಸ್ತೇ ಜ್ಞಾನತೋ ದಕ್ಷ ಪ್ರೀತಿಸ್ತೇ ಮಯಿ ಸಾಂಪ್ರತಂ ॥ ೧೭೨ ॥

ಸ್ಮಿತಂ ಕೃತ್ವಾಬ್ರವೀದ್ವಾಕ್ಯಂ ಬ್ರೂಹಿ ಕಿಂ ಕರವಾಣಿ ತೇ ।
ಶ್ರಾವಿತಂ ಚ ಸಮಾಖ್ಯಾಯ ದೇವಾನಾಂ ಗುರುಭಿಃ ಸಹ ॥ ೧೭೩ ॥

ತಮುವಾಚಾಂಜಲಿಂ ಕೃತ್ವಾ ದಕ್ಷೋ ದೇವಂ ಪ್ರಜಾಪತಿಃ ।
ಭೀತಶಂಕಿತವಿತ್ರಸ್ತಃ ಸಬಾಷ್ಪವದನೇಕ್ಷಣಃ ॥ ೧೭೪ ॥

---

೧೭೦-೧೭೧. ಆಗ ಪ್ರಾಣಾಪಾನಾದಿಗಳನ್ನು ತಡೆದು ಸರ್ವತ್ರ ದೃಷ್ಟಿಯನ್ನು ಬೀರುವವನೂ, ಶತ್ರುನಾಶಕನೂ, ಚಂದ್ರಸೂರ್ಯಸಮಾನತೇಜಸ್ಕನೂ, ಪ್ರಲಯಾಗ್ನಿ ಸಮಾನನೂ ಆದ ದೇವೇಶನು ಅಗ್ನಿಕುಂಡದಿಂದ ಬೇಗನೇ ಮೇಲಕ್ಕೆದ್ದನು.

೧೭೨-೧೭೩. ಅನಂತರ ಭಗವಂತನಾದ ಈಶ್ವರನು ಮಂದಹಾಸದಿಂದ ಕೂಡಿ ದಕ್ಷನನ್ನು ನೋಡಿ ನಿನ್ನ ಅಜ್ಞಾನದಿಂದ ಯಾಗವು ನಷ್ಟವಾಯಿತು. ಈಗ ನಿನಗೆ ಜ್ಞಾನೋದಯವೂ ನನ್ನಲ್ಲಿ ಪ್ರೀತಿಯೂ ಉಂಟಾಗಿವೆ. ನಿನ್ನ ಭಕ್ತಿಗೆ ಮೆಚ್ಚಿದೆನು. ನನ್ನಿಂದ ನಿನಗೆ ಏನಾಗಬೇಕು ಹೇಳು ಎಂದನು. ಮತ್ತು ದೇವತೆಗಳ ಗುರುಗಳ ಮೂಲಕ ಈ ವಿಷಯಗಳನ್ನು ಅವನಿಗೆ ತಿಳಿಸಿದೆನು.

೧೭೪. ಆಗ ದಕ್ಷಪ್ರಜಾಪತಿಯು ಭೀತನೂ, ಶಂಕಿತನೂ, ಕಂಪಿತನೂ, ಅಶ್ರುಬಿಂದುಗಳಿಂದ ಪೂರ್ಣವಾದ ನೇತ್ರಗಳುಳ್ಳವನೂ ಆಗಿ ಕೈಗಳನ್ನು ಮುಗಿದು ಕೊಂಡು ದೇವನಿಗೆ ಇಂತೆಂದನು.

ಯದಿ ಪ್ರಸನ್ನೋ ಭಗವನ್ ಯದಿ ವಾಹಂ ತವಪ್ರಿಯಃ ।
ಯದಿ ವಾಹಮನುಗ್ರಾಹ್ಯೋ ಯದಿ ದೇಯೋ ವರೋ ಮಮ ॥ ೧೭೫ ॥

ಯಜ್ಞಗ್ಧಂ ಭಕ್ಷಿತಂ ಪೀತಮಶಿತಂ ಯಚ್ಚ ನಾಶಿತಂ ।
ಚೂರ್ಣೀಕೃತಂ ಚಾಪವಿದ್ಧಂ ಯಜ್ಞಸಂಭಾರಮೀದೃಶಂ ॥ ೧೭೬ ॥

ದೀರ್ಘಕಾಲೇನ ಮಹತಾ ಪ್ರಯತ್ನೇನ ಚ ಸಂಚಿತಂ ।
ತನ್ನ ಮಿಥ್ಯಾ ಭವೇನ್ಮಹ್ಯಂ ವರಮೇತಂ ವೃಣೋಮ್ಯಹಂ ॥ ೧೭೭ ॥

ತಥಾಸ್ತ್ವಿತ್ಯಾಹ ಭಗವಾನ್ ಭಗನೇತ್ರಹರೋ ಹರಃ ।
ಧರ್ಮಾಧ್ಯಕ್ಷಂ ಮಹಾದೇವಂ ತ್ರ್ಯಕ್ಷಂ ತಂ ವೈ ಪ್ರಜಾಪತಿಃ ॥ ೧೭೮ ॥

ಜಾನುಭ್ಯಾಮವನೀಂ ಗತ್ವಾ ದಕ್ಷೋ ಲಬ್ಧ್ವಾ ಭವಾದ್ವರಂ ।
ನಾಮ್ನಾಮಷ್ಟಸಹಸ್ರೇಣ ಸ್ತುತವಾನ್ ವೃಷಭಧ್ವಜಂ ॥ ೧೭೯ ॥

---

೧೭೫-೧೭೭. ಎಲೈ ಸ್ವಾಮಿಯೇ, ನೀನು ಪ್ರಸನ್ನನೂ ನಾನು ನಿನಗೆ ಪ್ರಿಯನೂ, ಅನುಗ್ರಾಹ್ಯನೂ, ವರಾರ್ಹನೂ ಆಗಿದ್ದರೆ ಈಗ, ನನ್ನ ಯಾಗದಲ್ಲಿ ನಿನ್ನ ಭೃತ್ಯರು ಯಾವ ಪದಾರ್ಥಗಳನ್ನು ತಿಂದು ಕುಡಿದು ತೇಗಿ ಚಲ್ಲಿ ಚೂರ್ಣಮಾಡಿ ನಾಶಮಾಡಿರುವರೋ ಬಹುಕಾಲದಿಂದ ಸಂಪಾದಿತವೂ, ಬಹುಪ್ರಯತ್ನಸಾಧಿತವೂ, ಆದ ಅಂತಹ ಯಜ್ಞದ ವಸ್ತುಗಳೆಲ್ಲವೂ. ವ್ಯರ್ಥವಾಗದೆ ಸಾರ್ಥಕಗಳಾಗಬೇಕೆಂಬ ವರವನ್ನು ಕೊಡು. ಇದನ್ನೇ ನಾನು ಬೇಡುವುದೆಂದು ದಕ್ಷನು ಹೇಳಿದನು.

೧೭೮. ಅಷ್ಟೈಶ್ವರ್ಯವಂತನೂ, ತ್ರಿನೇತನೂ, ಆದ ಈಶ್ವರನು ನಿನ್ನ ಯಾಗ ದಲ್ಲಿ ನಷ್ಟವಾದ ಪದಾರ್ಥಗಳೆಲ್ಲವೂ ಪೂರ್ವದಂತೆಯೇ ಸಿದ್ಧವಾಗಲೆಂದು ವರವನ್ನು ಕೊಟ್ಟನು. ಆಗ ದಕ್ಷ ಪ್ರಜೇಶ್ವರನು ಧರ್ಮನಿಯಾಮಕನೂ ತಿನೇತ್ರನೂ ಆದ ಮಹದೇವನಿಗೆ ವಂದನೆಗಳನ್ನರ್ಪಿಸಿದನು.

೧೭೯. ಅನಂತರ ದಕ್ಷೇಶ್ವರನು ಮಂಡಿಗಳನ್ನು ನೆಲಕ್ಕೆ ಊರಿ ನಮಸ್ಕಾರ ಮಾಡಿ ಈಶ್ವರನಿಂದ ಈವಿಧವಾದ ವರವನ್ನು ಪಡೆದು ವೃಷಭಧ್ವಜನಾದ ಮಹದೇವ ನನ್ನು ಸಾವಿರದೆಂಟುನಾಮಗಳಿಂದ ಸ್ತೋತ್ರಗಳನ್ನು ಮಾಡಿದನು.

॥ ದಕ್ಷ ಉವಾಚ ॥

**ನಮಸ್ತೇ ದೇವದೇವೇಶ ದೇವಾರಿಬಲಸೂದನ ।**
**ದೇವೇಂದ್ರ ಹ್ಯಮರಶ್ರೇಷ್ಠ ದೇವದಾನವಪೂಜಿತ ॥ ೧೮೦ ॥**
**ಸಹಸ್ರಾಕ್ಷ ವಿರೂಪಾಕ್ಷ ತ್ರ್ಯಕ್ಷ ಯಕ್ಷಾಧಿಪಪ್ರಿಯ ।**

**ಸರ್ವತಃ ಪಾಣಿಪಾದಸ್ತ್ವಂ ಸರ್ವತೋಕ್ಷಿ ಶಿರೋಮುಖಃ ॥**
**ಸರ್ವತಃ ಶ್ರುತಿಮಾಲ್ಲೋಕೇ ಸರ್ವಾನಾವೃತ್ಯ ತಿಷ್ಠಸಿ ॥ ೧೮೧ ॥**

**ಶಂಕುಕರ್ಣ ಮಹಾಕರ್ಣ ಕುಂಭಕರ್ಣಾರ್ಣವಾಲಯ ।**
**ಗಜೇಂದ್ರಕರ್ಣ ಗೋಕರ್ಣ ಪಾಣಿಕರ್ಣ ನಮೋಸ್ತುತೇ ॥ ೧೮೨ ॥**

**ಶತೋದರ ಶತಾವರ್ತ ಶತಜಿಹ್ವ ಶತಾನನ ।**
**ಗಾಯಂತಿ ತ್ವಾಂ ಗಾಯತ್ರಿಣೋ ಹ್ಯರ್ಚಯಂತಿ ತಥಾರ್ಚಿನಃ ॥ ೧೮೩ ॥**

---

೧೮೦. ದಕ್ಷಪ್ರಜೇಶನು ಹೇಳಿದನು :—ದೇವೇಶನೂ, ದೈತ್ಯಬಲನಾಶಕನೂ, ದೇವೇಂದ್ರನೂ, ಅಮರೋತ್ತಮನೂ ದೇವದಾನವ ಪೂಜಿತನೂ, ಈಶನೂ, ಆದ ನಿನಗೆ ನಮಸ್ಕಾರಗಳು.

೧೮೧. ಸಹಸ್ರನೇತ್ರನೂ, ವಿರೂಪಾಕ್ಷನೂ, ತ್ರಿನೇತ್ರನೂ ಕುಬೇರಪ್ರಿಯನೂ ಎಲ್ಲೆಲ್ಲಿಯೂ, ವ್ಯಾಪ್ತಗಳಾದ ಕೈಕಾಲುಗಳು ನೇತ್ರ ಶಿರಸ್ಸು ಮುಖ ಇವುಗಳುಳ್ಳವನೂ ಆದ ನೀನು ಈ ಲೋಕದಲ್ಲಿ ಸರ್ವವನ್ನೂ ಆವರಿಸಿಕೊಂಡಿರುತ್ತೀಯೇ ಎಂದು ಹೊಗಳಿದನು

೧೮೨. ಶಂಕುವಿನಂತೆ ದೀರ್ಘವೂ, ಅತಿವಿಶಾಲವೂ, ಕುಂಬದಂತೆ ವಿಕೃತವೂ ಗಜಗೋವುಗಳ ಕರ್ಣದಂತೆ ಮಹತ್ತೂ, ಹಸ್ತದಂತೆ ಉದ್ದವೂ ಆದ ಶ್ರೋತ್ರಗಳುಳ್ಳವನೂ, ಸಮುದ್ರವಾಸಿಯೂ, ಆದ ನಿನಗೆ ನಮಸ್ಕಾರಗಳು.

೧೮೩. ಗಾಯತ್ರಿಯನ್ನು ಮಾಡುವವರು ನಿನ್ನನ್ನು ನೂರಾರು ಉದರನಾಭಿ ರಸನ ಮತ್ತು ಮುಖ ಇವುಗಳುಳ್ಳವನನ್ನಾಗಿ ಪೂಜಿಸುವರು. ನಾನಾ ರೀತಿಯಾಗಿಯೂ ವರ್ಣಿಸುತ್ತಾರೆ

ದೇವದಾನವಗೋಪ್ತಾ ಚ ಬ್ರಹ್ಮಾ ಚ ತ್ವಂ ಶತಕ್ರತುಃ ।
ಮೂರ್ತೀಶಸ್ತ್ವಂ ಮಹಾಮೂರ್ತೇ ಸಮುದ್ರಾಂಬುಧರಾಯ ಚ ॥ ೧೮೪ ॥

ಸರ್ವಾ ಹ್ಯಸ್ಮಿ ದೇವತಾಸ್ತೇ ಗಾವೋ ಗೋಷ್ಠ ಇವಾಸತೇ ।
ಶರೀರಂ ತೇ ಪ್ರಪಶ್ಯಾಮಿ ಸೋಮಮಗ್ನಿಂ ಜಲೇಶ್ವರಂ ॥ ೧೮೫ ॥

ಆದಿತ್ಯಮಥ ವಿಷ್ಣುಂ ಚ ಬ್ರಹ್ಮಾಣಂ ಸಬೃಹಸ್ಪತಿಂ ।
ಕ್ರಿಯಾ ಕಾರ್ಯಂ ಕಾರಣಂ ಚ ಕರ್ತಾ ಕರಣಮೇವ ಚ । ॥ ೧೮೬ ॥

ಅಸಚ್ಚ ಸದಸಚ್ಚೈವ ತಥೈವ ಪ್ರಭವಾವ್ಯಯಂ ।
ನಮೋ ಭವಾಯ ಶರ್ವಾಯ ರುದ್ರಾಯ ವರದಾಯ ಚ ॥ ೧೮೭ ॥

ಪಶೂನಾಂ ಪತಯೇ ಚೈವ ನಮಸ್ತ್ವಂಧಕಘಾತಿನೇ ।
ತ್ರಿಜಟಾಯ ತ್ರಿಶೀರ್ಷಾಯ ತ್ರಿಶೂಲವರಧಾರಿಣೇ ॥ ೧೮೮ ॥

ತ್ರ್ಯಂಬಕಾಯ ತ್ರಿನೇತ್ರಾಯ ತ್ರಿಪುರಘ್ನಾಯ ವೈ ನಮಃ ।
ನಮಶ್ಚಂಡಾಯ ಮುಂಡಾಯ ಪ್ರಚಂಡಾಯ ಧರಾಯ ಚ ॥ ೧೮೯ ॥

---

೧೮೪. ಎಲೈ ಈಶ್ವರನೇ, ನೀನು ದೇವದಾನವರಕ್ಷಕನೂ, ಬ್ರಹ್ಮರೂಪಿಯೂ, ಇಂದ್ರನೂ, ಮೂರ್ತೀಶನೂ, ಮಹಾಮೂರ್ತಿಯೂ, ಸಮುದ್ರಜಲಧಾರಿಯೂ ಆಗಿರುತ್ತೀಯೇ.

೧೮೫-೧೮೬. ಗೋವುಗಳು ಗೋಷ್ಠದಲ್ಲಿ ವಾಸಿಸುವಂತೆ ಸಮಸ್ತ ದೇವತೆಗಳೂ ನಿನ್ನಲ್ಲಿ ವಾಸಿಸುತ್ತಾರೆ. ನಿನ್ನ ಶರೀರವಾದರೋ .ಚಂದ್ರ, ಸೂರ್ಯ, ಜಲ, ಅಗ್ನಿ, ವಿಷ್ಣು, ಬ್ರಹ್ಮ, ಬೃಹಸ್ಪತಿ ಇವರಿಗೆ ಆಶ್ರಯವಾಗಿರುತ್ತದೆ. ಮತ್ತು ನೀನು ಕ್ರಿಯಾರೂಪಿಯೂ, ಕಾರಣಾಶ್ರಯನೂ, ಕರ್ತನೂ, ಕರಣನೂ ಆಗಿರುತ್ತೀಯೇ.

೧೮೭-೧೮೯. ಎಲೈ ಭಗವಂತನೇ ನೀನು ಅಸದ್ರೂಪನೂ, ಸದಸದ್ರೂಪಿಯೂ ಸಮರ್ಥನೂ, ಅವ್ಯಯನೂ. ಭವನೂ, ರುದ್ರನೂ, ಸುಖಪ್ರದನೂ, ವರದನೂ, ಪಶುಪತಿಯೂ, ಅಂಧಕಾಂತಕನೂ, ತ್ರಿಜಟೆಯೂ, ತ್ರಿಶೀರ್ಷನೂ, ತ್ರಿಶೂಲಧಾರಿಯೂ, ಮುಕ್ಕಣ್ಣನೂ, ತ್ರಿನೇತ್ರನೂ, ತ್ರಿಪುರಸಂಹಾರಕನೂ, ಕ್ರೂರನೂ, ಮುಂಡನೂ. ಪ್ರಚಂಡನೂ, ಘೋರಕನೂ, ಆಗಿರುತ್ತೀಯೆ. ಇಂತಹ ನಿನಗೆ ನಮಸ್ಕಾರಗಳು.

ದಂಡಿಮೂಸಕ್ತಕರ್ಣಾಯ ದಂಡಿಮುಂಡಾಯ ವೈ ನಮಃ ।
ನಮೋಽರ್ಧ್ವದಂಡಕೇಶಾಯ ನಿಷ್ಕಾಯ ವಿಕೃತಾಯ ಚ ॥ ೧೯೦ ॥

ವಿಲೋಹಿತಾಯ ಧೂಮ್ರಾಯ ನೀಲಗ್ರೀವಾಯ ತೇ ನಮಃ ।
ನಮಸ್ತ್ವಪ್ರತಿರೂಪಾಯ ಶಿವಾಯ ಚ ನಮೋಽಸ್ತು ತೇ ॥ ೧೯೧ ॥

ಸೂರ್ಯಾಯ ಸೂರ್ಯಪತಯೇ ಸೂರ್ಯಧ್ವಜ ಪತಾಕಿನೇ ।
ನಮಃ ಪ್ರಮಥನಾಥಾಯ ವೃಷಸ್ಕಂಧಾಯ ಧನ್ವಿನೇ ॥ ೧೯೨ ॥

ನಮೋ ಹಿರಣ್ಯಗರ್ಭಾಯ ಹಿರಣ್ಯಕವಚಾಯ ಚ ।
ಹಿರಣ್ಯಕೃತಚೂಡಾಯ ಹಿರಣ್ಯಪತಯೇ ನಮಃ ॥ ೧೯೩ ॥

ಸತ್ರಘಾತಾಯ ದಂಡಾಯ ವರ್ಣಪಾನಪುಟಾಯ ಚ ।
ನಮಃ ಸ್ತುತಾಯ ಸ್ತುತ್ಯಾಯ ಸ್ತುಯಮಾನಸ್ಯ ವೈ ನಮಃ ॥ ೧೯೪ ॥

ಸರ್ವಾಯಾಭಕ್ಷ್ಯಭಕ್ಷ್ಯಾಯ ಸರ್ವಭೂತಾಂತರಾತ್ಮನೇ ।
ನಮೋ ಹೋತ್ರಾಯ ಮಂತ್ರಾಯ ಶುಕ್ಲಧ್ವಜ ಪತಾಕಿನೇ ॥ ೧೯೫ ॥

---

೧೯೦. ಕಂಜರಿಯಲ್ಲಾಸಕ್ತವಾದ ಕಿವಿಗಳುಳ್ಳವನೂ, ದಂಡಧಾರಿಯೂ, ಮುಂಡನೂ, ಮೋಟಾದ ಕೇಶಗಳುಳ್ಳವನೂ, ವಿಕಾರಿಯೂ, ಆದ ನಿನಗೆ ನಮಸ್ಕಾರಗಳು.

೧೯೧-೧೯೨. ಕೆಂಪು ವರ್ಣವುಳ್ಳವನೂ, ಧೂಮ್ರವರ್ಣನೂ, ನೀಲಕಂಠನೂ ಅಪ್ರತಿಮರೂಪನೂ, ಮಂಗಳಾಂಗನೂ, ಸೂರ್ಯರೂಪನೂ, ಸೂರ್ಯಾಧಿಪತಿಯೂ, ಸೂರ್ಯಧ್ವಜನೂ, ಪ್ರಮಥವಾಥನೂ, ಘೂಳಿಯಂತೆ ಹೆಗಲುಳ್ಳವನೂ, ಧನುರ್ಧಾರಿಯೂ, ಆದ ನಿನಗೆ ನಮಸ್ಕಾರವು.

೧೯೩-೧೯೪. ಸುವರ್ಣಗರ್ಭನೂ, ಸುವರ್ಣಮಯಕವಚವುಳ್ಳವನೂ, ಸುವರ್ಣಾಲಂಕೃತಶಿರಸ್ಕನೂ, ಹಿರಣ್ಯಪತಿಯೂ, ಯಜ್ಞಧ್ವಂಸಕನೂ, ದುಷ್ಟಶಿಕ್ಷಕನೂ, ನಾನಾರೂಪಿಯೂ, ಸ್ತುತಿಕರ್ತನೂ, ಸ್ತುತಿರೂಪಿಯೂ, ಸ್ತೋತ್ರಾರ್ಹನೂ, ಆದ ನಿನಗೆ ನಮಸ್ಕಾರಗಳು.

೧೯೫. ಸರ್ವರೂಪಿಯೂ, ಅಭಕ್ಷ್ಯಭಕ್ಷಕನೂ, ಸರ್ವಭೂತಾಂತರ್ಯಾಮಿಯೂ, ಹೋತೃರೂಪಿಯೂ, ಮಂತ್ರರೂಪಿಯೂ, ಶುಭ್ರವಾದ ಧ್ವಜ ಪತಾಕೆಗಳುಳ್ಳವನೂ, ಆದ ನಿನಗೆ ನಮಸ್ಕಾರಗಳು.

ನಮೋ ನಮಾಯ ನಮ್ಯಾಯ ನಮಃ ಕಿಲಿಕಿಲಾಯ ಚ ।
ನಮಸ್ತೇ ಶಯಮಾನಾಯ ಶಯಿತಾಯೋತ್ಥಿತಾಯ ಚ ॥ ೧೯೬ ॥

ಸ್ಥಿತಾಯ ಚಲಮಾನಾಯ ಮುದ್ರಾಯ ಕಟಿಲಾಯ ಚ ।
ನಮೋ ನರ್ತನಶೀಲಾಯ ಮುಖವಾದಿತ್ರಕಾರಿಣೇ ॥ ೧೯೭ ॥

ನಾಟ್ಯೋಪಹಾರಲುಬ್ಧಾಯ ಗೀತವಾದ್ಯರತಾಯ ಚ ।
ನಮೋ ಜ್ಯೇಷ್ಠಾಯ ಶ್ರೇಷ್ಠಾಯ ಬಲಪ್ರಮಥನಾಯ ಚ ॥ ೧೯೮ ॥

ಕಲನಾಯ ಚ ಕಲ್ಪಾಯ ಕ್ಷಯಾಯೋಪಕ್ಷಯಾಯ ಚ ।
ಭೀಮದುಂದುಭಿ ಹಾಸಾಯ ಭೀಮಸೇನ ಪ್ರಿಯಾಯ ಚ ॥ ೧೯೯ ॥

ಉಗ್ರಾಯ ಚ ನಮೋ ನಿತ್ಯಂ ನಮಸ್ತೇ ದಶಬಾಹವೇ ।
ನಮಃ ಕಪಾಲಹಸ್ತಾಯ ಚಿತಾಭಸ್ಮಪ್ರಿಯಾಯ ಚ ॥ ೨೦೦ ॥

ವಿಭೀಷಣಾಯ ಭೀಷ್ಮಾಯ ಭೀಷ್ಮವ್ರತಧರಾಯ ಚ ।
ನಮೋ ವಿಕೃತವಕ್ತ್ರಾಯ ಖಡ್ಗ ಜಿಹ್ವಾಗ್ರದಂಷ್ಟ್ರಿಣೇ ॥ ೨೦೧ ॥

---

೧೯೬-೧೯೮. ನಮಸ್ಕಾರರೂಪಿಯೂ, ನಮನಾರ್ಹನೂ, ಕಿಲಕಿಲಾ ರೂಪಿಯೂ, ಶಯನರೂಪಿಯೂ, ಶಯನಕಾರಿಯೂ, ಎದ್ದಿರುವವನೂ, ನಿಂತಿರುವವನೂ, ಮುದ್ರಿತನೂ, ವಕ್ರರೂಪಿಯೂ, ನರ್ತನಸ್ವಭಾವವುಳ್ಳವನೂ, ಮುಖದಿಂದ ಧ್ವನಿಮಾಡುವವನೂ, ನರ್ತನಮರ್ಯಾದಾಸಕ್ತನೂ, ಗೀತಾವಾದ್ಯಾನುರಕ್ತನೂ, ಜ್ಯೇಷ್ಠನೂ, ಶ್ರೇಷ್ಠನೂ, ಬಲಿಷ್ಠರ ಗರ್ವಭಂಜಕನೂ, ಆದ ನಿನಗೆ ನಮಸ್ಕಾರವು.

೧೯೯-೨೦೦. ನಾಶಕಾರಿಯೂ, ಲಯರೂಪನೂ, ಕ್ಷಯಕಾರಿಯೂ, ವೃದ್ಧಿಕಾರಿಯೂ, ಭಯಂಕರವಾದ ನಗಾರಿಯಂತೆ ಹಾಸ್ಯವುಳ್ಳವನೂ, ಭೀಮಸೇನ ಪ್ರಿಯನೂ, ಉಗ್ರನೂ, ದಶಹಸ್ತವುಳ್ಳವನೂ, ಕಪಾಲಪಾಣಿಯೂ, ಚಿತಿಯ ಭಸ್ಮದಲ್ಲಿ ಪ್ರೀತಿಯುಳ್ಳವನೂ, ಆದ ನಿನಗೆ ನಮಸ್ಕಾರವು.

೨೦೧-೨೦೨. ಅತ್ಯಂತಭಯಂಕರನೂ, ಭೀಷ್ಮಪ್ರತಿಜ್ಞೆಯುಳ್ಳವನೂ, ಭೀಷ್ಮ ವ್ರತಧಾರಿಯೂ, ವಿಕೃತವೇಷಿಯೂ, ಕತ್ತಿಯಂತೆ ಚೂಪಾದ ನಾಲಿಗೆ ಕೋರೇಹಲ್ಲು

ಪಕ್ವಾಮವಮಾಂಸಲುಬ್ಧಾಯ ತುಂಬವೀಣಾಪ್ರಿಯಾಯ ಚ ।
ನಮೋ ವೃಷಾಯ ವೃಷ್ಯಾಯ ವೃಷ್ಣಯೇ ವೃಷಣಾಯ ಚ ॥ ೨೦೨ ॥

ಕಟಂಕಟಾಯ ಚಂಡಾಯ ನಮಃ ಸಾವಯವಾಯ ಚ ।
ನಮಸ್ತೇ ವರಕೃಷ್ಣಾಯ ವರಾಯ ವರದಾಯ ಚ ॥ ೨೦೩ ॥

ವರಗಂಧಮಾಲ್ಯವಸ್ತ್ರಾಯ ವರಾತಿವರಯೇ ನಮಃ ।
ನಮೋ ವರ್ಷಾಯ ವಾತಾಯ ಛಾಯಾಯೈ ಆತಪಾಯ ಚ ॥ ೨೦೪ ॥

ನಮೋ ರಕ್ತವಿರಕ್ತಾಯ ಶೋಭನಾಯಾಕ್ಷಮಾಲಿನೇ ।
ಸಂಭಿನ್ನಾಯ ವಿಭಿನ್ನಾಯ ವಿವಿಕ್ತವಿಕಟಾಯ ಚ ॥ ೨೦೫ ॥

ಅಘೋರರೂಪರೂಪಾಯ ಘೋರಘೋರತರಾಯ ಚ ।
ನಮಃ ಶಿವಾಯ ಶಾಂತಾಯ ನಮಃ ಶಾಂತತರಾಯ ಚ ॥ ೨೦೬ ॥

ಏಕಪಾದ್ಬಹುನೇತ್ರಾಯ ಏಕಶೀರ್ಷನ್ನಮೋಸ್ತು ತೇ ।
ನಮೋ ವೃದ್ಧಾಯ ಲುಬ್ಧಾಯ ಸಂವಿಭಾಗಪ್ರಿಯಾಯ ಚ ॥ ೨೦೭ ॥

---

ಗಳು ಇವುಗಳುಳ್ಳವನೂ, ಪಕ್ವವಾದ ಮಾಂಸಪ್ರಿಯನೂ, ಸೋರೆಬುರುಡೆಯವೀಣೆ ಯಲ್ಲಿ ಪ್ರಿಯನೂ, ಇಂದ್ರನೂ, ಚಂದ್ರನೂ, ವೃಷ್ಟಿರೂಪನೂ, ಬೀಜರೂಪನೂ, ಆದ ನಿನಗೆ ನಮಸ್ಕಾರ.

೨೦೩-೨೦೫. ಆವರಣರೂಪಿಯೂ, ಕ್ರೂರನೂ, ಸಾವಯವನೂ, ಉತ್ತಮ ವಾದ ಗಂಧ, ಮಾಲ್ಯ, ವಸ್ತ್ರ, ಭೂಷಣ, ಇವುಗಳನ್ನು ಧರಿಸಿರುವನೂ, ಉತ್ತಮೋತ್ತ ಮನೂ, ವೃಷ್ಟಿರೂಪನೂ. ವಾತರೂಪಿಯೂ, ಛಾಯಾರೂಪಿಯೂ, ಆತಪರೂಪಿಯೂ ರಕ್ತವರ್ಣನೂ, ವಿರಕ್ತನೂ, ಸುಂದರನೂ, ಅಕ್ಷಮಾಲಾಧಾರಿಯೂ, ಅತ್ಯಂತಭಿನ್ನನೂ ವಿಭನ್ನನೂ, ವಿವಿಕ್ತನೂ, ವಿಕಾರಿಯೂ, ಆದ ಈಶ್ವರನಿಗೆ ನಮಸ್ಕಾರಗಳು.

೨೦೬-೨೧೦. ಅಘೋರರೂಪಿಯೂ, ಅತ್ಯಂತ ಭಯಂಕರರೂಪಿಯೂ, ಮಂಗಳರೂಪಿಯೂ, ಶಾಂತಾಕಾರನೂ, ಅತಿಶಾಂತನೂ, ಒಂದೇ ಕಾಲು, ಶಿರಸ್ಸು ಇವುಗಳುಳ್ಳವನೂ, ಬಹುನೇತ್ರನೂ, ವೃದ್ಧನೂ, ಜಿಪುಣನೂ, ವಿಭಾಗಪ್ರಿಯನೂ,

ಪಂಚಮಾಲಾರ್ಚಿತಾಂಗಾಯ ನಮಃ ಪಾಶುಪತಾಯ ಚ ।
ನಮಶ್ಚಂಡಾಯ ಘಾಂಟಾಯ ಘಂಟಿಯಾ ಜಗ್ಧರಂಧ್ರಿಣೇ ॥ ೨೦೮ ॥

ಸಹಸ್ರಶತಘಂಟಾಯ ಘಂಟಾಮಾಲಾಪ್ರಿಯಾಯ ಚ ।
ಪ್ರಾಣದಂಡಾಯ ತ್ಯಾಗಾಯ ನಮೋ ಹಿಲಿಹಿಲಾಯ ಚ ॥ ೨೦೯ ॥

ಹೂಂಹೂಂಕಾರಾಯ ಪಾರಾಯ ಹೂಂಹೂಂಕಾರಪ್ರಿಯಾಯ ಚ ।
ನಮಶ್ಚ ಶಂಭವೇ ನಿತ್ಯಂ ಗಿರಿವೃಕ್ಷಕಲಾಯ ಚ ॥ ೨೧೦ ॥

ಗರ್ಭಮಾಂಸಶೃಗಾಲಾಯ ತಾರಕಾಯ ತರಾಯ ಚ ।
ನಮೋ ಯಜ್ಞಾಧಿಪತಯೇ ದ್ರುತಾಯೋಪದ್ರುತಾಯ ಚ ॥ ೨೧೧ ॥

ಯಜ್ಞವಾಹಾಯ ದಾನಾಯ ತಪ್ಯಾಯ ತಪನಾಯ ಚ ।
ನಮಸ್ತಟಾಯ ಭವ್ಯಾಯ ತಡಿತಾಂ ಪತಯೇ ನಮಃ ॥ ೨೧೨ ॥

ಅನ್ನದಾಯಾನ್ನಪತಯೇ ನಮೋಽಸ್ತ್ವನ್ನಭವಾಯ ಚ ।
ನಮಃ ಸಹಸ್ರಶೀರ್ಷ್ಣೇ ಚ ಸಹಸ್ರ ಚರಣಾಯ ಚ ॥ ೨೧೩ ॥

ಸಹಸ್ರೋದ್ಯತಶೂಲಾಯ ಸಹಸ್ರನಯನಾಯ ಚ ।
ನಮೋಽಸ್ತು ಬಾಲರೂಪಾಯ ಬಾಲರೂಪಧರಾಯ ಚ ॥ ೨೧೪ ॥

---

ಪಂಚಮಾಲೆಗಳಿಂದರ್ಚಿತವಾದ ಶರೀರವುಳ್ಳವನೂ, ಪಾಶುಪತಾಸ್ತ್ರಧಾರಿಯೂ, ಚಂಡನೂ, ಗಂಟಾಧಾರಿಯೂ, ಘಂಟಾಮಾಲಾಪ್ರಿಯನೂ, ಪ್ರಾಣಶಿಕ್ಷಕನೂ, ತ್ಯಾಗಿಯೂ, ಹಲಿಹಿಲನಾಮಕನೂ, ಹೂಂಕಾರಪ್ರಿಯನೂ, ಗಿರಿವೃಕ್ಷಗಳೇ ಗೃಹವಾಗಿಯುಳ್ಳವನೂ, ಆದ ಈಶ್ವರನಿಗೆ ನಮಸ್ಕಾರವು.

೨೧೧-೨೧೫. ಗರ್ಭದ ಮಾಂಸಕ್ಕೆ ಸೃಗಾಲಸದೃಶನೂ, ರಕ್ಷಕನೂ, ತಾರಕನೂ, ಯಜ್ಞಾಧಿಪತಿಯೂ, ಓಡುವವನೂ, ಅನುಸರಿಸಿ ಓಡುವವನೂ, ಯಜ್ಞವಾಹಕನೂ, ದಾನಿಯೂ, ತಪಸ್ಸಿಗೆ ಯೋಗ್ಯನೂ, ಪ್ರಕಾಶಕನೂ, ಆಶ್ರಯನೂ, ಭವ್ಯನೂ, ತಟಿತ್ಪತಿಯೂ, ಅನ್ನದಾತೃವೂ, ಅನ್ನಪತಿಯೂ, ಅನ್ನೋತ್ಪಾದಕನೂ, ಸಹಸ್ರಶಿರಸ್ಕನೂ, ಸಹಸ್ರಚರಣನೂ, ಉದ್ಯತವಾದ ಸಹಸ್ರಶೂಲವುಳ್ಳವನೂ, ಸಹಸ್ರನೇತ್ರಿಯೂ, ಬಾಲರೂಪಿಯೂ, ಬಾಲರೂಪಧಾರಿಯೂ, ಬಾಲಕರಕ್ಷಕನೂ, ಬಾಲ

**ಬಾಲಾನಾಂ ಚೈವ ಗೋಪ್ತ್ರೇ ಚ ಬಾಲಕ್ರೀಡನಕಾಯ ಚ ।**
**ನಮಃ ಶುದ್ಧಾಯ ಬುದ್ಧಾಯ ಕ್ಷೋಭಣಾಯಾಕ್ಷತಾಯ ಚ ॥ ೨೧೫ ॥**

**ತರಂಗಾಂಕಿತಕೇಶಾಯ ಮುಕ್ತಕೇಶಾಯ ವೈ ನಮಃ ।**
**ನಮಃ ಷಟ್ಕರ್ಮನಿಷ್ಠಾಯ ತ್ರಿಕರ್ಮನಿರತಾಯ ಚ ॥ ೨೧೬ ॥**

**ವರ್ಣಾಶ್ರಮಾಣಾಂ ವಿಧಿವತ್ ಪೃಥಕ್ಕರ್ಮಪ್ರವರ್ತಿನೇ ।**
**ನಮೋ ಘೋಷಾಯ ಘೋಷ್ಯಾಯ ನಮಃ ಕಲಕಲಾಯ ಚ ॥ ೨೧೭ ॥**

**ಶ್ವೇತಪಿಂಗಲನೇತ್ರಾಯ ಕೃಷ್ಣರಕ್ತೇಕ್ಷಣಾಯ ಚ ।**
**ಧರ್ಮಾರ್ಥಕಾಮಮೋಕ್ಷಾಯ ಕ್ರಥಾಯ ಕ್ರಥನಾಯ ಚ ॥ ೨೧೮ ॥**

**ಸಾಂಖ್ಯಾಯ ಸಾಂಖ್ಯಮುಖ್ಯಾಯ ಯೋಗಾಧಿಪತಯೇ ನಮಃ ।**
**ನಮೋ ರಥ್ಯವಿರಥ್ಯಾಯ ಚತುಷ್ಪಥರಥಾಯ ಚ ॥ ೨೧೯ ॥**

**ಕೃಷ್ಣಾಜಿನೋತ್ತರೀಯಾಯ ವ್ಯಾಲಯಜ್ಞೋಪವೀತಿನೇ ।**
**ಈಶಾನವಜ್ರಸಂಹಾಯ ಹರಿಕೇಶ ನಮೋಽಸ್ತು ತೇ ॥**
**ಅವಿವೇಕೈಕನಾಥಾಯ ವ್ಯಕ್ತಾವ್ಯಕ್ತ ನಮೋಽಸ್ತು ತೇ ॥ ೨೨೦ ॥**

---

ಕ್ರೀಡಾಸಕ್ತನೂ, ಶುದ್ಧನೂ, ಬುದ್ಧನೂ, ಕ್ಷೋಭಕನೂ, ಅಕ್ಷತನೂ, ಆದ ಈಶ್ವರನಿಗೆ ನಮಸ್ಕಾರವು.

೨೧೬-೨೧೮. ಅಲೆಗಳಿಂದಲಂಕೃತವಾದ ಕೇಶವುಳ್ಳವನೂ, ಮುಕ್ತಕೇಶನೂ, ಷಟ್ಕರ್ಮನಿರತನೂ, ತ್ರಿಕರ್ಮಾಸಕ್ತನೂ, ವರ್ಣಾಶ್ರಮಪ್ರವರ್ತಕನೂ, ಘೋಷರೂಪನೂ, ಶಬ್ದವೇದ್ಯನೂ, ಕಲಕಲಸ್ವರೂಪಿಯೂ, ಬೆಳ್ಳಗೂ ಹೊಂಬಣ್ಣವಾಗಿಯೂ ಇರುವ ನೇತ್ರಗಳುಳ್ಳವನೂ, ಕರಿದು, ಕೆಂಪು ಆದ ನೇತ್ರಗಳುಳ್ಳವನೂ, ಧರ್ಮ, ಅರ್ಥ, ಕಾಮ, ಮೋಕ್ಷ ಇವುಗಳ ದಾತನೂ, ತಾರಕನೂ, ಸಂಹಾರಕನೂ ಆದ ಶಿವನಿಗೆ ನಮಸ್ಕಾರ.

೨೧೯-೨೨೦. ಜ್ಞಾನಸ್ವರೂಪಿಯೂ, ಜ್ಞಾನಿಗಳಲ್ಲಿ ಮುಖ್ಯನೂ, ಯೋಗಾಧಿಪತಿಯೂ ರಥಿಕನೂ, ರಥರಹಿತನೂ, ಚೌಕದಲ್ಲಾಸಕ್ತನೂ, ಕೃಷ್ಣಾಜಿನಧಾರಿಯೂ, ಸರ್ಪಗಳೆಂಬ ಯಜ್ಞೋಪವೀತವುಳ್ಳವನೂ, ಸರ್ವೇಶನೂ, ವಜ್ರದೇಹಿಯೂ, ಸಿಂಹಕೇಶಿಯೂ, ಅವಿವೇಕಿಗಳಿಗೆ ಮುಖ್ಯನಾಥನೂ, ವ್ಯಕ್ತಾವ್ಯಕ್ತಸ್ವರೂಪನೂ, ಆದ ಈಶನಿಗೆ ನಮಸ್ಕಾರ.

ಕಾಮ ಕಾಮದಕಾಮಘ್ನ ಧೃಷ್ಟೋದೃಪ್ತನಿಷೂದನ ।
ಸರ್ವ ಸರ್ವದ ಸರ್ವಜ್ಞ ಸಂಧ್ಯಾರಾಗ ನಮೋಽಸ್ತು ತೇ ॥ ೨೨೧ ॥

ಮಹಾಬಾಲ ಮಹಾಬಾಹೋ ಮಹಾಸತ್ತ್ವ ಮಹಾದ್ಯುತೇ ।
ಮಹಾಮೇಘವರಪ್ರೇಕ್ಷ ಮಹಾಕಾಲ ನಮೋಽಸ್ತು ತೇ ॥ ೨೨೨ ॥

ಸ್ಥೂಲಜೀರ್ಣಾಂಗಜಟಿನೇ ವಲ್ಕಲಾಜಿನಧಾರಿಣೇ ।
ದೀಪ್ತ ಸೂರ್ಯಾಗ್ನಿಜಟಿನೇ ವಲ್ಕಲಾಜಿನವಾಸಸೇ ॥
ಸಹಸ್ರಸೂರ್ಯಪ್ರತಿಮ ತಪೋನಿತ್ಯ ನಮೋಽಸ್ತು ತೇ ॥ ೨೨೩ ॥

ಉನ್ಮಾದನಶತಾವರ್ತ ಗಂಗಾತೋಯಾರ್ದ್ರಮೂರ್ಧಜ ।
ಚಂದ್ರಾವರ್ತ ಯುಗಾವರ್ತ ಮೇಘಾವರ್ತ ನಮೋಽಸ್ತು ತೇ ॥ ೨೨೪ ॥

ತ್ವಮನ್ನಮನ್ನಕರ್ತಾ ಚ ಅನ್ನದಶ್ಚ ತ್ವಮೇವ ಹಿ ।
ಅನ್ನಸ್ರಷ್ಟಾ ಚ ಪಕ್ತಾ ಚ ಪಕ್ವಭುಕ್ತಪಚೇ ನಮಃ ॥ ೨೨೫ ॥

---

೨೨೧-೨೨೫. ಕಾಮರೂಪನೂ, ಕಾಮದಾತನೂ, ಕಾಮನಾಶಕನೂ, ಧೈರ್ಯವಂತನೂ, ಗರ್ವಿಷ್ಠರೂ ಆದ ಶತ್ರುನಾಶಕನೂ, ಸರ್ವರೂಪನೂ, ಸರ್ವದಾತನೂ, ಸರ್ವಜ್ಞನೂ, ಸಂಧ್ಯಾರಾಗವುಳ್ಳವನೂ, ಮಹಾಬಲಿಷ್ಠನೂ ಮಹಾಬಾಹುವೂ, ಮಹಾಪ್ರಾಣಿಯೂ, ಮಹಾಕಾಂತಿಯುತನೂ, ಮಹಾಮೇಘದಂತೆ ಕಾಣುವವನೂ, ಮಹಾಕಾಲನೂ, ಸ್ಥೂಲರೂಪಿಯೂ, ಜೀರ್ಣಾಂಗಿಯೂ, ಜಟಾಧಾರಿಯೂ, ನಾರುಮಡಿ ಕೃಷ್ಣಾಜಿನಗಳನ್ನು ಧರಿಸಿರುವನೂ, ಸಹಸ್ರಸೂರ್ಯಗಳಂತೆ ಹೊಳೆಯುವ ಜಟೆಯುಳ್ಳವನೂ, ವಲ್ಕಲಾಜಿನಗಳನ್ನು ಧರಿಸಿರುವನೂ, ಸಹಸ್ರಸೂರ್ಯರಂತೆ ಕಾಂತಿವಂತನೂ, ನಿತ್ಯತಪಸ್ವಿಯೂ, ಭ್ರಾಂತಿಜನಕವಾದ ಸುಳಿಗಳಿಂದ ಕೂಡಿದ ಗಂಗಾಜಲದಿಂದ ನೆನೆದಂಥ ಜಟೆಯುಳ್ಳವನೂ, ಚಂದ್ರನಂತಿರುವ ಸುಳಿಯಿರುವವನೂ, ಯುಗಾವರ್ತನೂ, ಮೇಘದ ಹಾಗಿರುವ ಸುಳಿಯುಳ್ಳವನೂ, ಅನ್ನರೂಪಿಯೂ, ಅನ್ನಕರ್ತನೂ, ಅನ್ನದಾತನೂ, ಅನ್ನಸ್ರಷ್ಟ್ರವೂ, ಪಕ್ವಾನ್ನಪಾಚಕನೂ, ಆದ ಈಶನಿಗೆ ನಮಸ್ಕಾರ.

ಜರಾಯುಜೋಽಂಡಜಶ್ಚೈವ ಸ್ವೇದಜೋದ್ಭಿಜ್ಜ ಏವ ಚ ।
ತ್ವಮೇವ ದೇವದೇವೇಶೋ ಭೂತಗ್ರಾಮಶ್ಚತುರ್ವಿಧಃ ॥ ೨೨೬ ॥

ಚರಾಚರಸ್ಯ ಬ್ರಹ್ಮಾತ್ವಂ ಪ್ರತಿಹರ್ತಾ ತ್ವಮೇವ ಚ ।
ತ್ವಮೇವ ಬ್ರಹ್ಮವಿದುಷಾಮಪಿ ಬ್ರಹ್ಮವಿದಾಂ ವರಃ ॥ ೨೨೭ ॥

ಸತ್ವಸ್ಯ ಪರಮಾ ಯೋನಿರಬ್ವಾಯುಜ್ಯೋತಿಷಾಂ ನಿಧಿಃ ।
ಋಕ್ಸಾಮಾನಿ ತಥೋಂಕಾರಮಾಹುಸ್ತ್ವಾಂ ಬ್ರಹ್ಮವಾದಿನಃ ॥ ೨೨೮ ॥

ಹವಿರ್ಹಾವೀ ಹವ್ಯೋ ಹಾವೀ ಹುವಾಂ ವಾಚಾಹುತಿಃ ಸದಾ ।
ಗಾಯಂತಿ ತ್ವಾಂ ಸುರಶ್ರೇಷ್ಠ ಸಾಮಗಾ ಬ್ರಹ್ಮವಾದಿನಃ ॥ ೨೨೯ ॥

ಯಜುರ್ಮಯೋ ಋಙ್ಮಯಶ್ಚ ಸಾಮಾಥರ್ವಮಯಸ್ತಥಾ ।
ಪಠ್ಯಸೇ ಬ್ರಹ್ಮವಿದ್ಭಿಸ್ತ್ವಂ ಕಲ್ಪೋಪನಿಷದಾಂ ಗಣೈಃ ॥ ೨೩೦ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ವರ್ಣಾವರಾಶ್ಚ ಯೇ ।
ತ್ವಾಮೇವ ಮೇಘಸಂಘಾಶ್ಚ ವಿಶ್ವಸ್ತನಿತಗರ್ಜಿತಂ ॥ ೨೩೧ ॥

---

೨೨೬-೨೨೮. ಕ್ರಿಮಿಕೀಟಪಕ್ಷಿ, ವೃಕ್ಷಲತಾರೂಪವೂ, ಚರಾಚರಾತ್ಮಕವೂ ಆದ ಜಗತ್ತಿಗೆ ಮೂಲಕಾರಣನೂ, ದೇವೇಶನೂ, ಚತುರ್ವಿಧಪ್ರಾಣಿಗಳಿಗೆ ಮೂಲ ಭೂತನೂ, ಇವುಗಳ ಸಂಹಾರಕನೂ, ಬ್ರಹ್ಮಜ್ಞಾನಿಗಳಲ್ಲಿ ಉತ್ತಮನೂ, ಸತ್ವ ರೂಪಿಯೂ, ಜಲವಾಯು ತೇಜಸ್ಸುಗಳಿಗೆ ನಿಧಿಯೂ, ಋಕ್, ಸಾಮ, ಓಂಕಾರ ಇವುಗಳ ಸ್ವರೂಪಿಯೂ, ಆದ ನಿನಗೆ ನಮಸ್ಕಾರ.

೨೨೯-೨೩೦. ಎಲೈ ದೇವೋತ್ತಮನೇ, ಸಾಮವೇದಿಗಳಾದ ಬ್ರಹ್ಮಜ್ಞಾನಿಗಳು ನಿನ್ನನ್ನು ಹವ್, ಹವಿ, ಹಾವ, ಹಾವೀ, ಹುವ, ಆಹುತಿ, ಎಂಬುದಾಗಿ ಹೊಗಳುತ್ತಾರೆ. ಕಲ್ಪ ಮತ್ತು ಉಪನಿಷತ್ತುಗಳನ್ನು ತಿಳಿದಿರುವ ಬ್ರಹ್ಮಜ್ಞಾನಿಗಳು ಋಕ್, ಯಜುಸ್ಸು, ಸಾಮ, ಅಥರ್ವಣ ಎಂಬ ವೇದಗಳಿಂದ ನಿನ್ನನ್ನು ಹೊಗಳುತ್ತಾರೆ.

೨೩೧-೨೩೨. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ವರ್ಣಾವರರೂ ಆದ ಶೂದ್ರರು, ಇವರು ನಿನ್ನನ್ನು ಮೇಘ, ಗುಡುಗು, ಮಿಂಚು, ಸಿಡಿಲು, ಸಂವತ್ಸರ,

ಸಂವತ್ಸರಸ್ತ್ವಮೃತವೋ ಮಾಸಾ ಮಾಸಾರ್ಧಮೇವ ಚ ।
ಕಲಾ ಕಾಷ್ಠಾ ನಿಮೇಷಾಶ್ಚ ನಕ್ಷತ್ರಾಣಿ ಯುಗಾಗ್ರಹಾಃ ॥ ೨೩೨ ॥

ವೃಷಾಣಾಂ ಕಕುದಂ ತ್ವಂ ಹಿ ಗಿರೀಣಾಂ ಶಿಖರಾಣಿ ಚ ।
ಸಿಂಹೋ ಮೃಗಾಣಾಂ ಪತತಾಂ ತಾರ್ಕ್ಷ್ಯೋಽನಂತಶ್ಚ ಭೋಗಿನಾಂ ॥ ೨೩೩ ॥

ಕ್ಷೀರೋದೋ ಹ್ಯುದಧೀನಾಂಚ ಯಂತ್ರಾಣಾಂ ಧನುರೇವ ಚ ।
ವಜ್ರಂಪ್ರಹರಣಾನಾಂ ಚ ವ್ರತಾನಾಂ ಸತ್ಯಮೇವ ಚ ॥ ೨೩೪ ॥

ಇಚ್ಛಾ ದ್ವೇಷಶ್ಚ ರಾಗಶ್ಚ ಮೋಹಃ ಕ್ಷಾಮೋ ದಮಃ ಶಮಃ ।
ವ್ಯವಸಾಯೋ ಧೃತಿರ್ಲೋಭಃ ಕಾಮಕ್ರೋಧೌ ಜಯಾಜಯೌ ॥ ೨೩೫ ॥

ತ್ವಂಗದೀ ತ್ವಂ ಶರೀ ಚಾಪೀ ಖಟ್ವಾಂಗೀ ಝರ್ಝರೀ ತಥಾ ।
ಛೇತ್ತಾ ಭೇತ್ತಾ ಪ್ರಹರ್ತಾ ಚ ತ್ವಂ ನೇತಾಽಪ್ಯಂತಕೋ ಮತಃ ॥ ೨೩೬ ॥

ದಶಲಕ್ಷಣಸಂಯುಕ್ತೋ ಧರ್ಮೋಽರ್ಥಃ ಕಾಮ ಏವ ಚ ।
ಇಂದ್ರಃ ಸಮುದ್ರಾಃ ಸರಿತಃ ಪಲ್ವಲಾನಿ ಸರಾಂಸಿ ಚ ॥ ೨೩೭ ॥

---

ಋತು, ಮಾಸ, ಪಕ್ಷ, ಕಲ, ಕಾಷ್ಟ, ನಿಮೇಷ, ನಕ್ಷತ್ರ, ಗ್ರಹ, ಯುಗ, ಇವುಗಳೆಂಬುದಾಗಿ ವರ್ಣಿಸುತ್ತಾರೆ.

೨೩೩-೨೩೫. ನೀನು ವೃಷಭಗಳಿಗೆ ಉತ್ತಮನೂ, ಗಿರಿಗಳಿಗೆ ಶಿಖರಪ್ರಾಯನೂ, ಮೃಗಗಳಿಗೆ ಸಿಂಹನೂ, ಪಕ್ಷಿಗಳಿಗೆ ಗರುಡನೂ, ಸರ್ಪಗಳಿಗೆ ಶೇಷನೂ, ಸಮುದ್ರಗಳಿಗೆ ಕ್ಷೀರಸಾಗರವೂ, ಯಂತ್ರಗಳಿಗೆ ಧನುಸ್ಸೂ, ಆಯುಧಗಳಿಗೆ ವಜ್ರವೂ, ವ್ರತಗಳಿಗೆ ಸತ್ಯವೂ, ಆಗಿರುತ್ತೀಯೆ. ಮತ್ತು ದ್ವೇಷ, ರಾಗ, ಮೋಹ, ಶಾಂತತೆ, ಶಮ, ದಮ, ವ್ಯವಸಾಯ, ಧೃತಿ, ಲೋಭ, ಕಾಮಕ್ರೋಧ, ಅಪಜಯ, ಇವುಗಳ ಸ್ವರೂಪನೂ ಆಗಿರುತ್ತೀಯೆ.

೨೩೬-೨೩೭. ಎಲೈ ಈಶ್ವರನೇ, ನೀನು ಗದಾಧರನೂ, ಚಾಪಪಾಣಿಯೂ, ಮಂಚಾಕಾರನೂ, ನದೀಶರೀರಿಯೂ, ಛೇದಕನೂ, ಭೇದಕನೂ, ಪ್ರಹರ್ತಕನೂ, ನೇತೃವೂ, ಅಂತಕನೂ, ದಶಲಕ್ಷಣಯುಕ್ತನೂ, ಧರ್ಮಾರ್ಥಕಾಮರೂಪನೂ, ಇಂದ್ರನೂ ಸಮುದ್ರನೂ, ನದಿಯೂ, ಸಣ್ಣಕೆರೆಯೂ, ಸರಸ್ಸೂ ಆಗಿರುತ್ತೀಯೆ.

ಲತಾವಲ್ಲೀ ತೃಣೌಷಧ್ಯಃ ಪಶವೋ ಮೃಗಪಕ್ಷಿಣಃ ।
ದ್ರವ್ಯಕರ್ಮಗುಣಾರಂಭಃ ಕಾಲಪುಷ್ಪಫಲಪ್ರದಃ ॥ ೨೩೮ ॥

ಆದಿಶ್ಚಾಂತಶ್ಚ ಮಧ್ಯಶ್ಚ ಗಾಯತ್ರ್ಯೋಂಕಾರ ಏವ ಚ ।
ಹರಿತೋ ಲೋಹಿತಃ ಕೃಷ್ಣೋ ನೀಲಃ ಪೀತಸ್ತಥಾಽರುಣಃ ॥ ೨೩೯ ॥

ಕದ್ರುಶ್ಚ ಕಪಿಲಶ್ಚೈವ ಕಪೋತೋ ಮೇಚಕಸ್ತಥಾ ।
ಸುವರ್ಣರೇತಾ ವಿಖ್ಯಾತಃ ಸುವರ್ಣಶ್ಚಾಪ್ಯತೋ ಮತಃ ॥ ೨೪೦ ॥

ಸುವರ್ಣನಾಮಾ ಚ ತಥಾ ಸುವರ್ಣಪ್ರಿಯ ಏವ ಚ ।
ತ್ವಮಿಂದ್ರೋಽಥ ಯಮಶ್ಚೈವವರುಣೋ ಧನದೋಽನಲಃ ॥ ೨೪೧ ॥

ಉತ್ಫುಲ್ಲಶ್ಚಿತ್ರಭಾನುಶ್ಚ ಸ್ವರ್ಭಾನುರ್ಭಾನುರೇವ ಚ ।
ಹೋತ್ರಂ ಹೋತಾ ಚ ಹೋಮಸ್ತ್ವಂ ಹುತಂ ಚ ಪ್ರಹುತಂ ಪ್ರಭುಃ॥ ೨೪೨ ॥

ಸುಪರ್ಣಂ ಚ ತಥಾ ಬ್ರಹ್ಮಾ ಯಜುಷಾಂ ಶತರುದ್ರಿಯಂ ।
ಪವಿತ್ರಾಣಾಂ ಪವಿತ್ರಂ ಚ ಮಂಗಲಾನಾಂ ಚ ಮಂಗಲಂ ॥ ೨೪೩ ॥

---

೨೩೮-೨೩೯. ಲತೆ, ಬಳ್ಳಿ, ತೃಣ, ಔಷಧಿ, ಪಶು, ಪಕ್ಷಿ, ಮೃಗ, ದ್ರವ್ಯ, ಕರ್ಮ ಗುಣ ಇವುಗಳ ಆರಂಭಕನೂ, ಕಾಲರೂಪಿಯೂ, ಫಲಪುಷ್ಪಪ್ರದನೂ, ಆದಿಯೂ, ಅಂತನೂ, ಮಧ್ಯನೂ, ಗಾಯತ್ರೀ, ಓಂಕಾರ, ಇವುಗಳ ಸ್ವರೂಪಿಯೂ ಹಸರು, ಕೆಂಪು, ಕಪ್ಪು, ನೀಲ, ಪೀತ, ಅರುಣ ಈ ಬಣ್ಣಗಳುಳ್ಳವನೂ ಆಗಿರುತ್ತೀಯೆ.

೨೪೦. ಗೋರೋಚನ, ಕಪಿಲ, ಕಪೋತ, ಕೃಷ್ಣ, ಈ ವರ್ಣಯೂ ಸುವರ್ಣ ರೇತಸ್ಕನೂ, ಪ್ರಸಿದ್ಧನೂ, ಸುವರ್ಣರೂಪನೂ, ಆಗಿರುವ ನಿನಗೆ ನಮಸ್ಕಾರಗಳು.

೨೪೧-೨೪೩. ಸುವರ್ಣನಾಮಕನೂ, ಸುವರ್ಣಪ್ರಿಯನೂ, ಇಂದ್ರ, ಯಮ, ವರುಣ, ಕುಬೇರ, ಅಗ್ನಿ ಏತದ್ರೂಪಿಯೂ, ವಿಕಾಸಕನೂ, ಚಿತ್ರಭಾನುವೂ, ಸ್ವರ್ಗಸೂರ್ಯನೂ, ಸೂರ್ಯರೂಪಿಯೂ, ಹೋತ್ರ, ಹೋತ, ಹೋಮ, ಹುತ, ಪ್ರಹುತ ಎಂಬ ಶಬ್ದವಾಚ್ಯನೂ, ಪ್ರಭುವೂ, ಗರುಡನೂ, ಬ್ರಹ್ಮನೂ, ಯಜುರ್ವೇದ ಪ್ರಿಯನೂ, ಪವಿತ್ರಗಳಿಗಿಂತಲೂ ಪವಿತ್ರನೂ, ಮಂಗಳಗಳಿಗೆ ಮಂಗಳಪ್ರದನೂ,

ಗಿರಿಃ ಸ್ತೋಕಸ್ತಥಾ ವೃಕ್ಷೋ ಜೀವಃ ಪುದ್ಗಲ ಏವ ಚ ।
ಸತ್ವಂ ತ್ವಂ ಚ ರಜಸ್ತ್ವಂ ಚ ತಮಶ್ಚ ಪ್ರಜನಂ ತಥಾ ॥ ೨೪೪ ॥

ಪ್ರಾಣೋಽಪಾನಃ ಸಮಾನಶ್ಚ ಉದಾನೋ ವ್ಯಾನ ಏವ ಚ ।
ಉನ್ಮೇಷಶ್ಚೈವ ಮೇಷಶ್ಚ ತಥಾ ಜೃಂಭಿತಮೇವ ಚ ॥ ೨೪೫ ॥

ಲೋಹಿತಾಂಗೋ ಗದೀ ದಂಷ್ಟ್ರೀ ಮಹಾವಕ್ತ್ರೋ ಮಹೋದರಃ ।
ಶುಚಿರೋಮ ಹರಿಚ್ಛ್ಮಶ್ರುರೂರ್ಧ್ವಕೇಶಸ್ತ್ರಿಲೋಚನಃ ॥ ೨೪೬ ॥

ಗೀತವಾದಿತ್ರನೃತ್ಯಾಂಗೋ ಗೀತವಾದನಕಪ್ರಿಯಃ ।
ಮತ್ಸ್ಯೋ ಜಲೀ ಜಲೋ ಜಲ್ಯೋ ಜವಃ ಕಾಲಃ ಕಲೀ ಕಲಃ ॥ ೨೪೭ ॥

ವಿಕಾಲಶ್ಚ ಸುಕಾಲಶ್ಚ ದುಷ್ಕಾಲಃ ಕಲನಾಶನಃ ।
ಮೃತ್ಯುಶ್ಚೈವ ಕ್ಷಯೋಽಂತಶ್ಚ ಕ್ಷಮಾಪಾಯಕರೋ ಹರಃ ॥ ೨೪೮ ॥

ಸಂವರ್ತಕೋಽಂತಕಶ್ಚೈವ ಸಂವರ್ತಕಬಲಾಹಕೌ ।
ಘಟೋ ಘಟೀಕೋ ಘಂಟೀಕೋ ಚೂಡಾಲೋಲಬಲೋ ಬಲಂ ॥ ೨೪೯ ॥

---

ಪರ್ವತಾಕಾರನೂ, ಸೂಕ್ಷ್ಮನೂ, ವೃಕ್ಷಸ್ವರೂಪಿಯೂ, ಜೀವನೂ, ಉದ್ಗಲನೂ, ಸತ್ವರಜಸ್ತಮೋಗುಣಸ್ವರೂಪನೂ, ಉತ್ಪನ್ನನೂ, ಪ್ರಾಣಾಪಾನಸಮಾನವ್ಯಾನೋದಾನರೂಪಿಯೂ, ಉನ್ಮೇಷನಿಮೇಷಕಾರಿಯೂ, ಜೃಂಭಣಕಾರಿಯೂ ಆದ ಈಶ್ವರನಿಗೆ ನಮಸ್ಕಾರವು.

೨೪೬-೨೪೭. ಲೋಹಿತಾಂಗನೂ, ಗದಾಧಾರಿಯೂ, ಕೋರೆಹಲ್ಲುಳ್ಳವನೂ, ವಿಶಾಲಮುಖಿಯೂ, ಮಹೋದರನೂ, ಶುದ್ಧರೋಮನೂ, ಹಸುರಾದಗಡ್ಡ, ಮೀಸೆಯುಳ್ಳವನೂ, ಊರ್ಧ್ವಕೇಶಿಯೂ, ತ್ರಿನೇತ್ರನೂ, ಗಾನ, ವಾದ್ಯ, ನೃತ್ಯ, ಗೀತ, ವಾದನ ಇವುಗಳಲ್ಲಿ ಪ್ರಿಯನೂ, ಮತ್ಸ್ಯ, ಜಲ, ಜಲ್ಯ, ವೇಗ, ಏತದ್ರೂಪನೂ, ಕಾಲರೂಪನೂ, ಕಲಿರೂಪಿಯೂ, ಮಧುರಧ್ವನಿಯುಳ್ಳವನೂ ಆದ ನಿನಗೆ ನಮಸ್ಕಾರ.

೨೪೮-೨೫೦. ಕಾಲರೂಪಿಯೂ, ಯಮರೂಪಿಯೂ, ಕಲಿರೂಪಿಯೂ, ಕಲಿನಾಶಕನೂ, ಮೃತ್ಯು, ಕ್ಷಯ, ಅಂತ ಈ ರೂಪಿಯೂ, ಕ್ಷಮೆ, ಅಪಾಯ ಇವುಗಳನ್ನು ಉಂಟುಮಾಡುವವನೂ, ಸಂಹಾರಕನೂ, ಪ್ರಲಯ, ಯಮ, ಮೇಘ ಈ ಸ್ವರೂಪನೂ, ಚೇಷ್ಟಾಪ್ರದನೂ, ಕೌಪೀನಧಾರಿಯೂ, ಘಂಟೆಯುಳ್ಳವನೂ.

ಬ್ರಹ್ಮಕಾಲೋಽಗ್ನಿವಕ್ತ್ರಶ್ಚ ದಂಡೀ ಮುಂಡೀ ಚ ದಂಡಧೃಕ್ ।
ಚತುರ್ಯುಗಶ್ಚತುರ್ವೇದಶ್ಚತುಹೋತ್ರಶ್ಚತುಷ್ಪಥಃ ॥ ೨೫೦ ॥

ಚತುರಾಶ್ರಮ ವೇತ್ತಾ ಚ ಚಾತುರ್ವರ್ಣ್ಯ ಕರಶ್ಚ ಹ ।
ಕ್ಷರಾಕ್ಷರಪ್ರಿಯೋ ಧೂರ್ತೋಽಗಣ್ಯೋಽಗಣ್ಯಗಣಾಧಿಪಃ ॥ ೨೫೧ ॥

ರುದ್ರಾಕ್ಷಮಾಲ್ಯಾಂಬರಧರೋ ಗಿರಿಕೋ ಗಿರಿಕಪ್ರಿಯಃ ।
ಶಿಲ್ಪೀಶಃ ಶಿಲ್ಪಿನಾಂ ಶ್ರೇಷ್ಠಃ ಸರ್ವಶಿಲ್ಪಪ್ರವರ್ತಕಃ ॥ ೨೫೨ ॥

ಭಗನೇತ್ರಾಂತಕಶ್ಚಂದ್ರಃ ಪೂಷ್ಣೋ ದಂತವಿನಾಶನಃ ।
ಗೂಢಾವರ್ತಶ್ಚ ಗೂಢಶ್ಚ ಗೂಢಪ್ರತಿನಿಷೇವಿತಾ ॥ ೨೫೪ ॥

ತರಣಸ್ತಾರಕಶ್ಚೈವ ಸರ್ವಭೂತಸುತಾರಣಃ ।
ಧಾತಾ ವಿಧಾತಾ ಸತ್ವಾನಾಂ ನಿಧಾತಾ ಧಾರಣೋ ಧರಃ ॥ ೨೫೪ ॥

---

ಕೇಶದಿಂದ ಚಂಚಲವಾದ ಶಕ್ತಿಯುಳ್ಳವನೂ, ಬಲಿಷ್ಠನೂ, ಬ್ರಹ್ಮ, ಕಾಲ, ಅಗ್ನಿ ರೂಪಿಯೂ, ದಂಡಧಾರಿಯೂ ಮುಂಡನೂ, ಶಿಕ್ಷಕನೂ, ನಾಲ್ಕಾದಯುಗ, ವೇದ, ಹೋತ್ರ, ಮಾರ್ಗ ಇವುಗಳುಳ್ಳವನೂ ಆದ ಈಶನಿಗೆ ನಮಸ್ಕಾರವು.

೨೫೧-೨೫೪. ನಾಲ್ಕು ಆಶ್ರಮಗಳನ್ನು ತಿಳಿದವನೂ, ನಾಲ್ಕು ವರ್ಣಗಳನ್ನು ಸೃಷ್ಟಿಸಿದವನೂ, ಚರಾಚರಪ್ರಿಯನೂ, ಧೂರ್ತನೂ, ಗಣ್ಯನೂ, ಯೋಗ್ಯಗಣಾಧಿಪನೂ ರುದ್ರಾಕ್ಷಮಾಲೆವಸ್ತ್ರಗಳನ್ನು ಧರಿಸಿರುವವನೂ, ಮೂಷಕಪ್ರಿಯನೂ, ಶಿಲ್ಪೀಶ್ವರನೂ, ಶಿಲ್ಪಶ್ರೇಷ್ಠನೂ, ಸರ್ವಶಿಲ್ಪಿಪ್ರೇರಕನೂ, ಭಗನೇತ್ರನಾಶಕನೂ, ಆಹ್ಲಾದಕನೂ, ಸೂರ್ಯಚಂದ್ರರೂಪಿಯೂ, ದಂತನಾಶಕನೂ, ರಹಸ್ಯವಾದ ಸುಳಿಯುಳ್ಳವನೂ, ಗೂಢಪುರುಷನೂ, ರಹಸ್ಯವಾಗಿ ಸೇವಿಸಲ್ಪಡುವನೂ, ಯುವಕನೂ, ಉದ್ಧಾರಕನೂ, ಸರ್ವಭೂತಧಾರಕನೂ, ಸೃಷ್ಟಿಕರ್ತನೂ, ಪ್ರಾಣಿರಕ್ಷಕನೂ, ಆಶ್ರಯನೂ, ಧಾರಕನೂ, ಉದ್ಧಾರಕನೂ ಆದ ಈಶನಿಗೆ ನಮಸ್ಕಾರ.

ತಪೋ ಬ್ರಹ್ಮ ಚ ಸತ್ಯಂ ಚ ಬ್ರಹ್ಮಚರ್ಯಮಥಾರ್ಜವಂ ।
ಭೂತಾತ್ಮಾ ಭೂತಕೃದ್ಭೂತೋ ಭೂತಭವ್ಯಭವೋದ್ಭವಃ ॥ ೨೫೫ ॥

ಭೂರ್ಭುವಃ ಸ್ವರಿತಶ್ಚೈವ ತಥೋತ್ಪತ್ತಿರ್ಮಹೇಶ್ವರಃ ।
ಈಶಾನೋ ವೀಕ್ಷಣಃ ಶಾಂತೋ ದುರ್ದಾಂತೋ ದಂತನಾಶನಃ ॥ ೨೫೬ ॥

ಬ್ರಹ್ಮಾವರ್ತ ಸುರಾವರ್ತ ಕಾಮಾವರ್ತ ನಮೋಽಸ್ತು ತೇ ।
ಕಾಮಬಿಂಬನಿಹರ್ತಾ ಚ ಕರ್ಣಿಕಾರರಜಃ ಪ್ರಿಯಃ ॥ ೨೫೭ ॥

ಮುಖಚಂದ್ರೋ ಭೀಮಮುಖಃ ಸುಮುಖೋ ದುರ್ಮುಖೋ ಮುಖಃ ।
ಚತುರ್ಮುಖೋ ಬಹುಮುಖೋ ರಣೇಹ್ಯಭಿಮುಖಃ ಸದಾ ॥ ೨೫೮ ॥

ಹಿರಣ್ಯಗರ್ಭಃ ಶಕುನಿರ್ಮಹೋದಧಿಃ ಪರೋ ವಿರಾಟ್ ।
ಅಧರ್ಮಹಾ ಮಹಾದಂಡೋ ದಂಡಧಾರೋ ರಣಪ್ರಿಯಃ ॥ ೨೫೯ ॥

ಗೋತಮೋ ಗೋಪ್ರತಾರಶ್ಚ ಗೋವೃಷೈಶ್ವರವಾಹನಃ ।
ಧರ್ಮಕೃದ್ಧರ್ಮಸ್ರಷ್ಟಾ ಚ ಧರ್ಮೋ ಧರ್ಮವಿದುತ್ತಮಃ ॥ ೨೬೦ ॥

---

೨೫೫-೨೬೦. ತಪಸ್ಸು, ಸತ್ಯ, ಬ್ರಹ್ಮಚರ್ಯ, ವೇದ, ಆರ್ಜವ ಇವುಗಳಿಗೆ ನಿಯಾಮಕನೂ, ಭೂತಭವಿಷ್ಯದ್ವರ್ತಮಾನವಿಷಯಗಳಿಗೆ ಕಾರಣನೂ, ಭೂಃ, ಭುವಃ, ಸ್ವರ್ ಶಬ್ದವಾಚ್ಯನೂ, ಮಹೇಶ್ವರನೂ, ಈಶಾನನೂ, ದರ್ಶಕನೂ, ಶಾಂತನೂ, ದುರ್ದಾಂತನೂ, ದಂತನಾಶಕನೂ, ಬ್ರಹ್ಮಾವರ್ತನೂ, ಸುರಾವರ್ತನೂ, ಕಾಮಾವರ್ತನೂ, ಕಾಮಬಿಂಬನಿವರ್ತಕನೂ, ಕಣಿಗಲೆಪುಷ್ಪಗಳ ಸರದಲ್ಲಿ ಪ್ರಿಯನೂ, ಚಂದ್ರಮುಖನೂ, ಭಯಂಕರವೂ, ಸುಂದರವೂ, ದುಷ್ಟವೂ ಆದ ಮುಖವುಳ್ಳವನೂ, ಚತುರ್ಮುಖನೂ, ಬಹುಮುಖನೂ, ರಣಾಭಿಮುಖನೂ, ಹಿರಣ್ಯಗರ್ಭನೂ, ಶಕುನಿರೂಪಿಯೂ, ಸಮುದ್ರರೂಪಿಯೂ, ಗರುಡನೂ, ಅಧರ್ಮನಾಶಕನೂ, ಮಹಾದಂಡಧಾರಿಯೂ, ರಣಪ್ರಿಯನೂ, ಧನೋತ್ತಮನೂ, ಗೋಪ್ರತಾರಕನೂ, ನಂದಿವಾಹನನೂ, ಧರ್ಮಕರ್ತನೂ, ಧರ್ಮಸ್ರಷ್ಟನೂ, ಧರ್ಮಾಧರ್ಮಜ್ಞರಲ್ಲಿ ಉತ್ತಮನೂ ಆದ ಈಶ್ವರನಿಗೆ ನಮಸ್ಕಾರ.

ತ್ರೈಲೋಕ್ಯಗೋಪ್ತಾ ಗೋವಿಂದೋ ಮಾನದೋ ಮಾನ ಏವ ಚ ।
ತಿಷ್ಠಂ ಸ್ಥಿರಶ್ಚ ಸ್ಥಾಣುಶ್ಚ ನಿಷ್ಕಂಪಃ ಕಂಪ ಏವ ಚ ॥ ೨೬೧ ॥

ದುರ್ವಾರಣೋ ದುರ್ವಿಷಹೋ ದುಃಸಹೋ ದುರತಿಕ್ರಮಃ ।
ದುರ್ಧರೋ ದುಷ್ಪ್ರಕಂಪಶ್ಚ ದುರ್ವಿದೋ ದುರ್ಜಯೋ ಜಯಃ॥೨೬೨॥

ಶಶಃ ಶಶಾಂಕಃ ಶಮನಃ ಶೀತೋಷ್ಣಂ ದುರ್ಜರಾಥ ತೃಟ್ ।
ಆಧಾಯೋ ವ್ಯಾಧಯಶ್ಚೈವ ವ್ಯಾಧಿಹಾ ವ್ಯಾಧಿಗಶ್ಚ ಹ ॥ ೨೬೩ ॥

ಸಹ್ಯೋ ಯಜ್ಞೋ ಮೃಗಾ ವ್ಯಾಧಾ ವ್ಯಾಧೀನಾಮಾಕರೋಽಕರಃ ।
ಶಿಖಂಡೀ ಪುಂಡರೀಕಾಕ್ಷಃ ಪುಂಡರೀಕಾವಲೋಕನಃ ॥ ೨೬೪ ॥

ದಂಡಧರಃ ಸ ದಂಡಶ್ಚ ದಂಡಮುಂಡವಿಭೂಷಿತಃ ।
ವಿಷಪೋಽಮೃತಪಶ್ಚೈವ ಸುರಾಪಃ ಕ್ಷೀರಸೋಮಪಃ ॥ ೨೬೫ ॥

ಮಧುಪಶ್ಚಾಜ್ಯಪಶ್ಚೈವ ಸರ್ವಪಶ್ಚ ಮಹಾಬಲಃ ।
ವೃಷಾಶ್ವವಾಹ್ಯೋ ವೃಷಭಸ್ತಥಾ ವೃಷಭಲೋಚನಃ ॥ ೨೬೬ ॥

---

೨೬೧-೨೬೨. ತ್ರೈಲೋಕ್ಯರಕ್ಷಕನೂ, ವಾಕ್ಪತಿಯೂ, ಮಾನದಾತನೂ, ಮಾನರೂಪಿಯೂ, ನಿಂತಿರುವನೂ, ಸ್ಥಿರನೂ, ಸ್ಥಾಣುವೂ, ನಿಶ್ಚಲನೂ, ಕಂಪಿಸುವನೂ, ತಡೆಯಲಶಕ್ಯನೂ, ದುರ್ವಿಷಹ್ಯನೂ, ದುಸ್ಸಹನೂ, ಮೀರಲಶಕ್ಯನೂ, ಧರಿಸಲಸಾಧ್ಯನೂ ಅಧಿಕವಾಗಿ ಕಂಪಿಸುವನೂ, ತಿಳಿಯಲಸಾಧ್ಯನೂ, ಜಯಿಸಲಶಕ್ಯನೂ, ಜಯಶಾಲಿಯೂ ಆದ ಈಶನಿಗೆ ನಮಸ್ಕಾರ.

೨೬೩-೨೬೭. ಶಶರೂಪನೂ, ಚಂದ್ರನೂ, ಯಮನೂ, ಶೀತೋಷ್ಣರೂಪನೂ, ಜರಾವಿದೂರನೂ, ಪಿಪಾಸೆಯುಳ್ಳವನೂ, ಆಧಿವ್ಯಾಧಿರೂಪನೂ, ವ್ಯಾಧಿಪರಿಹಾರಕನೂ, ವ್ಯಾಧಿದಾಯಕನೂ, ಸಹನಾರ್ಹನೂ, ಯಜ್ಞ, ಮೃಗ, ವ್ಯಾಧ ಇವುಗಳ ಸ್ವರೂಪನೂ, ವ್ಯಾಧಿಗಳಿಗೆ ಗಣಿಯೂ, ಶಿಖಂಡಿಯೂ, ಕಮಲಾಕ್ಷನೂ, ಕಮಲದಂತೆ ಸುಂದರವಾದ ನೋಟವುಳ್ಳವನೂ, ದಂಡಧರನೂ, ದಂಡಸಹಿತನೂ, ದಂಡಮುಂಡಗಳಿಂದ ವಿಭೂಷಿತನು; ವಿಷ, ಅಮೃತ, ಮಧ್ಯ, ಕ್ಷೀರ, ಸೋಮ, ಜೇನು, ತುಪ್ಪ, ಇವೇ ಮೊದಲಾದ ಸರ್ವವನ್ನು ಪಾನಮಾಡುವವನೂ, ಮಹಾಬಲನೂ, ವೃಷಾಶ್ವವಾಹನನೂ, ವೃಷಭರೂಪಿಯೂ, ವೃಷಭಾಕ್ಷನೂ, ವೃಷಭನಾಮಕನೂ, ಲೋಕ

ವೃಷಭಶ್ಚೈವ ವಿಖ್ಯಾತೋ ಲೋಕಾನಾಂ ಲೋಕ ಸತ್ಕೃತಃ ।
ಚಂದ್ರಾದಿತ್ಯೌ ಚಕ್ಷುಷೀ ತೇ ಹೃದಯಂ ಚ ಪಿತಾಮಹಃ ॥
ಅಗ್ನಿರಾಪಸ್ತಥಾ ದೇವೋ ಧರ್ಮಕರ್ಮಪ್ರಸಾಧಿತಃ ॥ ೨೬೭ ॥

ನ ಬ್ರಹ್ಮಾ ನ ಚ ಗೋವಿಂದಃ ಪುರಾಣಋಷಯೋ ನ ಚ ।
ಮಾಹಾತ್ಮ್ಯಂ ವೇದಿತುಂ ಶಕ್ತಾ ಯಾಥಾತಥ್ಯೇನ ತೇ ಶಿವ ॥ ೨೬೮ ॥

ಯಾ ಮೂರ್ತಯಃ ಸುಸೂಕ್ಷ್ಮಾಸ್ತೇ ನ ಮಹ್ಯಂ ಯಾಂತಿ ದರ್ಶನಂ ।
ತಾಭಿರ್ಮಾಂ ಸತತಂ ರಕ್ಷ ಪಿತಾ ಪುತ್ರಮಿವೌರಸಂ ॥ ೨೬೯ ॥

ರಕ್ಷ ಮಾಂ ರಕ್ಷಣೀಯೋऽಹಂತವಾನಘ ನಮೋऽಸ್ತು ತೇ ।
ಭಕ್ತಾನುಕಂಪೀ ಭಗವಾನ್ ಭಕ್ತಶ್ಚಾಹಂ ಸದಾ ತ್ವಯಿ ॥ ೨೭೦ ॥

ಯಃ ಸಹಸ್ರಾಣ್ಯನೇಕಾನಿ ಪುಂಸಾಮಾಹೃತ್ಯ ದುರ್ದಶಃ ।
ತಿಷ್ಠತ್ಯೇಕಃ ಸಮುದ್ರಾಂತೇ ಸ ಮೇ ಗೋಪ್ತಾಸ್ತು ನಿತ್ಯಶಃ ॥ ೨೭೧ ॥

---

ಪೂಜ್ಯನೂ, ಚಂದ್ರಸೂರ್ಯನೇತ್ರನೂ, ಪಿತಾಮಹನೂ, ಅಗ್ನಿ, ಜಲ, ಧರ್ಮ, ಕರ್ಮ, ಇವುಗಳಿಗೆ ಪ್ರೇರಕನೂ, ಪ್ರಸನ್ನನೂ ಆದ ನಿನಗೆ ನಮಸ್ಕಾರ.

೨೬೮. ಎಲೈ ಪರಮೇಶ್ವರನೇ, ಬ್ರಹ್ಮ, ವಿಷ್ಣು, ಪುರಾತನರಾದ ಮಹರ್ಷಿಗಳು ಇವರು ನಿನ್ನ ಸಂಪೂರ್ಣವಾದ ಮಹಿಮೆಗಳನ್ನು ಯಥಾಸ್ಥಿತವಾಗಿ ತಿಳಿಯಲು ಅಸಮರ್ಥರಾಗಿರುವರು.

೨೬೯. ಯಾವ ನಿನ್ನ ಸೂಕ್ಷ್ಮಗಳಾದ ಮೂರ್ತಿಗಳಿವೆಯೋ ಅವುಗಳನ್ನು ಈ ಚರ್ಮ ಚಕ್ಷುಸ್ಸುಗಳಿಂದ ನೋಡಲು ಸಾಧ್ಯವಿಲ್ಲ. ಆದಕಾರಣ ಅಂಥಾ ಮೂರ್ತಿಗಳುಳ್ಳ ನೀನು ತಂದೆಯು ಮಗನನ್ನು ರಕ್ಷಿಸುವಂತೆ ಸರ್ವದಾ ನನ್ನನ್ನು ರಕ್ಷಿಸು ಎಂದನು.

೨೭೦. ಎಲೈ ನಿರ್ದೋಷಿಯಾದ ಪರಮೇಶ್ವರನೇ, ರಕ್ಷನಾರ್ಹನೂ, ಭಕ್ತನೂ, ಆದ ನನ್ನನ್ನು ಸರ್ವದಾ ಕಾಪಾಡು. ನೀನು ಭಕ್ತರಲ್ಲಿ ಸರ್ವದಾ ಅನುಗ್ರಹವನ್ನು ಮಾಡುತ್ತೀಯೆ. ನಾನು ಸದಾ ನಿನ್ನ ಭಕ್ತನಾಗಿರುವೆನು ಎಂದು-ದಕ್ಷನು ಹೇಳಿದನು.

೨೭೧. ಸ್ವಾಮಿಯೇ ನೀನು ಸಾವಿರಾರು ರೂಪಗಳನ್ನು ಧರಿಸಿದವನಾದರೂ ಮನುಷ್ಯರ ದೃಷ್ಟಿಗೆ ಅಗೋಚರನಾಗಿರುತ್ತೀಯೆ. ಅಂತಹ ನೀನು ಭಕ್ತಾನುಗ್ರಹಕ್ಕಾಗಿ ಒಂದು ರೂಪವನ್ನು ಧರಿಸಿ ಸಮುದ್ರ ತೀರದಲ್ಲಿರುತ್ತೀಯೆ. ಅಂಥಹ ನೀನು ಸರ್ವದಾ ನನಗೆ ರಕ್ಷಕನಾಗು.

ಯಂ ವಿನಿದ್ರಾ ಜಿತಶ್ವಾಸಾಃ ಸತ್ವಸ್ಥಾಃ ಸಮದರ್ಶಿನಃ ।
ಜ್ಯೋತಿಃ ಪಶ್ಯಂತಿ ಯುಂಜಾನಾಸ್ತಸ್ಮೈ ಯೋಗಾತ್ಮನೇ ನಮಃ ॥ ೨೭೨ ॥

ಸಂಭಕ್ಷ್ಯ ಸರ್ವಭೂತಾನಿ ಯುಗಾಂತೇ ಸಮುಪಸ್ಥಿತೇ ।
ಯಃ ಶೇತೇ ಜಲಮಧ್ಯಸ್ಥಸ್ತಂ ಪ್ರಪದ್ಯೇಽಪ್ಸುಶಾಯಿನಂ ॥ ೨೭೩ ॥

ಪ್ರವಿಶ್ಯ ವದನೇ ರಾಹೋರ್ಯಃ ಸೋಮಂ ಗ್ರಸತೇ ನಿಶಿ ।
ಗ್ರಸತ್ಯರ್ಕಂ ಚ ಸ್ವರ್ಭಾನುರ್ಭೂತ್ವಾ ಸೋಮಾಗ್ನಿರೇವ ಚ ॥ ೨೭೪ ॥

ಯೇಂಗುಷ್ಠಮಾತ್ರಾಃ ಪುರುಷಾ ದೇಹಸ್ಥಾಃ ಸರ್ವದೇಹಿನಾಂ ।
ರಕ್ಷಂ ತು ತೇ ಹಿ ಮಾಂ ನಿತ್ಯಂ ನಿತ್ಯಮಾಪ್ಯಾಯಯಂತು ಮಾಂ ॥ ೨೭೫ ॥

ಯೇ ಚಾಪ್ಯುತ್ಪಾತಿತಾ ಗರ್ಭಾದಧೋಭಾಗಗತಾಶ್ಚ ಯೇ ।
ತೇಷಾಂ ಸ್ವಾಹಾಃ ಸ್ವಧಾಶ್ಚೈವ ಆಪ್ನುವಂ ತು ಸ್ವದಂ ತು ಚ ॥ ೨೭೬ ॥

---

೨೭೨. ಜಿತನಿದ್ರರೂ, ಶ್ವಾಸಧಾರಿಗಳೂ, ಧ್ಯಾನಪರರೂ, ಸಮದರ್ಶಿಗಳೂ ಆದ ಮಹಾತ್ಮರು ಧ್ಯಾನಾಸಕ್ತರಾಗಿ ತೇಜೋಮಯವಾದ ಯಾವ ನಿನ್ನ ದಿವ್ಯ ಶರೀರವನ್ನು ನೋಡುತ್ತಾರೋ ಅಂತಹ ಯೋಗಿಗಮ್ಯನಾದ ನಿನಗೆ ನಮಸ್ಕಾರ.

೨೭೩. ಪ್ರಲಯಕಾಲವು ಪ್ರಾಪ್ತವಾದರೆ ಯಾವ ನೀನು ಸಕಲಪ್ರಾಣಿಗಳನ್ನು ಸಂಹರಿಸಿ ಜಲಮಧ್ಯದಲ್ಲಿ ಶಯನಮಾಡುತ್ತೀಯೋ ಅಂತಹ ನಿನಗೆ ಶರಣಾಗತನಾಗುವೆನು.

೨೭೪. ಯಾವ ನೀನು ರಾಹುವಿನ ಮುಖದಲ್ಲಿ ಪ್ರವೇಶಿಸಿ ರಾತ್ರಿಕಾಲದಲ್ಲಿ ಚಂದ್ರನನ್ನು ನುಂಗುತ್ತೀಯೋ ಮತ್ತು ಸ್ವರ್ಗಲೋಕದ ಸೂರ್ಯನಾಗಿ ಸೂರ್ಯ, ಚಂದ್ರ, ಅಗ್ನಿ ಇವುಗಳನ್ನು ನಾಶಮಾಡುತ್ತೀಯೋ ಅಂತಹ ನಿನಗೆ ನಮಸ್ಕಾರ.

೨೭೫. ಯಾವ ನಿನ್ನ ಅಂಗುಷ್ಠಮಾತ್ರದಂತಿರುವ ರೂಪಗಳು ಸಕಲ ಪ್ರಾಣಿಗಳ ಹೃದಯಗಳಲ್ಲಿ ಇರುತ್ತವೆಯೋ ಅಂತಹ ನಿನ್ನ ರೂಪಗಳು ಸರ್ವದಾ ನನ್ನನ್ನು ರಕ್ಷಿಸಿ ತೃಪ್ತಿಯನ್ನುಂಟುಮಾಡಲಿ ಎಂದನು.

೨೭೬. ಯಾರು ಗರ್ಭದಿಂದ ಸೃಷ್ಟಿಸಲ್ಪಟ್ಟಿರುತ್ತಾರೋ, ಯಾರು ಕೆಳಭಾಗದಲ್ಲಿರುತ್ತಾರೋ ಅವರು ಸ್ವಾಹಾಕಾರ, ಸ್ವಧಾಕಾರ ಪೂರ್ವಕವಾಗಿ ಕೊಡಲ್ಪಟ್ಟ ಹವಿಸ್ಸುಗಳನ್ನು ಪಡೆಯಲಿ ಮತ್ತು ರುಚಿನೋಡಲಿ.

ಯೇ ನ ರೋದಂತಿ ದೇಹಸ್ಥಾಃ ಪ್ರಾಣಿನೋ ರೋದಯಂತಿ ಚ ।
ಹರ್ಷಯಂತಿ ಚ ಹೃಷ್ಯಂತಿ ನಮಸ್ತೇಭ್ಯೋಽಸ್ತು ನಿತ್ಯಶಃ ॥ ೨೭೭ ॥

ಯೇ ಸಮುದ್ರೇ ನದೀದುರ್ಗೇ ಪರ್ವತೇಷು ಗುಹಾಸು ಚ ।
ವೃಕ್ಷಮೂಲೇಷು ಗೋಷ್ಠೇಷು ಕಾಂತಾರಗಹನೇಷು ಚ ॥ ೨೭೮ ॥

ಚತುಷ್ಪಥೇಶು ರಥ್ಯಾಸು ಚತ್ವರೇಷು ಸಭಾಸು ಚ ।
ಚಂದ್ರಾರ್ಕಯೋರ್ಮಧ್ಯಗತಾ ಯೇ ಚ ಚಂದ್ರಾರ್ಕರಶ್ಮಿಷು ॥ ೨೭೯ ॥

ರಸಾತಲಗತಾ ಯೇ ಚ ಯೇ ಚ ತಸ್ಮಾತ್ಪರಂಗತಾಃ ।
ನಮಸ್ತೇಭ್ಯೋ ನಮಸ್ತೇಭ್ಯೋ ನಮಸ್ತೇಭ್ಯಶ್ಚ ನಿತ್ಯಶಃ ॥ ೨೮೦ ॥

ಸರ್ವಸ್ತ್ವಂ ಸರ್ವಗೋ ದೇವ ಸರ್ವಭೂತಪತಿರ್ಭವಾನ್ ।
ಸರ್ವಭೂತಾಂತರಾತ್ಮಾ ಚ ತೇನ ತ್ವಂ ನ ನಿಮಂತ್ರಿತಃ ॥ ೨೮೧ ॥

ತ್ವಮೇವ ಚೇಜ್ಯಸೇ ಯಸ್ಮಾದ್ಯಜ್ಞೈರ್ವಿವಿಧದಕ್ಷಿಣೈಃ ।
ತ್ವಮೇವ ಕರ್ತಾ ಸರ್ವಸ್ಯ ತೇನ ತ್ವನ್ನ ನಿಮಂತ್ರಿತಃ ॥ ೨೮೨ ॥

---

೨೭೭. ಯಾವ ರೂಪಗಳು ಪ್ರಾಣಿಗಳ ದೇಹಗಳಲ್ಲಿದ್ದರೂ ರೋದಿಸುವುದಿಲ್ಲವೋ, ಮತ್ತು ದೇಹಗತಪ್ರಾಣಿಗಳನ್ನು ರೋದಿಸುತ್ತವೆಯೋ, ತಾವು ಸಂತೋಷಪಡದೇ ಪ್ರಾಣಿಗಳಿಗೆ ಸಂತೋಷಪಡಿಸುತ್ತವೆಯೋ ಅಂತಹ ನಿನ್ನ ರೂಪಗಳಿಗೆ ನಿತ್ಯವೂ ನಮಸ್ಕಾರವಿರಲಿ.

೨೭೮-೨೮೦. ಯಾವ ನಿನ್ನ ರೂಪಗಳು ಸಮುದ್ರ, ನದಿ, ದುರ್ಗ, ಪರ್ವತ, ಗುಹೆ, ವೃಕ್ಷಗಳ ಮೂಲ, ಗೋಷ್ಠ, ದಗ್ಧಾರಣ್ಯ ಚೌಕ, ರಥ್ಯ, ಬೀದಿ, ಸಭೆ, ಚಂದ್ರ, ಸೂರ್ಯ, ರಶ್ಮಿ ಮತ್ತು ಇತರ ಪ್ರದೇಶಗಳು ಇವುಗಳಲ್ಲಿರುತ್ತವೆಯೋ ಅಂತಹ ನಿನ್ನ ರೂಪಗಳಿಗೆ ಅನಂತಾನಂತ ನಮಸ್ಕಾರಗಳು.

೨೮೧. ಎಲೈ ಸ್ವಾಮಿಯೇ, ನೀನು ಸರ್ವರೂಪನೂ, ಸರ್ವಗತನೂ, ಸರ್ವಭೂತಗಳ ಒಡೆಯನೂ, ಸರ್ವಭೂತಾಂತರ್ಯಾಮಿಯೂ ಆಗಿರುತ್ತೀಯೆ. ಹೀಗಿದ್ದರೂ ನಾನು ನಿನ್ನನ್ನು ಪೂಜಿಸಲಿಲ್ಲ.

೨೮೨. ನಾನಾ ದಕ್ಷಿಣೆಗಳುಳ್ಳ ಯಾಗಗಳಿಂದ ನೀನು ಪೂಜಿಸಲ್ಪಡುತ್ತೀಯೆ. ನೀನೇ ಸರ್ವಕರ್ತನೂ, ಸರ್ವಪ್ರಭುವೂ, ಆಗಿರುತ್ತೀಯೆ. ಆದರೂ ಇಂತಹ ನಿನ್ನನ್ನು ನಾನು ಯಾಗಕ್ಕಾಗಿ ಕರೆಯಲಿಲ್ಲ ಎಂದು ದಕ್ಷನು ಈಶ್ವರನಿಗೆ ಹೇಳಿದನು.

**ಅಥ ವಾ ಮಾಯಯಾ ದೇವ ಮೋಹಿತಃ ಸೂಕ್ಷ್ಮಯಾ ತ್ವಯಾ ।**
**ಏತಸ್ಮಾತ್ ಕಾರಣದ್ವಾಪಿ ತೇನ ತ್ವನ್ನ ನಿಮಂತ್ರಿತಃ ॥ ೨೮೩ ॥**

**ಪ್ರಸೀದ ಮಮ ದೇವೇಶ ತ್ವಮೇವ ಶರಣಂ ಮಮ ।**
**ತ್ವಂಗತಿಸ್ತ್ವಂ ಪ್ರತಿಷ್ಠಾ ಚ ನ ಚಾನ್ಯಾಸ್ತಿ ನ ಮೇ ಗತಿಃ ॥ ೨೮೪ ॥**

**ಸ್ತುತ್ವೈವಂ ಮಹಾದೇವಂ ವಿರರಾಮ ಪ್ರಜಾಪತಿಃ ।**
**ಭಗವಾನಪಿ ಸುಪ್ರೀತಃ ಪುನರ್ದಕ್ಷಮಭಾಷತ ॥ ೨೮೫ ॥**

**ಪರಿತುಷ್ಟೋಽಸ್ಮಿ ತೇ ದಕ್ಷ ಸ್ತವೇನಾನೇನ ಸುವ್ರತ ।**
**ಬಹುನಾತ್ರ ಕಿಮುಕ್ತೇನ ಮತ್ಸಮೀಪಂ ಗಮಿಷ್ಯಸಿ ॥ ೨೮೬ ॥**

**ಅಥೈನಮಬ್ರವೀದ್ವಾಕ್ಯಂ ತ್ರೈಲೋಕ್ಯಾಧಿಪತಿರ್ಭವಃ ।**
**ಕೃತ್ವಾಶ್ವಾಸಕರಂ ವಾಕ್ಯಂ ವಾಕ್ಯಜ್ಞೋ ವಾಕ್ಯಮಾಹತಂ ॥ ೨೮೭ ॥**

---

೨೮೩. ಅಥವಾ ಎಲೈ ಸ್ವಾಮಿಯಾದ ಈಶ್ವರನೇ ನಿನ್ನ ಸೂಕ್ಷ್ಮವಾದ ಮಾಯೆಯಿಂದ ನಾನು ಮೋಹಿತನಾಗಿರುತ್ತೇನೆ. ಹೀಗೆ ಮೋಹಿತನಾಗಿರುವುದರಿಂದ ನಿನ್ನನ್ನು ಆಹ್ವಾನಮಾಡಲಿಲ್ಲವೆಂದನು.

೨೮೪. ಎಲೈ ದೇವೇಶನೇ ಪ್ರಸನ್ನನಾಗು. ನೀನೇ ನನಗೆ ದಿಕ್ಕಾಗಿರುತ್ತೀಯೆ, ನೀನೇ ಗತಿ, ನೀನೇ ಆಶ್ರಯನು, ನನಗೆ ಬೇರೆ ಆಶ್ರಯವಿಲ್ಲ, ನಿನ್ನನ್ನು ಬಿಟ್ಟರೆ ಅನ್ಯರು ಯಾರೂ ಗತಿಯಿಲ್ಲವೆಂದನು.

೨೮೫. ಹೀಗೆ ದಕ್ಷಪ್ರಜಾಪತಿಯು ಪೂರ್ವೋಕ್ತಕ್ರಮದಿಂದ ಮಹದೇವನನ್ನು ಹೊಗಳಿ ಸುಮ್ಮನಾದನು. ಆಗ ಪರಮೇಶ್ವರನೂ ಸಹ ಪ್ರೀತನಾಗಿ ದಕ್ಷನಿಗೆ ಇಂತೆಂದನು.

೨೮೬. ಎಲೈ ದಕ್ಷನೇ, ನಿನ್ನ ಈ ಸ್ತೋತ್ರಗಳಿಂದ ನಾನು ಅತ್ಯಂತ ಪ್ರೀತನಾಗಿರುವೆನು. ಹೆಚ್ಚಿಗೆ ಮಾತಿನಿಂದ ಪ್ರಯೋಜನವಿಲ್ಲ. ನೀನು ಈ ಲೋಕದಲ್ಲಿ ಸಕಲಸುಖಗಳನ್ನೂ ಅನುಭವಿಸಿ ಕೊನೆಗೆ ನನ್ನ ಬಳಿಗೆ ಬರತಕ್ಕವನಾಗು ಎಂದು ಈಶ್ವರನು ಹೇಳಿದನು.

೨೮೭-೨೮೮. ಅನಂತರ ತ್ರಿಲೋಕಾಧಿಪತಿಯೂ, ಪ್ರಭುವೂ ಆದ ಈಶ್ವರನು ದಕ್ಷನನ್ನು ಸಮಾಧಾನಮಾಡಿ ಈ ವಾಕ್ಯಗಳನ್ನು ಉಚಿತರೀತಿಯಲ್ಲಿ ಹೇಳಿದನು.

ದಕ್ಷ ದಕ್ಷ ನ ಕರ್ತವ್ಯೋ ಮನ್ಯುರ್ವಿಘ್ನಮಿಮಂ ಪ್ರತಿ ।
ಅಹಂ ಯಜ್ಞಹಾ ನ ತ್ವನ್ಯೋ ದೃಶ್ಯತೇ ತತ್ಪುರಾ ತ್ವಯಾ ॥ ೨೮೮ ॥

ಭೂಯಶ್ಚ ತಂ ಪರಮಿಮಂ ಮತ್ತೋ ಗೃಹ್ಣೀಷ್ವ ಸುವ್ರತ ।
ಪ್ರಸನ್ನವದನೋ ಭೂತ್ವಾ ತ್ವಮೇಕಾಗ್ರಮನಾಃ ಶೃಣು ॥ ೨೮೯ ॥

ಅಶ್ವಮೇಧಸಹಸ್ರಸ್ಯ ವಾಜಪೇಯಶತಸ್ಯ ಚ ।
ಪ್ರಜಾಪತೇ ಮತ್ಪ್ರಸಾದಾತ್ ಫಲಭಾಗೀ ಭವಿಷ್ಯಸಿ ॥ ೨೯೦ ॥

ವೇದಾನ್ ಷಡಂಗಾನುದ್ಧೃತ್ಯ ಸಾಂಖ್ಯಯೋಗಾಂಶ್ಚ ಕೃತ್ಸ್ನಶಃ ।
ತಪಶ್ಚ ವಿಪುಲಂತಪ್ತ್ವಾ ದುಶ್ಚರಂ ದೇವದಾನವೈಃ ॥ ೨೯೧ ॥

ಅರ್ಥೈರ್ದಶಾರ್ಧಸಂಯುಕ್ತೈರ್ಗೂಢಮಪ್ರಾಜ್ಞನಿರ್ಮಿತಂ ।
ವರ್ಣಾಶ್ರಮಕೃತೈರ್ಧರ್ಮೈರ್ವಿಪರೀತಂ ಕ್ವಚಿತ್ಸಮಂ ॥ ೨೯೨ ॥

---

" ಹೇ ದಕ್ಷ, ನೀನು ಕೋಪಿಸಿಕೊಳ್ಳಬೇಡ. ನಾನೇ ನಿನ್ನ ಯಾಗವನ್ನು ಕೆಡಿಸಿರುತ್ತೇನೆ. ಮತ್ತಾರೂ ವಿಘ್ನಕಾರಿಯಾಗಲಿಲ್ಲ. ಇದು ನಿಜವಾದ ಸಂಗತಿ ಎಂದು ತಿಳಿಯೆಂದು " ಈಶ್ವರನು ಹೇಳಿದನು.

೨೮೯. ಎಲೈ ದಕ್ಷೇಶನೆ, ನೀನು ಬೇರೊಂದು ವರವನ್ನು ಬೇಡಿಕೋ ಅದನ್ನು ನಾನು ಕೊಡುವೆನು ಆದುದರಿಂದ ನಿರ್ಮಲಮುಖಿಯೂ, ಏಕಾಗ್ರ ಚಿತ್ತನೂ ಆಗಿ ನನ್ನ ಹಿತವಚನವನ್ನು ಕೇಳೆಂದನು.

೨೯೦ ಎಲೈ ದಕ್ಷೇಶನೇ, ಸಾವಿರಾರು ಅಶ್ವಮೇಧಯಾಗಗಳನ್ನೂ, ನೂರಾರು ವಾಜಪೇಯಯಾಗಗಳನ್ನೂ ಮಾಡಿದರೆ ಯಾವ ಫಲವು ಸಂಭವಿಸಬಹುದೋ ಇದನ್ನು ಮೀರತಕ್ಕಂಥ ಫಲವು ನನ್ನ ಪ್ರಸಾದದಿಂದ ಸಂಭವಿಸುತ್ತದೆಯೆಂದು ವರವನ್ನು ಕೊಟ್ಟನು

೨೯೧-೨೯೪. ಷಡಂಗಗಳಿಂದ ಸಹಿತವಾದ ನಾಲ್ಕು ವೇದಗಳು, ಸಂಪೂರ್ಣವಾದ ಸಾಂಖ್ಯಯೋಗಗಳು ಇವುಗಳ ಅಭ್ಯಾಸದಿಂದಲೂ, ದೇವದಾನವರಿಗೆ ಅಸಾಧ್ಯವೂ ದುಶ್ಚರವೂ ಆದ ತಪಸ್ಸುಗಳನ್ನು ಮಾಡುವುದರಿಂದಲೂ, ಪಂಚವಿಧವಾದ ಅರ್ಥಗಳಿಂದ ರಹಸ್ಯವೂ, ಪ್ರಾಜ್ಞನಿರ್ಮಿತವೂ, ವರ್ಣಾಶ್ರಮಧರ್ಮಗಳಿಗೆ ವಿಪರೀತವೂ

ಶ್ರುತ್ಯರ್ಥೈರಧ್ಯವಸಿತಂ ಪಶುಪಾಶವಿಮೋಕ್ಷಣಂ ।
ಸರ್ವೇಷಾಮಾಶ್ರಮಾಣಾಂತು ಮಯಾ ಪಾಶುಪತಂ ವ್ರತಂ ॥

ಉತ್ಪಾದಿತಂ ಶುಭಂ ದಕ್ಷ ಸರ್ವಪಾಪವಿಮೋಕ್ಷಣಂ ॥ ೨೯೩ ॥
ಅಸ್ಯ ಚೀರ್ಣಸ್ಯ ಯತ್ಸಮ್ಯಕ್ ಫಲಂ ಭವತಿ ಪುಷ್ಕಲಂ ।

ತದಸ್ತು ತೇ ಮಹಾಭಾಗ ಮಾನಸಸ್ತ್ಯಜ್ಯತಾಂ ಜ್ವರಃ ॥ ೨೯೪ ॥
ಏವಮುಕ್ತ್ವಾ ಮಹಾದೇವಃ ಸಪತ್ನೀಕಃ ಸಹಾನುಗಃ ।

ಅದರ್ಶನಮನುಪ್ರಾಪ್ತೋ ದಕ್ಷಸ್ಯಾಮಿತವಿಕ್ರಮಃ ॥ ೨೯೫ ॥
ಅವಾಪ್ಯ ಚ ತದಾ ಭಾಗಂ ಯಥೋಕ್ತಂ ಬ್ರಹ್ಮಣಾಭವಃ ।

ಜ್ವರಂ ಚ ಸರ್ವಧರ್ಮಜ್ಞೋ ಬಹುಧಾ ವ್ಯಭಜತ್ತದಾ ॥
ಶಾಂತ್ಯರ್ಥಂ ಸರ್ವಭೂತಾನಾಂ ಶ್ರುಣುಧ್ವಂತತ್ರ ವೈ ದ್ವಿಜಾಃ ॥ ೨೯೬ ॥

---

ಅಥವಾ ಸಮವೂ, ಶ್ರುತ್ಯರ್ಥಗರ್ಭಿತವೂ, ಸಮಸ್ತಾಶ್ರಮಿಗಳ ಜಡತನ, ಸಂಸಾರಬಂಧ ಇವುಗಳ ಮೋಚಕವೂ, ಸಮಸ್ತಪಾಪನಾಶಕವೂ, ಮಂಗಳಕರವೂ, ನನ್ನಿಂದ ನಿರ್ಮಿತವೂ ಆದ ಪಾಶುಪತವ್ರತವನ್ನು ಆಚರಿಸುವುದರಿಂದಲೂ, ಯಾವ ಫಲವು ಉಂಟಾಗುವುದೋ ಅಂಥ ಮಹಾಫಲವು ಭಾಗ್ಯಶಾಲಿಯಾದ ನಿನಗೆ ಉಂಟಾಗಲಿ. ಮನಸ್ಸಿನ ಕೊರತೆಯನ್ನು ಬಿಡು ಎಂದು ಪರಮೇಶ್ವರನು ದಕ್ಷಪ್ರಜಾಪತಿಗೆ ಹೇಳಿದನು.

೨೯೫. ಪರಮೇಶ್ವರನು ಹೀಗೆ ದಕ್ಷನಿಗೆ ಹೇಳಿ ಪತ್ನೀಭೃತ್ಯರಿಂದಕೂಡಿ ಆವನು ನೋಡುತ್ತಿರುವಾಗಲೇ ತನ್ನ ಯೋಗಮಹಿಮೆಯಿಂದ ಮಾಯವಾದನು.

೨೯೬. ಎಲೈ ವಿಪ್ರೋತ್ತಮರೇ, ಸರ್ವಧರ್ಮಜ್ಞನಾದ ಪರಮೇಶ್ವರನು ದಕ್ಷಪ್ರಜಾಪತಿಯು ಆ ಯಾಗದಲ್ಲಿ ತನಗೆ ಕೊಟ್ಟ ಭಾಗವನ್ನು ಸ್ವೀಕರಿಸಿ ಯಾಗದಲ್ಲಿ ಉಂಟಾದ ಜ್ವರವನ್ನು (ತಾಪವನ್ನು) ಸರ್ವಭೂತಗಳ ಕ್ಷೇಮಾರ್ಥವಾಗಿ ವಿಭಾಗ ಮಾಡಿದನೆಂಬ ವಿಷಯಗಳನ್ನು ಕೇಳಿರೆಂದು ಸೂತಮುನಿಯು ಹೇಳಿದನು.

ಶೀರ್ಷಾಭಿತಾಪೋ ನಾಗಾನಾಂ ಪರ್ವತಾನಾಂ ಶಿಲಾರುಜಃ ।
ಅಪಾಂತು ನಾಲಿಕಾಂ ವಿದ್ಯಾನ್ನಿರ್ಮೋಕಂಭುಜಗೇಷ್ವಪಿ ॥ ೨೯೭ ॥

ಖೌರಕಃ ಸೌರಭೇಯಾಣಾಂ ಊಷರಃ ಪೃಥಿವೀತಲೇ ।
ಇಭಾನಾಮಪಿ ಧರ್ಮಜ್ಞ ದೃಷ್ಟಿಪ್ರತ್ಯವರೋಧನಂ ॥ ೨೯೮ ॥

ರಂಧ್ರೋದ್ಭೂತಂ ತಥಾಶ್ವಾನಾಂ ಶಿಖೋದ್ಭೇದಶ್ಚ ಬರ್ಹಿಣಾಂ ।
ನೇತ್ರರೋಗಃ ಕೋಕಿಲಾನಾಂ ಜ್ವರಃ ಪ್ರೋಕ್ತೋ ಮಹಾತ್ಮಭಿಃ ॥ ೨೯೯ ॥

ಅಜಾನಾಂ ಪಿತ್ತಭೇದಶ್ಚ ಸರ್ವೇಷಾಮಿತಿ ನಃ ಶ್ರುತಂ ।
ಶುಕಾನಾಮಪಿ ಸರ್ವೇಷಾಂ ಹಿಮಿಕಾ ಪ್ರೋಚ್ಯತೇ ಜ್ವರಃ ॥
ಶಾರ್ದೂಲೇಷ್ವಪಿ ವೈ ವಿಪ್ರಾಃ ಶ್ರಮೋ ಜ್ವರ ಇಹೋಚ್ಯತೇ ॥ ೩೦೦ ॥

ಮಾನುಷೇಷು ತು ಸರ್ವಜ್ಞ ಜ್ವರೋ ನಾಮ್ನೈಷ ಕೀರ್ತಿತಃ ।
ಮರಣೇ ಜನ್ಮನಿ ತಥಾ ಮಧ್ಯೇ ಚ ವಿಶತೇ ಸದಾ ॥ ೩೦೧ ॥

ಏತನ್ಮಾಹೇಶ್ವರಂ ತೇಜೋ ಜ್ವರೋ ನಾಮ ಸುದಾರುಣಃ ।
ನಮಸ್ಯಶ್ಚೈವ ಮಾನ್ಯಶ್ಚ ಸರ್ವಪ್ರಾಣಿಭಿರೀಶ್ವರಃ ॥ ೩೦೨ ॥

---

೨೯೭-೩೦೦. ಈಶ್ವರನು ಜ್ವರವನ್ನು ಹೀಗೆ ವಿಭಾಗಮಾಡಿದನು? ಇದರಿಂದ ವಾಸುಕಿಗೆ ಶಿರೋವೇದನೆಯೂ, ಗಿರಿಗಳಿಗೆ ಶಿಲಾರೋಗವೂ, ಜಲಕ್ಕೆ ನಾಲಿಕಾ ವ್ಯಥೆಯೂ, ಸರ್ಪಗಳಿಗೆ ಪರೆಯೂ, ವೃಷಭಗಳಿಗೆ ಖೌರವೆಂಬ ರೋಗವೂ, ಭೂಮಿಗೆ ಊಷರವೆಂಬ ಜ್ವರವೂ, ಗಜಗಳಿಗೆ ದೃಷ್ಟಿಮಾಂದ್ಯವೂ, ಅಶ್ವಗಳಿಗೆ ರಂಧ್ರರೋಗವೂ, ನವಿಲುಗಳಿಗೆ ಶಿಖೋದ್ಭೇದವೂ, ಕೋಕಿಲಗಳಿಗೆ ನೇತ್ರರೋಗವೂ ಉಂಟಾಗಿವೆ. ಹಾಗೆಯೇ ಆಡುಗಳಿಗೆ ಪಿತ್ತರೋಗವೂ, ಗಿಳಿಗಳಿಗೆ ಹಿಮಿಕಾರೋಗವೂ, ವ್ಯಾಘ್ರಗಳಿಗೆ ಶ್ರಮವೆಂಬ ರೋಗವೂ ಉಂಟಾಗಿವೆ.

೩೦೧. ಎಲೈ ಸರ್ವಜ್ಞನೇ, ಅದೇ ಜ್ವರವೇ ಈಗಲೂ ಕೂಡ ಮನುಷ್ಯರಿಗೆ ಜನನ, ಮರಣ ಮಧ್ಯಕಾಲಗಳಲ್ಲಿ ಉಂಟಾಗಿ ಹಿಂಸಾಕರವಾಗಿದೆ.

೩೦೨. ಅತ್ಯಂತಭಯಂಕರವಾದ ಈ ಜ್ವರವೆಂಬುದೇ ಈಶ್ವರನ ತೇಜೋ ರೂಪವಾಗಿದೆ. ಆದುದರಿಂದ ಈಶ್ವರನು ಸರ್ವಪ್ರಾಣಿಗಳಿಗೆ ವಂದ್ಯನೂ, ಮಾನ್ಯನೂ ಆಗಿರುತ್ತಾನೆ.

ಇಮಾಂ ಜ್ವರೋತ್ಪತ್ತಿಮದೀನಮಾನಸಃ ।
ಪಠೇತ್ಸದಾ ಯಃ ಸುಸಮಾಹಿತೋ ನರಃ ॥
ವಿಮುಕ್ತರೋಗಃ ಸ ನರೋ ಮುದಾ ಯುತೋ ।
ಲಭೇತ ಕಾಮಾನ್ ಸ ಯಥಾಮನೀಷಿತಾನ್ ॥ ೩೦೩ ॥

ದಕ್ಷಪ್ರೋಕ್ತಂ ಸ್ತವಂಚಾಪಿ ಕೀರ್ತಯೇದ್ಯಃ ಶೃಣೋತಿ ವಾ ।
ನಾಶುಭಂ ಪ್ರಾಪ್ನುಯಾತ್ ಕಿಂಚಿದ್ದೀರ್ಘಂಚಾಯುರವಾಪ್ನುಯಾತ್ ॥

ಯಥಾ ಸರ್ವೇಷು ದೇವೇಷು ವರಿಷ್ಠೋ ಯೋಗವಾನ್ ಹರಃ ।
ತಥಾ ಸ್ತವೋ ವರಿಷ್ಠೋಽಯಂ ಸ್ತವಾನಾಂ ಬ್ರಹ್ಮನಿರ್ಮಿತಃ ॥ ೩೦೫ ॥

ಯಶೋರಾಜ್ಯ ಸುಖೈಶ್ವರ್ಯವಿತ್ತಾಯುರ್ಧನಕಾಂಕ್ಷಿಭಿಃ ।
ಸ್ತೋತವ್ಯೋ ಭಕ್ತಿಮಾಸ್ಥಾಯ ವಿದ್ಯಾಕಾಮೈಶ್ಚ ಯತ್ನತಃ ॥ ೩೦೬ ॥

ವ್ಯಾಧಿತೋ ದುಃಖಿತೋ ದೀನಶ್ಚೋರತ್ರಸ್ತೋ ಭಯಾರ್ದಿತಃ ।
ರಾಜಕಾರ್ಯನಿಯುಕ್ತೋವಾ ಮುಚ್ಯತೇ ಮಹತೋ ಭಯಾತ್ ॥ ೩೦೭ ॥

---

೩೦೩. ಯಾವನು ಸಮಾಹಿತಚಿತ್ತನೂ, ಸ್ಥಿರಮನಸ್ಕನೂ ಆಗಿ ಈಶ್ವರನ ಜ್ವರೋತ್ಪತ್ತಿಕ್ರಮವನ್ನು ಸದಾ ಪಠನಮಾಡುತ್ತಾನೋ ಅವನು ಈಶ್ವರಾನುಗ್ರಹ ದಿಂದ ಸಮಸ್ತವಾದ ಇಷ್ಟಾರ್ಥಗಳನ್ನು ಪಡೆಯುವನು.

೩೦೪. ಯಾವನು ದಕ್ಷಬ್ರಹ್ಮನು ಹೇಳಿದ ಸ್ತೋತ್ರವನ್ನು ಕೀರ್ತಿಸುತ್ತಾನೋ ಮತ್ತು ಕೇಳುತ್ತಾನೋ ಅವನು ಎಂದಿಗೂ ನಾಶವನ್ನು ಹೊಂದದೇ ದೀರ್ಘಾಯುಷ್ಯ ವನ್ನು ಹೊಂದುವನು

೩೦೫. ಸರ್ವದೇವತೆಗಳಲ್ಲಿ ಯೋಗಯುಕ್ತನಾದ ಈಶ್ವರನು ಹೇಗೆ ಉತ್ತಮನೋ ಹಾಗೆಯೇ ಸ್ತೋತ್ರಗಳಲ್ಲೆಲ್ಲಾ ದಕ್ಷಕೃತವಾದ ಸ್ತೋತ್ರವೇ ಉತ್ತಮ ವಾಗಿದೆ.

೩೦೬-೩೦೭. ಯಾವ ಪುರುಷನು ಯಶಸ್ಸು, ರಾಜ್ಯ, ಸುಖ, ಐಶ್ವರ್ಯ, ದ್ರವ್ಯ, ಧನ ಇವೇ ಮೊದಲಾದುವನ್ನು ಕೋರುವನೋ ಅವನು ನಿರ್ಮಲಮನಸ್ಕ ನಾಗಿ ಭಕ್ತಿಪೂರ್ವಕವಾಗಿ ಈ ಸ್ತೋತ್ರವನ್ನು ಪಠನಮಾಡಬೇಕು. ವ್ಯಾಧಿ, ದುಃಖ, ಚೋರತನ, ಕಾಜಕಾರ್ಯ ಇವುಗಳಿಂದ ಪೀಡಿತನಾದ ಮನುಷ್ಯನು ಪಠನಮಾಡಿದರೆ ಆ ಭಯದಿಂದ ಮುಕ್ತನಾಗುವನು.

ಅನೇನ ಚೈವ ದೇಹೇನ ಗಣಾನಾಂ ಸ ಗಣಾಧಿಪಃ ।
ಇಹ ಲೋಕೇ ಸುಖಂ ಪ್ರಾಪ್ಯ ಗಣ ಏವೋಪಪದ್ಯತೇ ॥ ೩೦೮ ॥

ನ ಚ ಯಕ್ಷಾಃ ಪಿಶಾಚಾ ವಾ ನ ನಾಗಾ ನ ವಿನಾಯಕಾಃ ।
ಕುರ್ಯುರ್ವಿಘ್ನಂ ಗೃಹೇ ತಸ್ಯ ಯತ್ರ ಸಂಸ್ತೂಯತೇ ಭವಃ ॥ ೩೦೯ ॥

ಶೃಣುಯಾದ್ವಾ ಇದಂ ನಾರೀ ಸುಭಕ್ತ್ಯಾ ಬ್ರಹ್ಮಚಾರಿಣೀ ।
ಪಿತೃಭಿರ್ಭರ್ತೃಪಕ್ಷಾಭ್ಯಾಂ ಪೂಜ್ಯಾ ಭವತಿ ದೇವವತ್ ॥ ೩೧೦ ॥

ಶೃಣುಯಾದ್ವಾ ಇದಂ ಸರ್ವಂ ಕೀರ್ತಯೇದ್ವಾಪ್ಯಭೀಕ್ಷ್ಣಶಃ ।
ತಸ್ಯ ಸರ್ವಾಣಿ ಕಾರ್ಯಾಣಿ ಸಿದ್ಧಿಂ ಗಚ್ಛಂತ್ಯವಿಘ್ನತಃ ॥ ೩೧೧ ॥

ಮನಸಾ ಚಿಂತಿತಂ ಯಚ್ಚ ಯಚ್ಚ ವಾಚಾಪ್ಯುದಾಹೃತಂ ।
ಸರ್ವಂ ಸಂಪದ್ಯತೇ ತಸ್ಯ ಸ್ತವನಸ್ಯಾನುಕೀರ್ತನಾತ್ ॥ ೩೧೨ ॥

---

೩೦೮. ಯಾವನು ಈ ಸ್ತೋತ್ರವನ್ನು ಪಠಿಸುವನೋ ಅವನು ಈ ಶರೀರ ದಿಂದಲೇ ಪ್ರಮಥಗಣಗಳಿಗೆ ಅಧಿಪನಾಗಿ ಈ ಲೋಕದಲ್ಲಿ ಸುಖವನ್ನು ಪಡೆದು ಗಣಾಧಿಪತಿಯಾಗಿಯೇ ಜನಿಸುವನು.

೩೦೯. ಯಾವನು ಮನೆಯಲ್ಲಿ ಭಕ್ತಿಯಿಂದ ಈಶ್ವರನನ್ನು ಸ್ತೋತ್ರಮಾಡು ತ್ತಾನೋ ಅವನಿಗೆ ಯಕ್ಷರು, ಪಿಶಾಚಿಗಳು, ಸರ್ಪಗಳು, ವಿನಾಯಕರು ಇವರು ಯಾವ ವಿಧಗಳಾದ ವಿಘ್ನಗಳನ್ನು ಮಾಡುವುದಿಲ್ಲ.

೩೧೦. ಯಾವ ನಾರಿಯು ಭಕ್ತಿಯುತಳಾಗಿ ನಿಯಮದಿಂದ ಈ ಸ್ತೋತ್ರ ವನ್ನು ಕೇಳುತ್ತಾಳೋ ಅವಳು ಪಿತೃಗಳು, ಪತಿ, ಅವರ ಕಡೆಯವರು ಇವರಿಂದ ದೇವತೆಯಂತೆ ಪೂಜ್ಯಳಾಗುತ್ತಾಳೆ.

೩೧೧. ಯಾವನು ಈ ಸ್ತೋತ್ರವನ್ನು ಪುನಃ ಪುನಃ ಪಠಿಸುವನೋ ಅಥವಾ ಕೇಳುವನೋ ಅವನ ಸಕಲ ಕಾರ್ಯಗಳೂ ನಿರ್ವಿಘ್ನವಾಗಿ ಸಿದ್ಧಿಯಾಗುತ್ತವೆ.

೩೧೨. ಯಾವನು ಈ ಸ್ತೋತ್ರವನ್ನು ಮನಸ್ಸಿನಲ್ಲಿ ಆಲೋಚಿಸುತ್ತಾನೆಯೋ ಬಾಯಿಯಲ್ಲಿ ಉಚ್ಚರಿಸುತ್ತಾನೆಯೋ ಅವನಿಗೆ ಇದರಿಂದ ಸಕಲ ಇಷ್ಟಾರ್ಥಗಳೂ ಕೈಗೂಡುವುವು.

ದೇವಸ್ಯ ಸಗುಹಸ್ಯಾಥ ದೇವ್ಯಾ ನಂದೀಶ್ವರಸ್ಯ ತು ।
ಬಲಿಂ ವಿಭವತಃ ಕೃತ್ವಾ ದಮೇನ ನಿಯಮೇನ ಚ ॥ ೩೧೩ ॥

ತತಃ ಸ ಯುಕ್ತೋ ಗೃಹ್ಣೀಯಾನ್ನಾಮಾನ್ಯಾಶು ಯಥಾಕ್ರಮಂ ।
ಈಪ್ಸಿತಾನ್ ಲಭತೇಽತ್ಯರ್ಥಂ ಕಾಮಾನ್ ಭೋಗಾಂಶ್ಚ ಮಾನವಃ ॥

ಮೃತಶ್ಚ ಸ್ವರ್ಗಮಾಪ್ನೋತಿ ಸ್ತ್ರೀಸಹಸ್ರಪರಿವೃತಃ ॥ ೩೧೪ ॥
ಸರ್ವಕರ್ಮಸು ಯುಕ್ತೋ ವಾ ಯುಕ್ತೋ ವಾ ಸರ್ವಪಾತಕೈಃ ।

ಪಠನ್ ದಕ್ಷಕೃತಂ ಸ್ತೋತ್ರಂ ಸರ್ವಪಾಪೈಃ ಪ್ರಮುಚ್ಯತೇ
ಮೃತಶ್ಚ ಗಣಸಾಲೋಕ್ಯಂ ಪೂಜ್ಯಮಾನಃ ಸುರಾಸುರೈಃ ॥ ೩೧೫ ॥

ವೃಷೇವ ವಿಧಿಯುಕ್ತೇನ ವಿಮಾನೇನ ವಿರಾಜತೇ ।
ಆಭೂತಸಂಪ್ಲವಸ್ಥಾಯೀ ರುದ್ರಸ್ಯಾನುಚರೋ ಭವೇತ್ ॥ ೩೧೬ ॥

ಇತ್ಯಾಹ ಭಗವಾನ್ ವ್ಯಾಸಃ ಪರಾಶರಸುತಃ ಪ್ರಭುಃ ।
ನೈತದ್ವೇದಯತೇ ಕಶ್ಚಿನ್ನೇದಂ ಶ್ರಾವ್ಯಂತು ಕಸ್ಯಚಿತ್ ॥ ೩೧೭ ॥

---

೩೧೩-೩೧೪. ಯಾವ ಪುರುಷನು ಗುಹಾವಾಸಿಯಾದ ಈಶ್ವರ, ಪಾರ್ವತೀ ಮತ್ತು ನಂದೀಶ್ವರ ಇವರಿಗೆ ಭಕ್ತಿಯಿಂದಲೂ, ನಿಯಮದಿಂದಲೂ ಬಲಿಯನ್ನು ಕೊಟ್ಟು ಕ್ರಮವಾಗಿ ಅವರ ನಾಮಪಾಠಗಳನ್ನು ಮಾಡುವನೋ ಅವನು ಈ ಲೋಕದಲ್ಲಿ ಅಪೇಕ್ಷಿತವಾದ ಸಕಲ ಕೋರಿಕೆಗಳನ್ನೂ, ಭೋಗಗಳನ್ನೂ ಹೊಂದಿ ಪರಲೋಕದಲ್ಲಿ ಅಪ್ಸರಸ್ತ್ರೀಯೊಡನೆ ದಿವ್ಯಸುಖವನ್ನು ಪಡೆಯುವನು.

೩೧೫. ಸರ್ವಕರ್ಮನಿರತನೂ, ಸರ್ವಪಾಪಯುಕ್ತನೂ ಆದ ಯಾವ ಪುರುಷನು ದಕ್ಷನು ಮಾಡಿದ ಈ ಸ್ತೋತ್ರವನ್ನು ಪಠಿಸುತ್ತಾನೋ ಅವನು ಸರ್ವ ಪಾಪಗಳಿಂದ ಮುಕ್ತನಾಗುವನು. ಮತ್ತು ಮೃತನಾಗಿ ಪರಲೋಕದಲ್ಲಿ ದೇವತೆ ಗಳಿಂದ ಪೂಜ್ಯನಾಗಿ ಸಾಲೋಕ್ಯಪದವಿಯನ್ನು ಹೊಂದುವನು.

೩೧೬. ಆ ಪುರುಷನು ವಿಮಾನದಲ್ಲಿ ಅಲಂಕೃತನಾದ ಇಂದ್ರನಂತೆ ಶೋಭಿ ಸುವನು. ಮತ್ತು ಪ್ರಲಯದವರೆಗೂ ರುದ್ರದೇವನ ಭೃತ್ಯನಾಗುವನು.

೩೧೭. ಈ ರೀತಿಯಲ್ಲಿ ಪೂಜ್ಯನೂ, ಪರಾಶರಸುತನೂ, ಸ್ವಾಮಿಯೂ ಆದ ವ್ಯಾಸಮುನಿಯು ಹೇಳಿದನು. ಇದರ ರಹಸ್ಯವನ್ನು ಯಾವನೂ ತಿಳಿಯನು ಮತ್ತು ಹೀಗೆ ತಿಳಿದವನು ಯಾರಿಗೂ ತಿಳಿಸಬಾರದು.

ಶ್ರುತ್ವೈತತ್ಪರಮಂ ಗುಹ್ಯಂ ಯೇಽಪಿ ಸ್ಯುಃ ಪಾಪಕಾರಿಣಃ ।
ವೈಶ್ಯಾಃ ಸ್ತ್ರಿಯಶ್ಚ ಶೂದ್ರಾಶ್ಚ ರುದ್ರಲೋಕಮವಾಪ್ನುಯುಃ ॥ ೩೧೮ ॥

ಶ್ರಾವಯೇದ್ಯಸ್ತು ವಿಪ್ರೇಭ್ಯಃ ಸದಾ ಪರ್ವಸು ಪರ್ವಸು ।
ರುದ್ರಲೋಕಮವಾಪ್ನೋತಿ ದ್ವಿಜೋ ವೈ ನಾತ್ರ ಸಂಶಯಃ ॥ ೩೧೯ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ದಕ್ಷಶಾಪವರ್ಣನಂ"
ನಾಮ ತ್ರಿಂಶೋಽಧ್ಯಾಯಃ

---

೩೧೮. ವೈಶ್ಯರು, ಸ್ತ್ರೀಯರು, ಶೂದ್ರರು ಮತ್ತು ಪಾಪಿಷ್ಠರಾದ ಇತರರು ರಹಸ್ಯವೂ, ಉತ್ತಮವೂ ಆದ ಈ ಸ್ತೋತ್ರವನ್ನು ಕೇಳಿ ಇಹಲೋಕದಲ್ಲಿ ಸುಖವನ್ನು ಪಡೆದು ಪರಲೋಕದಲ್ಲಿ ರುದ್ರಲೋಕವನ್ನು ಹೊಂದುವರು.

೩೧೯. ಯಾವ ಬ್ರಾಹ್ಮಣನು ಪರ್ವಕಾಲಗಳಲ್ಲಿ ಬ್ರಾಹ್ಮಣರೇ ಮೊದಲಾದ ವರಿಗೆ ಶ್ರವಣಮಾಡಿಸುತ್ತಾನೆಯೋ ಅವನು ಪರದಲ್ಲಿ ರುದ್ರಲೋಕವನ್ನು ಹೊಂದು ವನು. ಈ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲ.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ದಕ್ಷಶಾಪವರ್ಣನವೆಂಬ"
ಮೂವತ್ತನೆಯ ಅಧ್ಯಾಯವು ಸಮಾಪ್ತವಾದುದು.

## ಮೂವತ್ತನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ದಕ್ಷಪ್ರಜಾಪತಿಯ ಶಾಪವು ವರ್ಣಿತವಾಗಿದೆ. ಸ್ವಾಯಂಭುವಮನ್ವಂತರದಲ್ಲಿ ಬ್ರಹ್ಮದೇವನು ಜಲ, ಋತು, ಪಿತೃ, ದೇವತೆ, ಕಾಲ, ತದಭಿಮಾನಿದೇವತೆ ಇವರೇ ಮೊದಲಾದುವನ್ನು ಸೃಷ್ಟಿಸಿದನು. ಈ ವಂಶದಲ್ಲಿ ಅಗ್ನಿಷ್ವಾತ್ತರೂ, ಬರ್ಹಿದರೂ ಜನಿಸಿದರು. ಅಗ್ನಿಷ್ವಾತ್ತನಿಗೆ ಮೇನೆ, ಧಾರಣಿಯೆಂಬ ಇಬ್ಬರು ಹೆಣ್ಣುಮಕ್ಕಳೂ, ಆ ಮೇನೆಕೆಗೆ ಮೈನಾಕನೆಂಬ ಪುತ್ರನೂ, ಉಮಾದೇವಿಯೆಂಬ ಪುತ್ರಿಯೂ ಜನಿಸಿದರು. ಧಾರಣಿಯು ಮಂದರನನ್ನೂ, ವೇಲೆ, ನಿಯತಿ, ಆಯತಿಯೆಂಬ ಮಕ್ಕಳನ್ನೂ ಪಡೆದಳು. ಪ್ರಾಚೀನ ಬರ್ಹಿಷನವಂಶದಲ್ಲಿ ದಕ್ಷಪ್ರಜಾಪತಿಯು ಜನಿಸಿದನು. ಅವನಿಗೆ ಸತೀದೇವಿಯೇ ಮೊದಲಾದ ಎಂಟುಜನ ಹೆಣ್ಣುಮಕ್ಕಳು ಹುಟ್ಟಿದರು. ಸತೀದೇವಿಯು ರುದ್ರನನ್ನು ಮದುವೆಯಾದಳು. ಅಳಿಯನಾದ ರುದ್ರದೇವನು ದಕ್ಷೇಶನನ್ನು ಮರ್ಯಾದಿಸುತ್ತಿರಲಿಲ್ಲ. ಅವನ ಮೇಲಿನ ಕೋಪದಿಂದ ದಕ್ಷನು ಉತ್ಸವಕಾಲದಲ್ಲಿ ಸತಿಯನ್ನು ಕರೆಯದೆ ಅವಮಾನಿಸಿದನು. ಆಗ ಸತಿಯು ದೇಹತ್ಯಾಗಮಾಡಿದಳು. ಇದನ್ನರಿತ ಈಶ್ವರನು ಶಾಪವನ್ನು ಕೊಟ್ಟನು. ಆದರಿಂದ ಚಾಕ್ಷುಷಮನ್ವಂತರದಲ್ಲಿ ಪ್ರಚೇತನ ಮಗನಾಗಿ ಹುಟ್ಟಿ ಅಶ್ವಮೇಧಯಾಗವನ್ನು ಮಾಡಿದನು. ಈಶ್ವರನ ಹೊರತು ಸಮಸ್ತದೇವತೆಗಳೂ ಆಹೂತರಾಗಿ ಬಂದಿದ್ದರು. ಆಗ ಕುಪಿತನಾದ ಈಶ್ವರನು ವೀರಭದ್ರನಮೂಲಕ ಆ ಯಾಗವನ್ನು ನಾಶಮಾಡಲು ದಕ್ಷಾದಿಗಳು ಮಹಾದೇವನ ಮಹಿಮೆಯನ್ನರಿತು ಅವನನ್ನು ಸಹಸ್ರನಾಮಗಳಿಂದ ಹೊಗಳಿ ಅವನ ಅನುಗ್ರಹದಿಂದ ಇಹದಲ್ಲಿ ಪರಮಸುಖಗಳನ್ನೂ, ಪರದಲ್ಲಿ ಉತ್ತಮವೂ, ಶಾಶ್ವತವೂ ಆದ ರುದ್ರಲೋಕವನ್ನೂ ಹೊಂದಿದರು ಎಂಬ ವಿಷಯಗಳು ವರ್ಣಿತವಾಗಿವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಏಕತ್ರಿಂಶೋಽಧ್ಯಾಯಃ

**॥ ಸೂತ ಉವಾಚ ॥**

**ಇತ್ಯೇಷಾ ಸಮನುಜ್ಞಾತಾ ಕಥಾ ಪಾಪಪ್ರಣಾಶಿನಿ ।**
**ಯಾ ದಕ್ಷಮಧಿಕೃತ್ಯೇಹ ಕಥಾ ಶರ್ವಾದುಪಾಗತಾ ॥ ೧ ॥**

**ಪಿತೃವಂಶಪ್ರಸಂಗೇನ ಕಥಾ ಹ್ಯೇಷಾ ಪ್ರಕೀರ್ತಿತಾ ।**
**ಪಿತೄಣಾಮಾನುಪೂರ್ವ್ಯೇಣ ದೇವಾನ್ ವಕ್ಷ್ಯಾಮ್ಯತಃ ಪರಂ ॥ ೨ ॥**

**ತ್ರೇತಾಯುಗಮುಖೇ ಪೂರ್ವಮಾಸನ್ ಸ್ವಾಯಂಭುವೇಽಂತರೇ ।**
**ದೇವಾ ಯಾಮಾ ಇತಿ ಖ್ಯಾತಾಃ ಪೂರ್ವಂ ಯೇ ಯಜ್ಞಸೂನವಃ ॥ ೩ ॥**

---

## ಮೂವತ್ತೊಂದನೆಯ ಅಧ್ಯಾಯವು

೧-೨. ಸೂತಮುನಿಯು ಹೇಳಿದನು:—ಎಲೈ ಮುನಿಗಳೇ, ಸರ್ವಪಾಪನಾಶಕವೂ, ದಕ್ಷನಿಮಿತ್ತಕವೂ, ಈಶ್ವರವಿಷಕವೂ ಆದ ಕಥೆಯನ್ನು ಪೂರ್ವೋಕ್ತವಾದ ರೀತಿಯಲ್ಲಿ ನಿಮಗಾಗಿ ನಿರೂಪಿಸಿರುತ್ತೇನೆ. ಈ ಕಥೆಯು ಪಿತೃವಂಶಗಳನ್ನು ನಿರೂಪಿಸುವ ಸಂದರ್ಭದಲ್ಲಿ ಪ್ರಸಕ್ತವಾಗಿತ್ತು. ಹೀಗೆ ಪಿತೃವಂಶಗಳನ್ನು ಹೇಳಿರುವೆನು ತರುವಾಯ ಈಗ ದೇವತೆಗಳ ವಂಶಗಳನ್ನು ಹೇಳುವೆನು ಕೇಳಿ ಎಂದನು.

೩. ಸ್ವಾಯಂಭುವಮನ್ವಂತರದ ತ್ರೇತಾಯುಗದ ಆದಿಯಲ್ಲಿ ಯಾಮನಾಮಕರೂ, ಯಜ್ಞಪುತ್ರರೂ ಆದ ದೇವತೆಗಳು ಪ್ರಖ್ಯಾತರಾಗಿದ್ದರು.

ಅಜಿತಾ ಬ್ರಹ್ಮಣಃ ಪುತ್ರಾ ಜಿತಾ ಜಿದಜಿತಾಶ್ಚ ಯೇ ।
ಪುತ್ರಾಃ ಸ್ವಾಯಂಭುವಸ್ಯೈತೇ ಶುಕ್ರನಾಮ್ನಾ ತು ಮಾನಸಾಃ ॥ ೪ ॥

ತೃಪ್ತಿಮಂತೋ ಗಣಾ ಹ್ಯೇತೇ ದೇವಾನಾಂ ತು ತ್ರಯಃ ಸ್ಮೃತಾಃ ।
ಛಂದೋಗಾಸ್ತು ತ್ರಯಸ್ತ್ರಿಂಶತ್ಸರ್ವೇ ಸ್ವಾಯಂಭುವಸ್ಯ ಹ ॥ ೫ ॥

ಯದುರ್ಯಯಾತಿರ್ದ್ವೌ ದೇವೌ ದೀಧಯಃ ಶ್ರವಸೋ ಮತಿಃ ।
ವಿಭಾಸಶ್ಚ ಕ್ರತುಶ್ಚೈವ ಪ್ರಜಾತಿರ್ವಿಶತೋ ದ್ಯುತಿಃ ॥ ೬ ॥

ವಾಯಸೋ ಮಂಗಲಶ್ಚೈವ ಯಾಮಾ ದ್ವಾದಶ ಕೀರ್ತಿತಾಃ ।
ಅಭಿಮನ್ಯುರುಗ್ರದೃಷ್ಟಿಃ ಸಮಯೋಽಥ ಶುಚಿಶ್ರವಾಃ ॥
ಕೇವಲೋ ವಿಶ್ವರೂಪಶ್ಚ ಸುಪಕ್ಷೋ ಮಧುಪಸ್ತಥಾ ॥ ೭ ॥

ತುರೀಯೋ ನಿರ್ಹಪುಶ್ಚೈವ ಯುಕ್ತೋ ಗ್ರಾವಾಜಿನಸ್ತುತೇ ।
ಯಮಿನೋ ವಿಶ್ವದೇವಾದ್ಯಂ ಯವಿಷ್ಠೋಽಮೃತವಾನಪಿ ॥ ೮ ॥

---

೪. ಸ್ವಾಯಂಭುವಮನುವಿಗೆ ಅಜಿತರು, ಜಿತರು, ಜಿದಜಿತರು ಎಂಬ ಮೂವರು ಪುತ್ರರು ಜನಿಸಿ ಶುಕ್ರನಾಮದಿಂದ ಪ್ರಖ್ಯಾತರಾಗಿದ್ದರು.

೫. ಹೀಗೆ ದೇವತೆಗಳ ಈ ಮೂರು ಗಣಗಳೂ ತೃಪ್ತಿಮಂತರೂ, ಪ್ರಸಿದ್ಧರೂ ಆಗಿದ್ದರು. ಇವರಂತೆಯೇ ಛಂದೋಗನಾಮಕರಾದ ಮೂವತ್ತಮೂರು ದೇವತೆಗಳೂ ಕೂಡ ಖ್ಯಾತಿವಂತರಾಗಿದ್ದರು. ಇವರೆಲ್ಲರೂ ಸ್ವಾಯಂಭುವಬ್ರಹ್ಮನ ಮಾನಸ ಪುತ್ರರಾಗಿದ್ದರು.

೬-೯. ಯದು, ಯಯಾತಿ, ದೀಧಯ, ಶ್ರವಸ, ಮತಿ, ವಿಭಾಸ, ಕ್ರತು, ಪ್ರಜಾತಿ, ವಿಶತ, ದ್ಯುತಿ, ವಾಯಸ ಮತ್ತು ಮಂಗಳ ಈ ಹನ್ನೆರಡು ಜನಗಳೂ ಯಾಮನಾಮಕರಾಗಿರುವರು. ಇವರದೇ ಒಂದು ಗಣವಾಗಿದೆ. ಅಭಿಮನ್ಯು, ಉಗ್ರದೃಷ್ಟಿ, ಸಮಯ, ಶುಚಿಶ್ರವ, ಕೇವಲ, ವಿಶ್ವರೂಪ, ಸುಪಕ್ಷ, ಮಧುಪ, ತುರೀಯ, ನಿರ್ಹಪು, ಯುಕ್ತ, ಗ್ರಾವಾಜಿನರೆಂಬ ಈ ಹನ್ನೆರಡು ದೇವತೆಗಳ ಗಣವು ಬೇರೊಂದಾಗಿದೆ. ಯಮಿನ, ವಿಶ್ವೇದೇವ, ಯವಿಷ್ಠ, ಅಮೃತವಂತ, ಅಜಿರ, ವಿಭು,

**ಅಜಿರೋ ವಿಭುರ್ವಿಭಾವಶ್ಚ ಮೃಲಿಕೋಽಥ ದಿದೇಹಕಃ ।**
**ಶ್ರುತಿಶ್ರಣೋ ಬೃಹಚ್ಛುಕ್ರೋ ದೇವಾ ದ್ವಾದಶ ಕೀರ್ತಿತಾಃ ॥ ೯ ॥**

**ಆರ್ಸ ಸ್ವಾಯಂಭುವಸ್ಯೈತೇ ಅಂತರೇ ಸೋಮಪಾಯಿನಃ ।**
**ತ್ವಿಷಿಮಂತೋ ಗಣಾ ಹ್ಯೇತೇ ವೀರ್ಯವಂತೋ ಮಹಾಬಲಾಃ ॥ ೧೦ ॥**

**ತೇಷಾಮಿಂದ್ರಃ ಸದಾ ಹ್ಯಾಸೀದ್ವಿಶ್ವಭುಕ್ ಪ್ರಥಮೋ ವಿಭುಃ ।**
**ಅಸುರಾ ಯೇ ತದಾ ತೇಷಾಮಾರ್ಸ ದಾಯಾದಬಾಂಧವಾಃ ॥ ೧೧ ॥**

**ಸುಪರ್ಣಯಕ್ಷಗಂಧರ್ವಾಃ ಪಿಶಾಚೋರಗರಾಕ್ಷಸಾಃ ।**
**ಅಷ್ಟೌ ತೇ ಪಿತೃಭಿಃ ಸಾರ್ಧಂ ನಾಸತ್ಯಾ ದೇವಯೋನಯಃ ॥ ೧೨ ॥**

**ಸ್ವಾಯಂಭುವೇಽಂತರೇಽತೀತಾಃ ಪ್ರಜಾಸ್ತ್ವಾಸಾಂ ಸಹಸ್ರಶಃ ।**
**ಪ್ರಭಾವರೂಪಸಂಪನ್ನಾ ಆಯುಷಾ ಚ ಬಲೇನ ಚ ॥ ೧೩ ॥**

---

ವಿಭಾವ, ಮೃಲಿಕ, ದಿದೇಹಕ, ಶ್ರುತಿಶ್ರುಣ, ಬೃಹಂತ ಮತ್ತು ಶುಕ್ರರೆಂಬ ಈ ಹನ್ನೆರಡು ಜನ ದೇವತೆಗಳು ಮತ್ತೊಂದು ಗುಂಪಿಗೆ ಸೇರಿರುವರು.

೧೦. ಸ್ವಾಯಂಭುವಮನ್ವಂತರದಲ್ಲಿ ಮೇಲೆ ಹೇಳಿದ ದೇವತೆಗಳೆಲ್ಲರು ಸೋಮಪಾನಮಾಡಿದವರೂ, ಕಾಂತಿವಂತರೂ, ಶೌರ್ಯವಂತರೂ, ಮಹಾಬಲ ವಂತರೂ ಆಗಿದ್ದರು. ಇವರೆಲ್ಲರೂ ಒಂದೊಂದು ಗಣಕ್ಕೆ ಸೇರಿದವರಾಗಿರುವರು.

೧೧. ಈ ಮೇಲೆ ಹೇಳಿದ ದೇವತೆಗಳಿಗೆ ಇಂದ್ರನು ಸಕಲಭೋಗಸಂಪನ್ನ ನಾದ ಪ್ರಭುವಾಗಿ ಸರ್ವದಾ ಆಳುತ್ತಿದ್ದನು

೧೨. ಆಗ ದೇವತೆಗಳಿಗೆ ದಾಯಾದಿಗಳೂ, ಬಂಧುಗಳೂ ಆದ ಅನೇಕ ಜನ ಅಸುರರಿದ್ದರು. ಹೀಗೆ ಸುರರು, ಅಸುರರು, ಸುಪರ್ಣರು, ಯಕ್ಷರು, ಗಂಧರ್ವರು, ಪಿಶಾಚಗಳು, ಉರಗಗಳು ಮತ್ತು ರಾಕ್ಷಸರು ಎಂಬ ಈ ಎಂಟು ಗಣಗಳು ಪೂರ್ವೋಕ್ತರಾದ ಪಿತೃದೇವತೆಗಳು ಮತ್ತು ಅಶ್ವಿನೀದೇವತೆಗಳು ಇವರ ಸಂಗಡ ಸೇರಿ ಪ್ರಖ್ಯಾತರಾಗಿದ್ದರು.

೧೩. ಹೀಗೆ ಸ್ವಾಯಂಭುವಮನ್ವಂತರದಲ್ಲಿ ಮೇಲೆ ಹೇಳಿದ ಪ್ರಜೆಗಳೂ, ಅವರ ಪುತ್ರಪೌತ್ರರೂ ಸೇರಿ ಸಹಸ್ರಾರು ಪ್ರಜೆಗಳು ಸಾಮರ್ಥ್ಯ, ರೂಪ, ಆಯುಸ್ಸು, ಶಕ್ತಿ ಇವುಗಳಿಂದ ಸಂಪನ್ನರಾಗಿಯೂ, ಪ್ರಭಾವಶಾಲಿಗಳಾಗಿಯೂ ಇದ್ದರು.

**ವಿಸ್ತರಾದಿಹ ನೋಚ್ಯಂತೇ ಮಾ ಪ್ರಸಂಗೋ ಭವತ್ವಿಹ ।**
**ಸ್ವಾಯಂಭುವೋ ನಿಸರ್ಗಶ್ಚ ವಿಜ್ಞೇಯಃ ಸಾಂಪ್ರತಂ ಮನುಃ ॥ ೧೪ ॥**

**ಅತೀತೇ ವರ್ತಮಾನೇನ ದೃಷ್ಟೋ ವೈವಸ್ವತೇನ ಸಃ ।**
**ಪ್ರಜಾಭಿರ್ದೇವತಾಭಿಶ್ಚ ಋಷಿಭಿಃ ಪಿತೃಭಿಃ ಸಹ ॥ ೧೫ ॥**

**ತೇಷಾಂ ಸಪ್ತರ್ಷಯಃ ಪೂರ್ವಮಾಸನ್ಯೇ ತಾನ್ ನಿಬೋಧತ ।**
**ಭೃಗ್ವಂಗಿರಾ ಮರೀಚಿಶ್ಚ ಪುಲಸ್ತ್ಯಃ ಪುಲಹಃ ಕ್ರತುಃ ॥ ೧೬ ॥**

**ಅತ್ರಿಶ್ಚೈವ ವಸಿಷ್ಠಶ್ಚ ಸಪ್ತ ಸ್ವಾಯಂಭುವೇಽಂತರೇ ।**
**ಅಗ್ನೀಧ್ರಶ್ಚಾತಿಬಾಹುಶ್ಚ ಮೇಧಾ ಮೇಧಾತಿಥಿರ್ವಸುಃ ॥ ೧೭ ॥**

**ಜ್ಯೋತಿಷ್ಮಾನ್ ದ್ಯುತಿಮಾನ್ ಹವ್ಯಃ ಸವನಃ ಪುತ್ರ ಏವ ಚ ।**
**ಮನೋಃ ಸ್ವಾಯಂಭುವಸ್ಯೈತೇ ದಶಪುತ್ರಾ ಮಹೌಜಸಃ ॥ ೧೮ ॥**

---

೧೪. ಮೇಲೆ ಹೇಳಿದ ದೇವತೆಗಳ ವಿಷಯುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ವರ್ಣಿಸಿದರೆ ಅತಿ ವಿಸ್ತಾರವಾಗುವುದರಿಂದ ಆ ವಿಷಯುಗಳನ್ನು ವಿಸ್ತಾರವಾಗಿ ಹೇಳುವುದಿಲ್ಲ. ಸ್ವಾಯಂಭುವಮನುವಿನ ಸೃಷ್ಟಿಕ್ರಮವು ಈಗಿನ ವೈವಸ್ವತಮನುವಿನ ಸೃಷ್ಟಿಕ್ರಮಕ್ಕೆ ಸಮಾನವಾಗಿಯೇ ಇರುವುದು.

೧೫. ಅನಾದಿಯಾದ ಸೃಷ್ಟಿಕ್ರಮದಲ್ಲಿ ಅತೀತವಾದ ಸೃಷ್ಟಿಯು ವರ್ತಮಾನ ಕಾಲದ ವೈವಸ್ವತಮನ್ವಂತರದ ಸೃಷ್ಟಿಯಂತೆಯೇ ಇರುವುದು ಸ್ವಭಾವವಾಗಿದೆ. ಸಕಲಮನ್ವಂತರಗಳಲ್ಲಿಯೂ ಪ್ರಜೆಗಳು, ದೇವತೆಗಳು, ಋಷಿಗಳು, ಪಿತೃಗಳು ಇವರ ನಾಮರೂಪಕಾರ್ಯಗಳು ಒಂದೇ ಸಮವಾಗಿ ಇರುವುವು.

೧೬-೧೮. ಪೂರ್ವದ ಮನ್ವಂತರದಲ್ಲಿ ಯಾವ ಸಪ್ತರ್ಷಿಗಳು ಇದ್ದರೋ ಅವರನ್ನು ಈಗ ತಿಳಿಸುವೆನು ಕೇಳಿ. ಅವರು ಯಾರೆಂದರೆ ಸ್ವಾಯಂಭುವಮನ್ವಂತರದಲ್ಲಿ ಭೃಗು, ಅಂಗಿರಸ, ಮರೀಚಿ, ಪುಲಸ್ತ್ಯ, ಪುಲಹ, ಕ್ರತು, ಅತ್ರಿ ಮತ್ತು ವಸಿಷ್ಠ ಈ ಏಳು ಜನರು ಸಪ್ತರ್ಷಿಗಳಾಗಿರುವರು ಮತ್ತು ಸ್ವಾಯಂಭುವಮನುವಿಗೆ ಅಗ್ನೀಧ್ರ, ಅತಿಬಾಹು, ಮೇಧಸ, ಮೇಧಾತಿಥಿ, ವಸು, ಜ್ಯೋತಿಷ್ಮಂತ, ದ್ಯುತಿಮಂತ, ಹವ್ಯ ಮತ್ತು ಸವನರೆಂಬ ಮಹಾವೀರ್ಯವಂತರಾದ ಹತ್ತು ಜನ ಮಕ್ಕಳು ಪ್ರಸಿದ್ಧರಾಗಿದ್ದರು.

ವಾಯುಪ್ರೋಕ್ತಾ ಮಹಾಸತ್ವಾ ರಾಜಾನಃ ಪ್ರಥಮೇಂಽತರೇ ।
ಸಾಸುರಂತತ್ಸಗಂಧರ್ವಂ ಸಯಕ್ಷೋರಗರಾಕ್ಷಸಂ ॥
ಸಪಿಶಾಚಮನುಷ್ಯಂ ಚ ಸುಪರ್ಣಾಪ್ಸರಸಾಂ ಗಣಂ ॥ ೧೯ ॥

ನೋ ಶಕ್ಯಮಾನುಪೂರ್ವೇಣ ವಕ್ತುಂ ವರ್ಷಶತೈರಪಿ ।
ಬಹುತ್ವಾನ್ನಾಮಧೇಯಾನಾಂ ಸಂಖ್ಯಾ ತೇಷಾಂ ಕುಲೇ ತಥಾ ॥ ೨೦ ॥

ಯಾ ವೈ ಪ್ರಜಕುಲಾಖ್ಯಾಸ್ತು ಆಸ್ ಸ್ವಾಯಂಭುವೇಂಽತರೇ ।
ಕಾಲೇನ ಬಹುನಾತೀತಾ ಅಯನಾಬ್ದಯುಗಕ್ರಮೈಃ ॥ ೨೧ ॥

॥ ಋಷಯ ಊಚುಃ ॥

ಕ ಏಷ ಭಗವಾನ್ ಕಾಲಃ ಸರ್ವಭೂತಾಪಹಾರಕಃ ।
ಕಸ್ಯ ಯೋನಿಃ ಕಿಮಾದಿಶ್ಚ ಕಿಂ ತತ್ವಂ ಸ ಕಿಮಾತ್ಮಜಃ ॥ ೨೨ ॥

---

೧೯-೨೦. ಮೊದಲನೆಯ ಮನ್ವಂತರದಲ್ಲಿ ವಾಯುದೇವನು ನಿರೂಪಿಸಿದ ರಾಜರು ಮಹಾಸತ್ವಸಂಪನ್ನರೂ, ಪ್ರಖ್ಯಾತರೂ ಆಗಿದ್ದರು. ಅಸುರ, ಗಂಧರ್ವ, ಯಕ್ಷ, ಉರಗ, ರಾಕ್ಷಸ, ಪಿಶಾಚ, ಮನುಷ್ಯ, ಸುಪರ್ಣ, ಅಪ್ಸರಸ ಇವರ ಗಣಗಳ ವಿಷಯಗಳನ್ನು ಕ್ರಮವಾಗಿ ನಿರೂಪಿಸಲು ನೂರಾರು ವರ್ಷಗಳೂ ಸಾಲದು. ನೂರಾರು ವರ್ಷಗಳಿಂದಲೂ ವರ್ಣಿಸಲಶಕ್ಯವಾಗಿದೆ. ಏಕೆಂದರೆ ಅವರ ಸಂಖ್ಯೆಯೂ, ನಾಮಗಳೂ ವರ್ಣಿಸಲಸಾಧ್ಯವಾಗಿವೆ

೨೧. ಸ್ವಾಯಂಭುವಮನ್ವಂತರದಲ್ಲಿ ವಜ್ರಕುಲರೆಂದು ಯಾರು ಪ್ರಖ್ಯಾತರಾಗಿದ್ದರೋ ಅವರು ಬಹುಕಾಲದ ತರುವಾಯ ಅಯನ, ವರ್ಷ, ಯುಗ ಇವುಗಳ ಕ್ರಮದಿಂದ ಅತೀತರಾದರು.

೨೨-೨೩. ಆಗ ಋಷಿಗಳು ಪ್ರಶ್ನೆಮಾಡಿದರು:—ಸರ್ವಭೂತಗಳನ್ನು ಮೃತ್ಯುರೂಪದಿಂದ ಅಪಹರಿಸುವವನೂ, ಪೂಜ್ಯನೂ ಆದ ಕಾಲರೂಪಿಯು ಯಾರು? ಅವನಿಂದ ಯಾರು ಹುಟ್ಟಿದರು? ಅವನಿಗೆ ಆದಿಯು ಯಾರು? ಅವನ ಸ್ವರೂಪವು

**ಕಿಮಸ್ಯ ಚಕ್ಷುಃ ಕಾ ಮೂರ್ತಿಃ ಕೇ ಚಾಸ್ಯಾವಯವಾಃ ಸ್ಮೃತಾಃ ।**
**ಕಿಂ ನಾಮಧೇಯಃ ಕೋಽಸ್ಯಾತ್ಮಾ ಏತತ್ ಪ್ರಬ್ರೂಹಿ ಪೃಚ್ಛತಾಂ ॥ ೨೩ ॥**

**॥ ಸೂತ ಉವಾಚ ॥**

**ಶ್ರೂಯತಾಂ ಕಾಲಸದ್ಭಾವಃ ಶ್ರುತ್ವಾ ಚೈವಾವಧಾರ್ಯತಾಂ ।**
**ಸೂರ್ಯಯೋನಿರ್ನಿಮೇಷಾದಿಃ ಸಂಖ್ಯಾಚಕ್ಷುಃ ಸ ಉಚ್ಯತೇ ॥ ೨೪ ॥**

**ಮೂರ್ತಿರಸ್ಯ ತ್ವಹೋರಾತ್ರೇ ನಿಮೇಷಾವಯವಶ್ಚ ಸಃ ।**
**ಸಂವತ್ಸರಶತಂ ತ್ವಸ್ಯ ನಾಮ ಚಾಸ್ಯ ಕಲಾತ್ಮಕಂ ॥**
**ಸಾಂಪ್ರತಾನಾಗತಾತೀತಕಾಲಾತ್ಮಾ ಸ ಪ್ರಜಾಪತಿಃ ॥ ೨೫ ॥**

**ಪಂಚಾನಾಂ ಪ್ರವಿಭಕ್ತಾನಾಂ ಕಾಲಾವಸ್ಥಾನ್ನಿಬೋಧತ ।**
**ದಿನಾರ್ಧಮಾಸಮಾಸೈಸ್ತು ಋತುಭಿಸ್ತ್ವಯನೈಸ್ತಥಾ ॥ ೨೬ ॥**

**ಸಂವತ್ಸರಸ್ತು ಪ್ರಥಮೋ ದ್ವಿತೀಯಃ ಪರಿವತ್ಸರಃ ।**
**ಇದ್ವತ್ಸರಸ್ತೃತೀಯಸ್ತು ಚತುರ್ಥಶ್ಚಾನುವತ್ಸರಃ ॥ ೨೭ ॥**

---

ಎಂತಹುದು ? ಅವನ ತತ್ವರೂಪಾದಿಗಳು ಆವುವು ? ಅವನ ನೇತ್ರಗಳು ಆವುವು ? ಅವನು ಯಾವ ಆಕಾರನು ? ಅವನ ಅವಯವಗಳಾವುವು ? ಅವನ ನಾಮವಾವುದು ? ಅವನ ಆತ್ಮವಾವುದು ? ಇವೆಲ್ಲವನ್ನು ಯಥಾರ್ಥವಾಗಿ ನಮಗೆ ಹೇಳೆಂದರು.

೨೪-೨೬. ಸೂತಮುನಿಯು ಹೇಳಿದನು:—ಕಾಲಸ್ವರೂಪವನ್ನು ಕೇಳಿ. ಅದನ್ನು ವಿವೇಚನೆಯಿಂದ ತಿಳಿಯಿರಿ. ಈ ಕಾಲರೂಪನಿಗೆ ಸೂರ್ಯನೇ ಮೂಲ ಕಾರಣನಾಗಿರುವನು. ನಿಮೇಷಾದಿ ಸಂಖ್ಯೆಯೇ ಅವನಿಗೆ ನೇತ್ರವಾಗಿದೆ. ಹಗಲು ರಾತ್ರಿಗಳೆಂಬುದು ಮೂರ್ತಿಯು. ನಿಮೇಷಾದಿಗಳು ಅವಯವಗಳು. ಕಲಾರೂಪ ವಾದ ಸಂವತ್ಸರಶತಗಳೇ ಅವನ ನಾಮಗಳು. ಆ ಕಾಲರೂಪಪ್ರಜಾಪತಿಗೆ ಭೂತ ಭವಿಷ್ಯದ್ವರ್ತಮಾನರೂಪವಾದ ಕಾಲವೇ ಆಕಾರ. ಹೀಗೆ ಪಂಚವಿಧವಾಗಿ ವಿಭಾಗಿ ಸಲ್ಪಟ್ಟ ಕಾಲಾವಸ್ಥೆಗಳನ್ನು ಕೇಳಿ. ಅವು ದಿನ, ಪಕ್ಷ, ಮಾಸ, ಋತು, ಸಂವತ್ಸರ ವೆಂಬ ಅಂಶಗಳಿಂದ ಕೂಡಿ ಮುಂದಿನ ವಿಭಾಗಗಳಿಗೆ ಕಾರಣಗಳಾಗಿವೆ.

೨೭-೨೮. ಅವುಗಳಲ್ಲಿ ಸಂವತ್ಸರವು ಮೊದಲನೆಯದಾಗಿಯೂ, ಪರಿವತ್ಸರವು ಎರಡನೆಯದಾಗಿಯೂ, ಇದ್ವತ್ಸರವು ಮೂರನೆಯದಾಗಿಯೂ, ಅನುವತ್ಸರವು

ವತ್ಸರಃ ಪಂಚಮಸ್ತೇಷಾಂ ಕಾಲಃ ಸ ಯುಗಸಂಜ್ಞಿತಃ ।
ತೇಷಾಂ ತು ತತ್ವಂ ವಕ್ಷ್ಯಾಮಿ ಕೀರ್ತ್ಯಮಾನಂ ನಿಬೋಧತ ॥ ೨೮ ॥

ಋತುರಗ್ನಿಸ್ತು ಯಃ ಪ್ರೋಕ್ತಃ ಸ ತು ಸಂವತ್ಸರೋ ಮತಃ ।
ಆದಿತ್ಯೋ ಯಸ್ತ್ವಸೌ ಸಾರಃ ಕಾಲಾಗ್ನಿಃ ಪರಿವತ್ಸರಃ ॥ ೨೯ ॥

ಶುಕ್ಲಕೃಷ್ಣಾಗತಿಶ್ಚಾಪಿ ಅಪಾಂ ಸಾರಮಯಃ ಖಗಃ ।
ಸ ಇಡಾವತ್ಸರಃ ಸೋಮಃ ಪುರಾಣೇ ನಿಶ್ಚಯೋ ಮತಃ ॥ ೩೦ ॥

ಯಶ್ಚಾಯಂತಪತೇ ಲೋಕಾಂಸ್ತನುಭಿಃ ಸಪ್ತಸಪ್ತಭಿಃ ।
ಆಶುಕರ್ತಾ ಚ ಲೋಕಸ್ಯ ಸ ವಾಯುರಿತಿ ವತ್ಸರಃ ॥ ೩೧ ॥

ಅಹಂಕಾರಾತ್ ರುದರ್ ರುದ್ರಃ ಸದ್ಭೂತೋ ಬ್ರಹ್ಮಣಸ್ತ್ರಯಃ ।
ಸ ರುದ್ರೋ ವತ್ಸರಸ್ತೇಷಾಂ ವಿಜಜ್ಞೇ ನೀಲಲೋಹಿತಃ ॥
ತೇಷಾಂ ಹಿ ತತ್ವಂ ವಕ್ಷ್ಯಾಮಿ ಕೀರ್ತ್ಯಮಾನಂ ನಿಬೋಧತ ॥ ೩೨ ॥

---

ನಾಲ್ಕನೆಯದಾಗಿಯೂ, ವತ್ಸರವು ಐದನೆಯದಾಗಿಯೂ ಇವೆ. ಇವು ಯುಗವೆಂಬ ಸಂಜ್ಞೆಯುಳ್ಳ ಮುಖ್ಯವಾದ ಕಾಲಸ್ವರೂಪವಾಗಿದೆ. ಇವುಗಳ ತತ್ವಸ್ವರೂಪಗಳನ್ನು ವಿವರಿಸಿ ಹೇಳುವೆನು ಕೇಳಿ ಎಂದನು.

೨೯. ಪೂರ್ವದಲ್ಲಿ ಋತು ಅಗ್ನಿಯೆಂಬುದಾಗಿ ಯಾವ ವಿಷಯವನ್ನು ತಿಳಿಸಿದೆಯೋ, ಇವೆರಡೂ ಸಂವತ್ಸರಾತ್ಮಕನಾದ ಪ್ರಜಾಪತಿಯ ರೂಪವಾಗಿವೆ. ಅದಿತಿಯ ಪುತ್ರನೂ, ಕಾಲಾಗ್ನಿನಾಮಕನೂ ಆದ ಸೂರ್ಯನು ಪರಿವತ್ಸರರೂಪನಾಗಿರುವನು.

೩೦. ಶುಕ್ಲಪಕ್ಷ, ಕೃಷ್ಣಪಕ್ಷಗಳಿಗೆ ಕಾರಣನೂ, ಜಲದ ಸಾರಾಂಶಭೂತನೂ, ಆಕಾಶಚಾರಿಯೂ ಆದ ಚಂದ್ರನು ಇಡಾಸಂವತ್ಸರನೆಂದು ಪುರಾಣದಲ್ಲಿ ಪ್ರಸಿದ್ಧನಾಗಿರುವನು.

೩೧. ಯಾವ ವಾಯುವು ಏಳುರೂಪಗಳಿಂದ ಸಪ್ತಲೋಕಗಳಲ್ಲಿಯೂ ಸಂಚರಿಸುತ್ತಾ ತಾಪಗೊಳಿಸುತ್ತದೆಯೋ ಮತ್ತು ಜಗತ್ತನ್ನು ಕಾರ್ಯದಲ್ಲಿ ಪ್ರೇರಿಸುತ್ತದೆಯೋ ಅಂತಹ ವಾಯುದೇವನೇ ವತ್ಸರನಾಮಕನಾಗಿರುವನು.

೩೨. ಬ್ರಹ್ಮದೇವನ ಅಹಂಕಾರದಿಂದ ಮಹಾದೇವನು ಅಳುತ್ತಾ ಹುಟ್ಟಿರುವುದರಿಂದ ರುದ್ರನಾಮಕನಾಗಿರುವನು. ಆ ರುದ್ರದೇವನೇ ನೀಲಲೋಹಿತನೆಂಬ ಬೇರೊಂದು ನಾಮದಿಂದ ಪ್ರಖ್ಯಾತನೂ, ಸಂವತ್ಸರನಾಮಕನೂ ಆಗಿರುವನು. ಇವರ ಸ್ವರೂಪಗಳನ್ನು ಕ್ರಮವಾಗಿ ನಿರೂಪಿಸುವೆನು ಕೇಳಿ ಎಂದನು.

ಅಂಗಪ್ರತ್ಯಂಗಸಂಯೋಗಾತ್ ಕಾಲಾತ್ಮಾ ಪ್ರಪಿತಾಮಹಃ ।
ಋಕ್ಸಾಮಯಜುಷಾಂ ಯೋನಿಃ ಪಂಚಾನಾಂ ಪತಿರೀಶ್ವರಃ ॥ ೩೩ ॥
ಸೋಽಗ್ನಿರ್ಯಜುಶ್ಚ ಸೋಮಶ್ಚ ಸ ಭೂತಃ ಸ ಪ್ರಜಾಪತಿಃ ।

ಪ್ರೋಕ್ತಃ ಸಂವತ್ಸರಶ್ಚೇತಿ ಸೂರ್ಯೋ ಯೋಽಗ್ನಿರ್ಮನೀಷಿಭಿಃ ॥ ೩೪ ॥
ಯಸ್ಮಾತ್ ಕಾಲವಿಭಾಗಾನಾಂ ಮಾಸರ್ತ್ವಯನಯೋರಪಿ ।

ಗ್ರಹನಕ್ಷತ್ರಶೀತೋಷ್ಣವರ್ಷಾಯುಃ ಕರ್ಮಣಾಂ ತಥಾ ॥
ಯೋಜಿತಃ ಪ್ರವಿಭಾಗಾನಾಂ ದಿವಸಾನಾಂ ಚ ಭಾಸ್ಕರಃ ॥ ೩೫ ॥

ವೈಕಾರಿಕಃ ಪ್ರಸನ್ನಾತ್ಮಾ ಬ್ರಹ್ಮಪುತ್ರಃ ಪ್ರಜಾಪತಿಃ ।
ಏಕಸ್ಯೈಕೋಽಥ ದಿವಸೋ ಮಾಸೋಽಥರ್ತುಃ ಪಿತಾಮಹಃ ॥ ೩೬ ॥

---

೩೩-೩೪. ಕಾಲರೂಪಿಯಾದ ಬ್ರಹ್ಮದೇವನು ಅನೇಕ ಅಂಗಗಳೂ ಮತ್ತು ಉಪಾಂಗಗಳು ಇವುಗಳುಳ್ಳವನಾದ್ದರಿಂದ ಋಕ್ಕು, ಸಾಮ, ಯಜಸ್ಸು ಎಂಬ ವೇದತ್ರಯಗಳಿಗೆ ಕಾರಣನೂ, ಹಿಂದೆ ನಿರೂಪಿಸಿರುವ ಸಂವತ್ಸರ, ಪರಿವತ್ಸರ, ಇಡಾವತ್ಸರ, ಅನುವತ್ಸರ ಮತ್ತು ವತ್ಸರವೆಂಬ ಅವಸ್ಥಾಭಿಮಾನಿಗಳಿಗೆ ಪತಿಯೂ ಆಗಿರುವನು. ಮೇಲೆ ಹೇಳಿದ ವತ್ಸರಾಭಿಮಾನಿಯಾದ ಅಗ್ನಿಯೆಂಬ ತತ್ವವನ್ನು ಜ್ಞಾನಿಗಳು ಅಗ್ನಿ, ಯಜುಸ್ಸು, ಸೋಮ, ಭೂತ, ಪ್ರಜಾಪತಿ, ಸೂರ್ಯ ಎಂಬ ಅನೇಕ ನಾಮಗಳಿಂದ ಹೊಗಳುತ್ತಾರೆ.

೩೫. ಎರಡನೆಯ ಕಾಲಾಭಿಮಾನಿಯು ಸೂರ್ಯರೂಪನಾಗಿರುವನೆಂದು ಹಿಂದೆಯೇ ಹೇಳಿರುತ್ತೇನೆ. ಅಂಥ ಸೂರ್ಯನು ಮಾಸ, ಋತು, ಅಯನ ಇವೇ ಮೊದಲಾದ ನಾನಾವಿಧ ಕಾಲಾಭಿಮಾನಿಗಳಿಗೆ ಕಾರಣನಾಗಿಯೂ, ಗ್ರಹನಕ್ಷತ್ರಗಳಿಂದ ಕೂಡಿದ ತೇಜೋಮಂಡಲಕ್ಕೆ ಆಧಾರನಾಗಿಯೂ, ಶೀತ, ಉಷ್ಣ, ವೃಷ್ಟಿ, ಆಯುಸ್ಸು, ಕರ್ಮಗಳು, ದಿವಸಗಳು ಇವುಗಳಿಗೆ ಕಾರಣನಾಗಿಯೂ ಇರುವನು.

೩೬-೩೭. ಮತ್ತು ಅಂತಹ ಸೂರ್ಯನು ವಿಕಾರರೂಪತತ್ವಗಳಿಗೆ ಅಭಿಮಾನಿಯೂ, ಸ್ವಚ್ಛವಾದ ಮನಸ್ಸುಳ್ಳವನೂ, ಬ್ರಹ್ಮಪುತ್ರನೂ, ಪ್ರಜಾಪತಿಯೂ, ಒಂದೊಂದು ಅಂಶಗಳಿಗೆ ಅಭಿಮಾನಿಯೂ, ದಿವಸ, ಮಾಸ, ಋತು, ವತ್ಸರ ಇವು

ಆದಿತ್ಯಃ ಸವಿತಾ ಭಾನುರ್ಜೀವನೋ ಬ್ರಹ್ಮಸತ್ಕೃತಃ ।
ಪ್ರಭವಶ್ಚಾತ್ಯಯಶ್ಚೈವ ಭೂತಾನಾಂ ತೇನ ಭಾಸ್ಕರಃ ॥ ೩೭ ॥

ತಾರಾಭಿಮಾನೀ ವಿಜ್ಞೇಯಸ್ತೃತೀಯಃ ಪರಿವತ್ಸರಃ ।
ಸೋಮಃ ಸರ್ವೌಷಧಿಪತಿರ್ಯಸ್ಮಾತ್ಸಪ್ರಪಿತಾಮಹಃ ॥ ೩೮ ॥

ಆಜೀವಃ ಸರ್ವಭೂತಾನಾಂ ಯೋಗಕ್ಷೇಮಕೃದೀಶ್ವರಃ ।
ಅವೇಕ್ಷಮಾಣಃ ಸತತಂ ಬಿಭರ್ತಿ ಜಗದಂಶುಭಿಃ ॥ ೩೯ ॥

ತಿಥೀನಾಂ ಪರ್ವಸಂಧೀನಾಂ ಪೂರ್ಣಿಮಾದರ್ಶಯೋರಪಿ ।
ಯೋನಿರ್ನಿಶಾಕರೋ ಯಶ್ಚ ಯೋಽಮೃತಾತ್ಮಾ ಪ್ರಜಾಪತಿಃ ॥ ೪೦ ॥

ತಸ್ಮಾತ್ ಸ ಪಿತೃಮಾನ್ ಸೋಮ ಋಗ್ಯಜುಶ್ಛಂದ ಆತ್ಮಕಃ ।
ಪ್ರಾಣಾಪಾನಸಮಾನಾದ್ಯೈರ್ವ್ಯಾನೋದಾನಾತ್ಮಕೈರಪಿ ॥ ೪೧ ॥

---

ಗಳಿಗೆ ಕಾರಣನೂ, ಪ್ರಜಾಸ್ರಷ್ಟನೂ, ಆದಿತ್ಯ, ಸವಿತ, ಭಾನು, ಜೀವನ ಎಂಬ ನಾಮಕನೂ, ಬ್ರಹ್ಮನಿಂದ ಸತ್ಕೃತನೂ, ಸಮಸ್ತಭೂತಗಳ ಉತ್ಪತ್ತಿಲಯಗಳಿಗೆ ಕಾರಣನಾದುದರಿಂದ ಭಾಸ್ಕರನಾಮಕನೂ ಆಗಿರುವನು.

೩೮. ಸಮಸ್ತ ನಕ್ಷತ್ರಗಳಿಗೆ ಅಭಿಮಾನಿಯೂ, ನಕ್ಷತ್ರೇಶನೂ ಆದ ಚಂದ್ರನು ಮೂರನೆಯ ಪರಿವತ್ಸರನಾಗಿರುವನು. ಈ ಚಂದ್ರನು ಸಮಸ್ತ ಓಷಧಿಗಳಿಗೆ ಅಧಿಪತಿಯಾಗಿಯೂ ಸೋಮನಾಮಕನಾಗಿಯೂ, ಪ್ರಖ್ಯಾತನಾಗಿಯೂ ಇರುವನು. ಇದರಿಂದ ಚಂದ್ರನು ಲೋಕಗಳಿಗೆ ಪಿತಾಮಹನಾಗಿರುವನು.

೩೯. ಮತ್ತು ಸರ್ವಭೂತಗಳಿಗೆ ಜೀವನಪ್ರದನೂ, ಯೋಗಕ್ಷೇಮಗಳನ್ನು ಕೊಡುವ ಪ್ರಭುವೂ, ತನ್ನ ಕಿರಣಗಳಿಂದ ಯಾವಾಗಲೂ ಜಗತ್ತನ್ನು ನೋಡಿ ಕೊಳ್ಳುವವನೂ, ಧಾರಕನೂ, ಆಗಿರುವನು.

೪೦. ಅಂತಹ ಸೋಮನು ಪರ್ವತಿಥಿಗಳೂ, ಪರ್ವಕಾಲಸಂಧಿಗಳೂ, ದರ್ಶ ಪೌರ್ಣಿಮೆಗಳಿಗೂ, ರಾತ್ರಿಗೂ ಕಾರಣನೂ, ಅಮೃತಸ್ವರೂಪನೂ, ಪ್ರಜಾಪತಿಯೂ ಆಗಿರುವನು.

೪೧-೪೨. ಆದುದರಿಂದ ಋಗ್ಯಜುಸ್ಸ್ವರೂಪನೂ, ಛಂದೋರೂಪನೂ, ಪಿತೃ ವಂತನೂ ಆದ ಸೋಮದೇವನು ಪ್ರಾಣ, ಅಪಾನ, ಸಮಾನ, ವ್ಯಾನ, ಉದಾನಗಳ

ಕರ್ಮಭಿಃ ಪ್ರಾಣಿನಾಂ ಲೋಕೇ ಸರ್ವಚೇಷ್ಟಾ ಪ್ರವರ್ತಕಃ ।
ಪ್ರಾಣಾಪಾನಸಮಾನಾನಾಂ ವಾಯೂನಾಂ ಚ ಪ್ರವರ್ತಕಃ ॥ ೪೨ ॥

ಪಂಚಾನಾಂ ಚೇಂದ್ರಿಯಮನೋ ಬುದ್ಧಿಸ್ಮೃತಿಜಲಾತ್ಮನಾಂ ।
ಸಮಾನಕಾಲಕರಣಃ ಕ್ರಿಯಾಃ ಸಂಪಾದಯನ್ನಿವ ॥ ೪೩ ॥

ಸರ್ವಾತ್ಮಾ ಸರ್ವಲೋಕಾನಾಮಾವಹಃ ಪ್ರವಹಾದಿಭಿಃ ।
ವಿಧಾತಾ ಸರ್ವಭೂತಾನಾಂ ಕ್ಷಮೀ ನಿತ್ಯಂ ಪ್ರಭಂಜನಃ ॥ ೪೪ ॥

ಯೋನಿರಗ್ನೇರಪಾಂ ಭೂಮೇರವೇಶ್ಚಂದ್ರಮಸಶ್ಚ ಯಃ ।
ವಾಯುಃ ಪ್ರಜಾಪತಿರ್ಭೂತಂ ಲೋಕಾತ್ಮಾ ಪ್ರತಿತಾಮಹಃ ॥ ೪೫ ॥

ಪ್ರಜಾಪತಿಮುಖೈರ್ದೇವೈಃ ಸಮ್ಯಗಿಷ್ಟಫಲಾರ್ಥಿಭಿಃ ।
ತ್ರಿಭಿರೇವ ಕಪಾಲೈಸ್ತು ಅಂಬಕೈರೋಷಧಿಕ್ಷಯೇ ॥
ಇಜ್ಯತೇ ಭಗವಾನ್ ಯಸ್ಮಾತ್ತಸ್ಮಾತ್ತ್ರ್ಯಂಬಕ ಉಚ್ಯತೇ ॥ ೪೬ ॥

---

ಕರ್ಮಗಳಿಂದ ಪ್ರಾಣಿಗಳಿಗೆ ಸರ್ವಚೇಷ್ಟಾಪ್ರವರ್ತಕನೂ, ಪ್ರಾಣಾಪಾನಸಮಾನ ವಾಯುಪ್ರೇರಕನೂ ಆಗಿರುವನು.

೪೩. ವಾಯುದೇವನು ಅನುವತ್ಸರಸ್ವರೂಪನು. ಆ ವಾಯುವು ಇಂದ್ರಿಯ, ಮನಸ್ಸು, ಬುದ್ಧಿ, ಸ್ಮೃತಿ ಮತ್ತು ಜಲಗಳೆಂಬ ಈ ಶರೀರಸಂಘಾತದೊಳಗಿನ ಪಂಚೋಪಕರಣಪ್ರೇರಕನೂ, ಆಯಾ ಕಾಲೋಚಿತಗಳಾದ ಕ್ರಿಯಾಸಂಪಾದಕನೂ ಆಗಿರುವನು.

೪೪. ಆ ವಾಯುದೇವನು ಸರ್ವಲೋಕಗಳಿಗೆ ನಿಯಾಮಕನಾಗಿ ಆವಹ, ಪ್ರವಹ ಮೊದಲಾದವುಗಳಿಂದ ನಿತ್ಯನೂ ಸರ್ವಭೂತಗಳ ನಿಯಾಮಕನೂ, ಕ್ಷಮಾವಂತನೂ ಆಗಿರುವನು.

೪೫. ಮತ್ತು ಆ ವಾಯುದೇವನು ಸರ್ವಭೂತಗಳ ಸೃಷ್ಟಿಗೆ ಕಾರಣನೂ, ಲೋಕನಿಯಾಮಕನೂ, ಅಗ್ನಿ, ಜಲ, ಭೂಮಿ, ರವಿ, ಚಂದ್ರ ಮೊದಲಾದವರಿಗೆ ಕಾರಣನೂ, ಪ್ರಪಿತಾಮಹನೂ (ಮುತ್ತಜ್ಜನೂ) ಆಗಿರುವನು.

೪೬. ಅನಾವೃಷ್ಟ್ಯಾದಿಗಳಿಂದ ಓಷಧಿಗಳು ಕ್ಷಯವಾಗಲು ಯಾಗಫಲಾರ್ಥಿಗಳೂ, ಬ್ರಹ್ಮಪುರೋಗಾಮಿಗಳೂ ಆದ ದೇವತೆಗಳು ಮೂರುಕಪಾಲಗಳಲ್ಲಿ ಸಂಸ್ಕಾರ ಮಾಡಿದ ಹವಿಸ್ಸುಗಳಿಂದ ಪೂಜ್ಯನಾದ ಈಶ್ವರನನ್ನು ಪೂಜಿಸಿದರು. ಇದರಿಂದ ಈಶ್ವರನಿಗೆ ತ್ರ್ಯಂಬಕವೆಂಬ ನಾಮವು ಪ್ರಾಪ್ತವಾಗಿದೆ.

ಗಾಯತ್ರೀ ಚೈವ ತ್ರಿಷ್ಟುಪ್ ಚ ಜಗತೀ ಚೈವ ಯಾ ಸ್ಮೃತಾ ।
ತ್ರ್ಯಂಬಕಾ ನಾಮತಃ ಪ್ರೋಕ್ತಾ ಯೋನಯಃ ಸವನಸ್ಯ ತಾಃ ॥ ೪೭ ॥

ತಾಭಿರೇಕತ್ವಭೂತಾಭಿಸ್ತ್ರಿವಿದಾಭಿಃ ಸ್ವವೀರ್ಯತಃ ।
ತ್ರಿಸಾಧನ ಪುರೋಡಾಶಸ್ತ್ರಿಕಪಾಲಃ ಸ ವೈ ಸ್ಮೃತಃ ॥ ೪೮ ॥

ಇತ್ಯೇತತ್ಪಂಚವರ್ಷಂ ಹಿ ಯುಗಂ ಪ್ರೋಕ್ತಂ ಮನೀಷಿಭಿಃ ।
ಯಶ್ಚೈವ ಪಂಚಧಾತ್ಮಾ ವೈ ಪ್ರೋಕ್ತಃ ಸಂವತ್ಸರೋ ದ್ವಿಜೈಃ ॥
ಸೈಕಂ ಷಟ್ಕಂ ವಿಜಜ್ಞೇಽಥ ಮಧ್ವಾದೀನೃತವಃ ಕಿಲ ॥ ೪೯ ॥

ಋತುಪುತ್ರಾರ್ತವಃ ಪಂಚ ಇತಿ ಸರ್ಗಃ ಸಮಾಸತಃ ।
ಇತ್ಯೇಷ ಪವಮಾನೋ ವೈ ಪ್ರಾಣಿನಾಂ ಜೀವಿತಾನಿ ತು ॥ ೫೦ ॥

---

೪೭. ಗಾಯತ್ರೀ, ತ್ರಿಷ್ಟುಪ್, ಜಗತೀ ಎಂಬ ಮೂರು ಛಂದೋವಿಶೇಷಗಳು ತ್ರ್ಯಂಬಕನಾಮಕಗಳಾಗಿಯೂ, ಸವನನಾಮಕಯಾಗವಿಶೇಷಕ್ಕೆ ಕಾರಣಗಳಾಗಿಯೂ ಇವೆ.

೪೮. ಹಿಂದೆ ಹೇಳಿದ ಛಂದೋಬದ್ಧಗಳಾದ ಋಙ್ಮಂತ್ರತ್ರಯಗಳು ಸ್ವಶಕ್ತಿಯಿಂದ ಏಕರೂಪವಾಗಿ ಮೂರು ಸಾಧನೆಗಳಿಂದ ಆಗುವ ಪುರೋಡಾಶವನ್ನು ಮೂರು ಕಪಾಲಗಳಿಂದ ಈಶ್ವರನಿಗೆ ಆಹುತಿಯನ್ನು ಕೊಡುವರು. ಆದುದರಿಂದ ಈಶ್ವರನು ತ್ರ್ಯಂಬಕನಾಮಕನಾಗಿರುವನು.

೪೯. ಈ ರೀತಿಯಲ್ಲಿ ಆ ಯುಗವು ಪಂಚವರ್ಷಾತ್ಮಕವಾಗಿದೆಯೆಂದು ಜ್ಞಾನಿಗಳು ಹೇಳುವರು. ಹೀಗೆ ಸಂವತ್ಸರವು ಸೂರ್ಯ, ಚಂದ್ರ, ಅಗ್ನಿ, ವಾಯು, ರುದ್ರರೆಂದು ಐದು ವಿಧವಾಗಿದೆಯೆಂದು ವಿಪ್ರರು ಹೇಳುವರು. ಮೇಲೆ ಹೇಳಿದ ಐದು ಕಾಲಾವಸ್ಥೆಗಳ ಸಂಗಡ ಒಂದುಕಾಲವು ಸೇರಿ (ಒಟ್ಟು) ವಸಂತಾದಿ ಆರು ಋತುಗಳಾಗಿವೆ.

೫೦. ಹೀಗೆ ಋತುಗಳಿಗೆ ಆರ್ತನಾಮಕರಾದ ಐದು ಜನ ಮಕ್ಕಳಿರುವರು. ಈ ರೀತಿಯಲ್ಲಿ ಸೃಷ್ಟಿಕ್ರಮವು ಸಂಕ್ಷೇಪವಾಗಿ ನಿರೂಪಿಸಲ್ಪಟ್ಟಿದೆ. ಈ ರೀತಿಯಲ್ಲಿ ವಾಯುದೇವನು ಪ್ರಾಣಿಗಳಿಗೆ ಜೀವನಪ್ರದನಾಗಿರುವನು.

ನದೀವೇಗಸಮಾಯುಕ್ತಂ ಕಾಲೋ ಧಾವತಿ ಸಂಹರನ್ ।
ಅಹೋರಾತ್ರಕರಸ್ತಸ್ಮಾತ್ ಸ ವಾಯುರಭವತ್ಪುನಃ ॥ ೫೧ ॥

ಏತೇ ಪ್ರಜಾನಾಂ ಪತಯಃ ಪ್ರಧಾನಾಃ ಸರ್ವದೇಹಿನಾಂ ।
ಪಿತರಃ ಸರ್ವಲೋಕಾನಾಂ ಲೋಕಾತ್ಮಾನಃ ಪ್ರಕೀರ್ತಿತಾಃ ॥ ೫೨ ॥

ಧ್ಯಾಯತೋ ಬ್ರಹ್ಮಣೋ ವಕ್ತ್ರಾದುದ್ಯನ್ ಸಮುಪದ್ಭವಃ ।
ಋಷಿರ್ವಿಪ್ರೋ ಮಹಾದೇವೋ ಭೂತಾತ್ಮಾ ಪ್ರಪಿತಾಮಹಃ ॥ ೫೩ ॥

ಈಶ್ವರಃ ಸರ್ವಭೂತಾನಾಂ ಪ್ರಣವಾಯೋಪಪದ್ಯತೇ ।
ಆತ್ಮವೇಶೇನ ಭೂತಾನಾಮಂಗಪ್ರತ್ಯಂಗಸಂಭವಃ ॥ ೫೪ ॥

ಅಗ್ನಿಃ ಸಂವತ್ಸರಃ ಸೂರ್ಯಶ್ಚಂದ್ರಮಾ ವಾಯುರೇವ ಚ ।
ಯುಗಾಭಿಮಾನೀ ಕಾಲಾತ್ಮಾ ನಿತ್ಯಂ ಸಂಕ್ಷೇಪಕೃದ್ವಿಭುಃ ॥
ಉನ್ಮಾದಕೋಽನುಗ್ರಹಕೃತ್ಸ ಇದ್ವತ್ಸರ ಉಚ್ಯತೇ ॥ ೫೫ ॥

---

೫೧. ಹೀಗೆ ಕಾಲವು ಸರ್ವಭಕ್ಷಕವಾಗಿದ್ದರೂ ನದಿಯ ವೇಗದಂತೆ ಪ್ರವಾಹತೋ ಅನಾದಿಯಾಗಿರುವುದು. ಆ ವಾಯುರೂಪವಾದ ಕಾಲವು ಅಹೋರಾತ್ರಿಗಳ ರೂಪವಾಗಿ ಪುನಃ ಜನಿಸಿತು.

೫೨. ಅಗ್ನಿ, ಸೂರ್ಯ, ಚಂದ್ರ, ವಾಯು, ರುದ್ರರೆಂಬ ಪ್ರಜಾಪತಿಗಳು ಸಮಸ್ತ ಪ್ರಾಣಿಗಳಿಗೂ ಪ್ರಧಾನರಾಗಿಯೂ, ಸಮಸ್ತ ಜನರಿಗೆ ಪಿತೃಗಳಾಗಿಯೂ, ಸರ್ವಲೋಕರೂಪರಾಗಿಯೂ ಪ್ರಖ್ಯಾತರಾಗಿಯೂ ಇರುವರು.

೫೩. ಯೋಗಾಸಕ್ತನಾದ ಬ್ರಹ್ಮದೇವನ ಮುಖದಿಂದ ಒಬ್ಬನು ರೋದನ ಮಾಡುತ್ತಾ ಜನಿಸಿದನು. ಅವನು ಜ್ಞಾನಿಯಾಗಿಯೂ, ವಿಪ್ರನಾಗಿಯೂ ಸರ್ವ ಭೂತಸ್ವರೂಪನೂ, ಪಿತಾಮಹನೂ, ಆಗಿರುವುದರಿಂದ ಮಹದೇವನಾಮಕನಾಗಿರುವನು.

೫೪. ಕಾಲರೂಪಿಯಾದ ಸ್ವಾಮಿಯು ಅಗ್ನಿ, ಸೂರ್ಯ, ಸಂವತ್ಸರ, ಚಂದ್ರ, ಮತ್ತು ವಾಯು, ಈ ಪಂಚರೂಪವುಳ್ಳವನೂ, ಯುಗಾಭಿಮಾನಿಯೂ, ಉನ್ಮಾದಕನೂ, ಅನುಗ್ರಹಕನೂ, ಇದ್ವತ್ಸರನೂ ಆಗಿರುತ್ತಾನೆ.

೫೫. ಈಶ್ವರನು ಸರ್ವಪ್ರಾಣಿಗಳಿಗೆ ಈಶನೂ, ಸರ್ವರಿಂದಲೂ ಸ್ತುತ್ಯನೂ ಪ್ರಣವಸ್ವರೂಪನೂ ಆಗಿರುವನು. ಅಂತಹ ರುದ್ರನು ಸಕಲ ಭೂತಗಳ ಅಂಗ ಪ್ರತ್ಯಂಗಗಳ ಉತ್ಪತ್ತಿಗೆ ಆತ್ಮರೂಪನಾಗಿ ಪ್ರವೇಶಿಸಿ ಕಾರಣನಾಗಿರುವನು.

ರುದ್ರಾವಿಷ್ಟೋ ಭಗವತಾ ಜಗತ್ಯಸ್ಮಿನ್ ಸ್ವತೇಜಸಾ ।
ಆಶ್ರಯಾಶ್ರಯಸಂಯೋಗಾತ್ ತನುಭಿರ್ನಾಮಭಿಸ್ತಥಾ ॥ ೫೬ ॥

ತತಸ್ತಸ್ಯ ತು ವೀರ್ಯೇಣ ಲೋಕಾನುಗ್ರಹಕಾರಕಂ ।
ದ್ವಿತೀಯಂ ಭದ್ರಸಂಯೋಗಂ ಸಂತತಸ್ಯೈಕಕಾರಕಂ ॥ ೫೭ ॥

ದೇವತ್ವಂ ಚ ಪಿತೃತ್ವಂ ಚ ಕಾಲತ್ವಂ ಚಾಸ್ಯ ಯತ್ಪರಂ ।
ತಸ್ಮಾದ್ದೈ ಸರ್ವಥಾ ಭದ್ರಸ್ತದ್ವದ್ಭಿರಭಿಪೂಜ್ಯತೇ ॥ ೫೮ ॥

ಪತಿಃ ಪತಿನಾಂ ಭಗವಾನ್ ಪ್ರಜೇಶಾನಾಂ ಪ್ರಜಾಪತಿಃ ।
ಭವನಃ ಸರ್ವಭೂತಾನಾಂ ಸರ್ವೇಷಾಂ ನೀಲಲೋಹಿತಃ ॥
ಓಷಧೀಃ ಪ್ರತಿಸಂಧತ್ತೇ ರುದ್ರಃ ಕ್ಷೀಣಾಃ ಪುನಃ ಪುನಃ ॥ ೫೯ ॥

---

೫೬. ಈ ಸಮಸ್ತವಾದ ಜಗತ್ತು ಭಗವಂತನಾದ ರುದ್ರದೇವನ ತೇಜಸ್ಸಿನಿಂದ ಆವೃತವಾಗಿದೆ. ಆದ್ದರಿಂದ ಆ ದೇವನು ಪೃಥಿವ್ಯಾದಿ ಎಂಟು ಶರೀರಗಳನ್ನು ಪಡೆದು ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಯಜಮಾನ ಎಂಬ ಅಷ್ಟನಾಮಗಳಿಂದ ಪ್ರಖ್ಯಾತನಾಗಿಯೂ ಇರುವನು.

೫೭. ಅನಂತರ ಲೋಕಾನುಗ್ರಹಕರವಾದ ಆ ಕಾಲರೂಪಿಯ ಮಹಿಮೆಗಳಿಂದ ಸಕಲ ಜಗತ್ತೂ ವ್ಯಾಪ್ತವಾಗಿದೆ. ಕಾಲರೂಪಿಯಾದ ರುದ್ರದೇವನಿಗೆ ಎರಡನೆಯದಾದ ಪೃಥಿವ್ಯಾದ್ಯಷ್ಟಮೂರ್ತಿಗಳ ದ್ವಿತೀಯ ರೂಪುಗಳೂ ಕೂಡ ಕೇವಲ ಮಂಗಳಕರಗಳಾಗಿಯೂ ನಿತ್ಯವಾಗಿಯೂ ಇದೆ.

೫೮. ಅಂತಹ ರುದ್ರನು ತನ್ನ ಮಹಿಮೆಗಳಿಂದ ದೇವಸ್ವರೂಪವನ್ನೂ, ಪ್ರಪಂಚಸೃಷ್ಟಿಗೆ ಕಾರಣನಾಗಿರುವದರಿಂದ ಪಿತೃಸ್ವರೂಪವನ್ನೂ, ಸರ್ವವಸ್ತುಗಳನ್ನೂ ಅಳಿಯುವವನಾದ್ದರಿಂದ ಕಾಲಸ್ವರೂಪವನ್ನೂ ಹೊಂದಿರುವನು. ಇದರಿಂದ ಜ್ಞಾನಿಗಳು ಆ ರುದ್ರದೇವನನ್ನು ಬಹಳವಾಗಿ ಪೂಜಿಸುವರು.

೫೯. ಪೂಜ್ಯನಾದ ಮಹದೇವನು, ಹಿಂದೆ ನಿರೂಪಿಸಿದ ಪ್ರಜೇಶರಿಗೆ ಪತಿಯಾಗಿಯೂ, ಅಂತಹ ಪ್ರಜಾಪತಿಗಳನ್ನು ಸೃಷ್ಟಿಮಾಡುವವನಾಗಿಯೂ, ಸರ್ವಭೂತಗಳ ಸ್ಥಿತಿಗೆ ಕಾರಣನಾದುದರಿಂದ ಭವನನಾಮಕನಾಗಿಯೂ, ನೀಲಲೋಹಿತನಾಗಿಯೂ, ಇರುವನು. ಇಂತಹ ರುದ್ರದೇವನು ಕ್ಷೀಣವಾಗುವ ಓಷಧಿಗಳನ್ನು ಪುನಃ ಪುನಃ ತನ್ನ ಶಕ್ತಿಯಿಂದ ಸೃಷ್ಟಿಸಿದನು.

**ಇತ್ಯೇಷಾಂ ಯದಪತ್ಯಂ ವೈ ನ ತಚ್ಛಕ್ಯಂ ಪ್ರಮಾಣತಃ ।**
**ಬಹುತ್ವಾತ್ ಪರಿಸಂಖ್ಯಾತುಂ ಪುತ್ರಪೌತ್ರಮನಂತಕಂ ॥ ೬೦ ॥**

**ಇಮಂ ವಂಶಂ ಪ್ರಜೇಶಾನಾಂ ಮಹತಾಂ ಪುಣ್ಯಕರ್ಮಣಾಂ ।**
**ಕೀರ್ತಯನ್ ಸ್ಥಿರಕೀರ್ತಿನಾಂ ಮಹತೀಂ ಸಿದ್ಧಿಮಾಪ್ನುಯಾತ್ ॥ ೬೧ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ದೇವವಂಶವರ್ಣನಂ "**
**ನಾಮೈಕ ತ್ರಿಂಶೋಽಧ್ಯಾಯಃ**

---

೬೦. ಮೇಲೆ ಹೇಳಿದ ಪ್ರಜೆಗಳಿಗೆ ಉಂಟಾದ ಸಂತತಿಗಳನ್ನು ಎಣಿಸಿ ಸಂಪೂರ್ಣವಾಗಿ ಹೇಳುವುದು ಸಾಧ್ಯವಾಗಿದೆ ಏಕೆಂದರೆ, ಅವರ ಸಂತತಿಗಳು ಪುತ್ರ ಪೌತ್ರಾದಿಗಳಿಂದ ಅನಂತಗಳಾಗಿವೆ. ಹೀಗೆ ಬೆಳೆದು ವೃದ್ಧಿಯನ್ನು ಹೊಂದಿರುವುದ ರಿಂದ ಪ್ರತ್ಯೇಕವಾಗಿ ವರ್ಣಿಸುವುದು ಅಶಕ್ಯವಾಗಿದೆ.

೬೧. ಮಹಾತ್ಮರೂ, ಪುಣ್ಯಕರ್ಮಿಗಳೂ, ಸ್ಥಿರವಾದ ಕೀರ್ತಿಯುತರೂ ಆದ ಪ್ರಜಾಪತಿಗಳ ವಂಶವನ್ನು ವರ್ಣಿಸುವ ಪುರುಷನು ಸ್ಥಿರವೂ ಮಹತ್ತೂ ಆದ ಮಹಾ ಸಿದ್ಧಿಯನ್ನು ಪಡೆಯುವನೆಂದು ಸೂತಮುನಿಯು ಹೇಳಿದನು.

ಈ ರೀತಿಯಾಗಿ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ
" ದೇವವಂಶವರ್ಣನ "ವೆಂಬ ಮೂವತ್ತೊಂದನೆಯ ಅಧ್ಯಾಯವು ಸಮಾಪ್ತವು.

## ಮೂವತ್ತೊಂದನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಪಿತೃದೇವತೆಗಳ ವಂಶವು ವಿಸ್ತಾರವಾಗಿ ವರ್ಣಿತವಾಗಿದೆ. ಆದಿಯಲ್ಲಿ ಯಜ್ಞಪುರುಷನಿಗೆ ಯಾಮನಾಮಕದೇವತೆಗಳೂ ಅನಂತರ ಜಿತರು, ಅಜಿತರು ಜಿದಜಿತರರೆಂಬ ಬ್ರಹ್ಮನ ಮಾನಸಪುತ್ರರೂ ಉತ್ಪನ್ನರಾದರು. ಆಮೇಲೆ ಸುಪರ್ಣಾದಿ ಅಷ್ಟದೇವತೆಗಳು, ಉದ್ಭವಿಸಿ ಒಟ್ಟು ಮೂವತ್ತಮೂರು ಸಂಖ್ಯಾಕರಾದ ದೇವತೆಗಳು ಪ್ರಸಿದ್ಧರಾಗಿದ್ದರು. ಆಮೇಲೆ ಸ್ವಾಯಂಭುವಮನುವಿಗೆ ಆಗ್ನೀಧ್ರಾದಿ ದ್ವಾದಶಪುತ್ರರೂ, ತರುವಾಯ ಸುರಾಸುರಗಂಧರ್ವ ಯಕ್ಷರಾಕ್ಷಸ ಪಿಶಾಚಾದಿ ಅಸಂಖ್ಯಾತರಾದ ಕುಮಾರರೂ ಜನಿಸಿದ್ದರು. ಇವರ ಸಂಖ್ಯೆಯನ್ನು ತಿಳಿಸುವುದು ಅಸಾಧ್ಯವಾಗಿದೆ. ಕಾಲಪುರುಷನು ದಿವಸ, ಮಾಸ, ಪಕ್ಷ, ಋತು, ಅಯನವೆಂಬ ನಾಮಗಳಿಂದಲೂ, ಸಂವತ್ಸರ, ಪರಿವತ್ಸರ, ಇದ್ವತ್ಸರ, ಅನುವತ್ಸರ, ಯುಗವತ್ಸರವೆಂಬ ನಾಮಗಳಿಂದಲೂ ಪ್ರಖ್ಯಾತನಾಗಿರುವನು. ಈ ಯುಗಗಳಿಗೆ ಈಶ್ವರನೇ ನಿಯಾಮಕನು. ಆ ಮಹಾದೇವನ ಅಷ್ಟಮೂರ್ತಿಗಳ ಸ್ವರೂಪಗಳೂ ಕೂಡ ವಿಶೇಷವಾಗಿ ಈ ಅಧ್ಯಾಯದಲ್ಲಿ ಉಪಪಾದಿತವಾಗಿದೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ದ್ವಾತ್ರಿಂಶೋಽಧ್ಯಾಯಃ

॥ ವಾಯುರುವಾಚ ॥

**ಅತ ಊರ್ಧ್ವಂ ಪ್ರವಕ್ಷ್ಯಾಮಿ ಪ್ರಣವಸ್ಯ ವಿನಿಶ್ಚಯಂ ।**
**ಓಂಕಾರಮಕ್ಷರಂ ಬ್ರಹ್ಮ ತ್ರಿವರ್ಣಂ ಚಾದಿತಃ ಸ್ಮೃತಂ ॥ ೧ ॥**

**ಯೋ ಯೋ ಯಸ್ಯ ಯಥಾ ವರ್ಣೋ ವಿಹಿತೋ ದೇವತಾಸ್ತಥಾ ।**
**ಋಚೋ ಯಜೂಂಷಿ ಸಾಮಾನಿ ವಾಯುರಗ್ನಿಸ್ತಥಾ ಜಲಂ ॥ ೨ ॥**

## ಮೂವತ್ತೆರಡನೆಯ ಅಧ್ಯಾಯವು

೧. ವಾಯುದೇವನು ಹೇಳಿದನು :—ದೇವವಂಶವನ್ನು ವರ್ಣಿಸಿದ ತರುವಾಯ ಓಂಕಾರರೂಪವಾದ ಪ್ರಣವಸ್ವರೂಪವನ್ನು ವಿಸ್ತಾರವಾಗಿ ನಿರೂಪಿಸುವೆನು. ಬ್ರಹ್ಮಪ್ರತಿಪಾದಕವೂ, ಓಂಕಾರರೂಪವೂ ಆದ ಅಕ್ಷರವು ಪ್ರಥಮತಃ ಅಕಾರ ಉಕಾರ ಮಕಾರರೂಪ ತ್ರಿವರ್ಣಸ್ವರೂಪವಾಗಿದೆ. ಅಕಾರ ಉಕಾರ ಮಕಾರ ಕೂಡಿ ಓಮ್ ಎಂಬುದಾಗಿ ಉಂಟಾಗಿದೆ.

೨. ಯಾವ ಯಾವ ವರ್ಣಗಳು ಯಾವ ಯಾವ ವೇದರೂಪವಾಗಿವೆ ಅವುಗಳಿಗೆ ಆಶ್ರಯದೇವತೆಗಳು ಯಾರು ? ಈ ವಿಷಯಗಳನ್ನು ತಿಳಿಸುವೆನು. ಅಕಾರದಿಂದ ಋಗ್ವೇದವೂ, ಉಕಾರದಿಂದ ಯಜುರ್ವೇದವೂ, ಮಕಾರದಿಂದ ಸಾಮವೇದವೂ ಉತ್ಪನ್ನವಾಗಿವೆ. ಅವುಗಳಿಗೆ ಕ್ರಮವಾಗಿ ವಾಯುದೇವ, ಅಗ್ನಿಪುರುಷ, ಜಲ, ವರುಣ ಇವರು ಅಭಿಮಾನಿದೇವತೆಗಳಾಗಿರುವರು.

**ತಸ್ಮಾತ್ತು ಅಕ್ಷರಾದೇವ ಪುನರನ್ಯೇ ಪ್ರಜಜ್ಞಿರೇ ।**
**ಚತುರ್ದಶ ಮಹಾತ್ಮಾನೋ ದೇವಾನಾಂ ಯೇ ತು ದೈವತಾಃ ॥ ೩ ॥**

**ತೇಷು ಸರ್ವಗತಶ್ಚೈವ ಸರ್ವಗಃ ಸರ್ವಯೋಗವಿತ್ ।**
**ಅನುಗ್ರಹಾಯ ಲೋಕಾನಾಮಾದಿಮಧ್ಯಾಂತ ಉಚ್ಯತೇ ॥ ೪ ॥**

**ಸಪ್ತರ್ಷಯಸ್ತಥೇಂದ್ರಾ ಯೇ ದೇವಾಶ್ಚ ಪಿತೃಭಿಃ ಸಹ ।**
**ಅಕ್ಷರಾನ್ನಿಃಸೃತಾಃ ಸರ್ವೇ ದೇವದೇವಾನ್ಮಹೇಶ್ವರಾತ್ ॥ ೫ ॥**

**ಇಹಾಮುತ್ರ ಹಿತಾರ್ಥಾಯ ವದಂತಿ ಪರಮಂ ಪದಂ ।**
**ಪೂರ್ವಮೇವ ಮಯೋಕ್ತಸ್ತೇ ಕಾಲಸ್ತು ಯುಗಸಂಜ್ಞಿತಃ ॥ ೬ ॥**

**ಕೃತಂ ತ್ರೇತಾ ದ್ವಾಪರಂಚ ಯುಗಾದಿಃ ಕಲಿನಾ ಸಹ ।**
**ಪರಿವರ್ತಮಾನೈಸ್ತೈರೇವ ಭ್ರಮಮಾಣೇಷು ಚಕ್ರವತ್ ॥ ೭ ॥**

---

೩. ಆ ಓಂಕಾರರೂಪವಾದ ಪ್ರಣವದಿಂದ ಮತ್ತು ಅನೇಕ ದೇವತೆಗಳು ಉತ್ಪನ್ನರಾಗಿರುವರು. ಯಾರು ದೇವತೆಗಳಿಗೂ ಶ್ರೇಷ್ಠರಾಗಿರುವರೋ ಅಂತಹ ಚತುರ್ದಶಮಹಾತ್ಮರೂ ಕೂಡ ಆ ಅಕ್ಷರಗಳಿಂದಲೇ ಉತ್ಪನ್ನರಾದರು.

೪ ಸರ್ವಾಂತರ್ಯಾಮಿಯೂ, ಸರ್ವತ್ರಸಂಚಾರಮಾಡುವವನೂ, ಸರ್ವ ಸಂಬಂಧಗಳನ್ನು ತಿಳಿದವನೂ ಆದ ಭಗವಂತನು ಲೋಕಗಳಿಗೆ ಅನುಗ್ರಹವನ್ನು ಮಾಡುವುದಕ್ಕಾಗಿ ಆದಿಮಧ್ಯಾಂತನಾಮಕನಾಗಿರುವನು

೫. ದೇವದೇವನೂ, ಅಕ್ಷರಶಬ್ದವಾಚ್ಯನೂ ಆದ ಮಹೇಶ್ವರನಿಂದ ಸಪ್ತರ್ಷಿಗಳೂ, ಇಂದ್ರಾದಿದೇವತೆಗಳೂ, ಪಿತೃದೇವತೆಗಳೂ ಮತ್ತು ಸಮಸ್ತದೇವತೆಗಳೂ ಪ್ರಾದುರ್ಭೂತರಾದರು.

೬. ನಾನು ನಿಮಗಾಗಿ ಪೂರ್ವದಲ್ಲಿಯೇ ನಿರೂಪಿಸಿದ್ದ ಕಾಲರೂಪಿಯೂ, ಯುಗನಾಮಕನೂ ಆದ ಪರಮೇಶ್ವರನು ಈ ಲೋಕದಲ್ಲಿ ಸಕಲೇಷ್ಟಾರ್ಥಗಳನ್ನು ಕೊಡುವವನೂ, ಪರದಲ್ಲಿ ಪರಮಪದವಿಯ ದಾಯಕನೂ ಆಗಿರುವನು.

೭. ಕೃತ, ತ್ರೇತಾ, ದ್ವಾಪರ, ಕಲಿಯೆಂಬ ನಾಲ್ಕುಯುಗಗಳು ಚಕ್ರಾಕಾರವಾಗಿ ಸುತ್ತುತ್ತವೆ. ಆಗ ಹಿಂದೆ ಹುಟ್ಟಿದ್ದ ದೇವತೆಗಳು, ಋಷಿಗಳು ಇವರೇ ಮೊದಲಾದವರೂ ಕೂಡ ಪುನಃ ಪುನಃ ಹುಟ್ಟುವರು.

ದೇವತಾಸ್ತು ತದೋದ್ವಿಗ್ನಾಃ ಕಾಲಸ್ಯ ವಶಮಾಗತಾಃ ।
ನ ಶಕ್ನುವಂತಿ ತನ್ಮಾನಂ ಸಂಸ್ಥಾಪಯಿತುಮಾತ್ಮನಾ ॥ ೮ ॥

ತದಾ ತೇ ವಾಗ್ಯತಾ ಭೂತ್ವಾ ಆದೌ ಮನ್ವಂತರಸ್ಯ ವೈ ।
ಋಷಯಶ್ಚೈವ ದೇವಾಶ್ಚ ಇಂದ್ರಶ್ಚೈವ ಮಹಾತಪಾಃ ॥ ೯ ॥

ಸಮಾಧಾಯ ಮನಸ್ತೀವ್ರಂ ಸಹಸ್ರಂಪರಿವತ್ಸರಾನ್ ।
ಪ್ರಪನ್ನಾಸ್ತೇ ಮಹಾದೇವಂ ಭೀತಾಃ ಕಾಲಸ್ಯ ವೈ ತದಾ ॥ ೧೦ ॥

ಅಯಂ ಹಿ ಕಾಲೋ ದೇವೇಶಶ್ಚತುರ್ಮೂರ್ತಿಶ್ಚತುರ್ಮುಖಃ ।
ಕೋಽಸ್ಯ ವಿದ್ಯಾನ್ಮಹಾದೇವ ಅಗಾಧಸ್ಯ ಮಹೇಶ್ವರ ॥ ೧೧ ॥

ಅಥ ದೃಷ್ಟ್ವಾ ಮಹಾದೇವಸ್ತಂ ತು ಕಾಲಂ ಚತುರ್ಮುಖಂ ।
ನ ಭೇತವ್ಯಮಿತಿ ಪ್ರಾಹ ಕೋ ವಃ ಕಾಮಃ ಪ್ರದೀಯತಾಂ ॥ ೧೨ ॥

---

೮. ಆಗ ಖಿನ್ನರಾದ ದೇವತೆಗಳು ಆ ಕಾಲಗಳಿಗೆ ಅಧೀನರಾಗಿ ಪುನಃ ಪುನಃ ಜನನಮರಣಗಳನ್ನು ಹೊಂದುವರು. ಮತ್ತು ಅವರ ಆ ಕಾಲವನ್ನು ಸ್ಥಿರವಾಗಿ ಸ್ಥಾಪಿಸಲು ಎಷ್ಟು ಪ್ರಯತ್ನಮಾಡಿದರೂ ಸಾಧ್ಯವಾಗಲಿಲ್ಲ.

೯-೧೦. ಋಷಿಗಳೂ, ಇಂದ್ರಾದಿದೇವತೆಗಳೂ ಕೂಡಿ ಆ ಮನ್ವಂತರದ ಆದಿಯಲ್ಲಿ ನಿಯಮಿತರೂ, ಸಮಾಹಿತಚಿತ್ತರೂ, ಕಾಲದಿಂದ ಭೀತರೂ ಆಗಿ ಒಂದು ಸಹಸ್ರವರ್ಷಗಳವರೆಗೂ ತಪಸ್ಸನ್ನುಮಾಡಿ ಮಹಾದೇವನನ್ನು ಮೊರೆಹೊಕ್ಕರು.

೧೧. ಮಹಾದೇವನೂ, ಪರಮೇಶನೂ ಆದ ಎಲೈ ದೇವನೇ, ಚತುರ್ಮೂರ್ತಿಯೂ, ಚತುರ್ಮುಖನೂ ಆದ ಈ ಕಾಲಪುರಷನು ಯಾವನು? ನಿನ್ನನ್ನು ಬಿಟ್ಟರೆ ಈ ಕಾಲಪುರುಷನ ಮಹಿಮೆಗಳನ್ನು ಸಾಂಗವಾಗಿ ತಿಳಿಯತಕ್ಕವರು ಯಾರಿರುವರು. ಈ ಕಾಲರೂಪವನ್ನು ತಿಳಿಸಬೇಕೆಂದು ದೇವತೆಗಳು ದೇವನನ್ನು ಪ್ರಾರ್ಥಿಸಿದರು.

೧೨. ಅನಂತರ ಮಹಾದೇವನು ನಾಲ್ಕುಮುಖಗಳಿರುವ ಕಾಲಪುರುಷನನ್ನು ನೋಡಿ ನೀವು ಹೆದರಬೇಡಿ ಹೀಗೆ ಘೋರವಾದ ತಪಸ್ಸನ್ನು ದೀರ್ಘಕಾಲಮಾಡಲು ಕಾರಣವೇನು, ನಿಮ್ಮ ಕೋರಿಕೆಗಳಾವುವು ಎಂದನು.

ತತ್ಕರಿಷ್ಯಾಮ್ಯಹಂ ಸರ್ವಂ ನ ವೃಥಾಯಂ ಪರಿಶ್ರಮಃ ।
ಉವಾಚ ದೇವೋ ಭಗವಾನ್ ಸ್ವಯಂಕಾಲಃ ಸದುರ್ಜಯಃ ॥ ೧೩ ॥

ಯದೇತಸ್ಯ ಮುಖಂ ಶ್ವೇತಂ ಚತುರ್ಜಿಹ್ವಂ ಹಿ ಲಕ್ಷ್ಯತೇ ।
ಏತತ್ ಕೃತಯುಗಂ ನಾಮ ತಸ್ಯ ಕಾಲಸ್ಯ ವೈ ಮುಖಂ ॥
ಅಸೌ ದೇವಃ ಸುರಶ್ರೇಷ್ಠೋ ಬ್ರಹ್ಮಾ ವೈವಸ್ವತೋ ಮುಖಃ ॥ ೧೪ ॥

ಯದೇತದ್ರಕ್ತವರ್ಣಾಭಂ ತೃತೀಯಂ ವಃ ಸ್ಮೃತಂ ಮಯಾ ।
ತ್ರಿಜಿಹ್ವಂ ಲೇಲಿಹಾನಂ ತು ಏತತ್ ತ್ರೇತಾಯುಗಂ ದ್ವಿಜಾಃ ॥ ೧೫ ॥

ಅತ್ರ ಯಜ್ಞಪ್ರವೃತ್ತಿಸ್ತು ಜಾಯತೇ ಹಿ ಮಹೇಶ್ವರಾತ್ ।
ತತೋಽತ್ರ ಇಜ್ಯತೇ ಯಜ್ಞಸ್ತಿಸ್ರೋ ಜಿಹ್ವಾಸ್ತ್ರಯೋಽಗ್ನಯಃ ॥
ಇಷ್ಟ್ವಾ ಚೈವಾಗ್ನಯೋ ವಿಪ್ರಾಃ ಕಾಲಜಿಹ್ವಾ ಪ್ರವರ್ತತೇ ॥ ೧೬ ॥

---

೧೩. ಎಲೈ ದೇವತೆಗಳೇ, ನಾನು ನಿಮ್ಮ ಅಭೀಷ್ಟಗಳನ್ನು ನೆರವೇರಿಸುವೆನು. ನಿಮ್ಮ ಈ ಶ್ರಮವು ವ್ಯರ್ಥವಾಗುವುದಿಲ್ಲ. ಈ ಕಾಲಪುರುಷನನ್ನು ಜಯಿಸಲು ಯಾರಿಗೂ ಸಾಧ್ಯವಿಲ್ಲವೆಂದು ಮಹಾದೇವನು ಹೇಳಿದನು.

೧೪. ಯಾರ ಮುಖವು ಶುಭ್ರವಾಗಿಯೂ. ನಾಲ್ಕು ನಾಲಿಗೆಗಳಿಂದ ಸಹಿತವಾಗಿಯೂ ಇದೆಯೋ ಅವನೇ ಕೃತಯುಗಪುರುಷನು. ಆ ಕಾಲಪುರುಷನ ಮುಖವೇ ಹೀಗಿರುವುದು. ಈ ದೇವನೇ ಸುರೇಶನೂ, ವೈವಸ್ವತಬ್ರಹ್ಮನೂ, ಪ್ರಮುಖನೂ ಆಗಿರುವನು

೧೫. ಎಲೈ ವಿಪ್ರರೇ, ಯಾವನ ಮುಖವು ಕೆಂಪಗೂ, ಮೂರನೆಯದೂ, ಮೂರು ನಾಲಿಗೆಗಳಿಂದ ಕೂಡಿಯೂ, ಭಯಂಕರವಾಗಿಯೂ ಇದೆಯೋ, ಅವನೇ ತ್ರೇತಾಯುಗಪುರುಷನು.

೧೬. ಈ ತ್ರೇತಾಯುಗದಲ್ಲಿ ಯಜ್ಞಗಳು ಮಹೇಶ್ವರನಿಂದ ಉಂಟಾಗುತ್ತವೆ. ಆ ಯಾಗಗಳಿಂದ ಮಹೇಶ್ವರನೇ ಪೂಜಿಸಲ್ಪಡುತ್ತಾನೆ. ಆ ಯಜ್ಞಪುರುಷನಿಗಿರುವ ಮೂರು ನಾಲಿಗೆಗಳು ತ್ರೇತಾಗ್ನಿ, ಗಾರ್ಹಪತ್ಯಾಗ್ನಿ, ಆಹವನೀಯಾಗ್ನಿ ಎಂದು ಮೂರುವಿಧಗಳಾಗಿ ಆದುವು ಹೀಗೆ ಬ್ರಾಹ್ಮಣರು ಮೂರುವಿಧ ಅಗ್ನಿಗಳಲ್ಲಿ ಹೋಮಗಳನ್ನು ಮಾಡಿದರೆ ಕಾಲಪುರುಷನು ಈ ಜಿಹ್ವಾಮೂಲಕವಾಗಿ ಆ ಆಹುತಿಗಳನ್ನು ಸ್ವೀಕರಿಸುವನು.

ಯದೇತದ್ವೈ ಮುಖಂ ಭೀಮಂ ದ್ವಿಜಿಹ್ವಂ ರಕ್ತಪಿಂಗಲಂ ।
ದ್ವಿಪಾದ್ರೋತ್ರ ಭವಿಷ್ಯಾಮಿ ದ್ವಾಪರಂ ನಾಮ ತದ್ಯುಗಂ ॥ ೧೭ ॥

ಯದೇತತ್ ಕೃಷ್ಣವರ್ಣಾಭಂ ತುರೀಯಂ ರಕ್ತಲೋಚನಂ ।
ಏಕಜಿಹ್ವಂ ಪೃಥುಶ್ಯಾಮಂ ಲೇಲಿಹಾನಂ ಪುನಃ ಪುನಃ ॥ ೧೮ ॥

ತತಃ ಕಲಿಯುಗಂ ಘೋರಂ ಸರ್ವಲೋಕಭಯಂಕರಂ ।
ಕಲ್ಪಸ್ಯ ತು ಮುಖಂ ಹ್ಯೇತಚ್ಚತುರ್ಥಂ ನಾಮ ಭೀಷಣಂ ॥ ೧೯ ॥

ನ ಮುಖಂ ನಾಪಿ ನಿರ್ವಾಣಂ ತಸ್ಮಿನ್ ಭವತಿ ವೈ ಯುಗೇ ।
ಕಾಲಗ್ರಸ್ತಾ ಪ್ರಜಾ ಚಾಪಿ ಯುಗೇ ತಸ್ಮಿನ್ ಭವಿಷ್ಯತಿ ॥ ೨೦ ॥

ಬ್ರಹ್ಮಾ ಕೃತಯುಗೇ ಪೂಜ್ಯಸ್ತ್ರೇತಾಯಾಂ ಯಜ್ಞ ಉಚ್ಯತೇ ।
ದ್ವಾಪರೇ ಪೂಜ್ಯತೇ ವಿಷ್ಣುರಹಂ ಪೂಜ್ಯಶ್ಚತುರ್ಷ್ವಪಿ ॥ ೨೧ ॥

---

೧೭. ಯಾವನ ಮುಖವು ರಕ್ತ ಮತ್ತು ಕಂದುಬಣ್ಣವುಳ್ಳದ್ದಾಗಿಯೂ, ಎರಡು ಜಿಹ್ವೆಯುಳ್ಳದ್ದಾಗಿಯೂ ಇವೆಯೋ ಮತ್ತು ಯಾವನಿಗೆ ಇರಡುಕಾಲು ಗಳಿವೆಯೋ ಅವನೇ ದ್ವಾಪರಪುರುಷನಾಗಿರುವನು.

೧೮. ಯಾವನ ನೇತ್ರವು ಕೆಂಪಗೂ, ಮುಖವು ಕರ್ರಗೂ, ನಾಲಿಗೆಯು ಕಪ್ಪಗೂ, ಉದ್ದವಾಗಿಯೂ, ಅತಿ ಚಂಚಲವೂ ಆಗಿವೆಯೋ ಅವನೇ ನಾಲ್ಕನೆಯ ಕಲಿಪುರುಷನು.

೧೯. ಸರ್ವಲೋಕಭಯಂಕರವೂ, ಚತುರ್ಥವೂ, ಭೀಷಣವೂ, ಘೋರ ರೂಪಿಯೂ ಆದ ಈ ಕಲಿಯುಗವೇ ಕಲ್ಪಗಳಿಗೆ ಆದಿಯಾಗಿದೆ.

೨೦. ಆ ಕಲಿಯುಗದಲ್ಲಿ ಯಜ್ಞಯಾಗಗಳೂ, ಸ್ವರ್ಗಮೋಕ್ಷಗಳೂ ಇಲ್ಲ. ಆ ಯುಗದಲ್ಲಿ ಪ್ರಜೆಗಳು ಕಾಲಾಧೀನರಾಗಿ ಅತ್ಯಂತ ಪೀಡಿತರಾಗುವರು.

೨೧. ಕೃತಯುಗದಲ್ಲಿ ಬ್ರಹ್ಮನೂ, ತ್ರೇತಾಯುಗದಲ್ಲಿ ಯಜ್ಞವೂ, ದ್ವಾಪರ ಯುಗದಲ್ಲಿ ವಿಷ್ಣುವೂ, ನಾನು ನಾಲ್ಕು ಯುಗಗಳಲ್ಲಿಯೂ ಪೂಜ್ಯನೂ ಆಗಿರುತ್ತೇವೆ.

ಬ್ರಹ್ಮಾ ವಿಷ್ಣುಶ್ಚ ಯಜ್ಞಶ್ಚ ಕಾಲಸ್ಯೈವ ಕಲಾಸ್ತ್ರಯಃ ।
ಸರ್ವೇಷ್ವೇಹ ಹಿ ಕಾಲೇಷು ಚತುರ್ಮೂರ್ತಿರ್ಮಹೇಶ್ವರಃ ॥ ೨೨ ॥

ಅಹಂ ಜನೋ ಜನಯಿತಾ ವಃ ಕಾಲಃ ಕಾಲಪ್ರವರ್ತಕಃ ।
ಯುಗಕರ್ತಾ ತಥಾ ಚೈವ ಪರಂ ಪರಪರಾಯಣಃ ॥ ೨೩ ॥

ತಸ್ಮಾತ್ ಕಲಿಯುಗಂ ಪ್ರಾಪ್ಯ ಲೋಕಾನಾಂ ಹಿತಕಾರಣಾತ್ ।
ಅಭಯಾರ್ಥಂ ಚ ದೇವಾನಾಮುಭಯೋರ್ಲೋಕಯೋರಪಿ ॥ ೨೪ ॥

ತದಾ ಭವ್ಯಶ್ಚ ಪೂಜ್ಯಶ್ಚ ಭವಿಷ್ಯಾಮಿ ಸುರೋತ್ತಮಾಃ ।
ತಸ್ಮಾದ್ಭಯಂ ನ ಕಾರ್ಯಂ ಚ ಕಲಿಂ ಪ್ರಾಪ್ಯ ಮಹೌಜಸಃ ॥ ೨೫ ॥

ಏವಮುಕ್ತಾಸ್ತತಃ ಸರ್ವಾ ದೇವತಾ ಋಷಿಭಿಃ ಸಹ ।
ಪ್ರಣಮ್ಯ ಶಿರಸಾ ದೇವಂ ಪುನರೂಚುರ್ಜಗತ್ಪತಿಂ ॥ ೨೬ ॥

---

೨೨. ಬ್ರಹ್ಮ, ವಿಷ್ಣು, ಯಜ್ಞವೆಂಬ ಈ ಮೂರೂ ಕಾಲದ ಕಲೆಯಾಗಿರುತ್ತವೆ. ಈ ಕೃತ, ತ್ರೇತಾ, ದ್ವಾಪರ, ಕಲಿಯೆಂಬ ನಾಲ್ಕು ಕಾಲಗಳಲ್ಲಿ ಚತುರ್ಮೂರ್ತಿಯಾದ ನಾನೇ ಪೂಜ್ಯನಾಗಿರುವೆನೆಂದು ಈಶ್ವರನು ದೇವತೆಗಳಿಗೆ ಹೇಳಿದನು.

೨೩. ನಾನೇ ಸಕಲಲೋಕಗಳನ್ನೂ ನಿಮ್ಮನ್ನೂ ಸೃಷ್ಟಿಮಾಡಿರುತ್ತೇನೆ. ನಾನೇ ಸೃಷ್ಟಿಕರ್ತನೂ, ಕಾಲರೂಪಿಯೂ ಕಾಲಪ್ರವರ್ತಕನೂ. ಯುಗಕರ್ತನೂ, ಮತ್ತು ಮುಖ್ಯವಾದ ಆಶ್ರಯನೂ ಆಗಿರುತ್ತೇನೆ.

೨೪-೨೫. ಎಲೈ ದೇವೋತ್ತಮರಾದ ದೇವತೆಗಳಿರಾ, ಪ್ರಜೆಗಳ ಹಿತಾಕಾಂಕ್ಷೆಯಿಂದ ನಾನು ಕಲಿಯುಗದಲ್ಲಿ ಅವತರಿಸಿ, ದೇವಾದಿಗಳಿಗೆ ಐಹಿಕಪಾರತ್ರಿಕವಾದ ಉಭಯ ವಿಧ ಸುಖಗಳನ್ನು ಕೊಡಲು ಇಚ್ಛೆಯಿಂದ ಭವ್ಯನೂ, ಪೂಜ್ಯನೂ, ಆಗುತ್ತೇನೆ. ಆದುದರಿಂದ ನೀವು ಹೆದರಬೇಕಾಗಿಲ್ಲವೆಂದು ಈಶ್ವರನು ಹೇಳಿದನು.

೨೬. ಹೀಗೆ ಪರಮೇಶ್ವರನು ಹೇಳಲಾಗಿ, ಅನಂತರ ದೇವತೆಗಳು ಋಷಿಗಳೊಡನೆ ಕೂಡಿ ಜಗತ್ಪತಿಯಾದ ಪರಮೇಶ್ವರನಿಗೆ ಸಾಷ್ಟಾಂಗನಮಸ್ಕಾರಗಳನ್ನು ಮಾಡಿ ಇಂತೆಂದರು.

॥ ದೇವರ್ಷಯ ಊಚುಃ ॥

ಮಹಾತೇಜಾ ಮಹಾಕಾಯೋ ಮಹಾವೀರ್ಯೋ ಮಹಾದ್ಯುತಿಃ ।
ಭೀಷಣಃ ಸರ್ವಭೂತಾನಾಂ ಕಥಂ ಕಾಲಶ್ಚತುರ್ಮುಖಃ ॥ ೨೭ ॥

॥ ಮಹಾದೇವ ಉವಾಚ ॥

ಏಷ ಕಾಲಶ್ಚತುರ್ಮೂರ್ತಿಶ್ಚತುರ್ದಂಷ್ಟ್ರಶ್ಚತುರ್ಮುಖಃ ।
ಲೋಕಸಂರಕ್ಷಣಾರ್ಥಾಯ ಅತಿಕ್ರಾಮತಿ ಸರ್ವಶಃ ॥ ೨೮ ॥

ನಾಸಾಧ್ಯಂ ವಿದ್ಯತೇ ಚಾಸ್ಯ ಸರ್ವಸ್ಮಿನ್ ಸಚರಾಚರೇ ।
ಕಾಲಃ ಸೃಜತಿ ಭೂತಾನಿ ಪುನಃ ಸಂಹರತಿ ಕ್ರಮಾತ್ ॥ ೨೯ ॥

ಸರ್ವೇ ಕಾಲಸ್ಯ ವಶಗಾ ನ ಕಾಲಃ ಕಸ್ಯಚಿದ್ವಶೇ ।
ತಸ್ಮಾತ್ತು ಸರ್ವಭೂತಾನಿ ಕಾಲಃ ಕಲಯತೇ ಸದಾ ॥ ೩೦ ॥

---

೨೭. ದೇವತೆಗಳೂ ಮತ್ತು ಋಷಿಗಳೂ ಇಂತೆಂದರು :–ಮಹಾತೇಜಸ್ವಿಯೂ ಮಹಾಕಾಯನೂ, ಮಹಾಪರಾಕ್ರಮಿಯೂ, ಮಹಾಕಾಂತಿವಂತನೂ, ಸರ್ವಭೂತಗಳಿಗೂ ಭಯಂಕರನೂ, ಆದ ಚತುರ್ಮುಖನು ಹೇಗೆ ಕಾಲಪುರುಷನಾದನು? ಇದನ್ನು ತಿಳಿಸಬೇಕೆಂದು ದೇವತೆಗಳು ಮಹಾದೇವನನ್ನು ಪ್ರಾರ್ಥಿಸಿದರು.

೨೮. ಮಹಾದೇವನು ಹೇಳಿದನು:-ಈ ಕಾಲಪುರುಷನು ಚತುರ್ಮೂರ್ತಿಯೂ ನಾಲ್ಕು ದಂತಗಳುಳ್ಳವನೂ, ಚತುರ್ಮುಖನೂ, ಆಗಿ ಲೋಕಗಳನ್ನು ಸಂರಕ್ಷಣೆ ಮಾಡುವುದಕ್ಕೋಸ್ಕರ ಸರ್ವವನ್ನೂ ಸಂಪೂರ್ಣವಾಗಿ ಅತಿಕ್ರಮಿಸಿರುವನು.

೨೯-೩೦. ಅಂಥ ಕಾಲಪುರುಷನಿಗೆ ಚರಾಚರಾತ್ಮಕವಾದ ಸರ್ವ ಪ್ರಪಂಚದಲ್ಲಿಯೂ, ಅಸಾಧ್ಯವಾದ ವಿಷಯವು ಯಾವುದೂ ಇಲ್ಲ. ಅವನೇ ಸರ್ವಭೂತಗಳ ಸೃಷ್ಟಿಸಂಹಾರಗಳನ್ನು ಮಾಡುವವನು, ಹೀಗೆ ಸರ್ವರೂ ಕಾಲಕ್ಕೆ ಅಧೀನರಾಗಿರುವರು. ಆ ಕಾಲಪುರುಷನು ಯಾರ ಅಧೀನದಲ್ಲಿಯೂ ಇರುವುದಿಲ್ಲ. ಆದುದರಿಂದ ಕಾಲಪುರುಷನೇ ಸರ್ವಕಾಲದಲ್ಲಿಯೂ ಸರ್ವಭೂತಗಳನ್ನೂ ಭಕ್ಷಿಸುವನೆಂದು ಈಶ್ವರನು ಹೇಳಿದನು.

ವಿಕ್ರಮಸ್ಯ ಪದಾನ್ಯಸ್ಯ ಪೂರ್ವೋಕ್ತಾನ್ಯೇಕಸಪ್ತತಿಃ ।
ತಾನಿ ಮನ್ವಂತರಾಣೀಹ ಪರಿವೃತ್ತ್ಯಯುಗಕ್ರಮಾತ್ ॥ ೩೧ ॥

ಏಕಂ ಪದಂ ಪರಿಕ್ರಮ್ಯ ಪಾದಾನಾಮೇಕಸಪ್ತತಿಃ ।
ಯದಾ ಕಾಲಃ ಪ್ರಕ್ರಮತೇ ತದಾ ಮನ್ವಂತರಕ್ಷಯಃ ॥ ೩೨ ॥

ಏವಮುಕ್ತ್ವಾ ತು ಭಗವಾನ್ ದೇವರ್ಷಿಪಿತೃದಾನವಾನ್ ।
ನಮಸ್ಕೃತಶ್ಚ ತೈಃ ಸರ್ವೈಸ್ತತ್ರೈವಾಂತರಧೀಯತ ॥ ೩೩ ॥

ಏವಂ ಸ ಕಾಲೇ ಭಗವಾನ್ ದೇವರ್ಷಿಪಿತೃದಾನವಾನ್ ।
ಪುನಃ ಪುನಃ ಸಂಹರತೇ ಸೃಜತೇ ಚ ಪುನಃ ಪುನಃ ॥ ೩೪ ॥

ಅತೋ ಮನ್ವಂತರೇ ಚೈವ ದೇವರ್ಷಿ ಪಿತೃದಾನವೈಃ ।
ಪೂಜ್ಯತೇ ಭಗವಾನೀಶೋ ಭಯಾತ್ ಕಾಲಸ್ಯ ತಸ್ಯ ವೈ ॥ ೩೫ ॥

---

೩೧. ಮಹಾಶೂರನಾದ ಭಗವಂತನ ಹಿಂದೆ ಹೇಳಿರುವ ಕ್ರಮದಲ್ಲಿ ಹೆಜ್ಜೆಗಳು ಎಪ್ಪತ್ತೊಂದು ಇವೆ. ಅವು ಯುಗಾನುಸಾರವಾಗಿ ಎಪ್ಪತ್ತೊಂದು ಮನ್ವಂತರಗಳಾಗಿ ಪರಿಣಾಮವಾಗುತ್ತವೆ.

೩೨. ಹೀಗೆ ಪ್ರತಿಯೊಂದು ಹೆಜ್ಜೆಗಳೂ ಒಂದೊಂದು ಚತುರ್ಯುಗವಾಗಿ ಪರಿಣಮಿಸುತ್ತವೆ. ಒಟ್ಟು ಎಪ್ಪತ್ತೊಂದು ಚತುರ್ಯುಗಗಳಿವೆ ಈ ಎಪ್ಪತ್ತೊಂದು ಚತುರ್ಯುಗಗಳು ಕಳೆದರೆ ಒಬ್ಬ ಮನುವಿನ ಕಾಲವು ಕಳೆಯುವುದು. ಹೀಗೆ ಒಬ್ಬ ಮನುವಿಗೆ ೭೧ ಚತುರ್ಯುಗಗಳ ಕಾಲವು ಕ್ಲಿಪ್ತವಾಗಿದೆ. ಇಷ್ಟು ಕಾಲವು ಕಳೆದರೆ ಬೇರೊಬ್ಬ ಮನುವು ಬರುವನು.

೩೩. ಪರಮೇಶ್ವರನು ಹೀಗೆ ಹೇಳಿ, ದೇವತೆಗಳು, ಋಷಿಗಳು, ದಾನವರು, ಪಿತೃಗಳು, ಇವರಿಂದ ನಮಸ್ಕರಿಸಲ್ಪಟ್ಟು ಅಲ್ಲಿಯೇ ಮಾಯವಾದನು.

೩೪. ಹೀಗೆ ಭಗವಂತನು ಕಾಲಾನುಸಾರವಾಗಿ ದೇವತೆಗಳು ಋಷಿಗಳು, ದಾನವರು ಇವರೇ ಮೊದಲಾದವರನ್ನು ಪುನಃ ಪುನಃ ಸೃಷ್ಟಿಸಂಹಾರಗಳನ್ನು ಮಾಡುತ್ತಾನೆ

೩೫. ಆದುದರಿಂದ ಮನ್ವಂತರಗಳಲ್ಲಿ ದೇವರ್ಷಿಪಿತೃದಾನವರು ಕಾಲದ ಭಯದಿಂದ ಪೂಜ್ಯನಾದ ಈಶ್ವರನನ್ನು ಪೂಜಿಸುತ್ತಾರೆ.

ತಸ್ಮಾತ್ ಸರ್ವಪ್ರಯತ್ನೇನ ಕಲೌ ಕುರ್ಯಾತ್ತಪೋ ದ್ವಿಜಃ ।
ಪ್ರಸನ್ನಸ್ಯ ಮಹಾದೇವಂ ತಸ್ಯ ಪುಣ್ಯಫಲಂ ಮಹತ್ ॥
ತಸ್ಮಾದ್ದೇವಾ ದಿವಂ ಗತ್ವಾ ಅವತೀರ್ಯ ಚ ಭೂತಲೇ ॥ ೩೬ ॥

ಋಷಯಶ್ಚೈವ ದೇವಾಶ್ಚ ಕಲಿಂ ಪ್ರಾಪ್ಯ ಸುದಾರುಣಂ ।
ತಪ ಇಚ್ಛಂತಿ ಭೂಯಿಷ್ಠಂ ಕರ್ತುಂ ಧರ್ಮಪರಾಯಣಾಃ ॥
ಅವತಾರಾನ್ ಕಲಿಂ ಪ್ರಾಪ್ಯ ಕರೋತಿ ಚ ಪುನಃ ಪುನಃ ॥ ೩೭ ॥

ಏವಂ ಕಾಲಾಂತರೇ ಸರ್ವೇ ಯೇಽತೀತಾ ವೈ ಸಹಸ್ರಶಃ ।
ವೈವಸ್ವತೇಽಂತರೇ ತಸ್ಮಿನ್ ದೇವರಾಜರ್ಷಯಸ್ತಥಾ ॥ ೩೮ ॥

ದೇವಾಪಿಃ ಪೌರವೋ ರಾಜಾ ಮನುಶ್ಚೇಕ್ಷ್ವಾಕುವಂಶಜಾಃ ।
ಮಹಾಯೋಗಬಲೋಪೇತಾಃ ಕಾಲಾಂತರಮುಪಾಸತೇ ॥ ೩೯ ॥

---

೩೬. ಆದ್ದರಿಂದ ದ್ವಿಜರು ಕಲಿಯುಗದಲ್ಲಿ ಸರ್ವಪ್ರಯತ್ನದಿಂದಲೂ ತಪಸ್ಸಿನ ಮೂಲಕ ಈಶ್ವರನನ್ನು ಆರಾಧಿಸಬೇಕು. ಹೀಗೆ ಈಶ್ವರನು ಪ್ರೀತನಾದರೆ ಮಹಾ ಫಲ ಪ್ರಾಪ್ತಿಯಾಗುವುದು. ಆ ಪುಣ್ಯವಿಶೇಷದಿಂದ ದೇವತೆಗಳು ಸ್ವರ್ಗಲೋಕವನ್ನು ಹೊಂದಿ ಆ ಪುಣ್ಯವು ಕ್ಷಯಿಸಲು ಭೂಮಿಯಲ್ಲಿ ಪುನಃ ಜನಿಸುವರು.

೩೭. ಹೀಗೆ ಕಲಿಯುಗದಲ್ಲಿ ಜನಿಸಿದ ಋಷಿಗಳು ದೇವತೆಗಳು ಇವರೇ ಮೊದಲಾದವರು ಅತಿ ಭಯಂಕರವಾದ ಕಲಿಯುಗದಲ್ಲಿ ಹುಟ್ಟಿ, ಧರ್ಮಪರಾಯಣ ರಾಗಿ ಕಲಿಯುಗವೆಂದು ತಿಳಿದು ಅತ್ಯಂತವಾಗಿ ತಪಸ್ಸುಗಳನ್ನು ಮಾಡಲು ಪ್ರಯತ್ನ ವನ್ನು ಮಾಡುವರು

೩೮. ಹೀಗೆ ಹಿಂದಿನ ಮನ್ವಂತರದಲ್ಲಿ ಯಾವ ಸಹಸ್ರಾರು ದೇವಾದಿಗಳು ಹುಟ್ಟಿ ಕಾಲವಶರಾಗಿದ್ದರೋ ಪುನಃ ವೈವಸ್ವತಮನ್ವಂತರವು ಪ್ರಾಪ್ತವಾಗಲು ಆ ದೇವತೆಗಳು ಋಷಿಗಳೇ ಮೊದಲಾದವರು ಪುನಃ ಅವತರಿಸುವರು.

೩೯. ಆಗ ಪುರುವಂಶೋತ್ಪನ್ನನಾದ ದೇವಾಪಿಯೆಂಬ ರಾಜನೂ, ಮನುವೂ, ಇಕ್ಷ್ವಾಕುವಂಶದಲ್ಲಿ ಹುಟ್ಟಿದ ಮಹಾಯೋಗಬಲದಿಂದ ಕೂಡಿದ ಇತರ ರಾಜರೂ ಜನಿಸಿದರು.

ಕ್ಷೀಣೇ ಕಲಿಯುಗೇ ತಸ್ಮಿಂಸ್ತಿಷ್ಯೇ ತ್ರೇತಾಯುಗೇ ಕೃತೇ ।
ಸಪ್ತರ್ಷಿಭಿಶ್ಚೈವ ಸಾರ್ಧಂ ಭಾವ್ಯೇ ತ್ರೇತಾಯುಗೇ ಪುನಃ ॥
ಗೋತ್ರಾಣಾಂ ಕ್ಷತ್ರಿಯಾಣಾಂ ಚ ಭವಿಷ್ಯಾಸ್ತೇ ಪ್ರಕೀರ್ತಿತಾಃ ॥ ೪೦ ॥

ದ್ವಾಪರಾಂತೇ ಪ್ರತಿಷ್ಠಂತೇ ಕ್ಷತ್ರಿಯಾ ಋಷಿಭಿಃ ಸಹ ।
ಕೃತೇ ತ್ರೇತಾಯುಗೇ ಚೈವ ತಥಾ ಕ್ಷೀಣೇ ಚ ದ್ವಾಪರೇ ॥
ನರಾಃ ಪಾತಕಿನೋ ಯೇ ವೈ ವರ್ತಂತೇ ತೇ ಕಲೌ ಸ್ಮೃತಾಃ ॥ ೪೧ ॥

ಮನ್ವಂತರಾಣಾಂ ಸಪ್ತಾನಾಂ ಸಂತಾನಾರ್ಥಾ ಶ್ರುತಿಃ ಸ್ಮೃತಿಃ ।
ಏವಮೇತೇಷು ಸರ್ವೇಷು ಯುಗಕ್ಷಯಕ್ರಮಸ್ತಥಾ ॥ ೪೨ ॥

ಪರಸ್ಪರಂ ಯುಗಾನಾಂ ಚ ಬ್ರಹ್ಮಕ್ಷತ್ರಸ್ಯ ಚೋದ್ಭವಃ ।
ಯಥಾ ವೈ ಪ್ರಕೃತಿಸ್ತೇಭ್ಯಃ ಪ್ರವೃತ್ತಾನಾಂ ಯಥಾ ಕ್ಷಯಂ ॥ ೪೩ ॥

---

೪೦. ಆ ಕಲಿಯುಗವು ಕ್ಷಯವಾಗಲು ತಿಷ್ಯಮನ್ವಂತರದ ತ್ರೇತಾಯುಗದಲ್ಲಿ ಆ ದೇವತೆಗಳು ಸಪ್ತರ್ಷಿಗಳೊಡನೆ ಜನಿಸಿದರು. ಹಾಗೆಯೇ ಮುಂದಿನ ತ್ರೇತಾಯುಗದಲ್ಲಿಯೂ ಕೂಡ ಆ ದೇವತೆಗಳೇ ಪುನಃ ಜನಿಸುವರು. ಹೀಗೆ ಋಷಿಗೋತ್ರದವರೂ ಕ್ಷತ್ರಿಯವಂಶೀಕರೂ ಸಹ ಮುಂದೆ ಜನಿಸುವರೆಂಬ ವಿಷಯವೂ ಕೂಡ ಹೇಳಲ್ಪಟ್ಟಿದೆ.

೪೧. ಹೀಗೆ ಕೃತತ್ರೇತಾಯುಗಗಳು ಕ್ಷಯಿಸಲು ದೇವಋಷಿಕ್ಷತ್ರಿಯಾದಿಗಳು ದ್ವಾಪರಯುಗದಲ್ಲಿ ಜನಿಸುವರು. ಆ ದ್ವಾಪರಯುಗವೂ ಸಹ ಕಳೆಯಲಾಗಿ ಕಳೆದುಳಿದ ಪಾಪಿಷ್ಠರಾದಿ ಜನರು ಕಲಿಯುಗದಲ್ಲಿ ಪುನಃ ಜನಿಸುವರೆಂದು ಶ್ರುತಿಗಳಲ್ಲಿ ಮತ್ತು ಸ್ಮೃತಿಗಳಲ್ಲಿ ಉಕ್ತವಾಗಿದೆ.

೪೨. ಸಪ್ತ ಮನ್ವಂತರಗಳಲ್ಲಿಯೂ ದೇವಋಷ್ಯಾದಿಸಂತಾನಗಳು ಆಗುತ್ತವೆಯೆಂದು ಶ್ರುತಿಸ್ಮೃತಿಗಳಲ್ಲಿ ಉಕ್ತವಾಗಿವೆ. ಈ ರೀತಿಯಲ್ಲಿ ಈ ಸಮಸ್ತ ಯುಗಗಳಲ್ಲಿಯೂ ಕೂಡ ಸೃಷ್ಟಿ, ಸ್ಥಿತಿ, ಲಯಗಳುಂಟಾಗುವುವು.

೪೩. ಯುಗಗಳು ಪರಸ್ಪರ ಕಳೆದುಹೋಗಲು ಪೂರ್ವಯುಗದಲ್ಲಿ ಜನಿಸಿದ್ದ ಬ್ರಾಹ್ಮಣಕ್ಷತ್ರಿಯಾದಿಗಳು, ಮುಂದಿನ ಯುಗದಲ್ಲಿಯೂ ಬ್ರಾಹ್ಮಣಕ್ಷತ್ರಿಯವಂಶದಲ್ಲಿ ಜನಿಸುವರು. ಬೀಜಾನುಗುಣವಾಗಿಯೇ ಕಾರ್ಯೋತ್ಪತ್ತಿಯಾಗುವುದು ಸ್ವಾಭಾವಿಕವಾದುದು.

ಜಾಮದಗ್ನ್ಯೇನ ರಾಮೇಣ ಕ್ಷತ್ರೇ ನಿರವಶೇಷಿತೇ ।
ಕ್ರಿಯಂತೇ ಕುಲಟಾಃ ಸರ್ವಾಃ ಕ್ಷತ್ರಿಯೈರ್ವಸುಧಾಧಿಪೈಃ ॥
ದಿವಂಗತಾನಹಂ ತುಭ್ಯಂ ಕೀರ್ತಯಿಷ್ಯೇ ನಿಬೋಧತ ॥ ೪೪ ॥

ಐಡಮಿಕ್ಷ್ವಾಕುವಂಶಸ್ಯ ಪ್ರಕೃತಿಂ ಪರಿಚಕ್ಷತೇ ।
ರಾಜಾನಃ ಶ್ರೇಣಿಬಂಧಾಸ್ತು ತಥಾಽನ್ಯೇ ಕ್ಷತ್ರಿಯಾ ಭುವಿ ॥ ೪೫ ॥

ಐಡವಂಶೇಽಥ ಸಂಭೂತಾ ಯಥಾ ಚೈಕ್ಷ್ವಾಕವೋ ನೃಪಾಃ ।
ತೇಭ್ಯ ಏವ ಶತಂ ಪೂರ್ಣಂ ಕುಲಾನಾಮಭಿಷೇಚಿತಂ ॥ ೪೬ ॥

ತಾವದೇವ ತು ಭೋಜಾನಾಂ ವಿಸ್ತರೋ ದ್ವಿಗುಣಃ ಸ್ಮೃತಃ ।
ಭೋಜಂತು ತ್ರಿಶತಂ ಕ್ಷತ್ರಂ ಚತುರ್ಧಾ ತದ್ಯಥಾದಿಶಂ ॥ ೪೭ ॥

---

೪೪. ಜಮದಗ್ನಿಮಹರ್ಷಿಯ ಪುತ್ರನಾದ ಪರಶುರಾಮನು ಕ್ಷತ್ರಿಯ ವಂಶವನ್ನು ನಿರ್ಮೂಲವಮಾಡಲು ಅವರ ಸ್ತ್ರೀಯರು ನಿರಾಶ್ರಯರಾಗಿ ಅನ್ಯಾಕ್ರಾಂತರಾದರು. ಆಗ ಯಾವ ರಾಜರು ಸ್ವರ್ಗವನ್ನು ಹೊಂದಿದರೊ ಅವರ ವಿಷಯವನ್ನು ನಿಮಗೆ ತಿಳಿಸುವೆನು ಕೇಳೆಂದನು.

೪೫. ಐಡಮಹಾರಾಜನು ಇಕ್ಷ್ವಾಕುವಂಶದ ಮೂಲಪುರುಷನೆಂದು ಹೇಳುತ್ತಾರೆ. ಇತರ ರಾಜರುಗಳೂ ಕೂಡ ಆಯಾ ವಂಶದಲ್ಲಿ ಕ್ರಮವಾಗಿ ಜನಿಸಿದರು.

೪೬. ಐಡಮಹಾರಾಜನವಂಶದಲ್ಲಿ ಇಕ್ಷ್ವಾಕುಕುಲೋತ್ಪನ್ನದಿಂದ ನೂರಾರು ರಾಜರು ಜನಿಸಿ ಪ್ರಖ್ಯಾತಿಹೊಂದಿ ಪಟ್ಟಾಭಿಷಿಕ್ತರಾದರು. ಇದರಿಂದ ಲೋಕವೆಲ್ಲ ಪೂರ್ಣವಾಗಿತ್ತು.

೪೭. ಅದರಂತೆಯೇ ಭೋಜರಾಜವಂಶವೂ ಕೂಡ ಐಡರಾಜನ ವಂಶಕ್ಕೆ ದ್ವಿಗುಣರೀತಿಯಲ್ಲಿ ಪ್ರಖ್ಯಾತಿಹೊಂದಿದೆ. ಆ ಭೋಜವಂಶದಲ್ಲಿ ಮುನ್ನೂರುಜನ ರಾಜರು ಜನಿಸಿ ಚತುರ್ದಿಕ್ಕುಗಳಲ್ಲಿಯೂ ಪ್ರಖ್ಯಾತರಾದರು.

ತೇಷ್ವತೀತಾಸ್ತು ರಾಜಾನೋ ಬ್ರುವತಸ್ತಾನ್ನಿಬೋಧತ ।
ಶತಂ ವೈ ಪ್ರತಿವಿಂಧ್ಯಾನಾಂ ಹೈಹಯಾನಾಂ ತಥಾ ಶತಂ ॥ ೪೮ ॥

ಧಾರ್ತರಾಷ್ಟ್ರಾಸ್ತ್ವೇಕ ಶತಂ ಅಶೀತಿರ್ಜನಮೇಜಯಾಃ ।
ಶತಂ ವೈ ಬ್ರಹ್ಮದತ್ತಾನಾಂ ಕುಲಾನಾಂ ವೀರ್ಯಿಣಾಃ ಶತಂ ॥ ೪೯ ॥

ತತಃ ಶತಂತು ಪೌಲಾನಂ ಶತಂ ಕಾಶಿಕುಶಾದಯಃ ।
ತಥಾಽಪರಂ ಸಹಸ್ರಂತು ಯೇಽತೀತಾಃ ಶಶಬಿಂದವಃ ॥
ಇಜಾನಸ್ತೇಽಶ್ವಮೇಧೈಸ್ತು ಸರ್ವೇ ನಿಯುತದಕ್ಷಿಣೈಃ ॥ ೫೦ ॥

ಏವಂ ಸಂಕ್ಷೇಪತಃ ಪ್ರೋಕ್ತಾ ನ ಶಕ್ಯಾ ವಿಸ್ತರೇಣತು ।
ವಕ್ತುಂ ರಾಜರ್ಷಯಃ ಕೃತ್ಸ್ನಾ ಯೇಽತೀತಾ ಸ್ತೈರ್ಯುಗೈಃ ಸಹ ॥ ೫೧ ॥

---

೪೮. ಆ ವಂಶದಲ್ಲಿ ಅತೀತರಾದ ರಾಜರುಗಳ ವಿಷಯವನ್ನು ಹೇಳುವೆನು, ಕೇಳಿ. ಈ ವಂಶದ ನೂರಾರು ರಾಜರುಗಳು ವಿಂಧ್ಯಾಚಲದಲ್ಲಿ ಪ್ರಖ್ಯಾತರಾಗಿದ್ದರು. ಅದರಂತೆ ಹೈಹಯವಂಶೋತ್ಪನ್ನರಾದ ನೂರಾರು ರಾಜರುಗಳೂ ಸಹ ಪ್ರಖ್ಯಾತಿ ಹೊಂದಿದ್ದರು.

೪೯-೫೦ ನೂರೊಂದುಜನ ಧೃತರಾಷ್ಟ್ರಪುತ್ರರೂ, ಜನಮೇಜಯರಾಜನ ವಂಶದಲ್ಲಿ ಜನಿಸಿದ ಎಂಭತ್ತು ರಾಜರುಗಳೂ, ಬ್ರಹ್ಮದತ್ತರಾಜನ ವಂಶದಲ್ಲಿ ಜನಿಸಿದ ನೂರಾರುಜನ ರಾಜರುಗಳೂ, ವೀರ್ಯರಾಜನ ವಂಶದಲ್ಲಿ ಜನಿಸಿದ ನೂರಾರುಜನ ರಾಜರುಗಳೂ, ನೂರಾರು ಪಾಲರಾಜ ವಂಶೀಕರೂ, ನೂರಾರು ಕಾಶಿಕುಶಾದಿವಂಶೀಕರೂ, ಅತೀತರಾದ ಸಹಸ್ರಾರು ಶಶಬಿಂದುರಾಜವಂಶೀಕರೂ, ಇವರೇ ಮೊದಲಾದ ರಾಜರುಗಳು ಅಸಂಖ್ಯಾತವಾದ ದಕ್ಷಿಣೆಗಳುಳ್ಳ ಅಶ್ವಮೇಧಯಾಗಗಳನ್ನು ಮಾಡಿ ಪ್ರಖ್ಯಾತರಾಗಿದ್ದರು.

೫೧. ಎಲೈ ಮುನಿಗಳೇ ಹೀಗೆ ಈ ವಂಶಗಳನ್ನು ಸಂಕ್ಷೇಪವಾಗಿ ನಿಮಗೆ ನಿರೂಪಿಸಿರುವೆನು. ವಿಸ್ತಾರವಾಗಿ ಈ ವಂಶಗಳನ್ನು ಹೇಳುವುದು ಅಶಕ್ಯವಾಗಿದೆ. ಯಾವ ಯಾವ ರಾಜರು ಯಾವ ಯಾವ ಯುಗಗಳಲ್ಲಿ ಪ್ರಖ್ಯಾತರಾಗಿ ಆ ಯುಗಗಳ ಸಂಗಡ ಅತೀತವಾಗಿರುವರೋ ಅವರೆಲ್ಲರ ವಿಷಯಗಳನ್ನೂ ತಿಳಿಸುವುದು ಅಸಾಧ್ಯವೆಂದು ಹೇಳಿದರು.

ಏತೇ ಯಯಾತಿವಂಶಸ್ಯ ಬಭೂವುರ್ವಂಶವರ್ದ್ಧನಾಃ ।
ಕೀರ್ತಿತಾ ದ್ಯುತಿಮಂತಸ್ತೇ ಯೇ ಲೋಕಾನ್ ಧಾರಯಂತಿ ವೈ ॥ ೫೨ ॥

ಲಭಂತೇ ಚ ವರಾನ್ ಪಂಚ ದುರ್ಲಭಾನ್ ಬ್ರಹ್ಮಲೌಕಿಕಾನ್ ।
ಆಯುಃ ಪುತ್ರಾ ಧನಂ ಕೀರ್ತಿರೈಶ್ವರ್ಯಂ ಭೂತಿರೇವ ಚ ॥ ೫೩ ॥

ಧಾರಣಾಚ್ಛ್ರವಣಾಚ್ಚೈವ ಪಂಚವರ್ಗಸ್ಯ ಧೀಮತಾಂ ।
ತಥೋಕ್ತಾ ಲೌಕಿಕಾಶ್ಚೈವ ಬ್ರಹ್ಮಲೋಕಂ ವ್ರಜಂತಿ ವೈ ॥ ೫೪ ॥

ಚತ್ವಾರ್ಯಾಹುಃ ಸಹಸ್ರಾಣಿ ವರ್ಷಾಣಾಂ ಚ ಕೃತಂ ಯುಗಂ ।
ತಸ್ಯ ತಾವಚ್ಛತೀ ಸಂಧ್ಯಾ ಸಂಧ್ಯಾಂಶಶ್ಚ ತಥಾವಿಧಃ ॥ ೫೫ ॥

ಕೃತೇ ವೈ ಪ್ರಕ್ರಿಯಾಪಾದಶ್ಚತುಃ ಸಾಹಸ್ರ ಉಚ್ಯತೇ ।
ತಸ್ಮಾಚ್ಚತುಃ ಶತಂ ಸಂಧ್ಯಾ ಸಂಧ್ಯಾಂಶಶ್ಚ ತಥಾವಿಧಃ ॥ ೫೬ ॥

---

೫೨-೫೩. ಮೇಲೆ ಹೇಳಿದ ರಾಜರೆಲ್ಲರೂ ಯಯಾತಿ ಮಹಾರಾಜನ ವಂಶ ವರ್ಧಕರಾಗಿಯೂ ತಿಲಕಪ್ರಾಯರಾಗಿಯೂ, ಲೋಕೋದ್ಧಾರಕರಾಗಿಯೂ, ಕೀರ್ತಿವಂತರಾಗಿಯೂ, ಪ್ರಖ್ಯಾತರಾಗಿಯೂ ಇದ್ದರು. ಇಂಥ ರಾಜರು ಆಯುಸ್ಸು, ಸಂತಾನ ಧನ, ಐಶ್ವರ್ಯ, ಕೀರ್ತಿ ಇವೇ ಮೊದಲಾದ ಐದು ದುರ್ಲಭಗಳಿಂದ ವರಗಳನ್ನು ಪಡೆದು ದುರ್ಲಭವಾದ ಸುಖವನ್ನು ಹೊಂದಿದ್ದರು.

೫೪ ಪ್ರಜೆಗಳು ಯಯಾತಿಮಹಾರಾಜನ ವಂಶೀಕರಾದ ಮಹಾತ್ಮರ ಐದು ವಿಧಗಳಾದ ವರಗಳನ್ನು ಕೇಳಿ ತಿಳಿದು ಧಾರಣೆಮಾಡಿದರೆ ಅವರಿಗೆ ಈ ಲೋಕದಲ್ಲಿ ಸಕಲೇಷ್ಟಾರ್ಥಗಳೂ ಸಿದ್ಧವಾಗುವುದು. ಕೊನೆಗೆ ಬ್ರಹ್ಮದೇವನ ಪರಮಪದವಿಯನ್ನು ಹೊಂದುವನು

೫೫. ಕೃತಯುಗದ ಕಾಲವು ನಾಲ್ಕುಸಾವಿರ ದಿವ್ಯವರ್ಷಗಳಾಗಿವೆ. ಇದರ ಸಂಧಿಕಾಲವೂ, ಸಂಧ್ಯಾಂಶಕಾಲವೂ, ನಾನ್ನೂರುನಾನ್ನೂರು ವರ್ಷಗಳಾಗಿವೆ.

೫೬. ಕೃತಯುಗದ ಪ್ರಕ್ರಿಯಾಪಾದವು ನಾಲ್ಕುಸಾವಿರ ವರ್ಷಪಳುಳ್ಳದ್ದಾಗಿದೆ ಇದುದರಿಂದ ಸಂಧಿಕಾಲ ಸಂಧ್ಯಾಂಶವೂ ಕೂಡ ನಾನ್ನೂರು ವರ್ಷಗಳಾಗಿವೆ.

ತ್ರೇತಾದೀನಿ ಸಹಸ್ರಾಣಿ ಸಂಖ್ಯಯಾ ಮುನಿಭಿಃ ಸಹ ।
ತಸ್ಯಾಪಿ ದ್ವಿಶತೀ ಸಂಧ್ಯಾ ಸಂಧ್ಯಾಂಶಸ್ತ್ರಿಶತಃ ಸ್ಮೃತಃ ॥ ೫೭ ॥

ಅನುಷಂಗಪಾದಸ್ತ್ರೇತಾಯಾಸ್ತ್ರಿಸಾಹಸ್ರಸ್ತು ಸಂಖ್ಯಯಾ ।
ದ್ವಾಪರೇ ದ್ವೇ ಸಹಸ್ರೇ ತು ವರ್ಷಾಣಾಂ ಸಂಪ್ರಕೀರ್ತಿತಂ ॥ ೫೮ ॥

ತಸ್ಯಾಪಿ ದ್ವಿಶತೀ ಸಂಧ್ಯಾ ಸಂಧ್ಯಾಂಶೋ ದ್ವಿಶತಸ್ತಥಾ ।
ಉಪೋದ್ಘಾತಸ್ತೃತೀಯಸ್ತು ದ್ವಾಪರೇ ಪಾದ ಉಚ್ಯತೇ ॥ ೫೯ ॥

ಕಲಿಂ ವರ್ಷಸಹಸ್ರಂತು ಪ್ರಾಹುಃ ಸಂಖ್ಯಾವಿದೋಜನಾಃ ।
ತಸ್ಯಾಪಿ ಶತಿಕಾ ಸಂಧ್ಯಾ ಸಂಧ್ಯಾಂಶಃ ಶತಏವ ಚ ॥ ೬೦ ॥

ಸಂಹಾರಪಾದಃ ಸಂಖ್ಯಾತಶ್ಚತುರ್ಥೋ ವೈ ತಥಾ ಯುಗೇ ।
ಸಸಂಧ್ಯಾನಿ ಸಹಾಂಶಾನಿ ಚತ್ವಾರಿ ತು ಯುಗಾನಿ ವೈ ॥ ೬೧ ॥

ಏತದ್ ದ್ವಾದಶಸಾಹಸ್ರಂ ಚತುರ್ಯುಗಮಿತಿ ಸ್ಮೃತಂ ।
ಏವಂ ಪಾದೈಃ ಸಹಸ್ರಾಣಿ ಶ್ಲೋಕಾನಾಂ ಪಂಚ ಪಂಚ ಚ ॥ ೬೨ ॥

---

೫೭. ತ್ರೇತಾಯುಗದ ಪ್ರಮಾಣವು ಮೂರುಸಹಸ್ರವರ್ಷಗಳೆಂದೂ, ಅದರ ಸಂಧಿಕಾಲ ಸಂಧ್ಯಾಂಶವೂ ಕೂಡ ಮುನ್ನೂರು ಮುನ್ನೂರು ವರ್ಷಗಳಾಗಿವೆ.

೫೮-೫೯ ತ್ರೇತಾಯುಗದ ಅನುಷಂಗಪಾದವು ಮೂರುಸಾವಿರ ಸಂಖ್ಯೆಯುಳ್ಳದ್ದಾಗಿದೆ. ದ್ವಾಪರಯುಗವು ಎರಡುಸಾವಿರ ವರ್ಷಗಳುಳ್ಳದ್ದಾಗಿದೆ. ಅದರ ಸಂಧಿಕಾಲ ಸಂಧ್ಯಾಂಶಕಾಲವೂ ಕೂಡ ಇನ್ನೂರು ವರ್ಷಗಳಾಗಿವೆ. ದ್ವಾಪರಯುಗದ ಮೂರನೆಯ ಪಾದಕ್ಕೆ ಉಪೋದ್ಘಾತವೆಂದು ನಾಮವು ಪ್ರಾಪ್ತವಾಗಿದೆ.

೬೦. ಪ್ರಮಾಣಜ್ಞರಾದ ಜ್ಞಾನಿಗಳು ಕಲಿಯುಗವು ಒಂದು ದಿವ್ಯಸಹಸ್ರ ಯುಗಗಳೆಂದು ಹೇಳುವರು ಅದರ ಸಂಧಿಕಾಲವು ಸಂಧ್ಯಾಂಶಕಾಲವೂ ಕೂಡ ಒಂದುನೂರು ವರ್ಷಗಳಾಗಿವೆ.

೬೧. ಕಲಿಯುಗದ ನಾಲ್ಕನೆಯ ಪಾದಕ್ಕೆ ಸಂಹಾರಪಾದವೆಂದು ನಾಮವಿರುತ್ತದೆ. ಹೀಗೆ ನಾಲ್ಕು ಯುಗಗಳಿಗೂ ಕೂಡ ಸಂಧ್ಯಂಶಗಳೂ, ಸಂಧ್ಯಾಂಶಗಳೂ, ಇರುತ್ತವೆ.

೬೨-೬೩. ಚತುರ್ಯುಗಗಳ ಒಟ್ಟು ಸಂಖ್ಯೆಯು ಹನ್ನೆರಡುಸಾವಿರ ದಿವ್ಯ ಯುಗಗಳಾಗಿದೆ. ಹೀಗೆ ಈ ವಾಯುಮಹಾಪುರಾಣದಲ್ಲಿ ಪ್ರಕ್ರಿಯಾಪಾದ, ಅನುಷಂಗ ಪಾದ, ಉಪೋದ್ಘಾತಪಾದ, ಉಪಸಂಹಾರಪಾದಗಳೆಂದು ನಾಲ್ಕುಪಾದಗಳೂ, ಇವು

**ಸಂಧ್ಯಾಸಂಧ್ಯಾಂಶಕೈರೇವ ದ್ವೇ ಸಹಸ್ರೇ ತಥಾಽಪರೇ ।**
**ಏವಂ ದ್ವಾದಶಸಾಹಸ್ರಂ ಪುರಾಣಂ ಕವಯೋ ವಿದುಃ ॥ ೬೩ ॥**
**ಯಥಾ ವೇದಶ್ಚತುಷ್ಪಾದಶ್ಚತುಷ್ಪಾದಂ ತಥಾ ಯುಗಂ ।**
**ಯಥಾ ಯುಗಂಚತುಷ್ಪಾದಂ ವಿಧಾತ್ರಾ ವಿಹಿತಂ ಸ್ವಯಂ ॥**
**ಚತುಷ್ಪಾದಂ ಪುರಾಣಂ ತು ಬ್ರಹ್ಮಣಾ ವಿಹಿತಂ ಪುರಾ ॥ ೬೪ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಯುಗಧರ್ಮನಿರೂಪಣಂ " ನಾಮ ದ್ವಾತ್ರಿಂಶೋಽಧ್ಯಾಯಃ**

---

ಗಳಲ್ಲಿ ಒಟ್ಟು ಹನ್ನೆರಡು ಸಹಸ್ರ ಶ್ಲೋಕಗಳೂ ಇವೆ. ಅಂದರೆ ಪ್ರಕ್ರಿಯಾಪಾದದಲ್ಲಿ ಒಟ್ಟು ೪೮೦೦ ಪದ್ಯಗಳೂ, ಅನುಷಂಗಪಾದದಲ್ಲಿ ೩೬೦೦ ಪದ್ಯಗಳೂ, ಉಪೋದ್ಘಾತ ಪಾದದಲ್ಲಿ ೨೪೦೦ ಪದ್ಯಗಳೂ, ಉಪಸಂಹಾರಪಾದದಲ್ಲಿ ೧೨೦೦ ಪದ್ಯಗಳೂ, ಒಟ್ಟು ಕೂಡಿದರೆ ೧೨೦೦೦ ಶ್ಲೋಕಗಳು ಈ ಪುರಾಣದಲ್ಲಿ ಇವೆಯೆಂದು ಜ್ಞಾನಿಗಳು ಹೇಳುವರು.

ಸೂಚನೆ:—ಕೃತಯುಗದ ಕಾಲ ನಾಲ್ಕುಸಾವಿರ ವರ್ಷಗಳು ತ್ರೇತಾಯುಗದ ಕಾಲಮೂರುಸಾವಿರ ವರ್ಷಗಳು, ದ್ವಾಪರಯುಗದ ಕಾಲ ಎರಡುಸಾವಿರ ವರ್ಷಗಳು, ಕಲಿಯುಗದ ಕಾಲ ಒಂದುಸಾವಿರ ವರ್ಷಗಳು, ಇವುಗಳ ಸಂಧಿಕಾಲವು ಕ್ರಮವಾಗಿ ೪೦೦, ೩೦೦, ೨೦೦, ೧೦೦ ಒಟ್ಟು ಒಂದುಸಾವಿರ ವರ್ಷಗಳು, ಹೀಗೆ ಸಂಧ್ಯಾಂಶ ಕಾಲವೂ ಕೂಡ ಒಂದುಸಾವಿರ ವರ್ಷಗಳು, ಇವೆಲ್ಲವನ್ನೂ ಒಟ್ಟು ಕೂಡಿದರೆ ಹನ್ನೆರಡು ಸಾವಿರ ದಿವ್ಯ ವರ್ಷಗಳಾಗುವುವು.

೬೪. ಋಗ್ವೇದ ಯಜುರ್ವೇದ ಸಾಮವೇದ ಅಥರ್ವವೇದಗಳೆಂದು ವೇದವು ನಾಲ್ಕುಭಾಗವಾಗಿದೆ. ಯುಗವೂ ಕೂಡ ಕೃತ, ತ್ರೇತ, ದ್ವಾಪರ, ಕಲಿ ಎಂಬುದಾಗಿ ನಾಲ್ಕುವಿಧವಾಗಿದೆ. ಹಾಗೆಯೇ ಯುಗಗಳಿಗೆ ಮೊದಲನೆಯದು ಎರಡನೆಯದು ಮೂರನೆಯದು ನಾಲ್ಕನೆಯದು ಎಂಬುದಾಗಿ ನಾಲ್ಕುನಾಲ್ಕು ಪಾದಗಳಿರುತ್ತವೆ. ಅದರಂತೆಯೇ ಈ ವಾಯುಮಹಾಪುರಾಣಕ್ಕೂ ಸಹ ನಾಲ್ಕುಪಾದಗಳನ್ನು ಪೂರ್ವ ಕಲ್ಪದಲ್ಲಿಯೇ ಬ್ರಹ್ಮದೇವನು ಮಾಡಿರುವನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಯುಗಧರ್ಮನಿರೂಪಣ "ವೆಂಬ ಮೂವತ್ತೆರಡನೆಯ ಅಧ್ಯಾಯವು ಸಮಾಪ್ತವಾದುದು.

## ಮೂವತ್ತೆರಡನೆಯ ಅಧ್ಯಾಯದ ಸಾರಾಂಶವು

ಅಕಾರ ಉಕಾರ ಮಕಾರಾತ್ಮಕ ಅಕ್ಷರತ್ರಯಗಳು ಸೇರಿ ಓಂಕಾರವಾಗಿದೆ. ಆ ಓಂಕಾರವೇ ಪ್ರಣವವು. ಆ ಪ್ರಣವದಿಂದಲೇ ಋಕ್ ಯಜುಸ್ಸು ಸಾಮವೆಂಬ ಮೂರು ವೇದಗಳೂ, ವಾಯು ಅಗ್ನಿ ಜಲವೆಂಬ ದೇವತೆಗಳೂ ಇಂದ್ರಾದಿದೇವತೆಗಳೂ ಕಾಲಪುರುಷನೂ ಹುಟ್ಟಿರುವರು. ಆ ಕಾಲವು ಕೃತ ತ್ರೇತ ದ್ವಾಪರ ಎಂಬುದಾಗಿ ನಾಲ್ಕುವಿಧ. ಆಯಾ ದೇವತೆಗಳ ಸಂಗಡ ಮೂರು ಯುಗಗಳು ಕಳೆಯಲು ಕಲಿಯುಗದ ಆದಿಯಲ್ಲಿ ಇಕ್ಷ್ವಾಕು, ಭೋಜ, ಜನಮೇಜಯ, ಈ ವಂಶದ ರಾಜರು ಜನಿಸಿ ಯಾಗಾದಿಗಳನ್ನು ಮಾಡಿ ಪ್ರಖ್ಯಾತರಾಗಿದ್ದರು. ಕೃತಯುಗದ ಪ್ರಮಾಣವು ನಾಲ್ಕುಸಾವಿರವರ್ಷಗಳು. ಸಂಧಿಕಾಲವು ನಾನ್ನೂರುವರ್ಷಗಳು. ಸಂಧ್ಯಾಂಶಕಾಲವು ನಾನ್ನೂರುವರ್ಷಗಳು. ಇದರಂತೆಯೇ ತ್ರೇತಾಯುಗದ ಪ್ರಮಾಣವು ಮೂರು ಸಾವಿರವರ್ಷಗಳು, ಸಂಧ್ಯಂಶ ಸಂಧ್ಯಾಂಶಗಳು ಆರನೂರವರ್ಷಗಳು. ದ್ವಾಪರಯುಗವು ಎರಡುಸಹಸ್ರವರ್ಷಗಳುಳ್ಳದ್ದಾಗಿಯೂ ಸಂಧ್ಯಂಶ ಸಂಧ್ಯಾಂಶಗಳು ನಾನ್ನೂರು ವರ್ಷಗಳಾಗಿಯೂ ಇವೆ. ಹಾಗೆಯೇ ಕಲಿಯುಗದ ಪ್ರಮಾಣವು ಒಂದು ಸಹಸ್ರ ವರ್ಷಗಳು ಅದರ ಸಂಧ್ಯಂಶ ಸಂಧ್ಯಾಂಶಗಳು ಇನ್ನೂರುವರ್ಷಗಳಾಗಿಯೂ ಇವೆ. ಹೀಗೆ ಎಲ್ಲವನ್ನೂ ಕೂಡಿದರೆ ಹನ್ನೆರಡುಸಹಸ್ರ ದಿವ್ಯವರ್ಷಗಳಾಗುವುವು. ಇದರಂತೆಯೇ ವಾಯುಪುರಾಣದ ಪ್ರಕ್ರಿಯಾಪಾದ ಅನುಷ್ಣಂಗಪಾದ ಉಪೋದ್ಘಾತಪಾದ ಉಪಸಂಹಾರಪಾದಗಳೆಂಬ ನಾಲ್ಕುಪಾದಗಳಲ್ಲಿಯೂ ಒಟ್ಟು ಹನ್ನೆರಡುಸಾವಿರ ಪದ್ಯಗಳಿವೆಯೆಂದು ವರ್ಣಿತವಾಗಿದೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀ ಮ ದ್ವಾ ಯು ಪು ರಾ ಣ ಂ

## ತ್ರಯಸ್ತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ಮನ್ವಂತರೇಷು ಸರ್ವೇಷು ಅತೀತಾನಾಗತೇಷ್ವಿಹ ।
ತುಲ್ಯಾಭಿಮಾನಿನಃ ಸರ್ವೇ ಜಾಯಂತೇ ನಾಮರೂಪತಃ ॥ ೧ ॥

ದೇವಾಶ್ಚ ವಿವಿಧಾ ಯೇ ಚ ತಸ್ಮಿನ್ ಮನ್ವಂತರೇಽಧಿಪಾಃ ।
ಋಷಯೋ ಮಾನವಾಶ್ಚೈವ ಸರ್ವೇ ತುಲ್ಯಾಭಿಮಾನಿನಃ ॥ ೨ ॥

ಮಹರ್ಷಿಸರ್ಗಃ ಪ್ರೋಕ್ತೋ ವೈ ವಂಶಂ ಸ್ವಾಯಂಭುವಸ್ಯ ತು ।
ವಿಸ್ತರೇಣಾನುಪೂರ್ವ್ಯಾ ಚ ಕೀರ್ತ್ಯಮಾನಂ ನಿಬೋಧತ ॥ ೩ ॥

## ಮೂವತ್ತಮೂರನೆಯ ಅಧ್ಯಾಯವು

೧. ಸೂತಪುರಾಣಿಕನು ಹೇಳಿದನು :—ಸಮಸ್ತರಾದ ದೇವಋಷ್ಯಾದಿಗಳು ವರ್ತಮಾನ ಮನ್ವಂತರಕಾಲದಲ್ಲಿ ಯಾವ ನಾಮ ರೂಪ ಅಧಿಕಾರ ಇವೇ ಮೊದಲಾದ ವುಗಳನ್ನು ಹೊಂದಿರುವರೋ ಭೂತಭವಿಷ್ಯಮನ್ವಂತರಾದಿ ಕಾಲಗಳಲ್ಲಿಯೂ ಕೂಡ ಅದೇ ನಾಮರೂಪಾಧಿಕಾರಗಳನ್ನೇ ಹೊಂದುವರು.

೨. ಒಂದು ಮನ್ವಂತರದಲ್ಲಿ ಯಾವ ನಾನಾವಿಧರಾದ ದೇವತೆಗಳು ಋಷಿಗಳು ಮತ್ತು ಮನುಷ್ಯರೂ ಅಧಿಕಾರದಲ್ಲಿದ್ದು ಅಭಿಮಾನಿಗಳಾಗಿರುವರೋ ಆ ದೇವಾದಿಗಳು ಇತರ ಮನ್ವಂತರಗಳಲ್ಲಿಯೂ ಕೂಡ ಆ ಅಭಿಮಾನಿಗಳಾಗಿಯೇ ಇರುವರು.

೩. ಪೂರ್ವಾಧ್ಯಾಯಗಳಲ್ಲಿ ಮಹರ್ಷಿಗಳ ಸೃಷ್ಟಿಯನ್ನು ನಿರೂಪಿಸಿರುವೆನು. ಈಗ ಸ್ವಾಯಂಭುವಮನುವಿನ ವಂಶವನ್ನು ಕ್ರಮವಾಗಿಯೂ ವಿಸ್ತಾರವಾಗಿಯೂ ಹೇಳುವುದನ್ನು ತಿಳಿಯಿರೆಂದನು.

ಮನೋಃ ಸ್ವಾಯಂಭುವಸ್ಯಾಸನ್ ದಶ ಪೌತ್ರಾಸ್ತು ತತ್ಸಮಾಃ ।
ಯೈರಿಯಂ ಪೃಥಿವೀ ಸರ್ವಾ ಸಪ್ತದ್ವೀಪಸಮನ್ವಿತಾ ॥ ೪ ॥

ಸಸಮುದ್ರಾಕರವತೀ ಪ್ರತಿವರ್ಷಂ ನಿವೇಶಿತಾ ।
ಸ್ವಾಯಂಭುವೇಽಂತರೇ ಪೂರ್ವಮಾದ್ಯೇ ತ್ರೇತಾಯುಗೇ ತದಾ ॥ ೫ ॥

ಪ್ರಿಯವ್ರತಸ್ಯ ಪುತ್ರೈಸ್ತೈಃ ಪೌತ್ರೈಃ ಸ್ವಾಯಂಭುವಸ್ಯ ತು ।
ಪ್ರಜಾಸರ್ಗತಪೋಯೋಗೈಸ್ತೈರಿಯಂ ವಿನಿವೇಶಿತಾ ॥ ೬ ॥

ಪ್ರಿಯವ್ರತಾತ್ ಪ್ರಜಾವಂತಃ ವೀರಾತ್ ಕನ್ಯಾ ವ್ಯಜಾಯತ ।
ಕನ್ಯಾ ಸಾ ತು ಮಹಾಭಾಗಾ ಕರ್ದಮಸ್ಯ ಪ್ರಜಾಪತೇಃ ॥ ೭ ॥

ಕನ್ಯೇ ದ್ವೇ ಶತಪುತ್ರಾಂಶ್ಚ ಸಂಮ್ರಾಟ್ ಕುಕ್ಷಿಶ್ಚ ತೇ ಉಭೇ ।
ತಯೋರ್ವೈ ಭ್ರಾತರಃ ಶೂರಾಃ ಪ್ರಜಾಪತಿಸಮಾ ದಶ ॥ ೮ ॥

---

೪. ಸ್ವಾಯಂಭುವಮನುವಿಗೆ ಹತ್ತುಜನ ಮೊಮ್ಮಕ್ಕಳು ತಾತಂದರಿಗೆ ಸಮನಾಗಿಯೇ ಇದ್ದರು. ಅವರು ಸಪ್ತದ್ವೀಪಗಳು ಸಪ್ತಸಮುದ್ರಗಳು ಇವುಗಳಿಂದ ಕೂಡಿದ ಅಖಂಡಭೂಮಂಡಲವನ್ನೂ ನಿಷ್ಕಂಟಕವಾಗಿ ಆಳುತ್ತಿದ್ದರು.

೫. ಸ್ವಾಯಂಭುವಮನ್ವಂತರದ ಮೊದಲನೆಯ ತ್ರೇತಾಯುಗದಲ್ಲಿ ಸ್ವಾಯಂಭುವನ ಪೌತ್ರರು ಸಮಸ್ತವಾದ ಪೃಥ್ವಿಯನ್ನು ಏಕಚಕ್ರಾಧಿಪತಿಗಳಾಗಿ ಆಳಿದರು.

೬. ಪ್ರಿಯವ್ರತರಾಜನ ಮಕ್ಕಳೂ ಸ್ವಾಯಂಭುವಮನುವಿನ ಮೊಮ್ಮಕ್ಕಳೂ ಆದ ಆ ಮಹಾತ್ಮರು ಪ್ರಜಾಸೃಷ್ಟಿ ಮತ್ತು ತಪೋನುಷ್ಠಾನ ಇವುಗಳಿಂದ ಭೂಮಂಡಲ ವನ್ನು ವ್ಯಾಪಿಸಿಕೊಂಡಿದ್ದರು.

೭. ಕರ್ದಮಪ್ರಜಾಪತಿಯ ಮಗಳೂ, ಪ್ರಜಾವಂತನೂ ಶೂರನೂ ಆದ ಪ್ರಿಯವ್ರತರಾಜನ ಪತ್ನಿಯೂ ಆದ ನಾರೀಮಣಿಯು ಪ್ರಖ್ಯಾತರಾದ ಮಕ್ಕಳನ್ನು ಪಡೆದಳು.

೮. ಆ ಸಾಧ್ವೀಮಣಿಯು ಇಬ್ಬರು ಕನ್ನಿಕೆಯರನ್ನೂ ನೂರುಜನ ಪ್ರಸಿದ್ಧ ರಾದ ಪುತ್ರರನ್ನೂ, ಪಡೆದಳು. ಆ ಪುತ್ರಿಯರು, ಸಮ್ರಾಜ ಕುಕ್ಷಿಯೆಂಬ ಇಬ್ಬರು ಲೋಕಮಾನ್ಯರಾದ ಪುತ್ರರನ್ನು ಪಡೆದರು. ಆ ಸಮ್ರಾಜಕುಕ್ಷಿಗಳಿಗೆ ಪ್ರಜಾಪತಿಗಳಿಗೆ ಸಮರೂ ಶೂರರೂ ಆದ ಹತ್ತುಜನ ಸಹೋದರರು ಇದ್ದರು.

ಆಗ್ನೀಧ್ರಶ್ಚ ವಪುಷ್ಮಾಂಶ್ಚ ಮೇಧಾ ಮೇಧಾತಿಥಿರ್ವಿಭುಃ ।
ಜ್ಯೋತಿಷ್ಮಾನ್ ದ್ಯುತಿಮಾನ್ ಹವ್ಯಃ ಸವನಃ ಸರ್ವ ಏವ ಚ ॥ ೯ ॥

ಪ್ರಿಯವ್ರತೋಽಭಿಷಿಚ್ಯೈತಾನ್ ಸಪ್ತ ಸಪ್ತಸು ಪಾರ್ಥಿವಾನ್ ।
ದ್ವಿಪೇಷು ತೇಷು ಧರ್ಮೇಣ ದ್ವಿಪಾಂಸ್ತಾಂಶ್ಚ ನಿಬೋಧತ ॥ ೧೦ ॥

ಜಂಬೂದ್ವೀಪೇಶ್ವರಂ ಚಕ್ರೇ ಆಗ್ನೀಧ್ರಂ ತು ಮಹಾಬಲಂ ।
ಪ್ಲಕ್ಷದ್ವೀಪೇಶ್ವರಶ್ಚಾಪಿ ತೇನ ಮೇಧಾತಿಥಿಃ ಕೃತಃ ॥ ೧೧ ॥

ಶಾಲ್ಮಲೌ ತು ವಪುಷ್ಮಂತಂ ರಾಜಾನಮಭಿಷಿಕ್ತವಾನ್ ।
ಜ್ಯೋತಿಷ್ಮಂತಂ ಕುಶದ್ವೀಪೇ ರಾಜಾನಂ ಕೃತವಾನ್ ಪ್ರಭುಃ ॥ ೧೨ ॥

ದ್ಯುತಿಮಂತಂಚ ರಾಜಾನಂ ಕ್ರೌಂಚದ್ವೀಪೇ ಸಮಾದಿಶತ್ ।
ಶಾಕಾದ್ವೀಪೇಶ್ವರಂ ಚಾಪಿ ಹವ್ಯಂ ಚಕ್ರೇ ಪ್ರಿಯವ್ರತಃ ॥ ೧೩ ॥

---

೯. ಆ ಪ್ರಿಯವ್ರತರಾಜನ ವಂಶದಲ್ಲಿ ಆಗ್ನೀಧ್ರ, ವಪುಷ್ಮಂತ ಮೇಧಸ, ಮೇಧಾತಿಥಿ, ವಸು, ಜ್ಯೋತಿಷ್ಮಂತ, ದ್ಯುತಿಮಂತ, ಹವ್ಯ ಸವನ, ಸರ್ವನೇ ಮೊದಲಾದ ಮಕ್ಕಳು ಜನಿಸಿದರು.

೧೦. ಪ್ರಿಯವ್ರತರಾಜನು ಸಪ್ತದ್ವೀಪಗಳಲ್ಲಿಯೂ ಏಳುಜನ ಮಕ್ಕಳಿಗೆ ಪಟ್ಟವನ್ನು ಕಟ್ಟಿ ಧರ್ಮದಿಂದ ಪಾಲಿಸುವಂತೆ ಆಜ್ಞಾಪಿಸಿದನು. ಅವರೆಲ್ಲರೂ ಹಾಗೆಯೇ ಧರ್ಮದಿಂದ ಆಯಾ ರಾಜ್ಯವನ್ನು ಪಾಲಿಸಿದರು. ಆ ಸಪ್ತದ್ವೀಪಗಳನ್ನು ಕ್ರಮವಾಗಿ ತಿಳಿಸುವೆನು ಕೇಳಿ ಎಂದನು.

೧೧-೧೩. ಪ್ರಿಯವ್ರತರಾಜನು ಜಂಬೂದ್ವೀಪದಲ್ಲಿ ಬಲಶಾಲಿಯಾದ ಆಗ್ನೀಧ್ರನನ್ನೂ, ಪ್ಲಕ್ಷದ್ವೀಪದಲ್ಲಿ ಪ್ರಿಯನಾದ ಮೇಧಾತಿಥಿಯನ್ನೂ, ಶಾಲ್ಮಲೀದ್ವೀಪದಲ್ಲಿ ಸಮರ್ಥನಾದ ವಪುಷ್ಮಂತನನ್ನೂ, ಕುಶದ್ವೀಪದಲ್ಲಿ ವೀರನಾದ ಜ್ಯೋತಿಷ್ಮಂತನನ್ನೂ, ಕ್ರೌಂಚದ್ವೀಪದಲ್ಲಿ ಕುಶಲನಾದ ದ್ಯುತಿಮಂತನನ್ನೂ, ಶಾಕದ್ವೀಪದಲ್ಲಿ ಜ್ಞಾನಿಯಾದ ಹವ್ಯನನ್ನೂ ಸ್ಥಾಪಿಸಿ ಏಳು ದ್ವೀಪಗಳಲ್ಲಿಯೂ ಏಳುಜನ ಕುಮಾರರನ್ನು ರಾಜರನ್ನಾಗಿ ನಿಯಮಿಸಿದನು.

ಪುಷ್ಕರಾಧಿಪತಿಂ ಚಾಪಿ ಸವನಂ ಕೃತವಾನ್ ಪ್ರಭುಃ ।
ಪುಷ್ಕರೇ ಸವನಸ್ಯಾಪಿ ಮಹಾವೀತಃ ಸುತೋಽಭವತ್ ॥
ಧಾತಕಿಶ್ಚೈವ ದ್ವಾವೇತೌ ಪುತ್ರೌ ಪುತ್ರವತಾಂ ವರೌ ॥ ೧೪ ॥

ಮಹಾವೀತಂ ಸ್ಮೃತಂ ವರ್ಷಂ ತಸ್ಯ ನಾಮ್ನಾ ಮಹಾತ್ಮನಃ ।
ನಾಮ್ನಾ ತು ಧಾತಕೇಶ್ಚಾಪಿ ಧಾತಕೀ ಖಂಡ ಉಚ್ಯತೇ ॥ ೧೫ ॥

ಹವ್ಯೋಽ ವ್ಯಜನಯತ್ ಪುತ್ರಾನ್ ಶಾಕದ್ವೀಪೇಶ್ವರಾನ್ ಪ್ರಭುಃ ।
ಜಲದಂ ಚ ಕುಮಾರಂ ಚ ಸುಕುಮಾರಂ ಮಣೀಚಕಂ ॥
ವಸುಮೋದಂ ಸುಮೋದಾಕಂ ಸಪ್ತಮಂ ಚ ಮಹಾದ್ರುಮಂ ॥ ೧೬ ॥

ಜಲದಂ ಜಲದಸ್ಯಾಥ ವರ್ಷಂ ಪ್ರಥಮಮುಚ್ಯತೇ ।
ಕುಮಾರಸ್ಯ ಚ ಕೌಮಾರಂ ದ್ವಿತೀಯಂ ಪರಿಕೀರ್ತಿತಂ ॥ ೧೭ ॥

---

೧೪. ಹಾಗೆಯೇ ಪುಷ್ಕರದ್ವೀಪದಲ್ಲಿ ಸವನನನ್ನು ರಾಜನನ್ನಾಗಿ ಏರ್ಪಡಿಸಿದನು. ಆಗ ಪುಷ್ಕರದ್ವೀಪಾಧಿಪತಿಯಾದ ಸವನನಿಗೆ ಮಹಾವೀತ ಧಾತಕಿಯೆಂಬ ಇಬ್ಬರು ರತ್ನಪ್ರಾಯರಾದ ಮಕ್ಕಳು ಜನಿಸಿದರು.

೧೫. ಮಹಾತ್ಮನಾದ ಮಹಾವೀತನು ರಾಜ್ಯವಾಳಿದ ವರ್ಷವೂ ಕೂಡ ಮಹಾವೀತವರ್ಷವೆಂದೇ ಪ್ರಖ್ಯಾತಿಕೊಂಡಿತು. ಧಾತಕಿಯೆಂಬ ಮಹಾರಾಜನು ಆಳಿದ (ದ್ವೀಪಕ್ಕೆ) ವರ್ಷಕ್ಕೆ ಧಾತಕೀಖಂಡವೆಂಬ ನಾಮವೂ ಕೂಡ ಉಂಟಾಗಿದೆ.

೧೬. ಶಾಕದ್ವೀಪಾಧಿಪತಿಯಾದ ಹವ್ಯನೂ ಕೂಡ ಅತ್ಯಂತ ಶೂರರೂ ಸಮರ್ಥರೂ ಆದ ಜಲದ ಕುಮಾರ, ಸುಕುಮಾರ ಮಣೀಚಕ, ವಸುಮೋದ, ಸುಮೋದಾಕ, ಮಹಾದ್ರುಮ ಎಂಬ ಏಳುಜನ ಪುತ್ರರನ್ನು ಪಡೆದನು.

೧೭-೨೦. ಹವ್ಯನ ಪುತ್ರರಾದ ಸಪ್ತಶೂರರೂ ಶಾಕದ್ವೀಪದಲ್ಲಿರುವ ಸಪ್ತ ಖಂಡಗಳನ್ನು ಪ್ರತ್ಯೇಕವಾಗಿ ಆಳಿದುದರಿಂದ ಆ ಸಪ್ತಖಂಡಗಳಿಗೆ ಆಯಾ ರಾಜರ ನಾಮಗಳೇ ಪ್ರಾಪ್ತಗಳಾಗಿವೆ. ಅವುಗಳಲ್ಲಿ ಮೊದಲನೆಯ ವರ್ಷವು ಜಲದನು ಆಳಿದು ದರಿಂದ ಜಲದವರ್ಷವೆಂದೂ, ಎರಡನೆಯ ವರ್ಷಕ್ಕೆ ಕುಮಾರನು ರಾಜನಾಗಿದ್ದುದ

ಸುಕುಮಾರಂ ತೃತೀಯಂ ತು ಸುಕುಮಾರಸ್ಯ ಕೀರ್ತಿತಂ ।
ಮಣೀಚಕಸ್ಯ ಚತುರ್ಥಂ ಮಣೀಚಕಮಿಹೋಚ್ಯತೇ ॥ ೧೮ ॥

ವಸುಮೋದಸ್ಯ ವೈ ವರ್ಷಂ ಪಂಚಮಂ ವಸುಮೋದಕಂ ।
ಮೋದಕಸ್ಯ ತು ಮೋದಾಕಂ ವರ್ಷಂ ಷಷ್ಠಂ ಪ್ರಕೀರ್ತಿತಂ ॥ ೧೯ ॥

ಮಹಾದ್ರುಮಸ್ಯ ನಾಮ್ನಾ ತು ಸಪ್ತಮಂ ತು ಮಹಾದ್ರುಮಂ ।
ಏಷಾಂ ತು ನಾಮಭಿಸ್ತಾನಿ ಸಪ್ತವರ್ಷಾಣಿ ತತ್ರ ವೈ ॥ ೨೦ ॥

ಕ್ರೌಂಚದ್ವೀಪೇಶ್ವರಸ್ಯಾಪಿ ಪುತ್ರಾ ದ್ಯುತಿಮತಸ್ತು ವೈ ।
ಕುಶಲೋ ಮನುಗಶ್ಚೋಷ್ಣಃ ಪೀವರಶ್ಚಾಂಧಕಾರಕಃ ॥
ಮುನಿಶ್ಚ ದುಂದುಭಿಶ್ಚೈವ ಸುತಾ ದ್ಯುತಿಮತಸ್ತು ವೈ ॥ ೨೧ ॥

ತೇಷಾಂ ಸ್ವನಾಮಭಿರ್ದೇಶಾಃ ಕ್ರೌಂಚದ್ವೀಪಾಶ್ರಯಾಃ ಶುಭಾಃ ।
ಉಷ್ಣಸ್ಯೋಷ್ಣಃ ಸ್ಮೃತೋ ದೇಶಃ ಪೀವರಸ್ಯಾಪಿ ಪೀವರಃ ॥ ೨೨ ॥

---

ರಿಂದ ಕುಮಾರವರ್ಷವೆಂದೂ, ಮೂರನೆಯ ಖಂಡಕ್ಕೆ ಸುಕುಮಾರನು ಪ್ರಭುವಾಗಿದ್ದುದರಿಂದ ಸುಕುಮಾರವರ್ಷವೆಂದೂ, ನಾಲ್ಕನೆಯ ವರ್ಷಕ್ಕೆ ಮಣೀಚಕನು ಯಜಮಾನನಾದುದರಿಂದ ಮಣೀಚಕವರ್ಷವೆಂದೂ, ಐದನೆಯ ವರ್ಷಕ್ಕೆ ವಸುಮೋದನು ದೊರೆಯಾದುದರಿಂದ ವಸುಮೋದವರ್ಷವೆಂದೂ, ಆರನೆಯ ವರ್ಷಕ್ಕೆ ಮೋದಾಕನು ರಾಜನಾಗಿದ್ದುದರಿಂದ ಮೋದಾಕವರ್ಷವೆಂದೂ, ಏಳನೆಯ ವರ್ಷಕ್ಕೆ ಮಹಾದ್ರುಮನು ನೃಪನಾಗಿದ್ದುದರಿಂದ ಮಹಾದ್ರುಮವರ್ಷವೆಂದೂ ಪ್ರಖ್ಯಾತಗಳಾದುವು. ಹೀಗೆ ಏಳುವರ್ಷಗಳೂ ತಂತಮ್ಮ ದೊರೆಗಳ ನಾಮಗಳಿಂದಲೇ ಪ್ರಖ್ಯಾತಗಳಾಗಿದ್ದುವು.

೨೧. ಕ್ರೌಂಚದ್ವೀಪಾಧಿಪತಿಯಾದ ದ್ಯುತಿಮಂತನೆಂಬುವನಿಗೆ ಕುಶಲ, ಮನುಗ, ಉಷ್ಣ, ಪೀವರ, ಅಂಧಕಾರಕ, ಮುನಿ, ದುಂದುಭಿ ಎಂಬ ಪ್ರಸಿದ್ಧರಾದ ಮಕ್ಕಳು ಜನಿಸಿದರು.

೨೨–೨೩. ಹಿಂದಿನಂತೆ ದ್ಯುತಿಮಂತನ ಪುತ್ರರು ಆಳಿದ ವರ್ಷಗಳಿಗೆ ಆಯಾ ರಾಜರ ನಾಮಗಳೇ ಪ್ರಾಪ್ತವಾಗಿವೆ. ಅವರಲ್ಲಿ ಕುಶಲನು ಆಳಿದ ದೇಶಕ್ಕೆ ಕೌಶಲವೆಂದೂ, ಮನುಗನು ಆಳಿದ ದೇಶಕ್ಕೆ ಮನುಗದೇಶವೆಂದೂ, ಉಷ್ಣನು ಆಳಿದ ದೇಶವು ಉಷ್ಣದೇಶವೆಂದೂ, ಪೀವರನು ಆಳಿದ ದೇಶವು ಪೀವರದೇಶವೆಂದೂ,

ಅಂಧಕಾರಕದೇಶಸ್ತು ಅಂಧಕಾರಶ್ಚ ಕೀರ್ತ್ಯತೇ ।
ಮುನೇಸ್ತು ಮುನಿದೇಶೋ ವೈ ದುಂದುಭೇರ್ದುಂದುಭಿಃ ಸ್ಮೃತಃ ॥
ಏತೇ ಜನಪದಾಃ ಸಪ್ತ ಕ್ರೌಂಚದ್ವೀಪೇ ತು ಭಾಸ್ವರಾಃ ॥ ೨೩ ॥

ಜ್ಯೋತಿಷ್ಮತಃ ಕುಶದ್ವೀಪೇ ಸಪ್ತೈತೇ ಸುಮಹೌಜಸಃ ।
ಉದ್ಭಿದೋ ವೇಣುಮಾಂಶ್ಚೈವ ಸ್ವೈರಥೋ ಲವಣೋ ಧೃತಿಃ ॥
ಷಷ್ಠಃ ಪ್ರಭಾಕರಶ್ಚೈವ ಸಪ್ತಮಃ ಕಪಿಲಃ ಸ್ಮೃತಃ ॥ ೨೪ ॥

ಉದ್ಭಿದಂ ಪ್ರಥಮಂ ವರ್ಷಂ ದ್ವಿತೀಯಂ ವೇಣುಮಂಡಲಂ ।
ತೃತೀಯಂ ಸ್ವೈರಥಾಕಾರಂ ಚತುರ್ಥಂ ಲವಣಂ ಸ್ಮೃತಂ ॥ ೨೫ ॥

ಪಂಚಮಂ ಧೃತಿಮದ್ವರ್ಷಂ ಷಷ್ಠಂ ವರ್ಷಂ ಪ್ರಭಾಕರಂ ।
ಸಪ್ತಮಂ ಕಪಿಲಂ ನಾಮ ಕಪಿಲಸ್ಯ ಪ್ರಕೀರ್ತಿತಂ ॥ ೨೬ ॥

---

ಅಂಧಕನು ಆಳಿದ ದೇಶಕ್ಕೆ ಅಂಧಕದೇಶವೆಂದೂ, ಮುನಿಯು ಆಳಿದ ದೇಶಕ್ಕೆ ಮುನಿದೇಶವೆಂದೂ, ದುಂದುಭಿಯು ಆಳಿದ ದೇಶಕ್ಕೆ ದುಂದುಭಿದೇಶವೆಂದೂ, ನಾಮಗಳು ಪ್ರಾಪ್ತವಾಗಿವೆ. ಹೀಗೆ ಕ್ರೌಂಚದ್ವೀಪದಲ್ಲಿ ಏಳುಜನ ರಾಜರಿಂದ ಏಳು ದ್ವೀಪಗಳು ಪ್ರಖ್ಯಾತಿಗೊಂಡಿದ್ದುವು.

೨೪. ಕುಶದ್ವೀಪಾಧಿಪತಿಯಾದ ಜ್ಯೋತಿಷ್ಮಂತನಿಗೆ ಮಹಾಶೂರರಾದ ಉದ್ಭಿದ, ವೇಣುಮಂತ, ಸ್ವೈರಥ, ಲವಣ, ಧೃತಿ, ಪ್ರಭಾಕರ, ಕಪಿಲರೆಂಬ ಏಳುಜನ ಪ್ರಭಾವಶಾಲಿಗಳಾದ ಮಕ್ಕಳು ಉದ್ಭವಿಸಿದರು.

೨೫-೨೬. ಮೊದಲನೆಯ ವರ್ಷಕ್ಕೆ ಉದ್ಭಿದವರ್ಷವೆಂದೂ, ಎರಡನೆಯದಕ್ಕೆ ವೇಣುಮಂಡಲವರ್ಷವೆಂದೂ, ಮೂರನೆಯ ದೇಶಕ್ಕೆ ಸ್ವೈರಥವರ್ಷವೆಂದೂ, ನಾಲ್ಕನೆಯವರ್ಷಕ್ಕೆ ಲವಣವರ್ಷವೆಂದೂ, ಐದನೆಯಭಾಗಕ್ಕೆ ಧೃತಿಮಂತವರ್ಷವೆಂದೂ ಆರನೆಯಭಾಗಕ್ಕೆ ಪ್ರಭಾಕರವರ್ಷವೆಂದೂ ಏಳನೆಯಭಾಗಕ್ಕೆ ಕಪಿಲವರ್ಷವೆಂದೂ ನಾಮಗಳು ಪ್ರಾಪ್ತವಾಗಿದ್ದುವು.

ತೇಷಾಂ ದ್ವೀಪಾಃ ಕುಶದ್ವೀಪೇ ತತ್ಸನಾಮಾನ ಏವ ತು ।
ಆಶ್ರಮಾಚಾರಯುಕ್ತಾಭಿಃ ಪ್ರಜಾಭಿಃ ಸಮಲಂಕೃತಾಃ ॥ ೨೭ ॥

ಶಾಲ್ಮಲಸ್ಯೇಶ್ವರಾಃ ಸಪ್ತ ಪುತ್ರಾಸ್ತೇ ತು ವಪುಷ್ಮತಃ ।
ಶ್ವೇತಶ್ಚ ಹರಿತಶ್ಚೈವ ಜೀಮೂತೋ ರೋಹಿತಸ್ತಥಾ ॥
ವೈದ್ಯುತೋ ಮಾನಸಶ್ಚೈವ ಸುಪ್ರಭಃ ಸಪ್ತಮಸ್ತಥಾ ॥ ೨೮ ॥

ಶ್ವೇತಸ್ಯ ಶ್ವೇತದೇಶಸ್ತು ರೋಹಿತಸ್ಯ ಚ ರೋಹಿತಃ ।
ಜೀಮೂತಸ್ಯ ಚ ಜೀಮೂತೋ ಹರಿತಸ್ಯ ಚ ಹಾರಿತಃ ॥ ೨೯ ॥

ವೈದ್ಯುತೋ ವೈದ್ಯುತಸ್ಯಾಪಿ ಮಾನಸಸ್ಯಾಪಿ ಮಾನಸಃ ।
ಸುಪ್ರಭಃ ಸುಪ್ರಭಸ್ಯಾಪಿ ಸಪ್ತೈತೇ ದೇಶಪಾಲಕಾಃ ॥ ೩೦ ॥

---

೨೭. ಕುಶದ್ವೀಪದ ರಾಜಕುಮಾರರ ನಾಮಗಳೇ ಅವರವರು ಆಳಿದ ದೇಶಗಳಿಗೆ ಉಂಟಾಗಿವೆ. ಆ ಎಲ್ಲಾ ದ್ವೀಪಗಳಲ್ಲಿದ್ದ ಪ್ರಜೆಗಳೂ, ಆಶ್ರಮವಂತರೂ, ಆಚಾರವಂತರೂ, ಗುಣವಂತರೂ, ಕೀರ್ತಿವಂತರೂ ಆಗಿ ಆಯಾ ದ್ವೀಪಗಳಿಗೆ ಅಲಂಕಾರಪ್ರಾಯರಾಗಿದ್ದರು.

೨೮. ಶಾಲ್ಮಲೀದ್ವೀಪಾಧಿಪತಿಯಾದ ವಪುಷ್ಮಂತನಿಗೆ ಶ್ವೇತ, ಹರಿತ, ಜೀಮೂತ, ರೋಹಿತ, ವೈದ್ಯುತ, ಮಾನಸ, ಸುಪ್ರಭರೆಂಬ ಏಳುಜನ ಮಕ್ಕಳಿದ್ದರು

೨೯-೩೦. ಈ ಏಳುಜನರೂ ಶಾಲ್ಮಲೀದ್ವೀಪದ ಒಂದೊಂದು ದೇಶಗಳಿಗೆ ಪಾಲಕರಾಗಿರುವರು. ಶ್ವೇತನು ರಾಜನಾಗಿದ್ದ ದೇಶಕ್ಕೆ ಶ್ವೇತವರ್ಷವೆಂದೂ, ಹರಿತನ ದೇಶಕ್ಕೆ ಹರಿತವರ್ಷವೆಂದೂ, ಜೀಮೂತನ ದೇಶಕ್ಕೆ ಜೀಮೂತವರ್ಷವೆಂದೂ, ರೋಹಿತನ ದೇಶಕ್ಕೆ ರೋಹಿತವರ್ಷವೆಂದೂ, ವೈದ್ಯುತನು ರಾಜನಾಗಿದ್ದ ದೇಶಕ್ಕೆ ವೈದ್ಯುತವರ್ಷವೆಂದೂ, ಮಾನಸನದೇಶಕ್ಕೆ ಮಾನಸವರ್ಷವೆಂದೂ, ಸುಪ್ರಭನು ಪ್ರಭುವಾದ ದೇಶಕ್ಕೆ ಸುಪ್ರಭವರ್ಷವೆಂದೂ, ನಾಮಗಳು ಉಂಟಾಗಿವೆ. ಈ ಮೇಲೆ ಹೇಳಿದ ಏಳುಜನಗಳೂ ಏಳುದೇಶಗಳನ್ನು ಧರ್ಮದಿಂದ ಆಳುತ್ತಿದ್ದರು.

ಸಪ್ತದ್ವೀಪೇ ತು ವಕ್ಷ್ಯಾಮಿ ಜಂಬೂದ್ವೀಪಾದನಂತರಂ ।
ಸಪ್ತ ಮೇಧಾತಿಥೇಃ ಪುತ್ರಾಃ ಪ್ಲಕ್ಷದ್ವೀಪೇಶ್ವರಾ ನೃಪಾಃ ॥ ೩೧ ॥

ಜ್ಯೇಷ್ಠಃ ಶಾಂತಭಯಸ್ತೇಷಾಂ ಸಪ್ತವರ್ಷಾಣಿ ತಾನಿ ವೈ ।
ತಸ್ಮಾಚ್ಛಾಂತಭಯಾಚ್ಚೈವ ಶಿಶಿರಸ್ತು ಸುಖೋದಯಃ ॥
ಆನಂದಶ್ಚ ಧ್ರುವಶ್ಚೈವ ಕ್ಷೇಮಕಶ್ಚ ಶಿವಸ್ತಥಾ ॥ ೩೨ ॥

ತಾನಿ ತೇಷಾಂ ಸನಾಮಾನಿ ಸಪ್ತವರ್ಷಾಣಿ ಭಾಗಶಃ ।
ನಿವೇಶಿತಾನಿ ತೈಸ್ತಾನಿ ಪೂರ್ವೇ ಸ್ವಾಯಂಭುವೇಽಂತರೇ ॥ ೩೩ ॥

ಮೇಧಾತಿಥೇಸ್ತು ಪುತ್ರೈಸ್ತೈಃ ಸಪ್ತದ್ವೀಪನಿವಾಸಿಭಿಃ ।
ವರ್ಣಾಶ್ರಮಾಚಾರಯುಕ್ತಾಃ ಪ್ಲಕ್ಷದ್ವೀಪೇ ಪ್ರಜಾಃ ಕೃತಾಃ ॥ ೩೪ ॥

ಪ್ಲಕ್ಷದ್ವೀಪಾದಿಕೇಷ್ವೇವ ಶಾಕದ್ವೀಪಾಂತರೇಷು ವೈ ।
ಜ್ಞೇಯಃ ಪಂಚಸು ಧರ್ಮೋ ವೈ ವರ್ಣಾಶ್ರಮವಿಭಾಗಶಃ ॥ ೩೫ ॥

---

೩೧. ಸಪ್ತ ದ್ವೀಪಗಳಲ್ಲಿ ಒಂದೂ, ಜಂಬೂದ್ವೀಪದ ಪಕ್ಕದಲ್ಲಿರುವುದೂ ಆದ ಪ್ಲಕ್ಷದ್ವೀಪದ ಅಧಿಪತಿಯಾದ ಮೇಧಾತಿಥಿಗೆ ಏಳುಜನ ಮಕ್ಕಳಿದ್ದರು. ಅವರು ಪ್ಲಕ್ಷ ದ್ವೀಪದಲ್ಲಿರುವ ಒಂದೊಂದು ದೇಶಗಳಿಗೂ ರಾಜರಾಗಿದ್ದರು.

೩೨-೩೩. ಪ್ಲಕ್ಷದ್ವೀಪೇಶ್ವರನಾದ ಮೇಧಾತಿಥಿಗೆ ಶಾಂತ, ಭಯ, ಶಿಶಿರ, ಸುಖೋದಯ, ಆನಂದ, ಧ್ರುವ, ಕ್ಷೇಮುಕ, ಶಿವ ಎಂಬ ಏಳುಜನ ಪುತ್ರರು ಜನಿಸಿ ಪ್ರತ್ಯೇಕವಾದ ವರ್ಷಗಳನ್ನು ಆಳಿದರು. ಪೂರ್ವದ ಸ್ವಾಯಂಭುವಮನ್ವಂತರದಲ್ಲಿ ಅವರು ಒಂದೊಂದು ದೇಶಗಳನ್ನು ಆಳಿ ಸ್ವನಾಮಗಳಿಂದ ಪ್ರಖ್ಯಾತಿಗೊಳಿಸಿದರು.

೩೪. ಮೇಧಾತಿಥಿಯ ಪುತ್ರರು ಸಪ್ತದ್ವೀಪಗಳಲ್ಲಿಯೂ ಪ್ರಖ್ಯಾತರಾಗಿದ್ದರು. ಅವರು ಪ್ಲಕ್ಷದ್ವೀಪದಲ್ಲಿ ವರ್ಣಾಶ್ರಮಾಚಾರಯುಕ್ತರಾದ ಪ್ರಜೆಗಳನ್ನು ಧರ್ಮದಿಂದ ಪಾಲಿಸುತ್ತಿದ್ದರು.

೩೫-೩೬. ಮೇಲೆ ಹೇಳಿದ ಪ್ಲಕ್ಷದ್ವೀಪ ಮೊದಲುಗೊಂಡು ಶಾಕದ್ವೀಪದ ವರೆಗೂ ಇರುವ ಐದು ದ್ವೀಪಗಳಲ್ಲಿಯೂ ವರ್ಣಾಶ್ರಮಾಚಾರವಿಭಾಗಗಳೂ, ಧರ್ಮ

ಸುಖಮಾಯುಶ್ಚ ರೂಪಂ ಚ ಬಲಂ ಧರ್ಮಶ್ಚ ನಿತ್ಯಶಃ ।
ಪಂಚಸ್ವೇತೇಷು ದ್ವೀಪೇಷು ಸರ್ವ ಸಾಧಾರಣಂ ಸ್ಮೃತಂ ॥ ೩೬ ॥

ಸಪ್ತದ್ವೀಪಪರಿಕ್ರಾಂತಂ ಜಂಬೂದ್ವೀಪಂ ನಿಬೋಧತ ।
ಆಗ್ನೀಧ್ರಂ ಜ್ಯೇಷ್ಠದಾಯಾದಂ ಕನ್ಯಾಪುತ್ರಂ ಮಹಾಬಲಂ ॥
ಪ್ರಿಯವ್ರತೋಽಭ್ಯಷಿಂಚತ್ತಂ ಜಂಬೂದ್ವೀಪೇಶ್ವರಂ ನೃಪಂ ॥ ೩೭ ॥

ತಸ್ಯ ಪುತ್ರಾ ಬಭೂವುರ್ಹಿ ಪ್ರಜಾಪತಿಸಮೌಜಸಃ ।
ಜ್ಯೇಷ್ಠೋ ನಾಭಿರಿತಿ ಖ್ಯಾತಸ್ತಸ್ಯ ಕಿಂಪುರುಷೋಽನುಜಃ ॥ ೩೮ ॥

ಹರಿವರ್ಷಸ್ತೃತೀಯಸ್ತು ಚತುರ್ಥೋಽಭೂದಿಲಾವೃತಃ ।
ರಮ್ಯಃ ಸ್ಯಾತ್ಪಂಚಮಃ ಪುತ್ರೋ ಹರಿನ್ಮಾನ್ ಷಷ್ಠ ಉಚ್ಯತೇ ॥ ೩೯ ॥

ಕುರುಸ್ತು ಸಪ್ತಮಸ್ತೇಷಾಂ ಭದ್ರಾಶ್ವೋ ಹ್ಯಷ್ಟಮಃ ಸ್ಮೃತಃ ।
ನವಮಃ ಕೇತುಮಾಲಸ್ತು ತೇಷಾಂ ದೇಶಾನ್ನಿಬೋಧತ ॥ ೪೦ ॥

---

ಗಳೂ, ಸುಖ, ಆಯುಸ್ಸು, ರೂಪ, ಬಲ, ಧರ್ಮ ಇವುಗಳು ಸಮನಾಗಿಯೂ ಏಕ ರೀತಿಯಾಗಿಯೂ ಇದ್ದುವು.

೩೭. ಈಗ ಸಪ್ತದ್ವೀಪಗಳಿಂದ ಆವರಿಸಲ್ಪಟ್ಟ ಜಂಬೂದ್ವೀಪದ ವಿಷಯಗಳನ್ನು ಹೇಳುವೆನು ಕೇಳಿ. ಇಂತಹ ಜಂಬೂದ್ವೀಪದಲ್ಲಿ ಪ್ರಿಯವ್ರತರಾಜನು ತನ್ನ ಹಿರಿಯ ಸುತನೂ, ಕಾಮ್ಯಪುತ್ರನೂ, ಮಹಾಬಲಶಾಲಿಯೂ ಆದ ಆಗ್ನೀಧ್ರನನ್ನು ರಾಜನನ್ನಾಗಿ ಮಾಡಿದನು.

೩೮-೪೦. ಆ ಆಗ್ನೀಧ್ರನಿಗೆ ಬ್ರಹ್ಮನಿಗೆ ಸಮಾನತೇಜಸ್ವಿಗಳಾದ ಒಂಭತ್ತು ಜನ ಮಕ್ಕಳು ಹುಟ್ಟಿದರು. ಆ ಮಕ್ಕಳಲ್ಲಿ ನಾಭಿರಾಜನು ಹಿರಿಯವನಾಗಿದ್ದನು. ಎರಡನೆಯವನು ಕಿಂಪುರುಷನೂ, ಮೂರನೆಯವನು ಹರಿವರ್ಷನೂ ನಾಲ್ಕನೆಯವನು ಇಲಾವೃತನೂ, ಐದನೆಯವನು ರಮ್ಯನೂ, ಆರನೆಯವನು ಹರಿನ್ಮಂತನೂ, ಏಳನೆ ಯವನು ಕುರುವೂ, ಎಂಟನೆಯವನು ಭದ್ರಾಶ್ವನೂ, ಒಂಭತ್ತನೆಯವನು ಕೇತು ಮೂಲನೂ ಆಗಿದ್ದರು. ಅವರು ಆಳಿದ ದೇಶಗಳ ನಾಮಗಳನ್ನು ತಿಳಿಸುವೆನು ಕೇಳಿ ಎಂದನು.

ನಾಭೇಸ್ತು ದಕ್ಷಿಣಂ ವರ್ಷಂ ಹಿಮಾಹ್ವಂ ತು ಪಿತಾ ದದೌ ।
ಹೇಮಕೂಟಂ ತು ಯದ್ವರ್ಷಂ ದದೌ ಕಿಂಪುರುಷಾಯ ತತ್ ॥ ೪೧ ॥

ನೈಷಧಂ ಯತ್ ಸ್ಮೃತಂ ವರ್ಷಂ ಹರಿವರ್ಷಾಯ ತದ್ದದೌ ।
ಮಧ್ಯಮಂ ಯತ್ಸುಮೇರೋಸ್ತು ಸ ದದೌ ತದಿಲಾವೃತೇ ॥ ೪೨ ॥

ನೀಲಂ ತು ಯತ್ ಸ್ಮೃತಂ ವರ್ಷಂ ರಮ್ಯಾಯೈತತ್ ಪಿತಾ ದದೌ ।
ಶ್ವೇತಂ ಯದುತ್ತರಂ ತಸ್ಮಾತ್ ಪಿತ್ರಾ ದತ್ತಂ ಹರಿನ್ಮತೇ ॥ ೪೩ ॥

ಯದುತ್ತರಂ ಶೃಂಗವತೋ ವರ್ಷಂ ತತ್ ಕುರವೇ ದದೌ ।
ವರ್ಷಂ ಮಾಲ್ಯವತಶ್ಚಾಪಿ ಭದ್ರಾಶ್ವಾಯ ನ್ಯವೇದಯತ್ ॥ ೪೪ ॥

ಗಂಧಮಾದನವರ್ಷಂ ತು ಕೇತುಮಾಲೇ ನ್ಯವೇದಯತ್ ।
ಇತ್ಯೇತಾನಿ ಮಹಾಂತೀಹ ನವ ವರ್ಷಾಣಿ ಭಾಗಶಃ ॥ ೪೫ ॥

ಆಗ್ನೀಧ್ರಸ್ತೇಷು ಸರ್ವೇಷು ಪುತ್ರಾಂಸ್ತಾನಭ್ಯಷಿಂಚತ ।
ಯಥಾಕ್ರಮಂ ಸ ಧರ್ಮಾತ್ಮಾ ತತಸ್ತು ತಪಸಿ ಸ್ಥಿತಃ ॥ ೪೬ ॥

---

೪೧-೪೫ ತಂದೆಯು ಹಿರಿಯ ಕುಮಾರನಾದ ನಾಭಿರಾಜನಿಗೆ ದಕ್ಷಿಣಭಾಗದಲ್ಲಿದ್ದ ಹಿಮವರ್ಷವನ್ನೂ, ಕಿಂಪುರುಷನಿಗೆ ಹೇಮಕೂಟವೆಂದು ಪ್ರಸಿದ್ಧವಾದ ವರ್ಷವನ್ನೂ, ಹರಿವರ್ಷನಿಗೆ ನೈಷಧವರ್ಷವನ್ನೂ, ಇಲಾವೃತನಿಗೆ ಮೇರುವಿನ ಮಧ್ಯದಲ್ಲಿದ್ದ ಇಲಾವೃತವರ್ಷವನ್ನೂ, ರಮ್ಯನಿಗೆ ನೀಲವೆಂದು ಪ್ರಖ್ಯಾತವಾದ ವರ್ಷವನ್ನೂ, ಹರಿನ್ಮಂತನಿಗೆ ಉತ್ತರಭಾಗದಲ್ಲಿದ್ದ ಶ್ವೇತವರ್ಷವನ್ನೂ, ಕುರುರಾಜನಿಗೆ ಉತ್ತರಭಾಗದಲ್ಲಿದ್ದ ಶೃಂಗವಂತವರ್ಷವನ್ನೂ, ಭದ್ರಾಶ್ವನಿಗೆ ಮಾಲ್ಯವಂತವರ್ಷವನ್ನೂ, ಕೇತುಮಾಲಿಗೆ ಗಂಧಮಾದನವರ್ಷವನ್ನೂ ಕೊಟ್ಟನು. ಈ ರೀತಿಯಾಗಿ ಜಂಬೂದ್ವೀಪಕ್ಕೆ ಸೇರಿದ ಒಂಬತ್ತುವರ್ಷಗಳೂ ಆಯಾ ರಾಜರ ಸಹಿತವಾಗಿ ವರ್ಣಿಸಲ್ಪಟ್ಟಿವೆ.

೪೬. ಆಗ್ನೀಧ್ರನು ಆ ನವದ್ವೀಪಗಳಲ್ಲಿಯೂ ಒಂಬತ್ತುಜನ ಮಕ್ಕಳನ್ನು ಪಟ್ಟಾಭಿಷಿಕ್ತರನ್ನಾಗಿ ಮಾಡಿ ರಾಜ್ಯಗಳನ್ನು ಸ್ಥಾಪಿಸಿ ಧರ್ಮಸಂಪಾದನೆಗಾಗಿ ತಪಸ್ಸಿಗೆ ಹೊರಟನು.

ಇತ್ಯೇತೈಃ ಸಪ್ತಭಿಃ ಕೃತ್ಸ್ನಾಃ ಸಪ್ತದ್ವೀಪಾ ನಿವೇಶಿತಾಃ ।
ಪ್ರಿಯವ್ರತಸ್ಯ ಪುತ್ರೈಸ್ತೈಃ ಪೌತ್ರೈಃ ಸ್ವಾಯಂಭುವಸ್ಯ ತು ॥ ೪೭ ॥

ಯಾನಿ ಕಿಂಪುರುಷಾದ್ಯಾನಿ ವರ್ಷಾಣ್ಯಷ್ಟೌ ಶುಭಾನಿ ತು ।
ತೇಷಾಂ ಸ್ವಭಾವತಃ ಸಿದ್ಧಿಃ ಸುಖಪ್ರಾಯಾ ಹ್ಯಯತ್ನತಃ ॥ ೪೮ ॥

ವಿಪರ್ಯಯೋ ನ ತೇಷ್ವಸ್ತಿ ಜರಾಮೃತ್ಯುಭಯಂ ನ ಚ ।
ಧರ್ಮಾಧರ್ಮೌ ನ ತೇಷ್ವಾಸ್ತಾಂ ನೋತ್ತಮಾಧಮಮಧ್ಯಮಾಃ ।
ನ ತೇಷ್ವಸ್ತಿ ಯುಗಾವಸ್ಥಾ ಕ್ಷೇತ್ರೇಷ್ವೇವ ತು ಸರ್ವಶಃ ॥ ೪೯ ॥

ನಾಭೇರ್ಹಿ ಸರ್ಗಂ ವಕ್ಷ್ಯಾಮಿ ಹಿಮಾಹ್ವೇ ತನ್ನಿಬೋಧತ ।
ನಾಭಿಸ್ತ್ವಜನಯತ್ಪುತ್ರಂ ಮೇರುದೇವ್ಯಾಂ ಮಹಾದ್ಯುತಿಃ ॥
ಋಷಭಂ ಪಾರ್ಥಿವಶ್ರೇಷ್ಠಂ ಸರ್ವಕ್ಷತ್ರಸ್ಯ ಪೂರ್ವಜಂ ॥ ೫೦ ॥

---

೪೭. ಈರೀತಿಯಾಗಿ ಸ್ವಾಯಂಭುವಮನುವಿನ ಮೊಮ್ಮಕ್ಕಳೂ, ಪ್ರಿಯವ್ರತ ರಾಜನ ಮಕ್ಕಳೂ ಆದ ಏಳುಜನ ರಾಜರು ಸಂಪೂರ್ಣವಾಗಿ ಸಪ್ತದ್ವೀಪಗಳನ್ನು ಸ್ವಾಧೀನಮಾಡಿಗೊಂಡು ಯಶಸ್ವಿಗಳಾಗಿ ಪಾಲಿಸಿದರು.

೪೮. ಕಿಂಪುರುಷವರ್ಷವೇ ಆದಿಯೂ, ಮಂಗಳಕರಗಳೂ ಆದ ಯಾವ ಎಂಟುವರ್ಷಗಳಿದ್ದುವೋ ಅವುಗಳಲ್ಲಿ ವಾಸಿಸುವ ಪ್ರಜೆಗಳಿಗೆ ಅಪ್ರಯತ್ನವಾಗಿ ಸುಖ ಪ್ರಾಪ್ತಿಗಳೂ, ಫಲಗಳೂ ಉಂಟಾಗುತ್ತಿದ್ದುವು.

೪೯. ಅವರಲ್ಲಿ ಯಾವವಿಧವಾದ ವೈಷಮ್ಯವೂ ಇರಲಿಲ್ಲ. ಮತ್ತು ಜರಾ ಮರಣಗಳ ಭೀತಿಯೂ, ಧರ್ಮಾಧರ್ಮವಿಭಾಗವೂ, ಉತ್ತಮಾಧಮಮಧ್ಯಮ ಭಾವವೂ, ಆಯಾ ಯುಗಗಳಲ್ಲಿ ಆಗುವ ಯುಗಮಹಿಮೆಯ ವ್ಯತ್ಯಾಸವೂ ಕೂಡ ಸ್ವಲ್ಪವೂ ಕಂಡುಬರಲಿಲ್ಲ.

೫೦. ಹಿಮವರ್ಷದ ಪ್ರಭುವಾದ ನಾಭಿರಾಜನ ವಿಷಯಗಳನ್ನು ವರ್ಣಿಸುವೆನು ಕೇಳಿರಿ. ಮಹಾಶೂರನಾದ ನಾಭಿರಾಜನು ಮೇರುದೇವಿಯಲ್ಲಿ ಕ್ಷತ್ರಿಯವಂಶಕ್ಕೆ ಮೂಲಪುರುಷನೂ, ನೃಪಶ್ರೇಷ್ಠನೂ, ಅತಿ ತೇಜಸ್ವಿಯೂ ಆದ ಋಷಭನೆಂಬ ಪುತ್ರನನ್ನು ಪಡೆದನು.

ಋಷಭಾದ್ಭರತೋ ಜಜ್ಞೇ ವೀರಃ ಪುತ್ರಶತಾಗ್ರಜಃ ।
ಸೋಽಭಿಷಿಚ್ಯಾಥ ಭರತಃ ಪುತ್ರಂ ಪ್ರಾವ್ರಾಜ್ಯಮಾಸ್ಥಿತಃ ॥ ೫೧ ॥

ಹಿಮಾಹ್ವಂ ದಕ್ಷಿಣಂ ವರ್ಷಂ ಭರತಾಯ ನ್ಯವೇದಯತ್ ।
ತಸ್ಮಾತ್ತದ್ಭಾರತಂ ವರ್ಷಂ ತಸ್ಯ ನಾಮ್ನಾ ವಿದುರ್ಬುಧಾಃ ॥ ೫೨ ॥

ಭರತಸ್ಯಾತ್ಮಜೋ ವಿದ್ವಾನ್ ಸುಮತಿರ್ನಾಮ ಧಾರ್ಮಿಕಃ ।
ಬಭೂವ ತಸ್ಮಿಂಸ್ತದ್ರಾಜ್ಯಂ ಭರತಃ ಸಂಯಯೋಜಯತ್ ॥
ಪುತ್ರಸಂಕ್ರಾಮಿತಶ್ರೀಕೋ ವನಂ ರಾಜಾ ವಿವೇಶಸಃ ॥ ೫೩ ॥

ತೇಜಸಸ್ತು ಸುತಶ್ಚಾಪಿ ಪ್ರಜಾಪತಿರಮಿತ್ರಜಿತ್ ।
ತೈಜಸಸ್ಯಾತ್ಮಜೋ ವಿದ್ವಾನ್ ಇಂದ್ರದ್ಯುಮ್ನ ಇತಿ ಶ್ರುತಃ ॥ ೫೪ ॥

---

೫೧-೫೨. ಆ ಋಷಭರಾಜನಿಗೆ ನೂರಾರು ಮಕ್ಕಳು ಹುಟ್ಟಿದರು. ಅವರಲ್ಲಿ ಭರತನು ಅಗ್ರಜನೂ, ಶೂರನೂ ಆಗಿದ್ದನು. ತಂದೆಯಾದ ಋಷಭನು ಹಿರಿಯವನಾದ ಭರತನಿಗೆ ಪಟ್ಟಾಭಿಷೇಕಮಾಡಿ ದಕ್ಷಿಣಭಾಗದಲ್ಲಿದ್ದ ಹಿಮವರ್ಷವನ್ನು ಅವನಿಗೆ ಕೊಟ್ಟು ತಾನು ವೈರಾಗ್ಯದಿಂದ (ತಪಸ್ಸಿಗಾಗಿ ಹೊರಟನು) ತಪಸ್ವಿಯಾದನು. ಆ ಭರತನು ಆಳಿದ ವರ್ಷವನ್ನು ಜ್ಞಾನಿಗಳು ಭಾರತವರ್ಷವೆಂದು ಹೇಳುವರು.

೫೩. ಆ ಭರತನಿಗೆ ವಿದ್ವಾಂಸನೂ, ಧಾರ್ಮಿಕನೂ, ಸುಮತಿನಾಮಕನೂ ಆದ ಪುತ್ರನು ಹುಟ್ಟಿದನು. ತಂದೆಯಾದ ಭರತನು ಜ್ಞಾನಿಯಾದ ತನ್ನ ಮಗನಿಗೆ ತನ್ನ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿದನು. ಅನಂತರ ಭರತನು ತನ್ನ ಮಗನಿಗೆ ರಾಜ್ಯವನ್ನು ಕೊಟ್ಟು ತಪಸ್ಸನ್ನು ಮಾಡುವುದಕ್ಕಾಗಿ ವನಕ್ಕೆ ಹೊರಟು ಹೋದನು.

೫೪. ಆ ಸುಮತಿಗೆ ಶತ್ರುಸಂಹಾರಕನೂ, ಪ್ರಜಾಪರಿಪಾಲಕನೂ ಆದ ತೇಜಸನೆಂಬ ಕುಮಾರನೂ, ಅವನಿಗೆ ಜ್ಞಾನಿಯಾದ ಇಂದ್ರದ್ಯುಮ್ನನೆಂಬ ಸುತನೂ ಜನಿಸಿದರು.

ಪರಮೇಷ್ಠೀ ಸುತಶ್ಚಾಥ ನಿಧನೇ ತಸ್ಯ ಶೋಭನಃ ।
ಪ್ರತೀಹಾರಕುಲೇ ತಸ್ಯ ನಾಮ್ನಾ ಜಜ್ಞೀ ತದನ್ವಯಾತ್ ॥
ಪ್ರತಿಹರ್ತೇತಿ ವಿಖ್ಯಾತೋ ಜಜ್ಞೇ ತಸ್ಯಾಪಿ ಧೀಮತಃ ॥ ೫೫ ॥

ಉನ್ನೇತಾ ಪ್ರತಿಹರ್ತಸ್ತು ಭುವಸ್ತಸ್ಯ ಸುತಃ ಸ್ಮೃತಃ ।
ಉದ್ಗೀಥಸ್ತಸ್ಯ ಪುತ್ರೋಽಭೂತ್ಪ್ರತಾವಿಶ್ಚಾಪಿ ತತ್ಸುತಃ ॥ ೫೬ ॥

ಪ್ರತಾವೇಸ್ತು ವಿಭುಃ ಪುತ್ರಃ ಪೃಥುಸ್ತಸ್ಯ ಸುತೋ ಮತಃ ।
ಪೃಥೋಶ್ಚಾಪಿ ಸುತೋ ನಕ್ತೋ ನಕ್ತಸ್ಯಾಪಿ ಗಯಃ ಸ್ಮೃತಃ ॥ ೫೭ ॥

ಗಯಸ್ಯ ತು ನರಃ ಪುತ್ರೋ ನರಸ್ಯಾಪಿ ಸುತೋ ವಿರಾಟ್ ।
ವಿರಾಟ್ಸುತೋ ಮಹಾವೀರ್ಯೋ ಧೀಮಾಂಸ್ತಸ್ಯ ಸುತೋಽಭವತ್॥ ೫೮ ॥

ಧೀಮತಶ್ಚ ಮಹಾನ್ ಪುತ್ರೋ ಮಹತಶ್ಚಾಪಿ ಭೌವನಃ ।
ಭೌವನಸ್ಯ ಸುತಸ್ತ್ವಷ್ಟಾ ಅರಿಜಸ್ತಸ್ಯ ಚಾತ್ಮಜಃ ॥ ೫೯ ॥

---

೫೫. ಆ ಇಂದ್ರದ್ಯುಮ್ನನಿಗೆ ಪರಮೇಷ್ಠಿಯೆಂಬ ಮಗನೂ, ಅವನಿಗೆ ಶೋಭನ ನಾಮಕ ಸುತನೂ, ಅವನಿಗೆ ಪ್ರತೀಹಾರನಾಮಕ ಕುಮಾರನೂ ಹುಟ್ಟಿದರು. ಅವನ ನಾಮವೇ ಅವನ ವಂಶಕ್ಕೂ ಬಂದಿದೆ. ಜ್ಞಾನಿಯಾದ ಪ್ರತೀಹಾರನಿಗೆ ಪ್ರತಿಹರ್ತ ನೆಂಬ ಪುತ್ರನೂ ಜನಿಸಿದನು.

೫೬. ಆ ಪ್ರತಿಹರ್ತನಿಗೆ ಉನ್ನೇತನೆಂಬ ಪುತ್ರನೂ, ಅವನಿಗೆ ಉದ್ಗೀತನೆಂಬ ಸುತನೂ, ಅವನಿಗೆ ಪ್ರತಾವಿಯೆಂಬ ಮಗನೂ ಹುಟ್ಟಿದರು.

೫೭. ಆ ಪ್ರತಾವಿಗೆ ವಿಭುವೆಂಬುವನೂ, ಅವನಿಗೆ ಪೃಥುವೆಂಬುವನೂ, ಅವನಿಗೆ ನಕ್ತನೆಂಬುವನೂ, ಅವನಿಗೆ ಗಯನೆಂಬ ಕುಮಾರನೂ ಹುಟ್ಟಿದರು.

೫೮. ಆ ಗಯನಿಗೆ ನರನಾಮಕನಾದ ಸುತನೂ, ಆ ನರನಿಗೆ ವಿರಾಟನೆಂಬ ಪುತ್ರನೂ, ಆ ವಿರಾಟನಿಗೆ ಮಹಾವೀರ್ಯನೂ, ಅವನಿಗೆ ಧೀಮಂತನೆಂಬ ಕುಮಾರನೂ ಹುಟ್ಟಿದರು.

೫೯-೬೦. ಆ ಧೀಮಂತನಿಗೆ ಮಹಾಂತನೂ, ಆ ಮಹಾಂತನಿಗೆ ಭೌವನನೂ, ಅವನಿಗೆ ತ್ವಷ್ಟನೆಂಬ ಕುಮಾರನೂ, ಅವನಿಗೆ ಅರಿಜನೆಂಬ ಸುತನೂ, ಅವನಿಗೆ ರಜಸ

ಅರಿಜಸ್ಯ ರಜಃ ಪುತ್ರಃ ಶತಜಿದ್ರಜಸೋ ಮತಃ ।
ತಸ್ಯ ಪುತ್ರಶತಂಸ್ತ್ವಾಸೀದ್ರಾಜಾನಃ ಸರ್ವ ಏವ ತೇ ॥ ೬೦ ॥

ವಿಶ್ವಜ್ಯೋತಿಃ ಪ್ರಧಾನಾ ಯ್ಯೈಸ್ತೈರಿಮಾ ವರ್ಧಿತಾಃ ಪ್ರಜಾಃ ।
ತೈರಿದಂ ಭಾರತಂ ವರ್ಷಂ ಸಪ್ತಖಂಡಂ ಕೃತಂ ಪುರಾ ॥ ೬೧ ॥

ತೇಷಾಂ ವಂಶಪ್ರಸೂತೈಸ್ತು ಭುಕ್ತೇಯಂ ಭಾರತೀ ಧರಾ ।
ಕೃತತ್ರೇತಾದಿಯುಕ್ತಾನಿ ಯುಗಾಖ್ಯಾನ್ಯೇಕಸಪ್ತತಿಃ ॥ ೬೨ ॥

ಯೇಽತೀತಾಸ್ತೈರ್ಯುಗೈಃ ಸಾರ್ಧಂ ರಾಜಾನಸ್ತೇ ತದನ್ವಯಾಃ ।
ಸ್ವಾಯಂಭುವೇಽಂತರೇ ಪೂರ್ವಂ ಶತಶೋಽಥ ಸಹಸ್ರಶಃ ॥ ೬೩ ॥

ಏಷ ಸ್ವಾಯಂಭುವಃ ಸರ್ಗೋ ಯೇನೇದಂ ಪೂರಿತಂ ಜಗತ್ ।
ಋಷಿಭಿರ್ದೇವತೈಶ್ಚಾಪಿ ಪಿತೃಗಂಧರ್ವರಾಕ್ಷಸೈಃ ॥ ೬೪ ॥

---

ನೆಂಬುವನೂ, ಆ ರಜಸನಿಗೆ ಶತಜಿತನೆಂಬ ತನೂಜನೂ ಹುಟ್ಟಿದರು. ಆ ಶತಜಿತನಿಗೆ ನೂರಾರು ಮಕ್ಕಳು ಹುಟ್ಟಿದರು. ಅವರೆಲ್ಲರೂ ರಾಜರಾಗಿಯೂ ಪ್ರಸಿದ್ಧರಾಗಿಯೂ ಇದ್ದರು.

೬೧. ಆ ಮಕ್ಕಳಲ್ಲಿ ವಿಶ್ವಜ್ಯೋತಿಯು ಮುಖ್ಯನಾಗಿದ್ದನು. ಆ ಮಕ್ಕಳು ಈ ಜಗತ್ತೆಲ್ಲವನ್ನೂ ಆಕ್ರಮಿಸಿಕೊಂಡಿದ್ದರು. ಸಪ್ತಖಂಡಗಳಿಂದ ಸಹಿತವಾದ ಈ ಭಾರತವರ್ಷವು ಆ ಶತಜಿತನ ಮಕ್ಕಳಿಂದ ವ್ಯಾಪ್ತವಾಗಿತ್ತು. ಅವರೇ ಈ ಭಾರತ ವರ್ಷವನ್ನು ಸಪ್ತಖಂಡಗಳನ್ನಾಗಿ ವಿಭಾಗಮಾಡಿದರು.

೬೨. ಆ ವಂಶದಲ್ಲಿ ಹುಟ್ಟಿದ ರಾಜರು ಈ ಭಾರತವರ್ಷದ ಭೂಮಿಯನ್ನು ಭೋಗಿಸುತ್ತಿದ್ದರು. ಕೃತತ್ರೇತಾದಿ ಎಪ್ಪತ್ತೊಂದು ಚತುರ್ಯುಗಗಳು ಕಳೆದರೆ ಒಂದು ಮನ್ವಂತರವಾಗುವುದು.

೬೩. ಪೂರ್ವದ ಸ್ವಾಯಂಭುವಮನ್ವಂತರದಲ್ಲಿದ್ದ ಸಹಸ್ರಾರು ರಾಜರೂ, ಅವರ ವಂಶದವರೂ ಕೂಡ ಕೃತತ್ರೇತಾದಿಯುಗಗಳೊಡನೆ ಕಳೆದುಹೋದರು.

೬೪-೬೫. ಇದು ಸ್ವಾಯಂಭುವಮನುವಿನ ಸೃಷ್ಟಿಕ್ರಮವು. ಈ ಸ್ವಾಯಂಭುವ ಮನುವಿನ ಪುತ್ರಪೌತ್ರಾದಿಗಳಾದ ಋಷಿಗಳು, ದೇವತೆಗಳು, ಪಿತೃಗಳು, ಗಂಧರ್ವರು,

**ಯಕ್ಷಭೂತಪಿಶಾಚೈಶ್ಚ ಮನುಷ್ಯಮೃಗಪಕ್ಷಿಭಿಃ ।**
**ತೇಷಾಂ ಸೃಷ್ಟಿರಿಯಂ ಲೋಕೇ ಯುಗೈಃ ಸಹ ವಿವರ್ತತೇ ॥ ೬೫ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಸ್ವಾಯಂಭುವವಂಶಾನುಕೀರ್ತನಂ " ನಾಮ ತ್ರಯಸ್ತ್ರಿಂಶೋಽಧ್ಯಾಯಃ**

---

ರಾಕ್ಷಸರು, ಯಕ್ಷರು, ಭೂತಗಳು, ಪಿಶಾಚಗಳು, ಮನುಷ್ಯರು, ಮೃಗಗಳು ಮತ್ತು ಪಕ್ಷಿಗಳು ಇವುಗಳಿಂದ ಜಗತ್ತೆಲ್ಲಾ ಪೂರ್ಣವಾಗಿತ್ತು. ಅವರ ಸೃಷ್ಟಿಕ್ರಮವು ಆ ಯುಗಗಳ ಸಂಗಡ ಪುನಃಪುನಃ ಪರ್ಯಾಯವಾಗಿ ಸುತ್ತುವುದು.

ಹೀಗೆ ವಾಯುದೇವನಿಂದ ನಿರೂಪಿತವಾದ ಮಹಾಪುರಾಣದಲ್ಲಿ " ಸ್ವಾಯಂಭುವ ಮನುವಿನ ವಂಶವರ್ಣನೆ "ಯೆಂಬ ಮೂವತ್ತಮೂರನೆಯ ಅಧ್ಯಾಯವು ಸಮಾಪ್ತವು.

## ಮೂವತ್ತಮೂರನೆಯ ಅಧ್ಯಾಯದ ಸಾರಾಂಶ

ಇದರಲ್ಲಿ ಸ್ವಾಯಂಭುವಮನುವಿನ ವಂಶವು ವರ್ಣಿತವಾಗಿದೆ. ಆ ಸ್ವಾಯಂಭುವ ಮನುವಿಗೆ ಹತ್ತುಜನ ಮಕ್ಕಳಿದ್ದರು. ತಂದೆಯಾದ ಪ್ರಿಯವ್ರತರಾಜನು ಅಗ್ನೀಧ್ರ, ವಪುಷ್ಮಂತ, ಮೇಧ, ಮೇಧಾತಿಥಿ, ವಿಭು, ಜ್ಯೋತಿಷ್ಮಂತ, ದ್ಯುತಿಮಂತ, ಹವ್ಯವಾಹನ, ಮತ್ತು ಸರ್ವ ಇವರನ್ನು ಜಂಬು, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಪುಷ್ಕರ ಇವೇ ಮೊದಲಾದ ದ್ವೀಪಗಳಲ್ಲಿ ಕ್ರಮವಾಗಿ ಸ್ಥಾಪಿಸಿದನು. ಶಾಕ ದ್ವೀಪಾಧಿಪತಿಯಾದ ಹವ್ಯನಿಗೆ ಜಲದ, ಕೌಮಾರ, ಸುಕುಮಾರ, ಮಣೀಚಕ, ವಸುಮೋದ, ಸುಮೋದ, ಮಹಾದ್ರುಮರೆಂಬ ಏಳುಜನ ಮಕ್ಕಳಿದ್ದರು. ಅವರ ನಾಮಗಳೇ ಆಯಾ ದ್ವೀಪಗಳಿಗೂ ಪ್ರಖ್ಯಾತವಾಗಿದ್ದುವು. ದ್ಯುತಿಮಂತನಿಗೂ ಏಳು ಜನ ಮಕ್ಕಳು ಹುಟ್ಟಿ ತಮ್ಮ ನಾಮಗಳಿಂದಲೇ ಆಯಾ ದ್ವೀಪಗಳಲ್ಲಿ ಪ್ರಖ್ಯಾತರಾಗಿದ್ದರು. ಹಾಗೆಯೇ ಇತರರಿಗೂ ಏಳೇಳುಜನ ಮಕ್ಕಳು ಹುಟ್ಟಿ ಪ್ರಸಿದ್ಧರಾಗಿದ್ದರು. ಸಪ್ತದ್ವೀಪಗಳು ಜಂಬೂದ್ವೀಪವನ್ನು ಆವರಿಸಿಕೊಂಡಿವೆ. ಪ್ರಿಯವ್ರತನು ಅಗ್ನೀಧ್ರನನ್ನು ಜಂಬೂದ್ವೀಪದಲ್ಲಿ ಅಭಿಷೇಕಮಾಡಿದನು. ಅವನಿಗೆ ನಾಭಿಯೇ ಮೊದಲಾದ ಕುಮಾರರು ಹುಟ್ಟಿದರು. ನಾಭಿಯು ದಕ್ಷಿಣದೇಶಾಧಿಪತಿಯಾದನು. ಕಿಂಪುರುಷನಿಗೆ ಹೇಮಕೂಟವನ್ನೂ, ಹರಿವರ್ಷನಿಗೆ ನೈಷಧವನ್ನೂ, ಇಲಾವೃತನಿಗೆ ಮಧ್ಯದೇಶವನ್ನೂ, ರಮ್ಯನಿಗೆ ನೀಲವರ್ಷವನ್ನೂ, ಹರಿನ್ಮಂತನಿಗೆ ಶ್ವೇತವರ್ಷವನ್ನೂ, ಕುರುವಿಗೆ ಶೃಂಗವತವನ್ನೂ, ಮಾಲ್ಯವಂತನಿಗೆ ಭದ್ರಾಶ್ವವನ್ನೂ, ಕೇತುಮಾಲಿಗೆ ಗಂಧಮಾದನವನ್ನೂ, ಕೊಟ್ಟು ಆಯಾ ರಾಜ್ಯಗಳನ್ನು ಸ್ಥಾಪಿಸಿದನು. ಈ ಒಂಭತ್ತುವರ್ಷಗಳೂ ಆ ರಾಜರಿಂದ ಪ್ರಖ್ಯಾತವಾಗಿದ್ದುವು. ಆ ನಾಭಿಯ ವಂಶದಲ್ಲಿ ಭರತನು ಹುಟ್ಟಿದನು. ಅವನಿಂದ ಈ ವರ್ಷಕ್ಕೆ ಭಾರತವರ್ಷವೆಂಬ ನಾಮವು ಪ್ರಾಪ್ತವಾಗಿದೆ. ಅವನಿಗೆ ಸುಮತಿಯೇ ಮೊದಲಾದ ಮಕ್ಕಳು ಮೊಮ್ಮಕ್ಕಳು ಹುಟ್ಟಿದರು. ಅವರಿಂದ ಭರತಖಂಡವೆಲ್ಲವೂ ವ್ಯಾಪ್ತವಾಗಿತ್ತು ಎಂಬ ವಿಷಯ ನಿರೂಪಿತವಾಗಿವೆ.

—|| ಹರಿಃ ಓಮ್ ||—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಚತುಸ್ತ್ರಿಂಶೋಽಧ್ಯಾಯಃ

॥ ಋಷಯ ಊಚುಃ ॥

ಏವಂ ಪ್ರಜಾಸನ್ನಿವೇಶಂ ಶ್ರುತ್ವಾ ಚ ಋಷಿಪುಂಗವಃ ।
ಪ್ರಪ್ರಚ್ಛ ನಿಪುಣಃ ಸೂತಂ ಪೃಥಿವ್ಯಾಯಾಮವಿಸ್ತರೌ ॥ ೧ ॥

ಕತಿ ದ್ವೀಪಾಃ ಸಮುದ್ರಾ ವಾ ಪರ್ವತಾಶ್ಚ ಕತಿ ಪ್ರಭೋ ।
ಕಿಯಂತಿ ಚೈವ ವರ್ಷಾಣಿ ತೇಷು ನದ್ಯಶ್ಚ ಕಾಃ ಸ್ಮೃತಾಃ ॥ ೨ ॥

ಮಹಾಭೂತಪ್ರಮಾಣಂ ಚ ಲೋಕಾಲೋಕೌ ತಥೈವ ಚ ।
ಪರ್ಯಾಯಪರಿಮಾಣಂ ಚ ಗತಿಶ್ಚಂದ್ರಾರ್ಕಯೋಸ್ತಥಾ ॥
ಏತತ್ ಪ್ರಬ್ರೂಹಿ ನಃ ಸರ್ವಂ ವಿಸ್ತರೇಣ ಯಥಾ ತಥಾ ॥ ೩ ॥

---

## ಮೂವತ್ತನಾಲ್ಕನೆಯ ಅಧ್ಯಾಯವು

೧. ಮಹರ್ಷಿಗಳು ಹೇಳಿದರು:—ನೈಮಿಷಾರಣ್ಯವಾಸಿಗಳಾದ ಮುನಿಗಳು ಪೂರ್ವೋಕ್ತಕ್ರಮದಿಂದ ಪ್ರಜೆಗಳ ಸ್ಥಿತಿಗತಿಗಳನ್ನು ಕೇಳಿ ಸಂತುಷ್ಟರಾಗಿ ಪುರಾಣ ನಿರೂಪಣದಲ್ಲಿ ಸಮರ್ಥರಾದ ಸೂತಮುನಿಯನ್ನು ಕುರಿತು ಎಲೈ ಸೂತಮುನಿಯೇ, ಈ ಭೂಮಿಯ ಆಯಾಮವಿಸ್ತಾರಗಳೆಷ್ಟು ? ಇದನ್ನು ತಿಳಿಸಬೇಕೆಂದು ಕೇಳಿದರು.

೨. ಈ ವಿಶಾಲವಾದ ಪೃಥಿವಿಯಲ್ಲಿ ದ್ವೀಪಗಳು, ಸಮುದ್ರಗಳು, ಪರ್ವತಗಳು, ವರ್ಷಗಳು ಎಷ್ಟೆಷ್ಟು ಇವೆ? ಅವುಗಳಲ್ಲಿ ಯಾವಯಾವ ನದಿಗಳು ಹರಿಯುತ್ತವೆ? ಇವುಗಳನ್ನು ತಿಳಿಸಬೇಕೆಂದರು.

೩. ಮತ್ತು ಪೃಥಿವೀ ಮೊದಲಾದ ಮಹಾಭೂತಗಳ ಪರಿಮಾಣವೆಷ್ಟು ? ಲೋಕಾಲೋಕವೆಂಬ ಪರ್ವತದ ವಿಷಯವೇನು ? ಬ್ರಹ್ಮಾಂಡಪರಿಮಾಣ ಮತ್ತು ಚಂದ್ರಸೂರ್ಯರಗತಿ ಇವುಗಳನ್ನು ವಿಸ್ತಾರವಾಗಿ ನಿರೂಪಿಸಬೇಕೆಂದು ಕೇಳಿದರು.

॥ ಸೂತ ಉವಾಚ ॥

ಅಥ ಊರ್ಧ್ವಂ ಪ್ರವಕ್ಷ್ಯಾಮಿ ಪೃಥಿವ್ಯಾಯಾಮವಿಸ್ತರಂ ।
ಸಂಖ್ಯಾಶ್ಚೈವ ಸಮುದ್ರಾಣಾಂ ದ್ವೀಪಾನಾಂ ಚೈವ ವಿಸ್ತರಂ ॥ ೪ ॥

ಯಾವಂತಿ ಚೈವ ವರ್ಷಾಣಿ ತೇಷು ನದ್ಯಶ್ಚ ಯಾಃ ಸ್ಮೃತಾಃ ।
ಮಹಾಭೂತಪ್ರಮಾಣಂ ಚ ಲೋಕಾಲೋಕೌ ತಥೈವ ಚ ॥
ಪರ್ಯಾಯಪರಿಮಾಣಂ ಚ ಗತಿಶ್ಚಂದ್ರಾರ್ಕಯೋಸ್ತಥಾ ॥ ೫ ॥

ದ್ವೀಪಭೇದಸಹಸ್ರಾಣಿ ಸಪ್ತಸ್ವಂತರ್ಗತಾನಿ ವೈ ।
ನ ಶಕ್ಯಂತೇ ಪ್ರಮಾಣೇನ ವಕ್ತುಂ ವರ್ಷಶತೈರಪಿ ॥ ೬ ॥

ಸಪ್ತದ್ವೀಪಂ ತು ವಕ್ಷ್ಯಾಮಿ ಚಂದ್ರಾದಿತ್ಯಗ್ರಹೈಃ ಸಹ ।
ಯೇಷಾಂ ಮನುಷ್ಯಾಸ್ತರ್ಕೇಣ ಪ್ರಮಾಣಾನಿ ಪ್ರಚಕ್ಷತೇ ॥ ೭ ॥

---

೪–೫. ಈ ಪ್ರಶ್ನೆಯನ್ನು ಕೇಳಿ ಸೂತಮುನಿಯು ಇಂತೆಂದನು:—ಎಲೈ ಮುನಿಗಳೇ, ಈಗ ಭೂಮಂಡಲದ ದೀರ್ಘವಿಸ್ತಾರಗಳ ಪರಿಮಾಣವನ್ನು ನಿಮಗೆ ಹೇಳುವೆನು. ಮತ್ತು ಸಮುದ್ರದ್ವೀಪಗಳ ಸಂಖ್ಯೆಯನ್ನೂ, ವಿಸ್ತಾರವನ್ನೂ ಹೇಳುವೆನು. ಮತ್ತು ಸಮುದ್ರದ್ವೀಪಗಳ ಸಂಖ್ಯೆಯನ್ನೂ ವಿಸ್ತಾರವನ್ನೂ ಹೇಳುವೆನು ವರ್ಷಗಳು ಎಷ್ಟು ಇವೆ? ಅವುಗಳಲ್ಲಿ ಯಾವಯಾವ ನದಿಗಳು ಹರಿಯುತ್ತವೆ? ಮಹಾ ಭೂತಪ್ರಮಾಣ, ಲೋಕಾಲೋಕಪರ್ವತಗಳ ವಿಚಾರ, ಭೂಮಂಡಲದ ಪರಿಮಾಣ, ಚಂದ್ರಸೂರ್ಯರ ಗತಿ, ಇವುಗಳನ್ನು ನಿಮಗಾಗಿ ನಿರೂಪಿಸುವೆನು ಎಂದನು.

೬. ಈ ಸಪ್ತದ್ವೀಪಗಳಲ್ಲಿ ಅಂತರ್ಗತಗಳಾದ ಸಾವಿರಾರು ದ್ವೀಪಗಳನ್ನು ಪ್ರತ್ಯೇಕವಾಗಿ ವರ್ಣಿಸುವುದು ಅಸಾಧ್ಯವಾಗಿರುತ್ತದೆ. ಅವುಗಳೆಲ್ಲ ಸಪ್ತದ್ವೀಪ ಗಳಲ್ಲೇ ಅಂತರ್ಗತವಾಗುವುವು. ಅವುಗಳನ್ನು ವರ್ಣಿಸಲು ನೂರಾರು ವರ್ಷಗಳೂ ಸಾಲದು.

೭-೮. ಈಗ ಸಪ್ತದ್ವೀಪಗಳನ್ನೂ ಚಂದ್ರಸೂರ್ಯಗ್ರಹಗಳನ್ನೂ ವಿವರಿಸು ವೆನು. ಮನುಷ್ಯರು ದ್ವೀಪ ಮೊದಲಾದುವುಗಳ ತತ್ವವನ್ನು ಅನುಮಾನಪ್ರಮಾಣ ದಿಂದ ಸಾಧಿಸಲು ಯತ್ನಿಸುವರು. ಆದರೆ ಚಿಂತಿಸಲೂ ಅಶಕ್ಯವಾದ ಅತಿಸೂಕ್ಷ್ಮ

ಅಚಿಂತ್ಯಾಃ ಖಲು ಯೇ ಭಾವಾ ನ ತಾಂಸ್ತರ್ಕೇಣ ಭಾವಯೇತ್ ।
ಪ್ರಕೃತಿಭ್ಯಃ ಪರಂ ಯಂ ಚ ತನ್ನಿತ್ಯಂ ಚ ಪ್ರಚಕ್ಷತೇ ॥ ೮ ॥

ನವವರ್ಷಂ ಪ್ರವಕ್ಷ್ಯಾಮಿ ಜಂಬೂದ್ವೀಪಂ ಯಥಾ ತಥಾ ।
ವಿಸ್ತರಾನ್ಮಂಡಲಾಚ್ಚೈವ ಯೋಜನೈಸ್ತನ್ನಿಬೋಧತ ॥ ೯ ॥

ಶತಮೇಕಂ ಸಹಸ್ರಾಣಾಂ ಯೋಜನಾನಾಂ ಪ್ರಮಾಣತಃ ।
ನಾನಾಜನಪದಾಕೀರ್ಣೈಃ ಪುರೈಶ್ಚ ವಿವಿಧೈಃ ಶುಭೈಃ ॥ ೧೦ ॥

ಸಿದ್ಧಚಾರಣಗಂಧರ್ವಪರ್ವತೈರುಪಶೋಭಿತಂ ।
ಸರ್ವಧಾತುನಿಬದ್ಧೈಶ್ಚ ಶಿಲಾಜಾಲಸಮುದ್ಭವೈಃ ॥
ಪರ್ವತಪ್ರಭವಾಭಿಶ್ಚ ನದೀಭಿಃ ಪರ್ವತೈಸ್ತಥಾ ॥ ೧೧ ॥

ಜಂಬೂದ್ವೀಪಃ ಪೃಥುಃ ಶ್ರೀಮಾನ್ ಸರ್ವತಃ ಪರಿವಾರಿತಃ ।
ನವಭಿಶ್ಚಾವೃತಃ ಸರ್ವೈರ್ಭುವನೈರ್ಭೂತಭಾವನೈಃ ॥
ಲಾವಣೇನ ಸಮುದ್ರೇಣ ಸರ್ವತಃ ಪರಿವಾರಿತಃ ॥ ೧೨ ॥

---

ವಸ್ತುಗಳ ಸ್ಥಿತಿಯನ್ನು ಯುಕ್ತಿಯಿಂದ ಸಾಧಿಸುವುದು ಅಸಮಂಜಸವಾಗುವುದು. ಪ್ರಕೃತಿಗಿಂತಲೂ ಉತ್ತಮವಾದ ವಸ್ತುವನ್ನು ನಿತ್ಯವಾದ ವಸ್ತುವೆಂದು ಜ್ಞಾನಿಗಳು ಹೇಳುವರು.

೯. ಸಪ್ತದ್ವೀಪಗಳಲ್ಲಿ ಪ್ರಸಿದ್ಧವಾದ ನವವರ್ಷಗಳನ್ನೂ, ಜಂಬೂದ್ವೀಪ ವನ್ನೂ. ಅವುಗಳ ಸುತ್ತಳತೆ ವಿಸ್ತಾರಗಳನ್ನೂ, ಯೋಜನ ಪ್ರಮಾಣಾನುಸಾರವಾಗಿ ತಿಳಿಸುವೆನು ಕೇಳಿ ಎಂದನು.

೧೦-೧೧. ಜಂಬೂದ್ವೀಪವು ಸುತ್ತಲೂ ಒಂದು ಲಕ್ಷಯೋಜನ ವಿಸ್ತಾರ ವಾಗಿರುತ್ತದೆ ಅದು ನಾನಾ ದೇಶಗಳಿಂದಲೂ, ವಿಧವಿಧಗಳೂ, ಮಂಗಳಕರಗಳೂ ಆದ ಪಟ್ಟಣಗಳಿಂದಲೂ, ಸಿದ್ಧಚಾರಣರು ವಾಸಿಸುವ ನಾನಾ ಪರ್ವತಗಳಿಂದಲೂ, ನಾನಾ ಧಾತುಗಳಿಂದ ಕೂಡಿದ ಶಿಲಾಮಯಗುಡ್ಡಗಳಿಂದಲೂ, ಪರ್ವತಗಳಲ್ಲಿ ಉದ್ಭವಿಸುವ ಅನೇಕ ನದಿಗಳಿಂದಲೂ, ಪರ್ವತ ಸಾಲುಗಳಿಂದಲೂ, ಸುಂದರವಾಗಿ ಅಲಂಕೃತವಾಗಿದೆ.

೧೨. ಜಂಬೂದ್ವೀಪವು ವಿಶಾಲವಾಗಿಯೂ, ಐಶ್ವರ್ಯಭರಿತವಾಗಿಯೂ, ಸರ್ವಭೂತಗಳ ಉತ್ಪತ್ತಿಗೆ ಕಾರಣವಾದ ನವಾವರಣಗಳಿಂದ ಆವರಿಸಲ್ಪಟ್ಟದ್ದಾಗಿಯೂ ಲವಣ ಸಮುದ್ರದಿಂದ ಸುತ್ತಲ್ಪಟ್ಟದ್ದಾಗಿಯೂ, ಇರುತ್ತದೆ

**ಜಂಬೂದ್ವೀಪಸ್ಯ ವಿಸ್ತಾರಾತ್ ಸಮೇನ ತು ಸಮಂತತಃ ।**
**ಪ್ರಾಗಾಯತಾಃ ಸುಪರ್ವಾಣಃ ಷಡಿಮೇ ವರ್ಷಪರ್ವತಾಃ ॥**
**ಅವಗಾಢಾ ಉಭಯತಃ ಸಮುದ್ರೌ ಪೂರ್ವಪಶ್ಚಿಮೌ ॥ ೧೩ ॥**

**ಹಿಮಪ್ರಾಯಶ್ಚ ಹಿಮವಾನ್ ಹೇಮಕೂಟಶ್ಚ ಹೇಮವಾನ್ ।**
**ತರುಣಾದಿತ್ಯವರ್ಣಾಭೋ ಹೈರಣ್ಯೋ ನಿಷಧಃ ಸ್ಮೃತಃ ॥ ೧೪ ॥**

**ಚಾತುರ್ವರ್ಣ್ಯಸ್ತು ಸೌವರ್ಣೋ ಮೇರುಶ್ಚೋಚ್ಚತಮಃ ಸ್ಮೃತಃ ।**
**ವೃತ್ತಾಕೃತಿ ಪ್ರಮಾಣಶ್ಚ ಚತುರಸ್ರಃ ಸಮುಚ್ಛ್ರಿತಃ ॥ ೧೫ ॥**

**ನಾನಾವರ್ಣಸ್ತು ಪಾರ್ಶ್ವೇಷು ಪ್ರಜಾಪತಿಗುಣಾನ್ವಿತಃ ।**
**ನಾಭಿಬಂಧನಸಂಭೂತೋ ಬ್ರಹ್ಮಣೋಽವ್ಯಕ್ತಜನ್ಮನಃ ॥ ೧೬ ॥**

---

೧೩. ಜಂಬೂದ್ವೀಪಕ್ಕೆ ಸಮವಾದ ವಿಸ್ತಾರವುಳ್ಳ ಲವಣ ಸಮುದ್ರವು ಈ ದ್ವೀಪವನ್ನು ಸುತ್ತಿಕೊಂಡಿದೆ. ಇಂತಹ ದ್ವೀಪದಲ್ಲಿ ಪೂರ್ವಕ್ಕೆ ಅತಿವಿಶಾಲವಾದುವೂ, ದೃಢವಾದ ಸಂಧಿಗಳಿಂದ ಕೂಡಿರುವುವೂ, ವರ್ಷಗಳ ವಿಭಜನೆಗೆ ಕಾರಣಗಳೂ, ವರ್ಷನಾಮಕಗಳೂ ಆದ ಆರುಪರ್ವತಗಳು ಪೂರ್ವ-ಪಶ್ಚಿಮ ಸಮುದ್ರಗಳನ್ನೂ ಒತ್ತಿಕೊಂಡು ಭೂಮಿಯನ್ನು ವ್ಯಾಪಿಸಿಕೊಂಡಿರುತ್ತವೆ.

೧೪. ಆ ಆರು ಪರ್ವತಗಳಲ್ಲಿ ಹಿಮವು ಅಧಿಕವಾಗಿರುವ ಹಿಮಾಲಯನಾಮಕವಾದ ಪರ್ವತವು ಮೊದಲನೆಯದಾಗಿದೆ. ಸುವರ್ಣಮಯವಾದ ಶಿಖರಗಳಿಂದ ಕೂಡಿದ ಹೇಮಕೂಟವೆಂಬ ಪರ್ವತವು ಎರಡನೆಯದಾಗಿದೆ. ಬಾಲಸೂರ್ಯನಂತೆ ಕಾಂತಿಯುಳ್ಳದ್ದೂ, ಸುವರ್ಣಮಯವೂ ಆದ ನಿಷಧವೆಂಬ ಪರ್ವತವು ಮೂರನೆಯದು. ಹೀಗೆ ಈ ಗಿರಿಗಳು ಪ್ರಕಾಶಿಸುತ್ತವೆ

೧೫-೧೬. ನಾಲ್ಕನೆಯದಾದ ಮೇರುಪರ್ವತವು ಮುಂದೆ ವರ್ಣಿಸುವ ನಾಲ್ಕು ವರ್ಣಗಳಿಂದ ರಂಜಿಸಲ್ಪಟ್ಟದ್ದಾಗಿಯೂ, ಸುವರ್ಣಮಯವಾಗಿಯೂ, ಅತ್ಯುನ್ನತವಾಗಿಯೂ, ನಾಲ್ಕು ಮೂಲೆಗಳಿಂದ ಸಹಿತವಾಗಿಯೂ, ದುಂಡಾದ ವಿಶಾಲಾಕಾರವುಳ್ಳದ್ದಾಗಿಯೂ, ಎತ್ತರವಾಗಿಯೂ, ನಾನಾವರ್ಣಗಳಾದ ಪಾರ್ಶ್ವಗಳಿಂದ ಶೋಭಿತವಾಗಿಯೂ, ಸೃಷ್ಟಿಕರ್ತನಾದ ಬ್ರಹ್ಮನ ಗುಣಗಳಿಂದ ಸಹಿತವಾಗಿಯೂ ಇರುವುದು. ಮತ್ತು ಪ್ರಧಾನತತ್ವದಿಂದ ಜನ್ಯನಾದ ಬ್ರಹ್ಮದೇವನ ನಾಭಿಯ ಸಂಬಂಧದಿಂದ ಜನ್ಯ

ಪೂರ್ವತಃ ಶ್ವೇತವರ್ಣೋऽಸೌ ಬ್ರಹ್ಮಣ್ಯಸ್ತಸ್ಯ ತೇನ ತತ್ ।
ಪೀತಶ್ಚ ದಕ್ಷಿಣೇನಾಸೌ ತೇನ ವೈಶ್ಯತ್ವಮಿಷ್ಯತೇ ॥ ೧೭ ॥

ಭೃಂಗಪತ್ರ ನಿಭಶ್ಚಾಸೌ ಪಶ್ಚಿಮೇನ ಮಹಾಬಲಃ ।
ತೇನಾಸ್ಯ ಶೂದ್ರತಾ ದೃಷ್ಟಾ ಮೇರೋರ್ನಾನಾರ್ಥಕಾರಣಾತ್ ॥ ೧೮ ॥

ಪಾರ್ಶ್ವಮುತ್ತರತಸ್ತಸ್ಯ ರಕ್ತವರ್ಣಂ ಸ್ವಭಾವತಃ ।
ತೇನಾಸ್ಯ ಕ್ಷತ್ರತಾ ಚ ಸ್ಯಾದಿತಿ ವರ್ಣಾಃ ಪ್ರಕೀರ್ತಿತಾಃ ॥
ವ್ಯಕ್ತಿಃ ಸ್ವಭಾವತಃ ಪ್ರೋಕ್ತೋ ವರ್ಣತಃ ಪರಿಮಾಣತಃ ॥ ೧೯ ॥

ನೀಲಶ್ಚ ವೈದೂರ್ಯಮಯಃ ಶ್ವೇತಶೃಂಗೋ ಹಿರಣ್ಮಯಃ ।
ಮಯೂರಬರ್ಹವರ್ಣಸ್ತು ಶಾತಕೌಂಭಸ್ತು ಶೃಂಗವಾನ್ ॥ ೨೦ ॥

ಏತೇ ಪರ್ವತರಾಜಾನಃ ಸಿದ್ಧಚಾರಣಸೇವಿತಾಃ ।
ತೇಷಾಮಂತರವಿಷ್ಕಂಭೋ ನವಸಾಹಸ್ರ ಉಚ್ಯತೇ ॥ ೨೧ ॥

ವಾಗಿಯೂ ಇದೆ. ಅದರ ಪೂರ್ವಭಾಗವು ಬೆಳ್ಳಗೆ ಶುಭ್ರವಾಗಿ ಹೊಳೆಯುತ್ತದೆ. ಬ್ರಾಹ್ಮಣಜಾತಿಯ ಚಿಹ್ನವಾದ ಶುಭ್ರವರ್ಣವು ಇದಕ್ಕಿರುವುದರಿಂದ ಇದೂ ಸಹ ಬ್ರಾಹ್ಮಣ ಜಾತಿಯನ್ನು ಹೊಂದಿರುವುದು. ಮತ್ತು ಇದರ ದಕ್ಷಿಣಭಾಗವು ಹಳದಿಯ ಬಣ್ಣವಾಗಿರುವುದರಿಂದ ವೈಶ್ಯ ಜಾತಿಯೂ ಆಗಿದೆ.

೧೮-೧೯. ಮಹಾ ಬಲಿಷ್ಠವಾದ ಈ ಮೇರುವಿನ ಪಶ್ಚಿಮಭಾಗವು ನೀಲವರ್ಣ ವುಳ್ಳದ್ದಾಗಿರುವುದರಿಂದ ಶೂದ್ರಜಾತಿಯಾಗಿದೆ. ಅದರ ಉತ್ತರಭಾಗವು ಸ್ವಭಾವವಾಗಿ ಕೆಂಪಗಿದೆ. ಇದರಿಂದ ಕ್ಷತ್ರಿಯತ್ವವು ಸಿದ್ಧವಾಯಿತು. ಈ ರೀತಿಯಲ್ಲಿ ಈ ಪರ್ವತದ ನಾನಾ ಭಾಗಗಳು ನಾಲ್ಕು ವರ್ಣಗಳಾಗಿರುವುದರಿಂದ ಚಾತುರ್ವರ್ಣ್ಯವೂ ಇದಕ್ಕೆ ಸಿದ್ಧವಾಗಿದೆ.

೨೦. ವೈಡೂರ್ಯಮಣಿಗಳಿಂದ ಕೂಡಿದ ನೀಲಗಿರಿಯೂ, ಶುಭ್ರಶೃಂಗಗಳುಳ್ಳ ಹಿರಣ್ಯಪರ್ವತವೂ, ಮಯೂರದ ಗರಿಯಂತೆ ನಾನಾ ವರ್ಣಗಳುಳ್ಳ ನಾನಾ ಶೃಂಗಗಳಿಂದಲಂಕೃತವೂ ಆದ ಸುವರ್ಣಗಿರಿಯೂ ಕೂಡ ಪ್ರಕಾಶಿಸುತ್ತವೆ.

೨೧. ಈ ಪರ್ವತಗಳು ಸಿದ್ಧಚಾರಣರಿಂದ ಸೇವಿಸಲ್ಪಡತಕ್ಕವುಗಳಾಗಿಯೂ, ಪರ್ವತರಾಜನಾಮಕವಾಗಿಯೂ ಇವೆ. ಇವುಗಳ ಮಧ್ಯದ ಪರಿಮಾಣವು ಒಂಭತ್ತು ಸಹಸ್ರಯೋಜನ ವಿಸ್ತಾರವಾಗಿದೆ.

ಮಧ್ಯೇ ತ್ವಿಲಾವೃತಂ ಯಸ್ತು ಮಹಾಮೇರೋಃ ಸಮಂತತಃ ।
ನವೈವ ತು ಸಹಸ್ರಾಣಿ ವಿಸ್ತೀರ್ಣಃ ಪರ್ವತಸ್ತು ಸಃ ॥
ಮಧ್ಯೇ ತಸ್ಯ ಮಹಾಮೇರೋರ್ನಿರ್ಧೂಮ ಇವ ಪಾವಕಃ ॥ ೨೨ ॥

ವೇದ್ಯರ್ಧಂ ದಕ್ಷಿಣಂ ಮೇರೋರುತ್ತರಾರ್ಧಂ ತಥೋತ್ತರಂ ।
ವರ್ಷಾಣಿ ಯಾನಿ ಸಪ್ತಾತ್ರ ತೇಷಾಂ ಯೇ ವರ್ಷಪರ್ವತಾಃ ॥
ದ್ವೇ ದ್ವೇ ಸಹಸ್ರೇ ವಿಸ್ತೀರ್ಣಾ ಯೋಜನಾನಿ ಸಮುಚ್ಛ್ರಯಾತ್ ॥ ೨೩ ॥

ಜಂಬೂದ್ವೀಪಸ್ಯ ವಿಸ್ತಾರಾತ್ತೇಷಾಮಾಯಾಮ ಉಚ್ಯತೇ ।
ಯೋಜನಾನಾಂ ಸಹಸ್ರಾಣಿ ಶತೇ ದ್ವೇ ಮಧ್ಯಮೌ ಗಿರೀ ॥ ೨೪ ॥

ನೀಲಶ್ಚ ನಿಷಧಶ್ಚೈವ ತಾಭ್ಯಾಂ ಹೀನಾಸ್ತು ಯೇಽಪರೇ ।
ಶ್ವೇತಶ್ಚ ಹೇಮಕೂಟಶ್ಚ ಹಿಮವಾನ್ ಶೃಂಗವಾಂಶ್ಚ ಯಃ ॥ ೨೫ ॥

---

೨೨. ಇಂತಹ ಮೇರುಪರ್ವತದ ಮಧ್ಯಭಾಗದಲ್ಲಿ ಇಲಾವೃತವೆಂಬ ಖಂಡವು ಇದೆ. ಅದರ ಸುತ್ತಲೂ ನವಸಹಸ್ರಯೋಜನ ವಿಸ್ತಾರವಾದ ಪ್ರದೇಶಗಳಿವೆ. ಈ ಇಲಾವೃತ ಖಂಡವು ಮೇರುವಿನ ಮಧ್ಯಭಾಗದಲ್ಲಿ ಹೊಗೆಯಿಲ್ಲದ ಅಗ್ನಿಯಂತೆ ಹೊಳೆಯುತ್ತಿದೆ.

೨೩. ಆ ಪರ್ವತದ ದಕ್ಷಿಣಭಾಗದ ಅರ್ಧವೇದಿಯು ದಕ್ಷಿಣಾರ್ಧವೆಂದೂ ಉತ್ತರಭಾಗದ ಅರ್ಧವೇದಿಯು ಉತ್ತರಾರ್ಧವೆಂದೂ ಕರೆಯಲ್ಪಡುತ್ತವೆ. ಅಲ್ಲಿರುವ ಸಪ್ತವರ್ಷಗಳೂ ಅವುಗಳಲ್ಲಿರುವ ವರ್ಷಪರ್ವತಗಳೂ ಕೂಡ ಎರಡುಸಾವಿರ ಯೋಜನದಷ್ಟು ಎತ್ತರಗಳಾಗಿವೆ.

೨೪. ಜಂಬೂದ್ವೀಪದ ವಿಸ್ತಾರದಿಂದ ಆ ವರ್ಷಪರ್ವತಗಳ ದೀರ್ಘ ಪರಿಮಾಣವನ್ನು ಈಗ ತಿಳಿಸುವೆನು. ಅವುಗಳ ಮಧ್ಯದಲ್ಲಿರುವ ನೀಲ ನಿಷಧಗಳೆಂಬ ಮಹಾಗಿರಿಗಳು ಎರಡುಸಾವಿರಯೋಜನದಷ್ಟು ವಿಸ್ತಾರಗಳಾಗಿವೆ.

೨೫. ಮೇಲೆ ಹೇಳಿದ ನೀಲ ನೈಷಧಪರ್ವತಗಳಿಗಿಂತಲೂ ಹೀನವಾದ ಶ್ವೇತ, ಹೇಮಕೂಟ, ಹಿಮವಂತ, ಶೃಂಗವಂತವೆಂಬ ಗಿರಿಗಳೂ ಸಹ ವಿಸ್ತೀರ್ಣಗಳಾಗಿವೆ.

ನವತಿರ್ದ್ವಾವಶೀತಿರ್ದ್ವೌ ಸಹಸ್ರಾಣ್ಯಾಯುತಾಸ್ತು ಯೇ ।
ತೇಷಾಂ ಮಧ್ಯೇ ಜನಪದಾಸ್ತಾನಿ ವರ್ಷಾಣಿ ಸಪ್ತ ವೈ ॥ ೨೬ ॥

ಸಂಪಾತವಿಷಮೈಸ್ತೈಸ್ತು ಪರ್ವತೈರಾವೃತಾನಿ ಚ ।
ಸಂತತಾನಿ ನದೀಭೇದೈರಗಮ್ಯಾನಿ ಪರಸ್ಪರಂ ॥
ವಸಂತಿ ತೇಷು ಸತ್ವಾನಿ ನಾನಾಜಾತೀನಿ ಭಾಗಶಃ ॥ ೨೭ ॥

ಇದಂ ಹೈಮವತಂ ವರ್ಷಂ ಭಾರತಂ ನಾಮ ವಿಶ್ರುತಂ ।
ಹೇಮಕೂಟಂ ಪರಂ ತಸ್ಮಾನ್ನಾಮ್ನಾ ಕಿಂಪುರುಷಂ ಸ್ಮೃತಂ ॥ ೨೮ ॥

ನೈಷಧಂ ಹೇಮಕೂಟಂ ತು ಹರಿವರ್ಷಂ ತದುಚ್ಯತೇ ।
ಹರಿವರ್ಷಾತ್ಪರಂ ಚೈವ ಮೇರೋಶ್ಚ ತದಿಲಾವೃತಂ ॥ ೨೯ ॥

---

೨೬. ಅವುಗಳಲ್ಲಿ ನೀಲ ನೈಷಧವೆಂಬ ಎರಡು ಪರ್ವತಗಳು ತೊಂಭತ್ತು ಸಹಸ್ರಯೋಜನ ವಿಸ್ತಾರವಾಗಿಯೂ, ಹಿಮವಂತ ಶೃಂಗವಂತವೆಂಬ ಪರ್ವತಗಳು ಎಂಭತ್ತುಸಹಸ್ರಯೋಜನ ವಿಸ್ತಾರವಾಗಿಯೂ ಇವೆ. ಇವುಗಳ ಮಧ್ಯದಲ್ಲಿ ಏಳು ವರ್ಷಗಳೂ ನಾನಾ ದೇಶಗಳೂ ಪ್ರಖ್ಯಾತವಾಗಿವೆ.

೨೭. ಜಲಪಾತವೇ ಮೊದಲಾದುವುಗಳಿಂದ ವಿಷಮವಾಗಿಯೂ ಪರ್ವತಗಳಿಂದ ದುರ್ಗಮವಾಗಿಯೂ ಇರುವ ಆ ವರ್ಷಗಳು ಸಾವಿರಾರು ನದಿಗಳಿಂದ ವ್ಯಾಪ್ತವಾಗಿರುವುದರಿಂದ ಒಂದು ವರ್ಷದಿಂದ ಬೇರೊಂದು ವರ್ಷಕ್ಕೆ ಹೋಗುವುದು ಅಸಾಧ್ಯವಾಗಿರುವುದು. ಆ ವರ್ಷಗಳಲ್ಲಿ ವಿಜಾತೀಯಗಳಾದ ನಾನಾ ಪ್ರಾಣಿಗಳು ಬೇರೆ ಬೇರೆ ಪ್ರದೇಶಗಳಲ್ಲಿ ವಾಸಿಸುತ್ತವೆ.

೨೮. ಇವುಗಳಲ್ಲಿ ಹೈಮವತವೆಂಬ ವರ್ಷವು ಭಾರತವರ್ಷವೆಂದು ಖ್ಯಾತಿಗೊಂಡಿದೆ. ಈ ಭಾರತವರ್ಷದ ಮುಂದೆ ಇರುವ ಹೇಮಕೂಟವೆಂಬ ಗಿರಿಯಿಂದ ಸಹಿತವಾದ ವರ್ಷವು ಕಿಂಪುರುಷವರ್ಷವೆಂದು ಪ್ರಖ್ಯಾತವಾಗಿದೆ.

೨೯. ಅದರ ಮುಂದೆ ನೈಷಧವೆಂಬ ಪರ್ವತದಿಂದ ಕೂಡಿದ ವರ್ಷವು ಹರಿವರ್ಷವೆಂದು ಪ್ರಖ್ಯಾತವಾಗಿದೆ. ಆ ಹರಿವರ್ಷಕ್ಕಿಂತಲೂ ಮುಂದೆ ಮೇರುವಿನಿಂದ ಕೂಡಿದ ವರ್ಷವು ಇಲಾವೃತವರ್ಷವೆಂದೂ ಪ್ರಸಿದ್ಧವಾಗಿದೆ.

ಇಲಾವೃತಪರಂ ನೀಲಂ ರಮ್ಯಕಂ ನಾಮ ವಿಶ್ರುತಂ ।
ರಮ್ಯಾತ್ಪರತರಂ ಶ್ವೇತಂ ವಿಶ್ರುತಂ ತದ್ಧಿರಣ್ಮಯಂ ॥
ಹಿರಣ್ಮಯಾತ್ಪರಂ ಚಾಪಿ ಶೃಂಗವಾಂಸ್ತು ಕುರು ಸ್ಮೃತಂ ॥ ೩೦ ॥

ಧನುಃ ಸಂಸ್ಥೇ ಚ ವಿಜ್ಞೇಯೇ ದ್ವೇ ವರ್ಷೇ ದಕ್ಷಿಣೋತ್ತರೇ ।
ದೀರ್ಘಾಣಿ ತತ್ರ ಚತ್ವಾರಿ ಮಧ್ಯಮಂ ತದಿಲಾವೃತಂ ॥ ೩೧ ॥

ಅರ್ವಾಕ್ ಚ ನಿಷಧಸ್ಯಾಥ ವೇದ್ಯರ್ಧಂ ದಕ್ಷಿಣಂ ಸ್ಮೃತಂ ।
ಪರಂ ನೀಲವತೋ ಯಚ್ಚ ವೇದ್ಯರ್ಧಂ ತು ತದುತ್ತರಂ ॥
ವೇದ್ಯರ್ಧಂ ದಕ್ಷಿಣೇ ತ್ರೀಣಿ ವರ್ಷಾಣಿ ತ್ರೀಣಿ ಚೋತ್ತರೇ ॥ ೩೨ ॥

ತಯೋರ್ಮಧ್ಯೇ ತು ವಿಜ್ಞೇಯಂ ಮೇರುಮಧ್ಯಮಿಲಾವೃತಂ ।
ದಕ್ಷಿಣೇನ ತು ನೀಲಸ್ಯ ನಿಷಧಸ್ಯೋತ್ತರೇಣ ತು ॥ ೩೩ ॥

---

೩೦ ಅದರ ಮುಂದೆ ಇರುವ ನೀಲಗಿರಿಯಿಂದ ಸಹಿತವಾದ ವರ್ಷವು ರಮ್ಯಕ ವರ್ಷವೆಂದೂ ಅದರ ಮುಂದಿರುವ ಶ್ವೇತಗಿರಿಯುತವಾದ ವರ್ಷವು ಹಿರಣ್ಮಯ ವರ್ಷವೆಂದೂ ಪ್ರಸಿದ್ಧವಾಗಿವೆ. ಅದರ ಮುಂದೆ ಶೃಂಗವಂತಪರ್ವತವಿರುವ ವರ್ಷವು ಕುರುವರ್ಷವೆಂದು ಪ್ರಸಿದ್ಧವಾಗಿದೆ.

೩೧. ಈ ಮೇರು ಪರ್ವತದಲ್ಲಿ ಧನುಕಾರವಾಗಿ ಎರಡು ವರ್ಷಗಳು ದಕ್ಷಿಣೋತ್ತರಗಳನ್ನು ವ್ಯಾಪಿಸಿಕೊಂಡಿರುತ್ತವೆ. ಮತ್ತು ಅಲ್ಲಿ ವಿಶಾಲವಾದ ನಾಲ್ಕು ವರ್ಷಗಳೂ ಅವುಗಳ ಮಧ್ಯದಲ್ಲಿ ಇಲಾವೃತವೆಂಬ ವರ್ಷವೂ ಪ್ರಖ್ಯಾತವಾಗಿವೆ.

೩೨ ನಿಷಧ ಪರ್ವತದ ಕೆಳಭಾಗವನ್ನು ದಕ್ಷಿಣಭಾಗದ ವೇದ್ಯರ್ಧವೆಂದೂ ನೀಲಪರ್ವತದ ಪರಭಾಗವನ್ನು ಉತ್ತರಭಾಗದ ವೇದ್ಯರ್ಧವೆಂದೂ ಕರೆಯುವರು. ಆ ದಕ್ಷಿಣ ವೇದ್ಯರ್ಧದಲ್ಲಿ ಮೂರು ವರ್ಷಗಳೂ, ಉತ್ತರ ವೇದ್ಯರ್ಧದಲ್ಲಿ ಮೂರು ವರ್ಷಗಳೂ ಸೇರಿಕೊಂಡಿವೆ.

೩೩-೩೪ ಅವುಗಳ ಮಧ್ಯದಲ್ಲಿ ಮಹಾಮೇರು ಪರ್ವತವೂ ಅದರ ಶಿಖರದ ಮಧ್ಯದಲ್ಲಿ ಇಲಾವೃತ ವರ್ಷವೂ ಇರುವುವು. ಆ ನೀಲಪರ್ವತದ ದಕ್ಷಿಣದಲ್ಲಿಯೂ, ನಿಷಧಪರ್ವತದ ಉತ್ತರದಲ್ಲಿಯೂ ಮಾಲ್ಯವಂತನೆಂಬ ಮಹಾಪರ್ವತವೂ ಇದೆ.

ಉದಗಾಯತೋ ಮಹಾಶೈಲೋ ಮಾಲ್ಯವಾನ್ ನಾಮ ಪರ್ವತಃ ।
ಯೋಜನಾನಾಂ ಸಹಸ್ರೋರುರಾನೀಲ ನಿಷಧಾಯತಃ ॥

ಆಯಾಮತಶ್ಚತುಸ್ತ್ರಿಂಶತ್ಸಹಸ್ರಾಣಿ ಪ್ರಕೀರ್ತಿತಃ ॥ ೩೪ ॥
ತಸ್ಯ ಪ್ರತೀಚ್ಯಾಂ ವಿಜ್ಞೇಯಂ ಪರ್ವತೋ ಗಂಧಮಾದನಃ ।
ಆಯಾಮಾದಥ ವಿಸ್ತಾರಾನ್ಮಾಲ್ಯವಾನಿತಿ ವಿಶ್ರುತಃ ॥ ೩೫ ॥

ಪರಿಮಂಡಲಯೋರ್ಮಧ್ಯೇ ಮೇರುರುತ್ತಮಪರ್ವತಃ ।
ಚತುರ್ವರ್ಣಃ ಸುಸೌವರ್ಣಶ್ಚತುರಸ್ರಃ ಸಮುಚ್ಛ್ರಿತಃ ॥
ಅವ್ಯಕ್ತಾ ಧಾತವಃ ಸರ್ವೇ ಸಮುತ್ಪನ್ನಾ ಜಲಾದಯಃ ॥ ೩೬ ॥

ಅವ್ಯಕ್ತಾತ್ ಪೃಥಿವೀಪದ್ಮಂ ಮೇರುಪರ್ವತಕರ್ಣಿಕಂ ।
ಚತುಷ್ಪಥಂ ಸಮುತ್ಪನ್ನಂ ವ್ಯಕ್ತಂ ಪಂಚಗುಣಂ ಮಹತ್ ॥ ೩೭ ॥

---

ಅದು ಉತ್ತರಭಾಗದಲ್ಲಿ ಅತಿಶಯವಾಗಿ ವ್ಯಾಪಿಸಿಕೊಂಡಿದೆ. ಅದು ಇತರ ಪರ್ವತಕ್ಕಿಂತಲೂ ಅಧಿಕವಾಗಿ ಸಹಸ್ರಯೋಜನ ವಿಸ್ತಾರವನ್ನೂ, ಮೂವತ್ತನಾಲ್ಕುಸಾವಿರ ಯೋಜನ ದೀರ್ಘತೆಯನ್ನೂ ಹೊಂದಿರುವುದ.

೩೫. ಆ ಪರ್ವತದ ಪಶ್ಚಿಮದಲ್ಲಿ ಗಂಧಮಾದನವೆಂಬ ಪರ್ವತವು ಇರುವುದೆಂದು ತಿಳಿಯಬೇಕು. ಅದು ಮಾಲ್ಯವತ್ ಪರ್ವತದಂತೆ ವಿಸ್ತಾರವನ್ನು ಹೊಂದಿದೆ.

೩೬. ವರ್ತುಲಾಃಕಾರಗಳಿಂದ ಆ ಎರಡು ಪರ್ವತಗಳ ಮಧ್ಯದಲ್ಲಿ ನಾಲ್ಕು ವರ್ಣಗಳಿಂದ ಕೂಡಿಯೂ, ಸುವರ್ಣಮಯವೂ, ನಾಲ್ಕು ಮೂಲೆಗಳಲ್ಲಿ ಸಮವಾದ ಔನ್ನತ್ಯವುಳ್ಳದ್ದೂ, ಸ್ವತಃ ಉನ್ನತವೂ, ಅವ್ಯಕ್ತಗಳಾದ ಧಾತುಗಳಿಂದ ಸಹಿತವೂ, ಅನೇಕ ನದಿಗಳಿಗೆ ಜನಕವೂ ಆದ ಮೇರುಪರ್ವತವು ಪ್ರಸಿದ್ಧವಾಗಿದೆ.

೩೭. ಅವ್ಯಕ್ತತತ್ವದಿಂದ ಅತಿವಿಶಾಲವಾದ ಪೃಥವೀರೂಪವಾದ ಕಮಲವು ಉತ್ಪನ್ನವಾಯಿತು. ಆ ಪೃಥವೀರೂಪವಾದ ಪದ್ಮದಲ್ಲಿ, ಮೇರುಗಿರಿಯೆಂಬ ಕರ್ಣಿಕೆಯೂ ಚಾತುರ್ವರ್ಣ್ಯಗಳೆಂಬ ನಾಲ್ಕು ಎಲೆಗಳೂ, ರೂಪ, ರಸಗಂಧ, ಸ್ಪರ್ಶ, ಶಬ್ದ ಈ ವಿಷಯಗಳೆಂಬ ಗುಣವೂ ಉತ್ಪನ್ನಗಳಾದುವು.

ತತಃ ಸರ್ವಾಃ ಸಮುತ್ಪನ್ನಾ ವೃತ್ತಯೋ ದ್ವಿಜಸತ್ತಮಾಃ ।
ನೈಕಕಲ್ಪಾರ್ಜಿತೈಃ ಪುಣ್ಯೈರ್ವಿವಿಧೈಃ ಪ್ರಾಗುಪಾರ್ಜಿತೈಃ ॥ ೩೮ ॥

ಕೃತಾತ್ಮಭಿರ್ವಿನೀತಾತ್ಮಾ ಮಹಾತ್ಮಾ ಪುರುಷೋತ್ತಮಃ ।
ಮಹಾದೇವೋ ಮಹಾಯೋಗೀ ಜಗಜ್ಜ್ಯೇಷ್ಠೋ ಮಹೇಶ್ವರಃ ॥
ಸರ್ವಲೋಕಗತೋऽನಂತೋ ಹ್ಯಮೂರ್ತಿತ್ವಾದಜಾಯತ ॥ ೩೯ ॥

ನ ತಸ್ಯ ಪ್ರಕೃತೀ ಮೂರ್ತಿರ್ಮಾಂಸಮೇದೋऽಸ್ಥಿಸಂಭವಾ ।
ಯೋಗಾಚ್ಚೈವೇಶ್ವರತ್ವಾಚ್ಚ ಸರ್ವಾತ್ಮಾಗತ ಏವ ಸಃ ॥ ೪೦ ॥

ತನ್ನಿಮಿತ್ತಂ ಸಮುತ್ಪನ್ನಂ ಲೋಕಪದ್ಮಂ ಸನಾತನಂ ।
ಕಲ್ಪಶೇಷಸ್ಯ ತಸ್ಯಾದೌ ಕಾಲಸ್ಯ ಗತಿರೀದೃಶೀ ॥ ೪೧ ॥

ತಸ್ಮಿನ್ ಪದ್ಮೇ ಸಮುತ್ಪನ್ನೋ ದೇವದೇವಶ್ಚತುರ್ಮುಖಃ ।
ಪ್ರಜಾಪತಿಪತಿಬ್ರಹ್ಮಾ ಈಶಾನೋ ಜಗತಃ ಪ್ರಭುಃ ॥ ೪೨ ॥

---

೩೮. ಎಲೈ ವಿಪ್ರರೇ, ಅನಂತರ ಅನೇಕ ಜನ್ಮಾನುಗುಣವಾಗಿ ಸಂಪಾದಿಸಲ್ಪಟ್ಟ ಪುಣ್ಯಪಾಪಗಳಿಗೆ ಅನುಗುಣಗಳಾದ ನಾನಾ ವೃತ್ತಿಗಳು ಉತ್ಪನ್ನಗಳಾದುವು.

೩೯. ಸರ್ವಪ್ರಾಣಿಗಳಿಂದ ಪೂಜ್ಯನೂ, ನಮ್ರವಾದ ಸ್ವಭಾವವುಳ್ಳವನೂ, ಮಹಾತ್ಮನೂ, ಪುರುಷೋತ್ತಮನೂ, ಮಹಾಯೋಗಿಯೂ, ಜಗತ್ತಿಗೆ ಹಿರಿಯವನೂ, ಮಹದೈಶ್ವರ್ಯಸಂಪನ್ನನೂ, ಸರ್ವಲೋಕಾಂತರ್ಯಾಮಿಯೂ, ಅನಂತನೂ ಅಮೂರ್ತನೂ ಆದ ಮಹಾದೇವನು ಉತ್ಪನ್ನನಾದನು

೪೦. ಆ ಭಗವಂತನು ಸರ್ವಾಂತರ್ಯಾಮಿಯೂ, ಯೋಗಮಹಿಮೆಯುಳ್ಳವನೂ, ಸರ್ವೇಶನೂ ಆಗಿರುವುದರಿಂದ ಅವನ ಶರೀರವು ಪ್ರಕೃತಿಸಂಬಂಧವಾದ ಮಾಂಸ, ಮೇಧಸ್ಸು, ಮೂಳೆ ಇವುಗಳಿಂದ ಜನ್ಯವಾಗಿಲ್ಲ. ಕೇವಲ ಅಪ್ರಾಕೃತ ದಿವ್ಯಶರೀರವುಳ್ಳವನಾಗಿರುವನು.

೪೧. ಆ ಭಗವನ್ನಿಮಿತ್ತಕವೂ ಸನಾತನವೂ ಆದ ಲೋಕರೂಪವಾದ ಕಮಲವು ಆ ಕಲ್ಪದ ಆದಿಯಲ್ಲಿ ಉದ್ಭವಿಸಿತ್ತು. ಕಾಲಗತಿಯೇ ಹೀಗಿರುವುದು.

೪೨. ಆ ಕಮಲದಲ್ಲಿ ದೇವೋತ್ತಮನೂ, ಚತುರ್ಮುಖನೂ, ಪ್ರಜಾಪತಿಗಳಿಗೆ ಪತಿಯೂ, ಶ್ರೀಮಂತನೂ ಜಗದೊಡೆಯನೂ ಆದ ಬ್ರಹ್ಮದೇವನು ಉತ್ಪನ್ನನಾದನು.

ತಸ್ಯ ಬೀಜಾನಿ ಸರ್ಗೋ ಹಿ ಪುಷ್ಕರಸ್ಯ ಯಥಾರ್ಥವತ್ ।
ಕೃತ್ಸ್ನಃ ಪ್ರಜಾನಿಸರ್ಗೇಣ ವಿಸ್ತರೇಣೇಹ ಕಥ್ಯತೇ ॥ ೪೩ ॥

ಯದಬ್ಜಂ ವೈಷ್ಣವಂ ಕಾರ್ಯಂ ತತಸ್ತನ್ನಾಭಿತೋಽಭವತ್ ।
ಪದ್ಮಾಕಾರಾ ಸಮುತ್ಪನ್ನಾ ಪೃಥಿವೀ ಸವನದ್ರುಮಾ ॥ ೪೪ ॥

ತದಸ್ಯ ಲೋಕಪದ್ಮಸ್ಯ ವಿಸ್ತರೇಣ ಪ್ರಕಾಶಿತಂ ।
ವರ್ಣ್ಯಮಾನಂ ವಿಭಾಗೇನ ಕ್ರಮಶಃ ಶೃಣುತ ದ್ವಿಜಾಃ ॥ ೪೫ ॥

ಮಹಾದ್ವೀಪಾಸ್ತು ವಿಖ್ಯಾತಾಶ್ಚತ್ವಾರಃ ಪತ್ರಸಂಸ್ಥಿತಾಃ ।
ತತಃ ಕರ್ಣಿಕಸಂಸ್ಥಾನೋ ಮೇರುರ್ನಾಮ ಮಹಾಬಲಃ ॥ ೪೬ ॥

ನಾನಾವರ್ಣೇಷು ಪಾರ್ಶ್ವೇಷು ಪೂರ್ವತಃ ಶ್ವೇತ ಉಚ್ಯತೇ ।
ಪೀತಂ ತು ದಕ್ಷಿಣಂ ತಸ್ಯ ಶೃಂಗಂ ಕೃಷ್ಣಂ ತಥಾಽಪರಂ ॥ ೪೭ ॥

---

೪೩. ಆ ಲೋಕಕಮಲದ ಶಕ್ತಿಯುತಗಳಾದ ಬೀಜಗಳೇ ಸಮಸ್ತವಾದ ಪ್ರಜಾಸೃಷ್ಟಿಗೆ ಕಾರಣಗಳಾಗಿವೆ. ಇಂತಹ ಪ್ರಜಾಸೃಷ್ಟಿಯನ್ನು ವಿಸ್ತಾರವಾಗಿಯೂ ಕ್ರಮವಾಗಿಯೂ ಹೇಳುವೆನು

೪೪. ಯಾವ ಲೋಕರೂಪವಾದ ಕಮಲವು ಶ್ರೀ ವಿಷ್ಣುವಿನ ನಾಭಿಯಲ್ಲಿ ಉತ್ಪನ್ನವಾಯಿತೋ, ಅಂತಹ ಪದ್ಮದಿಂದಲೇ ಪದ್ಮಾಕಾರವೂ ವನವೃಕ್ಷಗಳಿಂದ ಲಂಕೃತವೂ, ಆದ ಪೃಥಿವಿಯು ಉತ್ಪನ್ನವಾಯಿತು.

೪೫. ಎಲೈ ವಿಪ್ರರೇ, ಆ ಲೋಕರೂಪವಾದ ಪದ್ಮದಿಂದ ವಿಸ್ತಾರವಾಗಿ ಉತ್ಪನ್ನವಾದ ಪೃಥಿವಿಯನ್ನು ಕ್ರಮವಾಗಿಯೂ, ಯಥಾವತ್ತಾಗಿಯೂ ವರ್ಣಿಸುವೆನು, ಸಾವಧಾನವಾಗಿ ಕೇಳಿರಿ ಎಂದನು.

೪೬. ಆ ಲೋಕರೂಪವಾದ ಪದ್ಮದ ನಾಲ್ಕು ಪತ್ರಗಳಲ್ಲಿದ್ದ ನಾಲ್ಕು ದ್ವೀಪಗಳೂ ಮಹಾದ್ವೀಪಗಳೆಂದು ಪ್ರಖ್ಯಾತವಾದುವು. ಅನಂತರ ಆ ಕಮಲದ ಮಧ್ಯದಲ್ಲಿದ್ದ ಕರ್ಣಿಕೆಯೇ (ಕಮಲದ ಗೊಂಡೆಯೇ) ಮಹಾಬಲಿಷ್ಠವಾದ ಮೇರುಪರ್ವತವಾಯಿತು.

೪೭-೪೮. ಆ ಮೇರುಪರ್ವತವು ನಾನಾರೂಪವಾಗಿದೆ. ಆ ಮಹಾಮೇರುವಿನ ಪೂರ್ವಭಾಗವು ಶುಭ್ರವಾಗಿಯೂ, ದಕ್ಷಿಣಭಾಗವು ಹಳದಿಯಾಗಿಯೂ, ಪಶ್ಚಿಮ

ಉತ್ತರಂ ತಸ್ಯ ರಕ್ತಂ ವೈ ಶೋಭಿವರ್ಣಸಮನ್ವಿತಂ ।
ಮೇರುಸ್ತು ಶೋಭತೇ ಶುಭ್ರೋ ರಾಜವತ್ಸ ತು ಧಿಷ್ಠಿತಃ ॥ ೪೮ ॥

ತರುಣಾದಿತ್ಯವರ್ಣಾಭೋ ವಿಧೂಮ ಇವ ಪಾವಕಃ ।
ಚತುರಶೀತಿಸಾಹಸ್ರ ಉತ್ಸೇಧೇನ ಪ್ರಕೀರ್ತಿತಃ ॥ ೪೯ ॥

ಪ್ರವಿಷ್ಟಃ ಷೋಡಶಾಧಸ್ತಾದ್ವಿಸ್ತೃತಸ್ತಾವದೇವ ತು ।
ನ ಶರಾವಸ್ಥಿತಃ ಪೂರ್ವಂ ದ್ವಾತ್ರಿಂಶನ್ಮೂರ್ಧ್ನಿ ವಿಸ್ತೃತಃ ॥ ೫೦ ॥

ವಿಸ್ತಾರಾತ್ ತ್ರಿಗುಣಶ್ಚಾಸ್ಯ ಪರಿಣಾಹಃ ಸಮಂತತಃ ।
ಮಂಡಲೇನ ಪ್ರಮಾಣೇನ ತ್ರ್ಯಸ್ರೋಽರ್ಧಂ ತು ತದಿಷ್ಯತೇ ॥ ೫೧ ॥

ಚತ್ವಾರಿಂಶತ್ಸಹಸ್ರಾಣಿ ಯೋಜನಾನಾಂ ಸಮಂತತಃ ।
ಅಷ್ಟಾಭಿರಧಿಕಾನಿ ಸ್ಯುಸ್ತ್ರ್ಯಸ್ರೇ ಮಾನೇ ಪ್ರಕೀರ್ತಿತಂ ॥ ೫೨ ॥

---

ಭಾಗವು ಕೃಷ್ಣವರ್ಣವಾಗಿಯೂ, ಉತ್ತರಭಾಗವು ರಕ್ತವರ್ಣವಾಗಿಯೂ ಇವೆ, ಹೀಗೆ ಮೇರುವು ನಾನಾವರ್ಣಗಳಿಂದ ಸಹಿತವೂ, ಶುಭ್ರವೂ ಆಗಿ ಆಶ್ರಿತರಾಜರ ಮಧ್ಯದಲ್ಲಿರುವ ಚಕ್ರವರ್ತಿಯಂತೆ ಪರ್ವತಗಳ ಮಧ್ಯದಲ್ಲಿ ಹೊಳಯುತ್ತಿದೆ.

೪೯. ಇಂತಹ ಮೇರುಪರ್ವತವು ಪ್ರೌಢನಾದ ಸೂರ್ಯನಂತೆಯೂ, ಧೂಮರಹಿತವಾದ ಅಗ್ನಿಯ ಹಾಗೂ ಪ್ರಜ್ವಲಿಸುತ್ತಿರುವುದು. ಮತ್ತು ಅದು ಭೂಮಟ್ಟಕ್ಕಿಂತಲೂ ಎಂಭತ್ತನಾಲ್ಕುಸಹಸ್ರಯೋಜನಗಳಷ್ಟು ಉನ್ನತವಾಗಿಯೂ ಕಂಗೊಳಿಸುತ್ತಿದೆ.

೫೦. ಈ ಮೇರುವು, ಭೂಮಿಯ ಕೆಳಭಾಗದಲ್ಲಿ ಹದಿನಾರುಸಾವಿರಯೋಜನಗಳಷ್ಟು ವ್ಯಾಪ್ತವಾಗಿದೆ. ಮತ್ತು ಹದಿನಾರುಸಹಸ್ರಯೋಜನಗಳಷ್ಟು ವಿಸ್ತಾರವಾಗಿಯೂ (ಅಗಲವಾಗಿಯೂ) ಮೇಲ್ಭಾಗದಲ್ಲಿ ಪೂರ್ವದ ಕಡೆಯಲ್ಲಿ ತಟ್ಟೆಯಂತೆ ದುಂಡಗೂ ಮೂವತ್ತೆರಡುಯೋಜನಗಳಷ್ಟು ಅಗಲವಾಗಿಯೂ ಇದೆ.

೫೧. ಆ ಪರ್ವತದ ಸುತ್ತಳತೆಯು ವಿಸ್ತಾರಕ್ಕಿಂತಲೂ ಮೂರರಷ್ಟು ಅಂದರೆ ನಲವತ್ತೆಂಟುಸಹಸ್ರಯೋಜನಗಳಷ್ಟು ವಿಶಾಲವಾಗಿದೆ. ಮಂಡಲಪ್ರಮಾಣಕ್ಕಿಂತಲೂ ತ್ರಿಸ್ರಪರಿಮಾಣವು (ಮೂರುಮೂಲೆಯ ಪರಿಮಾಣವು) ಅರ್ಧಭಾಗವುಳ್ಳದ್ದಾಗಿದೆ.

೫೨. ಆ ಮೇರುವು ಮತ್ತೊಂದು ರೀತಿಯಲ್ಲಿ ನೋಡಿದರೆ ಸುತ್ತಳತೆಯಲ್ಲಿ ನಲವತ್ತುಸಹಸ್ರಯೋಜನಗಳಷ್ಟು ವಿಶಾಲತೆಯನ್ನು ಹೊಂದಿರುತ್ತದೆ. ಮೊದಲು ಹೇಳಿದ ಪ್ರಮಾಣಕ್ಕಿಂತಲೂ ಮೂರುಮೂಲೆಯ ಪರಿಮಾಣವು ನಲವತ್ತೆಂಟುಸಹಸ್ರಯೋಜನದಷ್ಟು ವಿಶಾಲವಾಗಿರುತ್ತದೆ.

ಚತುರಸ್ರೇಣ ಮಾನೇನ ಪರಿಣಾಹಃ ಸಮಂತತಃ ।
ಚತುಃಷಷ್ಟಿಸಹಸ್ರಾಣಿ ಯೋಜನಾನಾಂ ವಿಧೀಯತೇ ॥ ೫೩ ॥

ಸ ಪರ್ವತೋ ಮಹಾದಿವ್ಯೋ ದಿವ್ಯೌಷಧಿಸಮನ್ವಿತಃ ।
ಭುವನೈರಾವೃತಃ ಸರ್ವೈರ್ ಜಾತರೂಪಮಯೈಃ ಶುಭೈಃ ॥ ೫೪ ॥

ತತ್ರ ದೇವಗಣಾಃ ಸರ್ವೇ ಗಂಧರ್ವೋರಗರಾಕ್ಷಸಾಃ ।
ಶೈಲರಾಜ್ಞೈಃ ಪ್ರದೃಶ್ಯಂತೇ ಶುಭಾಶ್ಚಾಪ್ಸರಸಾಂ ಗಣಾಃ ॥ ೫೫ ॥

ಸ ತು ಮೇರು ಪರಿವೃತೋ ಭುವನೈರ್ಭೂತಭಾವನಃ ।
ಚತ್ವಾರೋ ಯಸ್ಯ ದೇಶಾ ವೈ ನಾನಾಪಾರ್ಶ್ವೇಷ್ವಧಿಷ್ಠಿತಾಃ ॥ ೫೬ ॥

ಭದ್ರಾಶ್ವೋ ಭರತಶ್ಚೈವ ಕೇತುಮಾಲಶ್ಚ ಪಶ್ಚಿಮಃ ।
ಉತ್ತರಾಃ ಕುರವಶ್ಚೈವ ಕೃತಪುಣ್ಯಪ್ರತಿಶ್ರಯಾಃ ॥ ೫೭ ॥

---

೫೩. ಆ ಪರ್ವತದ ಚಚ್ಚೌಕದ ಅಳತೆಯು ಸುತ್ತಳತೆಗಿಂತಲೂ ಅರವತ್ತು ನಾಲ್ಕು ಸಹಸ್ರಯೋಜನಗಳಷ್ಟು ವಿಸ್ತಾರವಾಗಿದೆ.

೫೪. ಆ ಮೇರುಗಿರಿಯು ಮಹತ್ತೂ, ದಿವ್ಯವೂ, ದಿವ್ಯವಾದ ಓಷಧಿಗಳಿಂದ ಸಹಿತವೂ, ಮಂಗಳಕರಗಳೂ, ಸುವರ್ಣಮಯಗಳೂ ಆದ ಭುವನಗಳಿಂದ ಸುತ್ತುವರಿಯಲ್ಪಟ್ಟದ್ದೂ ಆಗಿದೆ.

೫೫ ಆ ಪರ್ವತದಲ್ಲಿ ಸಮಸ್ತರಾದ ದೇವತೆಗಳು, ಗಂಧರ್ವರು, ಉರಗಗಳು, ರಾಕ್ಷಸರು, ಅಪ್ಸರಸ್ತ್ರೀಯರು ಇವರು ವಾಸಿಸುವರು. ಮತ್ತು ಅದು ಅನೇಕ ಪರ್ವತ ಶ್ರೇಣಿಗಳಿಂದಲೂ ಸುತ್ತುವರಿಯಲ್ಪಟ್ಟಿದೆ.

೫೬-೫೭. ಆ ಮೇರುಗಿರಿಯು ಅನೇಕ ಪ್ರಾಣಿಗಳನ್ನು ರಕ್ಷಿಸುವ ಭುವನಗಳಿಂದ ಸುತ್ತಲ್ಪಟ್ಟಿದೆ. ಮತ್ತು ಅದರ ಸುತ್ತಲೂ ನಾಲ್ಕು ಭಾಗಗಳಲ್ಲಿಯೂ ಕ್ರಮವಾಗಿ ಭದ್ರಾಶ್ವ, ಭರತ, ಕೇತುಮಾಲ, ಕುರು ಎಂಬ ನಾಲ್ಕು ದೇಶಗಳು ಪ್ರಕಾಶಿಸುತ್ತವೆ.

ಕರ್ಣಿಕಾ ತಸ್ಯ ಪದ್ಮಸ್ಯ ಸಮಂತಾತ್ಪರಿಮಂಡಲಾ ।
ಯೋಜನಾನಾಂ ಸಹಸ್ರಾಣಿ ನವತಿಃ ಷಟ್ ಪ್ರಕೀರ್ತಿತಾಃ ॥
ಚತ್ವಾರಶ್ಚಾಪ್ಯಶೀತಿಶ್ಚ ಅಂತರಾಂತರ ಧಿಷ್ಠಿತಾಃ ॥ ೫೮ ॥

ತ್ರಿಶತಂ ಚ ಸಹಸ್ರಾಣಿ ಯೋಜನಾನಾಂ ಪ್ರಮಾಣತಃ ।
ತಸ್ಯ ಕೇಶರಜಾಲಾನಿ ವಿಸ್ತೀರ್ಣಾನಿ ಸಮಂತತಃ ॥ ೫೯ ॥

ಶತಸಾಹಸ್ರಿಕಾಯಾಮಾ ಸಾಶೀತಿ ಪೃಥುಲಾಯತಾ ।
ಚತ್ವಾರಿ ತಸ್ಯ ಪತ್ರಾಣಿ ಯೋಜನಾನಾಂ ಚತುರ್ದಿಶಂ ॥ ೬೦ ॥

ತತ್ರ ಯ್ಯಾಸೌ ಮಯಾ ಪೂರ್ವಂ ಕರ್ಣಿಕೇತ್ಯಭಿಶಬ್ದಿತಾ ।
ತಾಂ ವರ್ಣ್ಯಮಾನಾಮೇಕಾಗ್ರಾಃ ಸಮಾಸೇನ ನಿಬೋಧತ ॥ ೬೧ ॥

ಶತಾಶ್ರಿಮೇನಂ ಮೇನೇsತ್ರಿಃ ಸಹಸ್ರಾಶ್ರಿ ಮ್ಮೃಷಿರ್ಭೃಗುಃ ।
ಅಷ್ಟಾಶ್ರಿಮೇನಂ ಸಾವರ್ಣಿಶ್ಚತುರಸ್ರಂ ತು ಭಾಗುರಿಃ ॥ ೬೨ ॥

---

೫೮. ಆ ಪ್ರಸಿದ್ಧವಾದ ಕಮಲದಮಧ್ಯದಲ್ಲಿರುವ ಗೊಂಡೆಯ ಸುತ್ತಳತೆಯು ತೊಂಬತ್ತಾರುಸಾವಿರಯೋಜನಗಳಷ್ಟು ವಿಶಾಲವಾಗಿದೆ. ಅದರ ಒಳಭಾಗದ ದೇಶಗಳಾದರೋ ಎಂಬತ್ತನಾಲ್ಕುಯೋಜನಗಳಷ್ಟು ವಿಶಾಲವಾಗಿವೆ.

೫೯-೬೦ ಆ ಕಮಲದಲ್ಲಿದ್ದ ಕೇಸರಸಮೂಹದ ವಿಸ್ತಾರವು ಒಂದುಸಹಸ್ರದ ಮುನ್ನೂರುಯೋಜನಗಳಾಗಿದೆ. ಮತ್ತು ಕಮಲದ ನಾಲ್ಕು ಭಾಗಗಳಲ್ಲಿದ್ದ ನಾಲ್ಕು ದಳಗಳೂ ನಾಲ್ಕು ದಿಕ್ಕುಗಳಲ್ಲಿಯೂ ಹರಡಿಕೊಂಡು ಒಂದುಲಕ್ಷ ಯೋಜನಗಳಷು ಉದ್ದವಾಗಿಯೂ, ಎಂಬತ್ತುಸಹಸ್ರಯೋಜನಗಳಷ್ಟು ಅಗಲವಾಗಿಯೂ ಇವೆ.

೬೧. ನಾನು ಅದರಲ್ಲಿದ್ದ ಕರ್ಣಿಕೆ (ಗೊಂಡೆ) ಯೆಂಬುದಾಗಿ ಯಾವುದನ್ನು ಮೊದಲೇ ಹೇಳಿದ್ದೆನೋ ಅದರ ವಿಚಾರವಾಗಿ ಹೇಳುವ ವಿಷಯಗಳನ್ನು ಏಕಾಗ್ರತೆಯಿಂದ ಅಥವಾ ಸಾವಧಾನವಾಗಿ ಕೇಳಿರಿ ಎಂದನು.

೬೨. ಅತ್ರಿಮುನಿಯು ಈ ಮೇರುವನ್ನು ನೂರುಕೋಣಗಳುಳ್ಳದ್ದೆಂದೂ, ಭೃಗುಮಹರ್ಷಿಯು ಇದಕ್ಕೆ ಸಹಸ್ರಕೋಣಗಳಿವೆಯೆಂದೂ, ಸಾವರ್ಣಿಮುನಿಯು ಎಂಟುಕೋಣಗಳಿವೆಯೆಂದೂ, ಭಾಗುರಿಯು ನಾಲ್ಕುಕೋಣಗಳಿವೆಯೆಂದೂ ಹೇಳುವರು.

ವಾರ್ಷಾಯಣಿಸ್ತು ಸಾಮುದ್ರಂ ಶರಾವಂ ಚೈವ ಗಾಲವಃ ।
ಊರ್ಧ್ವವೇಣೀಕೃತಂ ಗಾರ್ಗ್ಯಃ ಕ್ರೋಷ್ಟುಕಿಃ ಪರಿಮಂಡಲಂ ॥ ೬೩ ॥

ಯದ್ಯದ್ಯಸ್ಯ ಹಿ ಯತ್ಪಾರ್ಶ್ವಂ ಪರ್ವತಾಧಿಪತೇರ್ಋಷಿಃ ।
ತತ್ತದೇವಾಸ್ಯ ವೇದಾಸೌ ಬ್ರಹ್ಮೈನಂ ವೇದ ಕೃತ್ಸ್ನಶಃ ॥ ೬೪ ॥

ಮಣಿರತ್ನಮಯಂ ಚಿತ್ರಂ ನಾನಾವರ್ಣಪ್ರಭಾಯುತಂ ।
ಅನೇಕವರ್ಣನಿಚಯಂ ಸೌವರ್ಣಮರುಣಪ್ರಭಂ ॥ ೬೫ ॥

ಕಾಂತಂ ಸಹಸ್ರಪರ್ವಾಣಂ ಸಹಸ್ರೋದಕಕಂದರಂ ।
ಸಹಸ್ರಶತಪತ್ರಂ ತಂ ವಿದ್ಧಿ ಮೇರುನ್ನಗೋತ್ತಮಂ ॥ ೬೬ ॥

---

೬೩. ವಾರ್ಷಾಯಣಿಯು ಆ ಗಿರಿಯನ್ನು ಸಮುದ್ರದ ಹಾಗೆ ಇದೆಯೆಂದೂ, ಗಾಲವನು ತಟ್ಟೆಯಂತೆ ಕಾಣುತ್ತದೆಯೆಂದೂ, ಗಾರ್ಗ್ಯನು ಊರ್ಧ್ವಾಕಾರವಾದ ಜಡೆಯಂತೆ ಇದೆಯೆಂದೂ, ಕ್ರೋಷ್ಟುಕಿಮುನಿಯು ಅಗಲವಾಗಿದೆಯೆಂದೂ ಹೇಳುವರು.

೬೪. ಮೇಲೆ ಹೇಳಿದ ಕ್ರಮದಲ್ಲಿ ಆ ಮಹಾಮೇರುವು ಆಯಾ ಭಾಗಗಳಲ್ಲಿರುವ ಪ್ರತಿಯೊಬ್ಬ ಮುನಿಗೂ ಒಂದೊಂದು ರೀತಿಯಾಗಿ ತೋರುತ್ತದೆ. ಒಬ್ಬೊಬ್ಬರೂ ತಮತಮಗೆ ತೋರಿದ ರೀತಿಯಲ್ಲಿ ಹೇಳುವರು. ಆದರೆ ಬ್ರಹ್ಮದೇವನು ಮಾತ್ರ ಇದನ್ನು ಸರಿಯಾಗಿ ತಿಳಿದಿರುವನು.

೬೫-೬೬. ಆ ಮೇರುಪರ್ವತವು ಮಣಿಗಳು, ರತ್ನಗಳು ಇವುಗಳ ವಿಕಾರವಾಗಿಯೂ, ವಿಚಿತ್ರವಾಗಿಯೂ, ನಾನಾಬಣ್ಣಗಳ ಕಾಂತಿಗಳಿಂದ ಯುಕ್ತವಾಗಿಯೂ, ಅಸಂಖ್ಯಾತವಾದ ವರ್ಣಗಳುಳ್ಳದ್ದಾಗಿಯೂ ಸುವರ್ಣ ಅರುಣ ಇವುಗಳಂತೆ ಕಾಂತಿಯುಳ್ಳದ್ದಾಗಿಯೂ, ಮನೋಹರವಾಗಿಯೂ, ನೂರಾರುಗಂಟುಗಳುಳ್ಳದ್ದಾಗಿಯೂ. ಸಾವಿರಾರುಜಲದುರ್ಗಗಳಿಂದಸಹಿತವಾಗಿಯೂ ಇದೆಯೆಂದು ಹೇಳುವರು. ಮತ್ತು ಆ ಪರ್ವತವು ಸಹಸ್ರದಳಗಳಿರುವ ಕಮಲಪುಷ್ಪದಂತೆ ಶೋಭಿಸುತ್ತದೆಯೆಂದು ನೀವು ತಿಳಿಯಬೇಕೆಂದನು.

ಮಣಿರತ್ನಾರ್ಪಿತಸ್ತಂಭೈರ್ಮಣಿಚಿತ್ರಿತವೇದಿಕೈಃ ।
ಸುವರ್ಣಮಣಿಚಿತ್ರಾಂಗಂ ತಥಾ ವಿದ್ರುಮತೋರಣೈಃ ॥ ೬೭ ॥

ವಿಮಾನಯಾನೈಃ ಶ್ರೀಮದ್ಭಿಃ ಶತಸಂಖ್ಯೈರ್ದಿವೌಕಸಾಂ ।
ಪ್ರಭಾದೀಪಿತಪರ್ಯಂತಂ ಮೇರುಂ ಪರ್ವಣಿ ಪರ್ವಣಿ ॥ ೬೮ ॥

ತಸ್ಯ ಪರ್ವಸಹಸ್ರೇಷ್ವಿ ನಾನಾಶ್ರಯವಿಭೂಷಿತೇ ।
ಸರ್ವದೇವ ನಿಕಾಯಾನಿ ಸನಿವಿಷ್ಟಾನ್ಯನೇಕಶಃ ॥ ೬೯ ॥

ತಮಾವಸಚ್ಛೋರ್ಧ್ವತಲೇ ದೇವದೇವಶ್ಚತುರ್ಮುಖಃ ।
ಬ್ರಹ್ಮಾ ಬ್ರಹ್ಮವಿದಾಂ ಶ್ರೇಷ್ಠೋ ವರಿಷ್ಠಸ್ತ್ರಿದಿವೌಕಸಾಂ ॥ ೭೦ ॥

ಮಹಾಭುವನಸಂಪೂರ್ಣೈಃ ಸರ್ವೈಃ ಕಾಮಫಲಪ್ರದೈಃ ।
ಮಹಾಸುರಸಹಸ್ರೈಸ್ತಂ ದಿಕ್ಷ್ವನೇಕಸಮಾಕುಲಂ ॥ ೭೧ ॥

---

೬೭-೬೮. ಆ ಗಿರಿಯು ರತ್ನಖಚಿತವಾದ ಕಂಬಗಳಿಂದಲೂ, ಜಗುಲಿಗಳಿಂದಲೂ, ಸುವರ್ಣರತ್ನಗಳಿಂದಲಂಕೃತವಾದ ಪ್ರದೇಶಗಳಿಂದಲೂ, ಹವಳದ ತೋರಣಗಳಿಂದಲೂ, ಆಯಾ ಸಂಧಿಭಾಗಗಳಲ್ಲಿ ದೇವತೆಗಳ ಸಂಚರಿಸುವ ನೂರಾರು ಕಾಂತಿಯುತವಾದ ವಿಮಾನಗಳಪ್ರಭೆಯಿಂದ ರಂಜಿತವಾದ ಸಂಧಿಭಾಗಗಳಿಂದಲೂ ವಿಚಿತ್ರವಾಗಿದೆ.

೬೯. ಆ ಮೇರುವಿನ ಸಹಸ್ರಾರು ಸಂಧಿಭಾಗಗಳಲ್ಲಿ ನಾನಾವಿಧಪ್ರಾಣಿಗಳೂ, ಸರ್ವದೇವತೆಗಳ ಸಮೂಹವೂ, ಋಷಿಗಳ ಗಣಗಳೂ ಕೂಡ ವಿಶೇಷಾಕಾರವಾಗಿ ವಾಸಿಸುತ್ತವೆ.

೭೦. ಆ ಮಹಾಮೇರುವಿನ (ಊರ್ಧ್ವಭಾಗದಲ್ಲಿ) ಮೇಲುಭಾಗದಲ್ಲಿ ದೇವದೇವನೂ, ಚತುರ್ಮುಖನೂ, ಜ್ಞಾನಿಗಳಲ್ಲಿ ಉತ್ತಮನೂ, ದೇವೋತ್ತಮನೂ ಆದ ಬ್ರಹ್ಮದೇವನು ವಾಸಮಾಡುವನು.

೭೧. ಆ ಮಹಾಮೇರುವಿನ ಅಷ್ಟದಿಕ್ಕುಗಳಲ್ಲಿಯೂ, ಸಕಲವಿಧಕಾಮಗಳಿಂದ ಕೂಡಿದ ಅನೇಕ ನಗರಗಳೂ, ಮಹಾಸುರರ ಸಂಘಗಳೂ, ದೇವತೆಗಳೂ, ಮೃಗಪಕ್ಷಿಗಳೂ ವಾಸಮಾಡುತ್ತವೆ.

ತತ್ರ ಬ್ರಹ್ಮಸಭಾ ರಮ್ಯಾ ಬ್ರಹ್ಮರ್ಷಿಗಣಸೇವಿತಾ ।
ನಾಮ್ನಾ ಮನೋವತೀ ನಾಮ ಸರ್ವಲೋಕೇಷು ವಿಶ್ರುತಾ ॥ ೭೨ ॥

ತತ್ರೇಶಾನಸ್ಯ ದೇವಸ್ಯ ಸಹಸ್ರಾದಿತ್ಯವರ್ಚಸಂ ।
ಮಹಾವಿಮಾನಂ ಸಂಸ್ಥಾಪ್ಯ ಮಹಿಮ್ನಾ ವರ್ತತೇ ಸದಾ ॥ ೭೩ ॥

ತತ್ರ ಸರ್ಷಿಗಣಾ ದೇವಾಶ್ಚತುರ್ವಕ್ತ್ರಸ್ಯ ತೇ ತದಾ ।
ತದೇವ ತೇಜಸಾಂ ರಾಶಿರ್ದೇವಾನಾಂ ತತ್ರ ಕೀರ್ತ್ಯತೇ ॥ ೭೪ ॥

ತತ್ರಾಸ್ತೇ ಶ್ರೀಪತಿಃ ಶ್ರೀಮಾನ್ ಸಹಸ್ರಾಕ್ಷಃ ಪುರಂದರಃ ।
ಉಪಾಸ್ಯಮಾನಸ್ತ್ರಿದಶೈರ್ಮಹಾಯೋಗೈಃ ಸುರರ್ಷಿಭಿಃ ॥ ೭೫ ॥

ತತ್ರ ಲೋಕಪತೇಃ ಸ್ಥಾನಮಾದಿತ್ಯಸಮವರ್ಚಸಃ ।
ಮಹೇಂದ್ರಸ್ಯ ಮಹಾರಾಜ್ಞಃ ಸರ್ವಸಿದ್ಧೈರ್ನಮಸ್ಕೃತಂ ॥ ೭೬ ॥

---

೭೨. ಆ ಗಿರಿಯಲ್ಲಿ ರಮ್ಯವೂ ಬ್ರಹ್ಮರ್ಷಿಗಳ ಗಣದಿಂದ ಸೇವಿತವೂ ಸರ್ವಲೋಕವಿಶ್ರುತವೂ, ಮನೋವತೀ ನಾಮಕವೂ ಆದ ಬ್ರಹ್ಮದೇವನ ಸಭೆಯು ಪ್ರಕಾಶಿಸುತ್ತಿದೆ.

೭೩. ಆ ಮಹಾಗಿರಿಯಲ್ಲಿ ದೇವೇಶನಾದ ಈಶ್ವರನ ಸಾವಿರಾರು ಸೂರ್ಯರಂತೆ ಕಾಂತಿಯುತವೂ, ಮಹಾಮಹಿಮೆಯುಕ್ತವೂ ಆದ ದಿವ್ಯವಿಮಾನವು ಯಾವಾಗಲೂ ಹೊಳೆಯುತ್ತಿದೆ.

೭೪. ಅಲ್ಲಿ ಸಪ್ತರ್ಷಿಗಳೂ, ದೇವತೆಗಳೂ, ದಾನವರೂ ಕೂಡ ಸರ್ವಕಾಲ ದಲ್ಲಿಯೂ ಬ್ರಹ್ಮದೇವನನ್ನು ಸೇವಿಸುತ್ತಿರುವರು. ಅದು ದೇವತೆಗಳ ದಿವ್ಯತೇಜಸ್ಸಿ ನಿಂದ ತೇಜೋರಾಶಿಯಂತೆ ಹೊಳೆಯುತ್ತಿದೆ.

೭೫. ಆ ಮಹಾಗಿರಿಯಲ್ಲಿ ಶ್ರೀಮಂತನೂ, ಕಾಂತಿಮಂತನೂ, ಶತ್ರುಸಂಹಾರ ಕನೂ, ಸಹಸ್ರಾಕ್ಷನೂ, ಆದ ದೇವೇಂದ್ರನು ದೇವತೆಗಳಿಂದಲೂ, ಮಹಾಯೋಗಿ ಗಳಿಂದಲೂ, ದೇವರ್ಷಿಗಳಿಂದಲೂ ಸದಾಕಾಲದಲ್ಲಿಯೂ ಸೇವಿಸಲ್ಪಡುತ್ತಾ ಹೊಳೆಯು ತ್ತಿರುವನು.

೭೬. ಆ ಮಹಾಮೇರುವಿನಲ್ಲಿ ಸೂರ್ಯನಂತೆ ತೇಜಸ್ವಿಯೂ, ಲೋಕಗಳ ಪತಿಯೂ, ದೇವೇಶನೂ ಆದ ದೇವೇಂದ್ರನ ಸರ್ವದೇವ ನಮಸ್ಕೃತವೂ, ಸರ್ವಸಿದ್ಧಿ ಪ್ರದವೂ ಆದ ಮಹಾಸಭೆಯು ಪ್ರಕಾಶಿಸುತ್ತದೆ

ತಮಿಂದ್ರಲೋಕಂ ಲೋಕಸ್ಯ ಬುಧ್ವಾ ಪರಮಯಾ ಯುತಂ ।
ದೀಪ್ಯತೇ ತ್ವಮರಶ್ರೇಷ್ಠೈಸ್ತ್ರಿದಶೈರ್ನಿತ್ಯಸೇವಿತಂ ॥ ೭೭ ॥

ದ್ವಿತೀಯೋಽಪ್ಯಂತರತಟೇ ವೈದಿಶ್ಯೇ ಪೂರ್ವದಕ್ಷಿಣೇ ।
ನಾನಾಧಾತುಶತೈಶ್ಚಿತ್ರೈಃ ಸುರಮ್ಯಮತಿತೇಜಸಂ ॥ ೭೮ ॥

ನೈಕರತ್ನಾರ್ಥಿತತಲಮನೇಕಸ್ತಂಭಸಂಯುತಂ ।
ಜಾಂಬೂನದಕೃತೋದ್ಯಾನಂ ನಾನಾರತ್ನಸುವೇದಿಕಂ ॥ ೭೯ ॥

ಕೂಟಾಗರೈರ್ವಿನಿಕ್ಷಿಪ್ತಮನೇಕೈರ್ಭವನೋತ್ತಮೈಃ ।
ಮಹಾವಿಮಾನಂ ಪ್ರಥಿತಂ ಭಾಸ್ಕರಂ ಜಾತವೇದಸಂ ॥ ೮೦ ॥

ಸಾ ಹಿ ತೇಜೋವತೀ ನಾಮ ಹುತಾಶಸ್ಯ ಮಹಾಸಭಾ ।
ಸಾಕ್ಷಾತ್ತತ್ರ ಸುರಶ್ರೇಷ್ಠಃ ಸರ್ವದೇವಮುಖೋನಲಃ ॥ ೮೧ ॥

---

೭೭. ಸಕಲೈಶ್ವರ್ಯದಿಂದ ಪೂರ್ಣವೂ, ಸಕಲಕಾಂತಿಯುತವೂ, ದೇವ ತೋತ್ತಮರಿಂದ ಸದಾ ಸೇವಿತವೂ, ದೇದೀಪ್ಯಮಾನವೂ ಆದ ಆ ಪ್ರದೇಶವನ್ನು ದೇವಲೋಕವೆಂಬುದಾಗಿ ಜ್ಞಾನಿಗಳು ಹೇಳುವರು.

೭೮-೮೦. ಆ ಮೇರುವಿನ ಎರಡನೆಯ ಅಂತಸ್ಥಿನ ಪೂರ್ವ ದಕ್ಷಿಣಗಳ ಮಧ್ಯದಲ್ಲಿರುವ ಆಗ್ನೇಯ ದಿಕ್ಕಿನಲ್ಲಿ ಚಿತ್ರವಾದ ನಾನಾಧಾತುಗಳಿಂದ ರಂಜಿತವೂ, ಅತ್ಯಂತ ರಮ್ಯವೂ, ಅತಿತೇಜಸ್ವಿಯೂ, ಅನೇಕ ರತ್ನಗಳಿಂದಲಂಕೃತವಾದ ಪ್ರದೇಶಗಳಿಂದ ರಂಜಿತವೂ, ಅನೇಕ ರತ್ನಸ್ತಂಭಯುತವೂ, ಸುವರ್ಣಮಯವಾದ ಉದ್ಯಾನದಿಂದಲಂಕೃತವೂ, ನಾನಾ ರತ್ನಖಚಿತವೇದಿಕೆಗಳಿಂದ ಸಹಿತವೂ, ಸೂರಿನ ಪಟ್ಟಿಗಳಿಂದಲಂಕೃತವಾದ ದಿವ್ಯಭವನಗಳಿಂದ ಸಹಿತವೂ, ಸುಪ್ರಸಿದ್ಧವೂ ಆದ ಅಗ್ನಿದೇವನ ದಿವ್ಯವಿಮಾನವು ಸೂರ್ಯನಂತೆ ಹೊಳೆಯುತ್ತಿದೆ.

೮೧. ಆ ಮಹಾಸಭೆಯು ಅಗ್ನಿದೇವನ ತೇಜೋವತೀನಾಮಕವಾದ ಸಭೆಯಾಗಿದೆ. ಆ ಮಹಾಸಭೆಯಲ್ಲಿ ಸುರಶ್ರೇಷ್ಠನೂ, ದೇವಮುಖನೂ ಆದ ಅಗ್ನಿದೇವನು ಪ್ರತ್ಯಕ್ಷವಾಗಿ ಹೊಳೆಯುವನು.

ಶಿಖಾಶತಸಹಸ್ರಾಢ್ಯೋ ಜ್ವಾಲಾಮಾಲೀ ವಿಭಾವಸುಃ ।
ಸ್ತೂಯತೇ ಹೂಯತೇ ಚೈವ ತತ್ರ ಸರ್ಷಿಗಣೈಃ ಸುರೈಃ ॥ ೮೨ ॥

ಅಧಿದೈವಕೃತಂ ವಿಪ್ರೈರ್ವಿಶೇಷಃ ಸ ತು ಉಚ್ಯತೇ ।
ಸವಿಭಾಗಂ ಚ ತೇಜಶ್ಚ ಸರ್ವ ಏವ ನ ಸಂಶಯಃ ॥ ೮೩ ॥

ಭೋಗಾಂತರಮನುಪ್ರಾಪ್ತ ಏಕತೇಜೋ ವಿಭುಃ ಸ್ಮೃತಃ ।
ಪೃಥಕ್ತ್ವಂ ಚ ಹಿ ಯುಕ್ತ್ಯಾ ತು ಕಾರ್ಯಕಾರಣಮಿಶ್ರಿತಂ ॥ ೮೪ ॥

ತಮಗ್ನಿಂ ಲೋಕಲೋಕಜ್ಞೈಸ್ತದ್ವಿಯೈಸ್ತತ್ಪರಾಕ್ರಮೈಃ ।
ಮಹಾತ್ಮಭಿರ್ಮಹಾಸಿದ್ಧೈಃ ಮಹಾಭಾಗೈರ್ನಮಸ್ಕೃತಂ ॥ ೮೫ ॥

ತೃತೀಯೇಽಪ್ಯಂತರತಟೇ ಏವಮೇವ ಮಹಾಸಭಾ ।
ವೈವಸ್ವತಸ್ಯ ವಿಜ್ಞೇಯಾ ಲೋಕೇ ಖ್ಯಾತಾ ಸುಸಂಯಮಾ ॥ ೮೬ ॥

---

೮೨. ಆ ವಿಮಾನವಲ್ಲಿ ದೇವರ್ಷಿಗಳೂ, ದೇವತೆಗಳೂ ಸಹ ಶಿಖಾಸಹಸ್ರಗಳಿಂದಲಂಕೃತನೂ, ಜ್ವಾಲಾಮಾಲೆಗಳಿಂದಸಹಿತನೂ ಆದ ಯಜ್ಞಪುರುಷನನ್ನು ಸರ್ವದಾ ಸ್ತುತಿಸುತ್ತಲೂ, ಹೋಮಮಾಡುತ್ತಲೂ ಇರುತ್ತಾರೆ.

೮೩. ಅಲ್ಲಿ ಬ್ರಾಹ್ಮಣರು ಅನೇಕ ದೇವತೋದ್ದೇಶ್ಯಕವಾಗಿ ವಿಭಾಗಗಳಿಂದೊಡಗೂಡಿದ ಅಗ್ನಿ ಪುರುಷನನ್ನೇ ದೇವತಾಧಿಷ್ಠಾನವೆಂದು ಪೂಜಿಸುತ್ತಿರುವರು. ಆ ಯಜ್ಞಪುರುಷನು ಸಮಸ್ತದೇವತಾ ಸ್ವರೂಪನಾಗಿರುವನು.

೮೪. ತೇಜೋಮಯನಾದ ಆ ಯಜ್ಞಪುರುಷನೇ ಭೋಗಾಂತರವನ್ನು ಪಡೆದು ಏಕರೂಪನಾಗಿಯೂ, ಭಿನ್ನನಾಗಿಯೂ, ತೋರುತ್ತಾ ಕಾರ್ಯಕಾರಣಭಾವದಿಂದ ಪ್ರಕಾಶಿಸುವನು.

೮೫. ಪ್ರಪಂಚಜ್ಞಾನಿಗಳೂ ಅಸದೃಶರೂ, ಸಿದ್ಧರೂ, ಮಹಾಭೋಗಿಗಳೂ ಆದ ಮಹಾತ್ಮರು ಆ ಯಜ್ಞಪುರುಷನನ್ನು ನಾನಾರೀತಿಯಾಗಿ ಸ್ತೋತ್ರಮಾಡುವರು.

೮೬. ಆ ಮೇರುವಿನ ಮೂರನೆಯ ಅಂತಸ್ತಿನಲ್ಲಿಯೂ ಇದೇ ರೀತಿಯೇ ವಿಖ್ಯಾತವೂ, ಸುಸಂಯಮಾನಾಮಕವೂ ಆದ ಯಮದೇವನ ಮಹಾಸಭೆಯು ಪ್ರಕಾಶಿಸುತ್ತಿರುವುದು.

ತಥಾ ಚತುರ್ಥದಿಗ್ದೇಶೇ ನೈರುತ್ಯಾಧಿಪತೇಃ ಸಭಾ ।
ನಾಮ್ನಾ ಕೃಷ್ಣಾಂಗನಾ ನಾಮ ವಿರೂಪಾಕ್ಷಸ್ಯ ಧೀಮತಃ ॥ ೮೭ ॥

ಪಂಚಮೇಽಪ್ಯಂತರತಟೇ ಏವಮೇವ ಮಹಾಸಭಾ ।
ವೈವಸ್ವತಸ್ಯ ವಿಜ್ಞೇಯಾ ನಾಮ್ನಾ ಶುಭವತೀ ಸತೀ ॥
ಉದಕಾಧಿಪತೇಃ ಖ್ಯಾತಾ ವರುಣಸ್ಯ ಮಹಾತ್ಮನಃ ॥ ೮೮ ॥

ಪರೋತ್ತರೇ ತಥಾ ದೇಶೇ ಷಷ್ಠೇಽಂತರತಟೇ ಶಿವೇ ।
ವಾಯೋರ್ಗಂಧವತೀ ನಾಮ ಸಭಾ ಸರ್ವಗುಣೋತ್ತರಾ ॥ ೮೯ ॥

ಸಪ್ತಮೇಽಪ್ಯಂತರತಟೇ ನಕ್ಷತ್ರಾಧಿಪತೇಃ ಸಭಾ ।
ನಾಮ್ನಾ ಮಹೋದಯಾ ನಾಮ ಶುದ್ಧವೈದೂರ್ಯವೇದಿಕಾ ॥ ೯೦ ॥

ತಥಾಽಷ್ಟಮೇಽಂತರತಟೇ ಈಶಾನಸ್ಯ ಮಹಾತ್ಮನಃ ।
ಯಶೋವತೀ ನಾಮ ಸಭಾ ತಪ್ತಕಾಂಚನಸುಪ್ರಭಾ ॥ ೯೧ ॥

---

೮೭. ಆ ಮೇರುವಿನ ನಾಲ್ಕನೆಯ ಅಂತಸ್ತಿನಲ್ಲಿ ವಿರೂಪಾಕ್ಷನೂ, ಜ್ಞಾನಿಯೂ ಆದ ನಿರುತಿದೇವನ ಕೃಷ್ಣಾಂಗನಾಮಕವಾದ ಮಹಾಸಭೆಯು ಹೊಳೆಯುತ್ತಿದೆ.

೮೮. ಐದನೆಯ ಅಂತಸ್ತಿನಲ್ಲಿ ಜಲಾಭಿಮಾನಿಯೂ, ಪ್ರಖ್ಯಾತನೂ, ಮಹಾತ್ಮನೂ ಆದ ವರುಣದೇವನಮಹಾಸಭೆಯು ಶುಭವತೀನಾಮಕವಾಗಿ ಪ್ರಕಾಶಿಸುವುದು.

೮೯ ಇದರಂತೆಯೇ ಅದರ ಏಳನೆಯ ಅಂತಸ್ತಿನಲ್ಲಿ ಮಂಗಳಕರವೂ, ಸರ್ವಗುಣೋಪೇತವೂ ಆದ ಗಂಧವತೀನಾಮಕವಾದ ವಾಯುದೇವನ ಮಹಾಸಭೆಯು ವಾಯುವ್ಯದಿಕ್ಕಿನಲ್ಲಿ ಹೊಳೆಯುತ್ತಿರುವುದು.

೯೦. ಆ ಗಿರಿಯ ಏಳನೆಯ ಅಂತಸ್ತಿನಲ್ಲಿ ನಕ್ಷತ್ರಾಧಿಪತಿಯಾದ ಕುಬೇರನ ವೈಡೂರ್ಯಮಣಿಗಳಿಂದಲಂಕೃತವಾದ. ಜಗುಲಿಯಿಂದಕೂಡಿದ ಮಹೋದಯುವೆಂಬ ಸಭೆಯು ರಂಜಿಸುತ್ತಿದೆ

೯೧. ಇದರಂತೆಯೇ ಎಂಟನೆಯ ಅಂತಸ್ತಿನ ಈಶಾನ್ಯದಿಕ್ಕಿನಲ್ಲಿ ಮಹಾತ್ಮನಾದ ಪರಮೇಶ್ವರನ ತಪ್ತಕಾಂಚನಮಯವೂ, ಯಶೋವತೀನಾಮಕವೂ ಆದ ದಿವ್ಯಮಹಾಸಭೆಯು ಹೊಳೆಯುತ್ತಿದೆ.

**ಮಹಾವಿಮಾನಾನ್ಯೇತಾನಿ ದಿಕ್ಷ್ವಷ್ಟಾಸು ಶುಭಾನಿ ಹಿ ।**
**ಅಷ್ಟಾನಾಂ ದೇವಮುಖ್ಯಾನಾಮಿಂದ್ರಾದೀನಾಂ ಮಹಾತ್ಮನಾಂ ॥ ೯೨ ॥**

**ಋಷಿಭಿರ್ದೇವಗಂಧರ್ವೈರಪ್ಸರೋಭಿರ್ಮಹೋರಗೈಃ ।**
**ಸೇವಿತಾನಿ ಮಹಾಭಾಗೈರುಪಸ್ಥಾನಗತೈಃ ಸದಾ ॥ ೯೩ ॥**

**ನಾಕಪೃಷ್ಠ ದಿವಂ ಸ್ವರ್ಗಮಿತಿ ಯೈಃ ಪರಿಪಠ್ಯತೇ ।**
**ವೇದವೇದಾಂಗವಿದ್ಭಿರ್ಹಿ ಶಬ್ದೈಃ ಪರ್ಯಾಯವಾಚಕೈಃ ॥ ೯೪ ॥**

**ತದೇತತ್ ಸರ್ವದೇವಾನಾಮಧಿವಾಸೋ ಕೃತಾತ್ಮನಾಂ ।**
**ದೇವಲೋಕೇ ಗಿರೌ ತಸ್ಮಿನ್ ಸರ್ವಶ್ರುತಿಷು ಗೀಯತೇ ॥ ೯೫ ॥**

---

೯೨. ಆ ಮೇರುಪರ್ವತದಲ್ಲಿ ಮಹಾತ್ಮರೂ, ದೇವತೆಗಳಲ್ಲಿ ಮುಖ್ಯರೂ ಆದ ಇಂದ್ರಾದ್ಯಷ್ಟದಿಕ್ಪಾಲಕರ ದಿವ್ಯವಾದ ಈ ಮಹಾವಿಮಾನಗಳು ಎಂಟು ದಿಕ್ಕುಗಳಲ್ಲಿಯೂ ಪ್ರಕಾಶಿಸುತ್ತಿವೆ.

೯೩. ಈ ಮಹಾಪರ್ವತವು ಋಷಿಗಳು, ದೇವತೆಗಳು, ಗಂಧರ್ವರು, ಅಪ್ಸರಸ್ತ್ರೀಯರು, ಮಹೋರಗಗಳು ಇವೇ ಮೊದಲಾದವುಗಳಿಂದ ಸರ್ವಕಾಲದಲ್ಲಿಯೂ ಸೇವಿಸಲ್ಪಡುತ್ತಿದೆ.

೯೪. ವೇದವೇದಾಂಗಗಳನ್ನು ತಿಳಿದ ಮಹಾತ್ಮರು ನಾಕಪೃಷ್ಟ, ದಿವ, ಸ್ವರ್ಗವೆಂಬುದಾಗಿ ಯಾವ ಸ್ಥಳವನ್ನು ಪರ್ಯಾಯವಾಚಕಗಳಾದ ಶಬ್ದಗಳಿಂದ ಹೇಳುತ್ತಾರೋ ಅದೇ ಸರ್ವದೇವತೆಗಳಿಗೂ ವಾಸಸ್ಥಾನವಾದ ಮೇರುಪರ್ವತವಾಗಿದೆ.

೯೫ ಕೃತಕೃತ್ಯರಾದ ಸರ್ವದೇವತೆಗಳೂ ವಾಸಿಸುವ ದೇವಲೋಕಸ್ವರೂಪವಾದ ಈ ಮೇರುಪರ್ವತವು ಸಮಸ್ತವಾದ ಶ್ರುತಿ ಸ್ಮೃತಿಗಳಲ್ಲಿ ಹೊಗಳಲ್ಪಟ್ಟು ಪ್ರಖ್ಯಾತವಾಗಿದೆ

**ನಿಯಮೈರ್ವಿವಿಧೈರ್ಯಜ್ಞೈರ್ಬಹುಭಿರ್ನಿಯತಾತ್ಮಭಿಃ ।**
**ಪುಣ್ಯೈರನ್ಯೈಶ್ಚ ವಿವಿಧೈರ್ನೈಕಜಾತಿಶತಾರ್ಜಿತೈಃ ॥**
**ಪ್ರಾಪ್ನೋತಿ ದೇವಲೋಕಂ ತಂ ಸ ಸ್ವರ್ಗ ಇತಿ ಚೋಚ್ಯತೇ ॥ ೯೬ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಜಂಬೂದ್ವೀಪವರ್ಣನಂ" ನಾಮ ಚತುಸ್ತ್ರಿಂಶೋಽಧ್ಯಾಯಃ**

---

೯೬. ಮಹಾತ್ಮರು ವಿವಿಧಯಜ್ಞಗಳಿಂದಲೂ, ಅನೇಕ ವಿಧವಾದ ನಿಯಮಗಳಿಂದಲೂ, ಅನೇಕ ಜನ್ಮಾರ್ಜಿತಗಳಾದ ವಿವಿಧಪುಣ್ಯಗಳಿಂದಲೂ ಅಂತಹ ದೇವಲೋಕವನ್ನು ಹೊಂದುವರು. ಅದೇ ಸ್ವರ್ಗನಾಮಕವಾಗಿದೆಯೆಂದು ಸೂತನು ಋಷಿಗಳಿಗೆ ಹೇಳಿದನು.

ಈ ರೀತಿಯಾಗಿ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಜಂಬೂದ್ವೀಪವರ್ಣನೆಯೆಂಬ " ಮೂವತ್ತನಾಲ್ಕನೆಯ ಅಧ್ಯಾಯವು ಸಮಾಪ್ತವು.

# ಮೂವತ್ತನಾಲ್ಕನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ನವವರ್ಷಗಳು ವರ್ಣಿತವಾಗಿವೆ ಅದರಲ್ಲಿಯೂ ಜಂಬೂ ದ್ವೀಪವು ವಿಶೇಷವಾಗಿ ವರ್ಣಿತವಾಗಿದೆ. ಜಂಬೂದ್ವೀಪವು ಒಂದು ಸಹಸ್ರಯೋಜನ ದಷ್ಟು ವಿಸ್ತಾರವಾಗಿದೆ. ಈ ಜಂಬೂದ್ವೀಪವು ಸಪ್ತದ್ವೀಪಗಳಿಂದಲೂ, ಲವಣ ಸಮುದ್ರದಿಂದಲೂ ಆವೃತವಾಗಿದೆ ಹೈಮವಂತ ಅಥವಾ ಭಾರತ, ಕಿಂಪುರುಷ, ಹರಿ, ಇಲಾವೃತ, ರಮ್ಯಕ, ಹಿರಣ್ಮಯ, ಕುರು ಎಂಬ ಸಪ್ತವರ್ಷಗಳು, ನಿಷಧ, ನೀಲ, ಹಿಮವಂತ, ಹೇಮಕೂಟ, ಮೇರು, ಶೃಂಗವಂತ, ಶ್ವೇತಶೃಂಗ ಎಂಬ ಸಪ್ತಪರ್ವತಗಳು ಇವುಗಳಿಂದ ಕೂಡಿವೆ. ನಿಷಧ ಮತ್ತು ನೀಲಪರ್ವತಗಳ ಮಧ್ಯದಲ್ಲಿ ಮೇರುಪರ್ವತವು ಇದೆ. ಅವ್ಯಕ್ತತತ್ವದಿಂದ ಪೃಥಿವೀರೂಪವಾದ ಕಮಲವು ಅದರಲ್ಲಿ ಮೇರುವೆಂಬ ಕರ್ಣಿಕೆಯೂ ಉತ್ಪನ್ನವಾಗಿವೆ. ಅದು ಅತಿವಿಸ್ತಾರವಾಗಿಯೂ, ಸಮಸ್ತ ದೇವತೆ ಗಳಿಗೆ ಆಶ್ರಯವಾಗಿಯೂ ಇದೆ. ಅದರ ನಾಲ್ಕು ದಿಕ್ಕುಗಳಲ್ಲಿಯೂ ಭದ್ರಾಶ್ವ. ಭಾರತ, ಕೇತುಮಾಲ, ಕುರು ಎಂಬ ನಾಲ್ಕು ದೇಶಗಳು ಇವೆ. ಅದರ ಅಷ್ಟವಿಧ ಗಳಾದ ಅಂತಸ್ತುಗಳಲ್ಲಿಯೂ ಕ್ರಮವಾಗಿ ಇಂದ್ರ, ಅಗ್ನಿ, ಯಮ, ನೈರುತ, ವರುಣ, ವಾಯು, ಕುಬೇರ, ಈಶರೆಂಬ ಅಷ್ಟದಿಕ್ಪಾಲಕರುಗಳ ಮಹಾಸಭೆಗಳು ಪ್ರಕಾಶಿಸುತ್ತವೆ. ಈ ಮೇರುವನ್ನೇ ಸ್ವರ್ಗಲೋಕವೆಂಬುದಾಗಿ ಜ್ಞಾನಿಗಳು ಹೇಳುವರು.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಪಂಚತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ಯತ್ತದ್ವೈ ಕರ್ಣಿಕಾಮೂಲಮಿತಿ ವೈ ಸಂಪ್ರಕೀರ್ತಿತಂ ।
ತದ್ಯೋಜನಸಹಸ್ರಾಣಾಂ ಸಪ್ತತೀನಾಮಧಃ ಸ್ಮೃತಂ ॥ ೧ ॥

ಚತ್ವಾರಿಂಶತ್ತಥಾಷ್ಟೌ ಚ ಸಹಸ್ರಾಣ್ಯತ್ರ ಮಂಡಲಂ ।
ಶೈಲರಾಜಾವೃತಂ ರಮ್ಯಂ ಮೇರುಮೂಲಮಿತಿ ಶ್ರುತಿಃ ॥ ೨ ॥

ತೇಷಾಂ ಗಿರಿಸಹಸ್ರಾಣಾಮನೇಕೇಷು ಮಹೋಚ್ಛ್ರಿತಾಃ ।
ದಿಕ್ಷು ಸರ್ವಾಸು ಪರ್ಯಂತೈರ್ಮರ್ಯಾದಾಃ ಪರ್ವತಾಃ ಸ್ಮೃತಾಃ ॥ ೩ ॥

---

## ಮೂವತ್ತೈದನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಎಲೈ ಮಹರ್ಷಿಗಳೇ, ಯಾವ ಮೇರು ಪರ್ವತವನ್ನು ಭೂಮಿರೂಪವಾದ ಪದ್ಮದಕರ್ಣಿಕೆಯೆಂಬುದಾಗಿ ವರ್ಣಿಸಿರುತ್ತೇನೆಯೋ ಅಂತಹ ಮೇರುವಿನ ಕೆಳಭಾಗದ ಸುತ್ತಳತೆಯು ಎಪ್ಪತ್ತು ಸಾವಿರಯೋಜನಗಳಷ್ಟು ವಿಸ್ತಾರವಾಗಿದೆ.

೨. ಅನೇಕ ಪರ್ವತೋತ್ತಮಗಳಿಂದಾವೃತವೂ, ರಮ್ಯವೂ ಆದ ಮೇರುವಿನ ಮೂಲವು ನಲವತ್ತೆಂಟುಸಹಸ್ರಯೋಜನಗಳಷ್ಟು ಅಗಲವಾಗಿದೆ.

೩. ಇಂತಹ ಉತ್ತಮಗಳಾದ ಸಹಸ್ರಾರುಪರ್ವತಗಳ ಅತ್ಯುನ್ನತವಾದ ಶಿಖರಗಳು ಸಮಸ್ತವಾದ ದಿಙ್ಮಂಡಲಗಳನ್ನೂ ವ್ಯಾಪಿಸಿಗೊಂಡಿವೆಯೆಂದು ಜ್ಞಾನಿಗಳು ಹೇಳುವರು.

ನಿಕುಂಜಕಂದರನದೀಗುಹಾನಿರ್ಝರ ಶೋಭಿತಾಃ ।
ಬಹುಪ್ರಾಸಾದಕಟಕೈಸ್ತಟೈಶ್ಚ ಕುಸುಮೋಜ್ವಲೈಃ ॥ ೪ ॥

ನಿತಂಬಪುಷ್ಪಮಾಲೌಘೈಃ ಸಾನುಭಿರ್ಧಾತುಮಂಡಿತೈಃ ।
ಶಿಖರೈರ್ಹೇಮಕಪಿಲೈರ್ನೈಕಪ್ರಸ್ರವಣಾವೃತೈಃ ।
ಶೋಭಿತಾ ಗಿರಯಃ ಸರ್ವೇ ಪುಷ್ಪೈರತ್ನಸಮರ್ಪಿತೈಃ ॥ ೫ ॥

ವಿಹಂಗಶತಸಂಜುಷ್ಟೈಃ ಕುಂಜೈರನುಪಮೈರಪಿ ।
ಸಿಂಹಶಾರ್ದೂಲಶರಭೈರ್ನೈಕೈಶ್ಚಾಮರವಾರಣೈಃ ॥
ನಾನಾವರ್ಣಾಕೃತಿಧರೈಃ ಸೇವಿತಾ ವಿವಿಧೈರ್ನಗೈಃ ॥ ೬ ॥

ಸಪ್ತಾಶ್ವ ಹರಿಕೃಷ್ಣಾಂಗಮೇಕೈಕಂ ದಶಪರ್ವತಂ ।
ಬಾಹ್ಯಮಾಭ್ಯಂತರಾ ಯೇ ತು ತ್ರಿವಾಹಾಸ್ತು ಸಮಾಃ ಸ್ಮೃತಾಃ ॥ ೭ ॥

ಜಠರೋ ದೇವಕೂಟಶ್ಚ ಪೂರ್ವಸ್ಯಾಂ ದಿಶಿ ಪರ್ವತೌ ।
ತೌ ದಕ್ಷಿಣೋತ್ತರಾಯಾಮಾವಾನೀಲನಿಷಧಾಯತೌ ॥ ೮ ॥

---

೪-೫. ಆ ಸಮಸ್ತವಾದ ಪರ್ವತೋತ್ತಮಗಳು ಪೊದರು. ಕಂದರ, ನದಿ, ಗುಹೆ, ನಿರ್ಝರ ಇವುಗಳಿಂದಲಂಕೃತವೂ, ಅನೇಕವಿಧಪ್ರಾಸಾದದಂತಿರುವ ನಿತಂಬ ಪ್ರದೇಶಗಳಿಂದಮಂಡಿತವೂ, ನಾನಾವಿಧಪುಷ್ಪಗಳಿಂದ ಭರಿತವಾದ ತೀರಗಳಿಂದ ಶೋಭಿತವೂ ವಿವಿಧಪುಷ್ಪಗಳು, ಧಾತುಗಳು ಇವುಗಳುಳ್ಳ ಸಾನುಗಳಿಂದಸಹಿತವೂ, ಸುವರ್ಣಕಪಿಲಬಣ್ಣಗಳುಳ್ಳ ಶಿಖರಗಳಿಂದಮಂಡಿತವೂ, ಅನೇಕವಿಧ ಝರಿ, ಪುಷ್ಪ, ರತ್ನ ಇವುಗಳಿಂದ ಶೋಭಿತವೂ ಆಗಿ ಕಂಗೊಳಿಸುತ್ತಿದ್ದುವು.

೬. ಆ ಪರ್ವತಗಳು ನೂರಾರು ಪಕ್ಷಿಗಳು, ಅಸದೃಶವಾದ ಕುಂಜಗಳು, ಹಂಸ, ವ್ಯಾಘ್ರ, ಶರಭ, ಚಮರೀ, ಗಜ, ನಾನಾವರ್ಣ, ವಿವಿಧಾಕಾರ, ಇವುಗಳಿಂದ ವ್ಯಾಪ್ತವಾಗಿದ್ದುವು.

೭. ಆ ದಶಪರ್ವಗಳು ಸೂರ್ಯನ ಅಶ್ವಗಳಿಂದ ಹಸುರಾಗಿಯೂ, ಧಾತು ಗಳಿಂದ ಕಪ್ಪಾಗಿಯೂ ಇವೆ. ಬಾಹ್ಯಾಭ್ಯಂತರಗಳಲ್ಲಿ ಗಂಗೆಯಂತೆ ಶುಭ್ರವೂ ಆಗಿವೆ.

೮. ಅವುಗಳ ಪೂರ್ವದಿಕ್ಕಿನಲ್ಲಿರುವ ಜಠರ, ದೇವಕೂಟಗಳೆಂಬ ಪರ್ವತಗಳು ನೀಲನಿಷಧಗಳವರೆಗೂ ದಕ್ಷಿಣೋತ್ತರವಾಗಿ ವ್ಯಾಪಿಸಿಕೊಂಡಿವೆ.

ಕೈಲಾಸೋ ಹಿಮವಾಂಶ್ಚೈವ ದಕ್ಷಿಣೋತ್ತರಪರ್ವತೌ ।
ಪೂರ್ವಪಶ್ಚಾಯತಾವೇತಾವರ್ಣವಾಂತವ್ಯವಸ್ಥಿತೌ ॥ ೯ ॥

ಯೋಽಸೌ ಮೇರುರ್ದ್ವಿಜಶ್ರೇಷ್ಠಾಃ ಪ್ರಾಂಶುಃ ಕನಕಪರ್ವತಃ ।
ವಿಷ್ಕಂಭಂ ತಸ್ಯ ವಕ್ಷ್ಯಾಮಿ ತನ್ಮೇ ನಿಗದತಃ ಶೃಣು ॥ ೧೦ ॥

ಮಹಾಪಾದಾಸ್ತು ಚತ್ವಾರೋ ಮೇರೋರಥ ಚತುರ್ದಿಶಂ।
ಯೈರ್ಧೃತತ್ವಾನ್ನ ಚಲತಿ ಸಪ್ತದ್ವೀಪವತೀ ಮಹೀ ॥ ೧೧ ॥

ದಶಯೋಜನಸಾಹಸ್ರ ಆಯಾಮಸ್ತೇಷು ಪಠ್ಯತೇ ।
ದೇವಗಂಧರ್ವಯಕ್ಷಾಣಾಂ ನಾನಾರತ್ನೋಪಶೋಭಿತಾಃ ॥
ನೈಕನಿರ್ಝರವಪ್ರಾಢ್ಯಾ ರಮ್ಯಕಂದರನಿರ್ಮಿತಾಃ ॥ ೧೨ ॥

ನಿತಂಬಪುಷ್ಪಕಾದಂಬೈಃ ಶೋಭಿತಾಶ್ಚಿತ್ರಸಾನವಃ ।
ಮನಃಶಿಲಾದರೀಭಿಶ್ಚ ಹರಿತಾಲತಲೈಸ್ತಥಾ ॥ ೧೩ ॥

ಸುವರ್ಣಮಣಿಚಿತ್ರಾಭಿರ್ಗುಹಾಭಿಶ್ಚ ಸಮಂತತಃ ।
ಶುದ್ಧಹಿಂಗುಲಕಪ್ರಾಖ್ಯೈಃ ಕಾಂಚನೈರ್ಧಾತುಮಂಡಿತೈಃ ॥ ೧೪ ॥

---

೯. ಕೈಲಾಸಹಿಮಾಲಯಗಳು ದಕ್ಷಿಣೋತ್ತರಗಳಾಗಿ ವ್ಯಾಪಿಸಿಕೊಂಡಿವೆ. ಇವು ಪೂರ್ವ ಪಶ್ಚಿಮ ಸಮುದ್ರಗಳ ವರೆಗೂ ಚಾಚಿಕೊಂಡಿವೆ.

೧೦. ಎಲೈ ಮುನಿವರ್ಯರೇ ಅತ್ಯುನ್ನತವೂ ಸುವರ್ಣಮಯವೂ ಆದ ಯಾವ ಮೇರುಪರ್ವತವಿದೆಯೋ ಅದರ ವಿಶಾಲತೆಯನ್ನು ಹೇಳುವೆನು ಕೇಳಿ ಎಂದನು

೧೧. ಇಂಥಹ ಮೇರುವಿನ ಮಹತ್ತಾದ ನಾಲ್ಕು ಪಾದಗಳು ನಾಲ್ಕು ದಿಕ್ಕುಗಳಲ್ಲಿಯೂ ಹರಡಿಕೊಂಡಿವೆ. ಅವುಗಳ ಆಧಾರದಿಂದ ಸಪ್ತದ್ವೀಪಗಳಿಂದ ಸಹಿತವಾದ ಭೂಮಿಯು ಅಲಗಾಡದೆ ನಿಶ್ಚಲವಾಗಿದೆ.

೧೨-೧೪ ಆ ಪರ್ವತಗಳ ಉದ್ದಳತೆಯು ಹತ್ತುಸಾವಿರ ಯೋಜನಗಳಷ್ಟು ವಿಶಾಲವಾಗಿದೆ ಆ ಗಿರಿಗಳು ದೇವಗಂಧರ್ವ ಯಕ್ಷರು, ನಾನಾರತ್ನಗಳು, ಪುಷ್ಪ ಕಲಹಂಸ ಇವುಗಳಿಂದ ಕೂಡಿದ, ನಿತಂಬದೇಶಗಳು, ಚಿತ್ರಸಾನುಗಳು, ಮನಃಶಿಲಯೇ ಮೊದಲಾದ ಧಾತುಗಳಿಂದ ಕೂಡಿದ ಗವಿಗಳು, ಸುವರ್ಣರತ್ನಗಳಿಂದಲಂಕೃತವಾದ ಗುಹೆಗಳು, ಸುವರ್ಣಧಾತುಮಂಡಿತವಾದ ಪ್ರದೇಶ ಇವುಗಳಿಂದ ದೇದೀಪ್ಯಮಾನಗಳಾಗಿದ್ದುವು.

ವರಕಾಂಚನಚಿತ್ರೈಶ್ಚ ಪ್ರವಾಲೈಃ ಸಮಲಂಕೃತಾಃ ।
ರುಚಿರಾಃ ಶತಪರ್ವಾಣಃ ಸಿದ್ಧಾವಾಸಾ ಮುದಾನ್ವಿತಾಃ ॥
ಮಹಾವಿಮಾನೈಃ ಶ್ರೀಮದ್ಭಿಃ ಸಮಂತಾತ್ಪರಿದೀಪಿತಾಃ ॥ ೧೫ ॥

ಪೂರ್ವೇಣ ಮಂದರೋ ನಾಮ ದಕ್ಷಿಣೇ ಗಂಧಮಾದನಃ ।
ವಿಪುಲಃ ಪಶ್ಚಿಮೇ ಪಾರ್ಶ್ವೇ ಸುಪಾರ್ಶ್ವಶ್ಚೋತ್ತರೇ ಸ್ಮೃತಃ ॥ ೧೬ ॥

ತೇಷಾಂ ಸಹಸ್ರಶೃಂಗೇಷು ವಜ್ರವೈಡೂರ್ಯವೇದಿಕಾಃ ।
ಶಾಖಾಸಹಸ್ರಕಲಿತಾಃ ಸುಮೂಲಾಃ ಸುಪ್ರತಿಷ್ಠಿತಾಃ ॥ ೧೭ ॥

ಸ್ನಿಗ್ಧೈರ್ನೀಲೈರ್ಘನೈಃ ಪರ್ಣೈಃ ಸಂಛನ್ನವಿವಿಧಾಶ್ರಯಾಃ ।
ಅನೇಕಪ್ರಜನೋತ್ಸೇಧಾ ಮಹಾಪುಷ್ಪಫಲೋಪಗಾಃ ॥ ೧೮ ॥

ಯಕ್ಷಗಂಧರ್ವಸೇವ್ಯಾಶ್ಚ ಸೇವಿತಾಃ ಸಿದ್ಧಚಾರಣೈಃ ।
ಮಹಾವೃಕ್ಷಾಃ ಸಮುತ್ಪನ್ನಾಶ್ಚತ್ವಾರೋ ದ್ವೀಪಕೇತವಃ ॥ ೧೯ ॥

---

೧೫. ಸುಂದರರೂ ಸಂತೋಷಯುಕ್ತರೂ ಸಿದ್ಧವಾದ ಸ್ಥಾನಗಳುಳ್ಳವರೂ ಆದ ದೇವತೆಗಳು ಕಾಂತಿಯುತಗಳಾದ ತಮ್ಮ ಮಹಾವಿಮಾನಗಳಿಂದ ಆ ಪ್ರದೇಶಗಳನ್ನು ಪ್ರಕಾಶಗೊಳಿಸಿದರು.

೧೬ ಆ ಮಹಾಮೇರುವಿನ ಪೂರ್ವದಲ್ಲಿ ಮಂದರಗಿರಿಯೂ, ದಕ್ಷಿಣದಲ್ಲಿ ಗಂಧಮಾದನಪರ್ವತವೂ, ಪಶ್ಚಿಮದಲ್ಲಿ ವಿಪುಲಪರ್ವತವೂ, ಉತ್ತರದಲ್ಲಿ ಸುಪಾರ್ಶ್ವವೆಂಬ ಗಿರಿಯೂ ಹೀಗೆ ನಾಲ್ಕು ಪರ್ವತಗಳೂ ನಾಲ್ಕು ದಿಕ್ಕುಗಳಲ್ಲಿಯೂ ಇವೆ.

೧೭-೧೯. ಆ ಪರ್ವತಗಳ ಸಾವಿರಾರು ಶಿಖರಗಳಲ್ಲಿ ವಜ್ರವೈಡೂರ್ಯ ಖಚಿತ ವೇದಿಕೆಗಳಿಂದಲೂ, ಸಾವಿರಾರು ಶಾಖೆಗಳಿಂದಲೂ, ಸ್ಥಿರವಾದ ಬೇರುಗಳಿಂದಲೂ, ಸ್ಥಿರರಂಜಿತಗಳೂ, ಮನೋಹರವೂ, ನೀಲವೂ, ನಿಬಿಡವೂ ಆದ ಎಲೆಗಳಿಂದ ಸಂಛಾದಿತಗಳೂ, ಅತ್ಯುನ್ನತಗಳೂ, ಮಹತ್ತಾದ ಫಲಪುಷ್ಪೋಪೇತಗಳೂ ಯಕ್ಷಗಂಧರ್ವಸೇವ್ಯಗಳೂ, ಸಿದ್ಧಚಾರಣಸೇವಿತಗಳೂ, ಧ್ವಜಪ್ರಾಯಗಳೂ ಆದ ನಾಲ್ಕು ಮಹಾವೃಕ್ಷಗಳು ಉತ್ಪನ್ನವಾದುವು

ಮಂದರಸ್ಯ ಗಿರೇಃ ಶೃಂಗೇ ಮಹಾವೃಕ್ಷಃ ಸ ಕೇತುರಾಟ್ ।
ಆಲಂಬಶಾಖಾಶಿಖರಃ ಕಂದರಶ್ಚೈವ ಪಾದಪಃ ॥ ೨೦ ॥

ಮಹಾಕುಂಭಪ್ರಮಾಣೈಸ್ತು ಪುಷ್ಪೈರ್ವಿಕಚಕೇಸರೈಃ ।
ಮಹಾಗಂಧೈರ್ಮನೋಜ್ಞಾಶ್ಚ ಶೋಭಿತಃ ಸರ್ವಕಾಲಜೈಃ ॥ ೨೧ ॥

ಸಹಸ್ರಮಧಿಕಂ ಸೋಽಥ ಗಂಧೇನಾಪೂರಯದ್ದಿಶಃ ।
ಯೋಜನಾನಾಂ ಸಂಮತಾದ್ವೈ ಮಂದಮಾರುತವೀಜಿತಃ ॥ ೨೨ ॥

ವರಕೇತುರೇವ ಪ್ರಥಿತೋ ಭದ್ರಾಶ್ವೋ ನಾಮ ಯೋ ದ್ವಿಜಾಃ ।
ಯತ್ರ ಸಾಕ್ಷಾತ್ ಹೃಷೀಕೇಶಃ ಸಿದ್ಧಸಂಘೈರ್ಮಹೀಯತೇ ॥ ೨೩ ॥

ತಸ್ಯ ರುದ್ರಕದಂಬಸ್ಯ ತದಾ ಶ್ವೇತಹರೋ ಹರಿಃ ।
ಪ್ರಾಪ್ತವಾನಮರಶ್ರೇಷ್ಠಃ ಸ ತತ್ರ ಸಹಿತಃ ಪುರಾ ॥ ೨೪ ॥

---

೨೦. ಮಂದರಪರ್ವತದ ಶಿಖರದಲ್ಲಿ ಅತ್ಯುನ್ನತವೂ ದಿಗಂತಲಂಬಿಗಳಾದ ಅನೇಕ ಶಾಖೆಗಳುಳ್ಳದ್ದೂ ಕಂದರಗತವೂ ಆದ ಕೇತುರಾಜವೆಂಬ ವೃಕ್ಷವು ಇರುತ್ತದೆ.

೨೧. ಆ ಮರದ ಪುಷ್ಪಗಳು ಕುಂಭದಂತೆ ಮಹತ್ತಾಗಿವೆ. ಅದರ ಕೇಸರಗಳು ಬಹಳವಾಗಿಯೂ ಸುವಾಸನೆಗಳಾಗಿಯೂ ಇವೆ. ಅದರ ವಾಸನೆಯು ಸಾರ್ವಕಾಲಿಕ ವಾಗಿಯೂ, ಮನೋಹರವಾಗಿಯೂ ಇರುತ್ತದೆ.

೨೨. ಆ ವೃಕ್ಷವು ಸಾವಿರಾರು ಹೂಗಳನ್ನು ಬಿಡುತ್ತದೆ. ಅವುಗಳ ಸುಗಂಧವು ನೂರಾರು ಯೋಜನದವರಿಗೂ ದಿಗಂತಗಳಲ್ಲಿ ತಂಗಾಳಿಗಳಿಂದ ಹರಡಿರುತ್ತದೆ.

೨೩. ಎಲೈ ಮುನೀಶ್ವರರೇ ಭದ್ರಾಶ್ವವೆಂಬ ಗಿರಿಯು ವರಕೇತುನಾಮಕ ವೃಕ್ಷದಿಂದ ಹೀಗೆ ಪ್ರಖ್ಯಾತವಾಗಿದೆ. ಅದರಲ್ಲಿ ಹೃಷೀಕೇಶನಾದ ಭಗವಂತನು ಪ್ರತ್ಯಕ್ಷನಾಗಿ ಸಿದ್ಧಪುರುಷರಿಂದ ಸೇವಿಸಲ್ಪಡುತ್ತಾನೆ.

೨೪. ಪೂರ್ವದಲ್ಲಿ ಅಮರೋತ್ತಮನೂ ಶ್ವೇತಾದಿರೋಗನಾಶಕನೂ ಆದ ಶ್ರೀಹರಿಯು ಏಕಾದಶರುದ್ರಗಣದಿಂದ ಪ್ರಾರ್ಥಿಸಲ್ಪಟ್ಟವನಾಗಿ ಆ ಪರ್ವತದಲ್ಲಿ ಅವತರಿಸಿದ್ದನು.

ತೇನ ಚಾಲೋಕಿತಂ ಸರ್ವಂ ದ್ವೀಪಂ ದ್ವಿಪದನಾಯಕಾಃ ।
ಯಸ್ಯ ನಾಮ್ನಾ ಸಮಾಖ್ಯಾತೋ ಭದ್ರಾಶ್ವೋ ನಾಮ ನಾಮತಃ ॥ ೨೫ ॥

ದಕ್ಷಿಣಸ್ಯಾಪಿ ಶೈಲಸ್ಯ ಶಿಖರೇ ದೇವಸೇವಿತಾ ।
ಜಂಬೂಃ ಸದಾ ಪುಷ್ಪಫಲಾ ಸದಾ ಮಾಲ್ಯೋಪಶೋಭಿತಾ ॥ ೨೬ ॥

ಮಹಾಮಾಲ್ಯೈರ್ಮಹಾಸ್ಕಂಧೈಃ ಸ್ನಿಗ್ಧವರ್ಣೈರ್ವಿಭೂಷಿತಾ ।
ನವೈಃ ಸದಾ ಪುಷ್ಪಫಲೈಃ ಶಾಖಾಭಿಶ್ಚೋಪಶೋಭಿತಾ ॥ ೨೭ ॥

ತಸ್ಯಾ ಹ್ಯತಿಪ್ರಮಾಣಾನಿ ಸ್ವಾದೂನಿ ಚ ಮಧೂನಿ ಚ ।
ಫಲಾನ್ಯಮೃತಕಲ್ಪಾನಿ ಪತಂತಿ ಗಿರಿಮೂರ್ಧನಿ ॥ ೨೮ ॥

ತಸ್ಮಾದ್ಗಿರಿವರಪ್ರಸ್ಥಾತ್ ಪುನಃ ಪ್ರಸ್ಯಂದವಾಹಿನೀ ।
ನದೀ ಜಂಬೂನದೀ ನಾಮ ಪ್ರವೃತ್ತಾ ಮಧುವಾಹಿನೀ ॥ ೨೯ ॥

---

೨೫. ಹಾಗೆ ಅಲ್ಲಿ ಅವತರಿಸಿದ್ದ ಭಗವಂತನು ಆ ದ್ವೀಪವೆಲ್ಲವನ್ನೂ ಗಣನಾಯಕರನ್ನೂ ಪರಾಮರ್ಶಿಸಿದ್ದನು. ಅಂತಹ ಭಗವಂತನ ನಾಮದಿಂದಲೇ ಆ ಗಿರಿಗೆ ಭದ್ರಾಶ್ವವೆಂಬ ನಾಮವೂ ಕೂಡ ಪ್ರಾಪ್ತವಾಗಿರುತ್ತದೆ.

೨೬. ಅದರಂತೆ ದಕ್ಷಿಣ ದಿಕ್ಕಿನಲ್ಲಿರುವ ಪರ್ವತದ ಶಿಖರದಲ್ಲಿ ದೇವಸೇವಿತವೂ, ಪುಷ್ಪಫಲಗಳಿಂದ ಪೂರ್ಣವೂ, ವೃಕ್ಷಗಳ ಸಾಲುಗಳಿಂದಲಂಕೃತವೂ ಆದ ಜಂಬೂ ವೃಕ್ಷವು (ನೇರಳೇ ಮರವು) ಹೊಳೆಯುತ್ತಿದೆ.

೨೭ ಆ ಮರದ ಬುಡವು ಮತ್ತು ಸ್ಕಂಧಪ್ರದೇಶವು ಬಹಳ ದೊಡ್ಡದಾಗಿದ್ದುವು. ಅದರ ವರ್ಣವು ಮನೋಹರವಾಗಿತ್ತು. ನವೀನವಾದ ಫಲಪುಷ್ಪಗಳಿಂದಲೂ, ಶಾಖೆಗಳಿಂದಲೂ ಆ ಮರವು ಯಾವಾಗಲೂ ಶೋಭಿಸುತ್ತಿತ್ತು.

೨೮. ಆ ವೃಕ್ಷದ ಫಲಗಳು ಬಹಳ ದೊಡ್ಡದಾಗಿಯೂ, ರುಚಿಯಾಗಿಯೂ, ಅಮೃತಕ್ಕೆ ಸಮಾನವಾಗಿಯೂ ಇದ್ದುವು ಅವು ಸದಾ ಕಾಲದಲ್ಲಿಯೂ ಆ ಗಿರಿಯ ಶಿಖರದಲ್ಲಿ ಬೀಳುತ್ತಿದ್ದುವು.

೨೯ ಆ ಅತ್ಯುತ್ತಮವಾದ ಪರ್ವತಸಾನುಗಳಿಂದ ಅಮೃತಮಯವೂ ಮಧುರವೂ ಆದ ಜಂಬೂನದಿಯು ಹರಿಯುತ್ತಿದೆ.

ತತ್ರ ಜಾಂಬೂನದಂನಾಮ ಸುವರ್ಣಂ ಜ್ವಲನಪ್ರಭಂ ।
ದೇವಾಲಂಕಾರಮತುಲಂ ಜಾಯತೇ ಪಾಪನಾಶನಂ ॥ ೩೦ ॥

ದೇವದಾನವಗಂಧರ್ವಾ ಯಕ್ಷರಾಕ್ಷಸಪನ್ನಗಾಃ ।
ಯತ್ ಪಿಬಂತ್ಯಮೃತಪ್ರಖ್ಯಂ ಮಧು ಜಾಂಬೂರಸಸ್ರವಂ ॥ ೩೧ ॥

ಸ ಕೇತುರ್ದಕ್ಷಿಣೇ ದ್ವೀಪೇ ಜಂಬೂರ್ಲೋಕೇಷು ವಿಶ್ರುತಾ ।
ಯಸ್ಯಾ ನಾಮ್ನಾ ಸ ವಿಖ್ಯಾತೋ ಜಂಬೂದ್ವೀಪಃ ಸನಾತನಃ ॥ ೩೨ ॥

ವಿಪುಲಸ್ಯಾಪಿ ಶೈಲಸ್ಯ ಪಶ್ಚಿಮಸ್ಯ ಮಹಾತ್ಮನಃ ।
ಜಾತಃ ಶೃಂಗೇಽತಿಸುಮಹಾನಶ್ವತ್ಥಶ್ಚೈವ ಪಾದಪಃ ॥ ೩೩ ॥

ವಿಲಂಬಿವರಮಾಲಾಢ್ಯಃ ಸುವರ್ಣಮಣಿವೇದಿಕಃ ।
ಮಹೋಚ್ಚಸ್ಕಂಧವಿಟಪೋ ನೈಕಸತ್ವಗುಣಾಲಯಃ ॥ ೩೪ ॥

---

೩೦. ಅದರಲ್ಲಿ ಸುವರ್ಣಸಮಾನವೂ ಅಗ್ನಿಯಂತೆ ಪ್ರಕಾಶಕವೂ ಪಾಪ ಪರಿಹಾರಕವೂ ಜಾಂಬೂನದ ನಾಮಕವೂ ದೇವಾಲಂಕಾರಜನಕವೂ ಆದ ವಸ್ತುಗಳು ವಿಶೇಷವಾಗಿ ದೊರೆಯುತ್ತವೆ.

೩೧. ದೇವದಾನವ, ಗಂಧರ್ವ, ಯಕ್ಷ, ರಾಕ್ಷಸ, ಪನ್ನಗ ಇವೇ ಮೊದಲಾದವರು ಆ ಪರ್ವತದಲ್ಲಿ ಹರಿಯುವ ಜಂಬೂನದಿಯ ಅಮೃತಸಮವೂ ಅತಿ ಮಧುರವೂ ಆದ ಜಂಬೂರಸವನ್ನು ಸರ್ವಕಾಲದಲ್ಲಿಯೂ ಪಾನಮಾಡುವರು.

೩೨. ಧ್ವಜಪ್ರಾಯವಾದ ಆ ಜಂಬೂವೃಕ್ಷವು ದಕ್ಷಿಣದಲ್ಲಿರುವ ದೀಪದಲ್ಲಿ ಪ್ರಖ್ಯಾತವಾಗಿದೆ. ಇದರಿಂದ ಆ ದ್ವೀಪವು ಲೋಕಮಾನ್ಯವಾಗಿಯೂ ಇರುತ್ತದೆ. ಸನಾತನವಾದ ಆ ದ್ವೀಪವು ಈ ಜಂಬೂವೃಕ್ಷದಿಂದ ಜಂಬೂದ್ವೀಪವೆಂದು ಪ್ರಖ್ಯಾತ ವಾಗಿದೆ

೩೩. ಅತ್ಯಂತ ವಿಶಾಲವಾದ ಆ ಮೇರುಪರ್ವತದ ಪಶ್ಚಿಮ ಶಿಖರದಲ್ಲಿ ಅತ್ಯಂತ ವಿಶಾಲವೂ ಅಶ್ವತ್ಥನಾಮಕವೂ ಆದ ವೃಕ್ಷವು ಶೋಭಿಸುತ್ತದೆ

೩೪. ಆ ಅಶ್ವತ್ಥವೃಕ್ಷವು ನೇತಾಡುವ ಉತ್ತಮವಾದ ಅನೇಕ ಪುಷ್ಪಮಾಲೆ ಗಳಿಂದಲೂ, ಸುವರ್ಣಮಯವೇದಿಗಳಿಂದಲೂ, ಅತ್ಯುನ್ನತಗಳಾದ ಸ್ಕಂಧಶಾಖೆ ಗಳಿಂದಲೂ ಪ್ರಕಾಶಿಸುತ್ತದೆ. ಅದು ಅನೇಕ ಪ್ರಾಣಿಗಳಿಗೆ ಆಶ್ರಯವಾಗಿಯೂ ಇದೆ.

ಕುಂಭಪ್ರಮಾಣೈಃ ಸುಖದೈಃ ಫಲೈಃ ಸರ್ವರ್ತುಕೈಃ ಶುಭೈಃ ।
ಸ ಕೇತುಃ ಕೇತುಮಾಲಾನಾಂ ದೇವಗಂಧರ್ವಸೇವಿತಃ ॥ ೩೫ ॥

ಕೇತುಮಾಲೇತಿ ಚ ಯಥಾ ತಸ್ಯಾ ನಾಮ ಪ್ರಕೀರ್ತಿತಂ ।
ತನ್ನಿಬೋಧತ ವಿಪ್ರೇಂದ್ರಾ ನಿರುಕ್ತಂ ನಾಮ ಕರ್ಮತಃ ॥ ೩೬ ॥

ಕ್ಷೀರೋದಮಥನೇ ವೃತ್ತೇ ದೈತ್ಯಪಕ್ಷೇ ಪರಾಜಿತೇ ।
ಮಹಾಸಮರಸಂಮರ್ದವೃಕ್ಷಕ್ಷೋಭವಿಮರ್ದಿತಾ ॥ ೩೭ ॥

ಸಹಸ್ರಾಕ್ಷೇಣ ವಿಹಿತಾ ಮಾಲಾ ತಸ್ಯ ಸುತಾನಿತಾ ।
ತಸ್ಯ ಸ್ಕಂಧೇ ಸಮಾಸಕ್ತಾ ಹ್ಯಶ್ವತ್ಥಸ್ಯ ವನಸ್ಪತೇಃ ॥ ೩೮ ॥

ಸಾ ತಥೈವ ಮಹಾಗಂಧಾ ಹ್ಯಮ್ಲಾನಾ ಸರ್ವಕಾಮಿಕೀ ।
ಇಜ್ಯತೇ ಸುಮಹಾಭಾಗಾ ವಿವಿಧೈಃ ಸಿದ್ಧಚಾರಣೈಃ ॥ ೩೯ ॥

---

೩೫. ಆ ವೃಕ್ಷದ ಫಲಗಳು ಕುಂಭದಂತೆ ದೊಡ್ಡದಾಗಿಯೂ, ಸುಖಕರವಾಗಿಯೂ, ಮಂಗಳಪ್ರದವಾಗಿಯೂ, ಸಾರ್ವಕಾಲಿಕವಾಗಿಯೂ ಇದ್ದುವು. ವೃಕ್ಷಗಳಲ್ಲಿ ಅತ್ಯುತ್ತಮವಾದ ಆ ಅಶ್ವತ್ಥವು ಸರ್ವದಾ ದೇವಗಂಧರ್ವರಿಂದ ಸೇವಿಸಲ್ಪಡುತ್ತದೆ.

೩೬. ಆ ವೃಕ್ಷಕ್ಕೆ ಕೇತುಮಾಲಿಯೆಂಬ ನಾಮವು ಪ್ರಾಪ್ತವಾಗಿದೆ. ಆ ನಾಮವು ಬರಲು ಕಾರಣವೇನೆಂಬುದನ್ನು ನಿಮಗಾಗಿ ತಿಳಿಸುವೆನು ಕೇಳಿ ಎಂದನು.

೩೭-೩೮. ಪೂರ್ವದಲ್ಲಿ ದೇವದೈತ್ಯರು ಕ್ಷೀರಸಾಗರವನ್ನು ಮಥಿಸಲಾಗಿ ದೈತ್ಯರು ಸೋತುಹೋದರು. ಆಗ ದೇವದೈತ್ಯರಿಗೆ ಕಾಳಗವಾಗಿ ಮಹಾಸಮ್ಮರ್ದವು ಉಂಟಾಯಿತು ಆ ಸಮ್ಮರ್ದದಿಂದ ಕ್ಷುಭಿತನಾದ ದೇವೇಂದ್ರನು ತನ್ನ ಹಸ್ತದಲ್ಲಿದ್ದ ಮಾಲಿಕೆಯನ್ನು ಆ ಅಶ್ವತ್ಥವೃಕ್ಷದ ರಂಬೆಗೆ ತಗಲಾಕಿದನು.

೩೯. ಆ ಮರದ ರೆಂಬೆಯಲ್ಲಿ ನೇತಾಡುತ್ತಿದ್ದ ಆ ಪುಷ್ಪಮಾಲೆಯನ್ನು ಸಿದ್ಧಚಾರಣರೇ ಮೊದಲಾದ ದೇವತೆಗಳು ಸರ್ವಕಾಲದಲ್ಲಿಯೂ ಪೂಜೆಯನ್ನು ಮಾಡುತ್ತಿದ್ದರು. ಆ ಮಾಲಿಕೆಯು ಸರ್ವದಾ ಬಾಡದೆಯೂ ಸರ್ವಕಾಮಪ್ರದವಾಗಿಯೂ ಸುಗಂಧಿಯಾಗಿಯೂ ಇರುತ್ತದೆ.

**ತಸ್ಯ ಕೇತೋಃ ಸದಾ ಮಾಲಾ ದೇವದತ್ತಾ ವಿರಾಜಿತೇ ।**
**ಪವನೇನೇರಿತಾ ದಿವ್ಯಂ ವಾತಿ ಗಂಧಂ ಮನೋರಮಂ । ॥ ೪೦ ॥**

**ತಾಭ್ಯಾಂ ನಾಮಾಂಕಿತೋ ದ್ವೀಪಃ ಪಶ್ಚಿಮೋ ಬಹುವಿಸ್ತರಃ ।**
**ಕೇತುಮಾಲ ಇತಿ ಖ್ಯಾತೋ ದಿವಿ ಚೇಹ ಚ ಸರ್ವಶಃ ॥ ೪೧ ॥**

**ಸ್ವಪಾರ್ಶ್ವಸ್ಯೋತ್ತರೇ ಚಾಪಿ ಶೃಂಗೇ ಜಾತೋ ಮಹಾದ್ರುಮಃ ।**
**ನ್ಯಗ್ರೋಧೋ ವಿಪುಲಸ್ಕಂಧೋಽನೇಕಯೋಜನಮಂಡಲಃ ॥ ೪೨ ॥**

**ಮಾಲ್ಯದಾಮಕಲಾಪೈಶ್ಚ ವಿವಿಧೈರ್ಗಂಧಶಾಲಿಭಿಃ ।**
**ಶಾಖಾವಿಲಂಬೀ ಶುಶುಭೇ ಸಿದ್ಧಚಾರಣಸೇವಿತಃ ॥ ೪೩ ॥**

**ಪ್ರವಾಲಕುಂಭಸದೃಶೈರ್ಮಧುಪೂರ್ಣೈಃ ಫಲೈಃ ಸದಾ ।**
**ಸಹ್ಯುತ್ತರ ಕುರೂಣಾಂ ತು ಕೇತುವೃಕ್ಷಃ ಪ್ರಕಾಶತೇ ॥ ೪೪ ॥**

---

೪೦. ದೇವದತ್ತವಾದ ಆ ಮಾಲೆಯು ಆ ವೃಕ್ಷದ ರಂಬೆಯಲ್ಲಿ ಸದಾ ಪ್ರಕಾಶಿಸುತ್ತಿದೆ. ಗಾಳಿಯು ಅದರ ಮೇಲೆ ಬೀಸಲಾಗಿ ಆ ವಾಸನೆಯು ದಿಙ್ಮಂಡಲದ ವರೆಗೂ ವ್ಯಾಪಿಸುತ್ತಾ ಇರುತ್ತದೆ.

೪೧. ಪಶ್ಚಿಮದಿಕ್ಕಿನಲ್ಲಿ ಅತಿವಿಸ್ತಾರವಾದ ಆ ದ್ವೀಪವು ಆ ವೃಕ್ಷ ಮತ್ತು ಮಾಲೆ ಇವೆರಡರಿಂದಲೂ ಕೇತುಮಾಲೆಯೆಂಬ ನಾಮವನ್ನು ಹೊಂದಿ ಇಹಲೋಕ ದಲ್ಲಿಯೂ ಸ್ವರ್ಗಲೋಕದಲ್ಲಿಯೂ ಪ್ರಖ್ಯಾತವಾಗಿದೆ

೪೨-೪೩. ಆ ಮಹಾಮೇರುಪರ್ವತದ ಉತ್ತರಭಾಗದ ಶಿಖರದಲ್ಲಿ ಮಹತ್ತಾ ದಪ್ಪವಾದ ಬುಡವಿರುವುದೂ, ಅನೇಕ ಯೋಜನ ವಿಶಾಲವುಳ್ಳದ್ದೂ ಆದ ಆಲದಮರವು ನಾನಾವಿಧ ವಾಸನೆಯನ್ನು ಬೀರುವ ಅನೇಕ ಪುಷ್ಪಮಾಲೆಗಳಿಂದಲಂಕೃತವೂ, ಸಿದ್ಧ ಚಾಣರಿಂದ ಸೇವಿತವೂ ಆಗಿ ಶೋಭಿಸುತ್ತದೆ.

೪೪. ಉತ್ತರಶಿಖರಕ್ಕೆ ಧ್ವಜಪ್ರಾಯವಾದ ಆ ಆಲದಮರವು ಸರ್ವಕಾಲ ದಲ್ಲಿಯೂ ಹವಳದ ಕುಂಭದಂತೆ ಮಹತ್ತಾಗಿಯೂ, ಮಧುಪೂರ್ಣವಾಗಿಯೂ ಇರುವ ಫಲಗಳಿಂದ ಉತ್ತರಕುರುದೇಶದಲ್ಲಿ ಪ್ರಕಾಶಿಸುತ್ತಿದೆ

ಸನತ್ಕುಮಾರಾ ವಿರಜಾ ಮಾನಸಾ ಬ್ರಹ್ಮಣಃಸುತಾಃ ।
ಸಪ್ತ ತತ್ರ ಮಹಾಭಾಗಾಃ ಕುರವೋ ನಾಮ ವಿಶ್ರುತಾಃ ॥ ೪೫ ॥

ತತ್ರ ತೈರಾಗತಜ್ಞಾನೈಃ ಸತ್ವಸ್ಥೈಃ ಪುಣ್ಯಕೀರ್ತಿಭಿಃ ।
ಅಕ್ಷಯಂ ಕ್ಷೇಮಮುಪರಂ ಲೋಕಂ ಪ್ರಾಪ್ತಂ ಸನಾತನಂ ॥ ೪೬ ॥

ತೇಷಾಂ ನಾಮಾಂಕಿತೋ ದ್ವೀಪಃ ಸಪ್ತಾನಾಂ ವೈ ಮಹಾತ್ಮನಾಂ ।
ದಿವಿ ಚೇಹ ಚ ವಿಖ್ಯಾತಾ ಉತ್ತರಾಃ ಕುರವಃ ಸದಾ ॥ ೪೭ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಜಂಬೂದ್ವೀಪವರ್ಣನಂ" ನಾಮ ಪಂಚತ್ರಿಂಶೋಽಧ್ಯಾಯಃ

---

೪೫. ಆ ಉತ್ತರಕುರುದೇಶದಲ್ಲಿ ರಜೋಗುಣಶೂನ್ಯರೂ, ಬ್ರಹ್ಮದೇವನ ಸಪ್ತಮಾನಸಪುತ್ರರೂ, ಮಹಾನುಭಾವರೂ ಆದ ಸನತ್ಕುಮಾರಾದಿಗಳು ಪ್ರಖ್ಯಾತ ರಾಗಿರುವರು. ಮಹಾನುಭಾವರಾದ ಸಪ್ತಮಾನಸಪುತ್ರರೂ ಅಲ್ಲಿ ಕುರುಗಳೆಂದು ಪ್ರಖ್ಯಾತರಾಗಿದ್ದರು

೪೬. ಸನತ್ಕುಮಾರಾದಿಯಾದ ಬ್ರಹ್ಮದೇವನ ಸಪ್ತಮಾನಸಪುತ್ರರು ಆ ದ್ವೀಪ ದಲ್ಲಿ ದಿವ್ಯಜ್ಞಾನ, ಪುಣ್ಯಕೀರ್ತಿಗಳನ್ನೂ, ತತ್ವಜ್ಞಾನವನ್ನೂ ಹೊಂದಿ ಅಕ್ಷಯವೂ, ಕ್ಷೇಮಕರವೂ, ಸನಾತನವೂ ಆದ ದಿವ್ಯಲೋಕವನ್ನು ಪಡೆದರು.

೪೭. ಆ ಉತ್ತರದೇಶದಲ್ಲಿ ಬ್ರಹ್ಮದೇವನ ಮಾನಸಪುತ್ರರಾದ ಸನತ್ಕುಮಾ ರಾದಿಗಳು ವಾಸಮಾಡಿದ್ದರಿಂದ ಮಹಾತ್ಮರಾದ ಅವರ ನಾಮಗಳಿಂದ ಆ ದ್ವೀಪವೂ ಉತ್ತರಕುರುದೇಶವೂ ಸಹ ಈ ಭೂಲೋಕದಲ್ಲಿಯೂ ಸ್ವರ್ಗಲೋಕಾದಿಗಳಲ್ಲಿಯೂ ಪ್ರಸಿದ್ಧಿಯನ್ನು ಹೊಂದಿತ್ತು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಜಂಬೂದ್ವೀಪವರ್ಣನೆಯೆಂಬ" ಮೂವತ್ತೈದನೆಯ ಅಧ್ಯಾಯವು ಸಮಾಪ್ತವಾದುದು.

# ಮೂವತ್ತೈದನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಜಂಬೂದ್ವೀಪವು ವರ್ಣಿತವಾಗಿದೆ. ಶ್ರೀ ಮೇರುಗಿರಿಯು ಭೂಕಮಲದ ಕರ್ಣಿಕಾರೂಪವಾಗಿದೆ. ಅದರ ಸುತ್ತಲೂ ಅನೇಕ ಪರ್ವತಗಳಿವೆ. ಆ ಮಹಾಮೇರುವು ಅನೇಕವಾದ ಗುಹೆ, ಲತಾಗೃಹ, ಗವಿ, ನದಿ, ವೃಕ್ಷ, ಶಿಖರ, ಧಾತು, ಸಿಂಹಶಾರ್ದೂಲಾದಿಮೃಗ ಇವುಗಳಿಂದಲಂಕೃತವಾಗಿದೆ. ಅದರ ನಾಲ್ಕು ದಿಕ್ಕುಗಳಲ್ಲಿಯೂ ಜಠರ, ಹೇಮಕೂಟ, ಕೈಲಾಸ, ಹಿಮಾಲಯಗಳು ವ್ಯಾಪಿಸಿ ಕೊಂಡಿವೆ. ಆ ಮೇರುವಿನ ನಾಲ್ಕುದಿಕ್ಕುಗಳಲ್ಲಿಯೂ ಅದರ ಬುಡಗಳೇ ನಾಲ್ಕು ಮಹಾಪರ್ವತಗಳಾಗಿ ಭೂಮಿಗೆ ಆಧಾರಸ್ತಂಭಗಳಾಗಿವೆ. ಪೂರ್ವದಲ್ಲಿ ಮಂದರ, ದಕ್ಷಿಣದಲ್ಲಿ ಗಂಧಮಾದನ, ಪಶ್ಚಿಮದಲ್ಲಿ ವಿಪುಲ, ಉತ್ತರದಲ್ಲಿ ಸುಪಾರ್ಶ್ವಗಳೆಂಬ ನಾಲ್ಕುಪರ್ವತಗಳು ಭೂಮಿಯು ಅಚಲವಾಗಿರಲು ಕಾರಣವಾಗಿವೆ ಆ ಪರ್ವತ ಪೂರ್ವಶಿಖರದಲ್ಲಿ(ವರಕೇತು), ಹಲಸಿನವೃಕ್ಷವೂ, ದಕ್ಷಿಣಶಿಖರದಲ್ಲಿ ಜಂಬೂವೃಕ್ಷವೂ, ಪಶ್ಚಿಮಶಿಖರದಲ್ಲಿ ಆಲದಮರವೂ, ಉತ್ತರಶಿಖರದಲ್ಲಿ ಅಶ್ವತ್ಥವೃಕ್ಷವೂ ಕೂಡ ನಾನಾ ವಿಧವಾದ ಫಲಪುಷ್ಪಗಳಿಂದಲಂಕೃತಗಳಾಗಿಯೂ, ದೇವಾದಿಗಳಿಂದ ಸೇವಿಸಲ್ಪಡುವು ದಾಗಿಯೂ, ಪ್ರಖ್ಯಾತವಾಗಿಯೂ ಇವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಷಟ್ತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ತೇಷಾಂ ಚತುರ್ಣಾಂ ವಕ್ಷ್ಯಾಮಿ ಶೈಲೇಂದ್ರಾಣಾಂ ಯಥಾಕ್ರಮಂ ।
ಅನುಬಂಧಾನಿ ರಮ್ಯಾಣಿ ಸರ್ವಕಾಲರ್ತುಕಾನಿ ಚ ॥ ೧ ॥

ಸಾರಿಕಾಭಿರ್ಮಯೂರೈಶ್ಚ ಚಕೋರೈಶ್ಚ ಮದೋತ್ಕಟೈಃ ।
ಶುಕೈಶ್ಚ ಭೃಂಗರಾಜೈಶ್ಚ ಚಿತ್ರಕೈಶ್ಚ ಸಮಂತತಃ ॥ ೨ ॥

ಜೀವಂಜೀವಕನಾದೈಶ್ಚ ಹೇಮಕಾನಾಂ ಚ ನಾದಿತೈಃ ।
ಮತ್ತಕೋಕಿಲನಾದೈಶ್ಚ ವಲ್ಗೂನಾಂ ಚ ನಿನಾದಿತೈಃ ॥ ೩ ॥

ಸುಗ್ರೀವಕಾಂಚನಖೈಃ ಕಲವಿಂಕರುತೈಸ್ತಥಾ ।
ಕೂಜಿತಾಂತರಶಬ್ದೈಶ್ಚ ಸುರಮ್ಯಾಣಿ ಚ ಸರ್ವತಃ ॥ ೪ ॥

---

## ಮೂವತ್ತಾರನೆಯ ಅಧ್ಯಾಯವು

೧. ಸೂತನು ಹೇಳುತ್ತಾನೆ:—ಎಲೈ ಮುನಿಗಳೇ, ಪೂರ್ವೋಕ್ತಗಳಾದ ನಾಲ್ಕು ಪರ್ವತಗಳ ಸಂಬಂಧವನ್ನೂ ಅವುಗಳಲ್ಲಿ ಸರ್ವಕಾಲ, ಸರ್ವಋತುಗಳಲ್ಲಿಯೂ ನಡೆಯತಕ್ಕ ಮನೋಹರವಾದ ವಿಷಯಗಳನ್ನೂ ನಿರೂಪಿಸುವೆನು ಕೇಳಿ ಎಂದನು.

೨-೪. ಆ ಪರ್ವತಗಳ ಸುತ್ತಲೂ ಮನೋಹರವಾದ ನಾಲ್ಕು ಉಪವನಗಳಿದ್ದುವು. ಅವು ಸಾರಿಕೆ, ನವಿಲು, ಚಕೋರ, ಮದೋನ್ಮತ್ತಗಳಾದ ಗಿಳಿ, ದುಂಬಿ, ವಿಚಿತ್ರವಾದ ಬಣ್ಣದಹಕ್ಕಿ, ಮದಿಸಿದ ಕೋಗಿಲೆ, ಚಿನ್ನದಹಕ್ಕಿ, ಗುಬ್ಬಚ್ಚಿ ಇವೇ ಮೊದಲಾದ ನಾನಾವಿಧಪಕ್ಷಿಗಳ ಮಧುರವಾದ ಧ್ವನಿಗಳಿಂದ ಮನೋಹರವಾಗಿದ್ದುವು.

ಮದೋತ್ಕಟೈರ್ಘುಷ್ಟೈಶ್ಚ ಭ್ರಮದ್ಭೈಶ್ಚ ಮಹಾಲಸೈಃ ।
ಉಪಗೀತವನಾಂತಾನಿ ಕಿನ್ನರೈಶ್ಚ ಕ್ವಚಿತ್ ಕ್ವಚಿತ್ ॥ ೫ ॥

ಪುಷ್ಪವೃಷ್ಟಿಂ ವಿಮುಂಚಂತಿ ಮಂದಮಾರುತಕಂಪಿತಾಃ ।
ತರವೋ ಯತ್ರ ದೃಶ್ಯಂತೇ ಚಾರುಪಲ್ಲವಶೋಭಿತಾಃ ॥ ೬ ॥

ಸ್ತಬಕೈರ್ಮಂಜರೀಭಿಶ್ಚ ತಾಮ್ರೈಃ ಕಿಸಲಯೈಸ್ತಥಾ ।
ಮಂದವಾತವಶಾಲ್ಲೋಲೈರ್ದೋಲಯದ್ಭಿರ್ಯುತಾನಿ ಚ ॥ ೭ ॥

ನಾನಾಧಾತುವಿಚಿತ್ರೈಶ್ಚ ಕಾಂತರೂಪೈಃ ಶಿಲಾಶತೈಃ ।
ಶಲ್ಲೈಃ ಕ್ವಚಿದ್ವಿಜಶ್ರೇಷ್ಠಾ ವಿನ್ಯಸ್ತೈಃ ಶೋಭಿತಾನಿ ಚ ॥ ೮ ॥

ದೇವದಾನವಗಂಧರ್ವೈರ್ಯಕ್ಷರಾಕ್ಷಸಪನ್ನಗೈಃ ।
ಸಿದ್ಧಾಪ್ಸರೋಗಣೈಶ್ಚೈವ ಸೇವಿತಾನಿ ತತಸ್ತತಃ ॥ ೯ ॥

---

೫. ಕೆಲವು ಪ್ರದೇಶದಲ್ಲಿ ಮದೋನ್ಮತ್ತಗಳೂ, ಅತ್ಯಂತ ಅಲಸಗಳೂ ಆದ ಭ್ರಮರಗಳು ಮನೋಹರವಾಗಿ ಧ್ವನಿಮಾಡುತ್ತಿದ್ದುವು. ಕೆಲವು ಉಪವನಗಳಲ್ಲಿ ಕಿನ್ನರರು ಬಹಳ ಇಂಪಾಗಿ ಗಾನಮಾಡುತ್ತಿದ್ದರು.

೬-೭. ಆ ವನಗಳಲ್ಲಿರುವ ಅನೇಕ ಪುಷ್ಪವೃಕ್ಷಗಳು ಸುಂದರಪಲ್ಲವಗಳಿಂದ ಲಂಕೃತಗಳಾಗಿದ್ದುವು. ಗಾಳಿಯು ಮಂದವಾಗಿ ಬೀಸಿದರೆ ಪುಷ್ಪವೃಷ್ಟಿಯನ್ನು ಸುರಿಸುತ್ತಿದ್ದವು. ಮತ್ತು ಆ ವೃಕ್ಷಗಳು ಪುಷ್ಪಗಳ ಗೊಂಚಲುಗಳಿಂದಲೂ ಕೆಂಪಾದ ಚಿಗುರೆಲೆಗಳಿಂದಲೂ, ದಟ್ಟವಾದ ರೆಂಬೆಗಳಿಂದಲೂ, ಅಲಂಕೃತಗಳಾಗಿಯೂ, ಮಂದ ಮಾರುತದಿಂದ ಡೋಲಾಯಮಾನವಾಗಿಯೂ ಇದ್ದುವು.

೮. ಆ ವನಪ್ರದೇಶಗಳು ನಾನಾವಿಧವಾದ ಧಾತುಗಳುಳ್ಳ ಶಿಲಾತಲಗಳಿಂದ ಮಂಡಿತಗಳೂ, ಮಂಡೂಕವೇ ಮೊದಲಾದ ಪ್ರಾಣಿಗಳಿಂದಸಹಿತವೂ ಆಗಿದ್ದುವು.

೯. ದೇವತೆಗಳೂ, ದಾನವರೂ, ಯಕ್ಷರೂ, ರಾಕ್ಷಸರೂ, ಪನ್ನಗಗಳೂ, ಅಪ್ಸರೋಗಣಗಳೂ, ಸಿದ್ಧರೂ ಇವರು ಸರ್ವಕಾಲದಲ್ಲಿಯೂ ಅಲ್ಲಿ ವಾಸಿಸುತ್ತಿದ್ದರು.

ಮನೋಹರಾಣಿ ಚತ್ವಾರಿ ದೇವಾಕ್ರೀಡನಕಾನ್ಯಥ ।
ಚತುರ್ದಿಶಮುದಾರಾಣಿ ನಾಮ್ನಾ ಶೃಣುತ ತಾನಿ ಮೇ ॥ ೧೦ ॥

ಪೂರ್ವಂ ಚೈತ್ರರಥಂ ನಾಮ ದಕ್ಷಿಣಂ ನಂದನಂ ವನಂ ।
ವೈಭ್ರಾಜಂ ಪಶ್ಚಿಮಂ ವಿದ್ಯಾದುತ್ತರಂ ಸವಿತುರ್ವನಂ ॥ ೧೧ ॥

ಮಹಾವನೇಷು ಚೈತೇಷು ನಿವಿಷ್ಟಾನಿ ಯಥಾಕ್ರಮಂ ।
ಅನುಬಂಧಾನಿ ರಮ್ಯಾಣಿ ವಿಹಂಗೈಃ ಕೂಜಿತಾನಿ ಚ ॥ ೧೨ ॥

ವನ್ಯೈರ್ವಿಸ್ತೀರ್ಣತೀರ್ಥಾನಿ ಮಹಾಪುಣ್ಯವನಾನಿ ಚ ।
ಮಹಾನಾಗಾದಿವಾಸಾನಿ ಸೇವಿತಾನಿ ಮಹಾತ್ಮಭಿಃ ॥ ೧೩ ॥

ಸುರಸಾಮಲತೋಯಾನಿ ಶಿವಾನಿ ಸುಸುಖಾನಿ ಚ ।
ಸಿದ್ಧದೇವಾಸುರವರ್ಯೈರುಪಸ್ಪೃಷ್ಟ ಜಲಾನಿ ಚ ॥ ೧೪ ॥

---

೧೦. ಅಲ್ಲಿರುವ ನಾಲ್ಕು ಪರ್ವತಗಳಲ್ಲಿಯೂ ಸುಂದರವಾದ ನಾಲ್ಕು ಉದ್ಯಾನ ವನಗಳೂ, ಅವುಗಳಲ್ಲಿ ರಮ್ಯವಾದ ಕ್ರೀಡಾಮಂದಿರಗಳೂ ಶೋಭಿಸುತ್ತಿದ್ದುವು. ಅವುಗಳ ನಾಮಗಳನ್ನು ಕೇಳಿ, ತಿಳಿಸುವೆನೆಂದನು.

೧೧. ಪೂರ್ವದಲ್ಲಿ ಚೈತ್ರರಥವೆಂಬವನವೂ, ದಕ್ಷಿಣದಲ್ಲಿ ನಂದನವೆಂಬ ವನವೂ, ಪಶ್ಚಿಮದಲ್ಲಿ ವೈಭ್ರಾಜವೆಂಬ ಉದ್ಯಾನವೂ ಉತ್ತರದಲ್ಲಿ ಸವಿತುರ್ನಾಮಕ ವನವೂ ಪ್ರಕಾಶಿಸುತ್ತಿವೆ.

೧೨. ಈ ಉದ್ಯಾನಮಹಾವನಗಳಲ್ಲಿ ನಾನಾವಿಧರಮ್ಯಸ್ಥಾನಗಳೂ, ಪಕ್ಷಿಗಳ ಮನೋಹರಧ್ವನಿಗಳೂ, ಕ್ರೀಡಾಮಂದಿರಗಳೂ, ನದಿಗಳೂ ಕೂಡ ವಿಶೇಷವಾಗಿದ್ದುವು.

೧೩. ಆ ವನಗಳಲ್ಲಿ ವಿಶಾಲವಾದತೀರ್ಥಗಳೂ, ಅತ್ಯಂತಪುಣ್ಯಪ್ರದಗಳಾದ ಕ್ಷೇತ್ರಗಳೂ, ಮಹಾಸರ್ಪಗಳು ವಾಸಿಸುವ ಹ್ರದಗಳೂ, ಮಹಾತ್ಮರಿಂದ ಸೇವಿತವಾದ ಸ್ಥಾನಗಳೂ ವಿಶೇಷವಾಗಿದ್ದುವು.

೧೪. ಆ ತೀರ್ಥೋದಕವು ಮಂಗಳಪ್ರದವಾಗಿಯೂ, ಸುಖಕರವಾಗಿಯೂ, ಸಿದ್ಧರು, ದೇವತೆಗಳು, ಅಸುರರು ಇವರೇ ಮೊದಲಾದವರಿಂದ ಸೇವಿಸಲ್ಪಟ್ಟದ್ದಾಗಿಯೂ ಇದ್ದುವು.

ಛತ್ರಪ್ರಮಾಣೈರ್ವಿಕಚೈರ್ಮಹಾಗಂಧೈರ್ಮನೋಹರೈಃ ।
ಪುಂಡರೀಕೈರ್ಮಹಾಪತ್ರೈರುತ್ಪಲೈಃ ಶೋಭಿತಾನಿ ಚ ॥
ಮಹಾಸರಾಂಸಿ ಚತ್ವಾರಿ ತಾನಿ ವಕ್ಷ್ಯಾಮಿ ನಾಮತಃ ॥ ೧೫ ॥

ಅರುಣೋದಂ ಸರಃ ಪೂರ್ವಂ ದಕ್ಷಿಣಂ ಮಾನಸಂ ಸ್ಮೃತಂ ।
ಸಿತೋದಂ ಪಶ್ಚಿಮಸರೋ ಮಹಾಭದ್ರಂ ತಥೋತ್ತರಂ ॥ ೧೬ ॥

ಅರುಣೋದಂ ಚ ಪೂರ್ವೇಣ ಯೇ ಚ ಶೈಲಾಸ್ತತಃ ಸ್ಮೃತಾಃ ।
ತಾನ್ ಕೀರ್ತ್ಯಮಾನಾಂಸ್ತತ್ವೇನ ಶೃಣುಧ್ವಂ ವಿಸ್ತರಾನ್ಮಮ ॥ ೧೭ ॥

ಶೀತಾಂತಶ್ಚ ಕುಮುಂಜಶ್ಚ ಸುವೀರಶ್ಚಾಚಲೋತ್ತಮಃ ।
ವಿಕಂಕೋ ಮಣಿಶೀಲಶ್ಚ ವೃಷಭಶ್ಚಾಚಲೋತ್ತಮಃ ॥ ೧೮ ॥

ಮಹಾನೀಲೋಽಥ ರುಚಕಃ ಸಬಿಂದುರ್ಮಂದರಸ್ತಥಾ ।
ವೇಣುಮಾಂಶ್ಚ ಸುಮೇಧಶ್ಚ ನಿಷಧೋ ದೇವಪರ್ವತಃ ॥ ೧೯ ॥

---

೧೫. ಆ ಮಹಾವನಗಳಲ್ಲಿ ನಾಲ್ಕು ಮಹಾಸರೋವರಗಳಿವೆ. ಅವುಗಳಲ್ಲಿ ಛತ್ರಿಯಷ್ಟು ಅಗಲವಾಗಿಯೂ, ವಿಕಸಿತವಾಗಿಯೂ, ಸುವಾಸನೆಯಾಗಿಯೂ, ಮನೋಹರವಾಗಿಯೂ, ಇರುವ ಬಿಳೀಕಮಲಗಳು, ಕೋಕನದಗಳು ಮತ್ತು ನೈದಲೇ ಪುಷ್ಪಗಳು ಪತ್ರಸಹಿತವಾಗಿಯೂ ಸುಂದರವಾಗಿಯೂ ಇವೆ. ಆ ಸರಸ್ಸುಗಳ ನಾಮಗಳನ್ನು ಕ್ರಮವಾಗಿ ಹೇಳುವೆನು ಕೇಳಿ ಎಂದನು.

೧೬. ಪೂರ್ವದಲ್ಲಿ ಅರುಣೋದವೆಂಬ ಸರೋವರವೂ, ದಕ್ಷಿಣದಲ್ಲಿ ಮಾನಸವೆಂಬ ಸರೋವರವೂ, ಪಶ್ಚಿಮದಲ್ಲಿ ಸಿತೋದವೆಂಬ ಸರಸ್ಸೂ, ಉತ್ತರದಲ್ಲಿ ಮಹಾಭದ್ರವೆಂಬವೆಂಬ ಸರೋವರವೂ ಇರುವುವು.

೧೭. ಪೂರ್ವದಲ್ಲಿ ಅರುಣೋದವೆಂಬ ಸರೋವರವೂ, ಮತ್ತು ಪ್ರಖ್ಯಾತವಾದ ಯಾವ ಪರ್ವತಗಳೂ, ಇದ್ದುವೋ ಅವುಗಳನ್ನು ಯಥಾಸ್ಥಿತವಾಗಿಯೂ, ವಿಸ್ತಾರವಾಗಿಯೂ ವರ್ಣಿಸುವೆನು ಕೇಳಿ ಎಂದನು.

೧೮-೨೦. ಪೂರ್ವದಿಕ್ಕಿನಲ್ಲಿರುವ ಮಂದರಪರ್ವತದ ಸುತ್ತಮುತ್ತಲೂ ಶೀತಾಂತ, ಕುಮುಂಜ, ಸುವೀರ, ವಿಕಂಕ, ಮಣಿಶೈಲ, ಉತ್ತಮವಾದ ವೃಷಭ, ಮಹಾನೀಲ, ರುಚಕ, ಸಬಿಂದು. ಮಂದರ, ವೇಣುಮಂತ, ಸುಮೇಧ, ನಿಷಧ,

ಇತ್ಯೇತೇ ಪರ್ವತವರಾ ಅನ್ಯೇ ಚ ಗಿರಯಸ್ತಥಾ ।
ಪೂರ್ವೇಣ ಮಂದರಸ್ಯೈತೇ ಸಿದ್ಧವಾಸಾ ಉದಾಹೃತಾಃ ॥ ೨೦ ॥

ಸರಸೋ ಮಾನಸಸ್ಯೇಹ ದಕ್ಷಿಣಾ ಯೇ ಮಹಾಚಲಾಃ ।
ಯೇ ಕೀರ್ತಿತಾ ಮಯಾ ತೇ ವೈ ನಾಮತಸ್ತಾನ್ನಿಬೋಧತ ॥ ೨೧ ॥

ಶೈಲಸ್ತ್ರಿಶಿಖರಶ್ಚಾಪಿ ಶಿಶಿರಶ್ಚಾಚಲೋತ್ತಮಃ ।
ಕಲಿಂಗಶ್ಚ ಪತಂಗಶ್ಚ ರುಚಕಶ್ಚೈವ ಸಾನುಮಾನ್ ॥ ೨೨ ॥

ತಾಮ್ರಾಭಶ್ಚ ವಿಶಾಖಶ್ಚ ತಥಾ ಶ್ವೇತೋದರೋ ಗಿರಿಃ ।
ಸಮೂಲೋ ವಿಷಧಾರಶ್ಚ ರತ್ನಧಾರಶ್ಚ ಪರ್ವತಃ ॥ ೨೩ ॥

ಏಕಶೃಂಗೋ ಮಹಾಮೂಲೋ ಗಜಶೈಲಃ ಪಿಶಾಚಕಃ ।
ಪಂಚಶೈಲೋಽಥ ಕೈಲಾಸೋ ಹಿಮವಾಂಶ್ಚಾಚಲೋತ್ತಮಃ ॥ ೨೪ ॥

ಇತ್ಯೇತೇ ದೇವಚರಿತಾ ಹ್ಯುತ್ಕೃಷ್ಟಾಃ ಪರ್ವತೋತ್ತಮಾಃ ।
ದಿಗ್ಭಾಗೇ ದಕ್ಷಿಣೇ ಪ್ರೋಕ್ತಾ ಮೇರೋರವರಮರ್ಚಸಃ ॥ ೨೫ ॥

---

ದೇವಪರ್ವತ ಇವೇ ಮೊದಲಾದ ಪರ್ವತೋತ್ತಮಗಳು ಅನೇಕವಿವೆ. ಅವುಗಳಲ್ಲಿ ಸಿದ್ಧರೇ ಮೊದಲಾದ ಅನೇಕ ದೇವತೆಗಳು ವಾಸಮಾಡುವರು

೨೧. ದಕ್ಷಿಣದಲ್ಲಿ ಮಾನಸಸರೋವರದ ಸುತ್ತಮುತ್ತಲೂ ಯಾವ ಗಿರಿವರಗಳು ಪ್ರಸಿದ್ಧವಾಗಿವೆಯೋ ಅವುಗಳನ್ನೂ ನಾಮಸಹಿತವಾಗಿ ವರ್ಣಿಸುವೆನು ಕೇಳಿ ಎಂದನು.

೨೨-೨೫. ಸುಂದರವಾದ ಮಹಾಮೇರುವಿನ ದಕ್ಷಿಣಭಾಗದಲ್ಲಿ ತ್ರಿಶಿಖರ, ಶಿಶಿರ, ಕಲಿಂಗ, ಪತಂಗ, ರುಚಕ, ಸಾನುಮಂತ, ತಾಮ್ರಾಭ, ವಿಶಾಖ, ಶ್ವೇತೋದರ, ಸಮೂಲ, ವಿಷಧಾರ, ರತ್ನಧಾರ, ಏಕಶೃಂಗ, ಮಹಾಮೂಲ, ಗಜಶೈಲ, ಪಿಶಾಚಕ, ಪಂಚಶೈಲ, ಕೈಲಾಸ ಮತ್ತು ಹಿಮವಂತ ಇವೇ ಮೊದಲಾದ ಅತ್ಯುತ್ಕೃಷ್ಟಗಳಾದ ಪರ್ವತೋತ್ತಮಗಳು ಶೋಭಿಸುತ್ತವೆ. ಇವು ದೇವವಿಹಾರಯೋಗ್ಯವಾಗಿಯೂ, ಅತ್ಯುತ್ತಮವಾಗಿಯೂ ಶೋಭಿಸುತ್ತವೆ.

ಅಪರೇಣ ಸಿತೋದಸ್ಯ ಸರಸೋ ದ್ವಿಜಸತ್ತಮಾಃ ।
ಉತ್ತಮಾ ಯೇ ಮಹಾಶೈಲಾಸ್ತಾನ್ ಪ್ರವಕ್ಷ್ಯೇ ಯಥಾಕ್ರಮಂ ॥ ೨೬ ॥

ಸುವಕ್ಷಾಃ ಶಿಖಿಶೈಲಶ್ಚ ಕಾಲೋ ವೈದೂರ್ಯಪರ್ವತಃ ।
ಕಪಿಲಃ ಪಿಂಗಲೋ ರುದ್ರಃ ಸುರಸಶ್ಚ ಮಹಾಚಲಃ ॥ ೨೭ ॥

ಕುಮುದೋ ಮಧುಮಾಂಶ್ಚೈವ ಅಂಜನೀಮುಕುಟಸ್ತಥಾ ।
ಕೃಷ್ಣಶ್ಚ ಪಾಂಡರಶ್ಚೈವ ಸಹಸ್ರಶಿಖರಶ್ಚ ಹ ॥ ೨೮ ॥

ಪಾರಿಯಾತ್ರಶ್ಚ ಶೈಲೇಂದ್ರಸ್ತ್ರಿಶೃಂಗಶ್ಚಾಚಲೋತ್ತಮಃ ।
ಇತ್ಯೇತೇ ಪರ್ವತವರಾ ದಿಗ್ಭಾಗೇ ಪಶ್ಚಿಮೇ ಸ್ಮೃತಾಃ ॥ ೨೯ ॥

ಮಹಾಭದ್ರಸ್ಯ ಸರಸ ಉತ್ತರೇಣಾಪಿ ಶ್ರೀಮತಃ ।
ಯೇ ಮಯಾ ಪೂರ್ವತಃ ಪ್ರೋಕ್ತಾಸ್ತಾನ್ವದಿಷ್ಯೇ ಯಥಾಕ್ರಮಂ ॥ ೩೦ ॥

ಶಂಕುಕೂಟೋ ಮಹಾಶೈಲೋ ವೃಷಭೋ ಹಂಸಪರ್ವತಃ ।
ನಾಗಶ್ಚ ಕಪಿಲಶ್ಚೈವ ಇಂದ್ರಶೈಲಶ್ಚ ಸಾನುಮಾನ್ ॥ ೩೧ ॥

---

೨೬. ಎಲೈ ವಿಪ್ರವರ್ಯರೆ, ಆ ಮೇರು ಪರ್ವತದ ಪಶ್ಚಿಮಭಾಗದಲ್ಲಿರುವ ಸಿತೋದ ಸರೋವರದ ದಡಗಳಲ್ಲಿ ಯಾವ ಪರ್ವತೋತ್ತಮಗಳಿವೆಯೋ ಅವುಗಳನ್ನು ತಿಳಿಸುವೆನು ಕೇಳಿ ಎಂದನು.

೨೭-೨೯. ಆ ತೀರದ ಪಶ್ಚಿಮಭಾಗದಲ್ಲಿ ಸುವಕ್ಷಸ, ಶಿಖಿಶೈಲ, ಕಾಲ ವೈಡೂರ್ಯ, ಕಪಿಲ, ಪಿಂಗಳ, ರುದ್ರ, ಸುರಸ, ಕುಮುದ, ಮಧುಮಂತ, ಅಂಜನೀ ಮುಕಟ, ಕೃಷ್ಣಪಾಂಡರ, ಸಹಸ್ರಶಿಖರ, ಪಾರಿಯಾತ್ರ, ತ್ರಿಶಿಂಗ ಇವೇ ಮೊದಲಾವ ಅನೇಕ ಪರ್ವತೋತ್ತಮಗಳು ಶೋಭಿಸುತ್ತಿವೆ.

೩೦ ಮಹದೈಶ್ವರ್ಯಸಂಪನ್ನವೂ, ಅತ್ಯುತ್ತಮವೂ ಆದ ಮೇರುವಿನ ಉತ್ತರ ಭಾಗದಲ್ಲಿರುವ ಪರ್ವತೋತ್ತಮಗಳನ್ನು ಈಗ ಹೇಳುವೆನು ಕೇಳಿರೆಂದನು.

೩೧-೩೨. ಶಂಕುಕೂಟ ಮಹಾಶೈಲ, ವೃಷಭ, ಹಂಸನಾಗ, ಕಪಿಲ, ಇಂದ್ರಶೈಲ. ಸಾನುಮಂತ, ನೀಲ, ಕನಕಶೃಂಗ, ಶತಶೃಂಗ, ಪುಷ್ಪಕ, ಮೇಘಶೈಲ,

ನೀಲಃ ಕನಕಶೃಂಗಶ್ಚ ಶತಶೃಂಗಶ್ಚ ಪರ್ವತಃ ।
ಪುಷ್ಪಕೋ ಮೇಘಶೈಲಶ್ಚ ವಿರಾಜಶ್ಚಾಚಲೋತ್ತಮಃ ॥
ಜಾರುಧಿಶ್ಚೈವ ಶೈಲೇಂದ್ರ ಇತ್ಯೇತೇ ಉತ್ತರಾಃ ಸ್ಮೃತಾಃ ॥ ೩೨ ॥

ಏತೇಷಾಂ ಶೈಲಮುಖ್ಯಾನಾಮಂತರೇಷು ಯಥಾಕ್ರಮಂ ।
ಸ್ಥಾಲ್ಯೋಽಹ್ಯಂತರದ್ರೋಣ್ಯಶ್ಚ ಸರಾಂಸಿ ಚ ನಿಬೋಧತ ॥ ೩೩ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಭುವನವಿನ್ಯಾಸೋ" ನಾಮ ಷಟ್‌ತ್ರಿಂಶೋಽಧ್ಯಾಯಃ

---

ವಿರಾಜ ಮತ್ತು ಜಾರುಧಿ ಇವೇ ಮೊದಲಾದ ಮಹಾಗಿರಿವರಗಳು ಉತ್ತರದಲ್ಲಿ ಹೊಳೆಯುತ್ತಿವೆ.

೩೩. ಈ ಮೇಲೆ ನಿರೂಪಿಸಿರುವ ಪರ್ವತಗಳ ತಪ್ಪಲು ಮಧ್ಯಭಾಗ ಮತ್ತು ಸಂಧಿಗೊಂಧಿಗಳಲ್ಲಿರತಕ್ಕ ಪ್ರದೇಶಗಳನ್ನು ಹಳ್ಳಿಗಳನ್ನು ಕೊಳಗಳನ್ನು ನಿರೂಪಿಸುವೆನು ಕೇಳಿರೆಂದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಜಂಬೂದ್ವೀಪವರ್ಣನೆ"ಯೆಂಬ ಮೂವತ್ತಾರನೆಯ ಅಧ್ಯಾಯವು ಸಮಾಪ್ತವಾದುದು.

## ಮೂವತ್ತಾರನೆಯ ಅಧ್ಯಾಯದ ಸಾರಾಂಶವು

ಆ ಮಹಾಮೇರುವಿನ ಸುತ್ತಲೂ ನಾಲ್ಕು ದಿಕ್ಕುಗಳಲ್ಲಿಯೂ ಭೂಮಿಯ ಆಧಾರಸ್ತಂಭದಂತೆ ನ ಲ್ಕು ಪರ್ವತಗಳಿವೆ. ಆ ಮೇರುವಿನ ಪೂರ್ವದಲ್ಲಿ ಚೈತ್ರರಥ, ದಕ್ಷಿಣದಲ್ಲಿ ನಂದನ, ಪಶ್ಚಿಮದಲ್ಲಿ ವೈಭ್ರಾಜ, ಉತ್ತರದಲ್ಲಿ ಸವಿತುರ್ವನವೆಂಬ ನಾಲ್ಕು ಉದ್ಯಾನವನಗಳಿವೆ. ಅವು ಶುಕಶಾರಿಕಾಮಯೂರ ಹಂಸಕಾರಂಡವಾದಿ ಅನೇಕ ಪಕ್ಷಿಗಳ ರವದಿಂದ ಇಂಪಾಗಿಯೂ ಕುಂದ, ಮಂದಾರ, ಚಂಪಕ, ಚಾಂಪೇಯವೇ ಮೊದಲಾದವುಗಳ ಕುಸುಮಗಳಿಂದ ಸುವಾಸನೆಯಾಗಿಯೂ ಇರುತ್ತವೆ. ಮತ್ತು ಮೇರುವಿನ ಪೂರ್ವದಲ್ಲಿ ಅರುಣೋದ, ದಕ್ಷಿಣದಲ್ಲಿ ಮಾನಸ, ಪಶ್ಚಿಮದಲ್ಲಿ ಸಿತೋದ, ಉತ್ತರದಲ್ಲಿ ಮಹಾಭದ್ರವೆಂಬ ಸರಸ್ಸುಗಳಿವೆ. ಅವುಗಳ ಪೂರ್ವದಡದಲ್ಲಿ ಶೀತಾಂತ, ಕುಮುಂಜನವೇ ಮೊದಲಾದ ಅನೇಕ ಗಿರಿಗಳೂ ದಕ್ಷಿಣ ದಡದಲ್ಲಿ ತ್ರಿಶಿಖರ, ಶಿಶಿರ, ಕಲಿಂಗ, ಮತಂಗ, ರುಚಿಕ ತಾಮ್ರಾಭಯೇ ಮೊದಲಾದ ಗಿರಿವರಗಳೂ, ಪಶ್ಚಿಮ ತೀರದಲ್ಲಿ ಕಪಿಲ, ಪಿಂಗಲ, ರುದ್ರ, ಸರಸ ಕುಮುದವೇ ಮೊದಲಾದ ಭೂಧರಗಳೂ, ಉತ್ತರ ದೇಶದಲ್ಲಿ ಶಂಕುಕೂಟ ವೃಷಭವೇ ಮೊದಲಾದ ಅದ್ರಿಗಳೂ ಪ್ರಕಾಶಿಸುತ್ತಿವೆಯೆಂಬ ವಿಷಯಗಳು ಈ ಅಧ್ಯಾಯದಲ್ಲಿ ವರ್ಣಿತವಾಗಿದೆ.

--॥ ಹರಿಃ ಓಮ್ ॥--

—ಶ್ರೀ ವೇದವ್ಯಾಸಾಯ ನಮಃ—

# ಶ್ರೀ ಮದ್ವಾಯು ಪುರಾಣಂ

## ಸಪ್ತತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ಶೀತಾಂತಸ್ಯಾಚಲೇಂದ್ರಸ್ಯ ಕುಮುಂಜಸ್ಯಾಂತರೇಣ ತು ।
ದ್ರೋಣ್ಯೋ ವಿಹಂಗಸಂಘುಷ್ಟಾ ನಾನಾಸತ್ವನಿಷೇವಿತಾಃ ॥ ೧ ॥

ತ್ರಿಯೋಜನಶತಾಯಾಮಾ ವಿಸ್ತೀರ್ಣಾಃ ಶತಯೋಜನಾಃ ।
ಸುರಸಾಮಲಪಾನೀಯರಮ್ಯಂ ತತ್ರ ಸರೋವರಂ ॥ ೨ ॥

ದ್ರೋಣ್ಯಾಯಾಮಪ್ರಮಾಣೈಸ್ತು ಪುಂಡರೀಕೈಃ ಸುಗಂಧಿಭಿಃ ।
ಸಹಸ್ರಶತಪತ್ರೈರ್ಹಿ ಮಹಾಪದ್ಮೈರಲಂಕೃತಂ ॥ ೩ ॥

ಮಹೋರಗೈರಧ್ಯುಷಿತಂ ಮಹಾಭೋಗೈರ್ದುರಾಸದೈಃ ।
ದೇವದಾನವಗಂಧರ್ವೈರುಪಸ್ಪೃಷ್ಟಂ ಜಲಂ ಶುಭಂ ॥ ೪ ॥

---

### ಮೂವತ್ತೇಳನೆಯ ಅಧ್ಯಾಯವು

೧-೪. ಸೂತಮುನಿಯು ಹೇಳಿದನು:—ಶೀತಾಂತ, ಕುಮುಂಜಪರ್ವತಗಳ ಮಧ್ಯಭಾಗವು ಮುನ್ನೂರು ಯೋಜನ ಉದ್ದವಾಗಿಯೂ, ನೂರು ಯೋಜನ ಅಗಲವಾಗಿಯೂ ಇರುತ್ತದೆ. ಅದರಲ್ಲಿ ನಾನಾವಿಧಗಳಾದ ಪಕ್ಷಿಗಳ ಸಂಘಗಳೂ, ನಾನಾವಿಧವಾದ ಪ್ರಾಣಿಗಳ ಗುಂಪುಗಳೂ, ಅಮಲವೂ, ರಮ್ಯವೂ, ಸುರಸವೂ ಆದ ಸರೋವರಗಳೂ ವಿಶೇಷವಾಗಿರುತ್ತವೆ, ಆ ಕೊಳಗಳಲ್ಲಿ ಅತಿ ವಿಶಾಲವೂ, ಸುಗಂಧಿಯೂ ಆದ ಬಿಳೀ ತಾವರೆಗಳೂ, ಸಹಸ್ರದಳಗಳಿಂದ ಕೂಡಿದ ಕೆಂಪುತಾವರೆಗಳೂ, ನೈದಲೆ ಪುಷ್ಪಗಳೂ ವಿಶೇಷವಾಗಿರುತ್ತವೆ ಅತ್ಯಂತ ದೊಡ್ಡದೂ ವಿಷಗಳಿಂದ ಭಯಂಕರಗಳೂ ಆದ ಮಹಾಸರ್ಪಗಳು ಆ ಪ್ರದೇಶಗಳಲ್ಲಿ ಅಧಿಕವಾಗಿರುತ್ತವೆ. ದೇವತೆಗಳು, ದಾನವರು, ಗಂಧರ್ವರು ಆ ಕೊಳದಲ್ಲಿ ಸ್ನಾನಪಾನಾದಿಗಳನ್ನು ಮಾಡುವರು.

ಪುಣ್ಯಂ ತಚ್ಛ್ರೀಸರೋ ನಾಮ ಪ್ರಕಾಶಂ ದಿವಿ ಚೇಹ ಚ ।
ಪ್ರಸನ್ನಜಲಸಂಪೂರ್ಣಂ ಶರಣ್ಯಂ ಸರ್ವದೇಹಿನಾಂ ॥ ೫ ॥

ತತ್ರ ತ್ವೇಕಂ ಮಹಾಪದ್ಮಂ ಮಧ್ಯೇ ಪದ್ಮವನಸ್ಯ ಹ ।
ಕೋಟಿಪತ್ರಪ್ರಚಾರಂ ತತ್ತರುಣಾದಿತ್ಯವರ್ಚಸಂ ॥ ೬ ॥

ನಿತ್ಯಂ ವ್ಯಾಕೋಶಮಜರಂ ಚಾಂಚಲ್ಯಾಚ್ಛಾತಿಮಂಡಲಂ ।
ಚಾರುಕೇಶರಜಾಲಾಢ್ಯಂ ಮತ್ತಷಟ್ಪದನಾದಿತಂ ॥ ೭ ॥

ತಸ್ಮಿನ್ ಪದ್ಮೇ ಭಗವತೀ ಸಾಕ್ಷಾಚ್ಛ್ರೀರ್ನಿತ್ಯಮೇವ ಹಿ ।
ಲಕ್ಷ್ಮ್ಯಾಃ ಪದ್ಮಂ ತದಾವಾಸ ಮೂರ್ತಿಮತ್ಯಾ ನ ಸಂಶಯಃ ॥ ೮ ॥

ಸರಸಸ್ತಸ್ಯ ಪೂರ್ವಸ್ಮಿನ್ ತೀರೇ ಸಿದ್ಧನಿಷೇವಿತೇ ।
ಸದಾ ಪುಷ್ಪಫಲಂ ರಮ್ಯಂ ತತ್ರ ಬಿಲ್ವವನಂ ಮಹತ್ ॥ ೯ ॥

ಶತಯೋಜನವಿಸ್ತೀರ್ಣಂ ತ್ರಿಯೋಜನಶತಾಯತಂ ।
ಅರ್ಧಕ್ರೋಶೋಚ್ಚಶಿಖರೈರ್ಮಹಾವೃಕ್ಷೈಃ ಸಹಸ್ರಶಃ ॥ ೧೦ ॥

---

೫. ಆ ಕೊಳಗಳ ಮಧ್ಯದಲ್ಲಿರುವ ಶ್ರೀ ಸರೋವರವು ಭೂಲೋಕಸ್ವರ್ಗಲೋಕಗಳಲ್ಲಿ ಪ್ರಖ್ಯಾತವಾಗಿದೆ. ಅದರಲ್ಲಿ ನಿರ್ಮಲವಾದ ಜಲವಿರುವದರಿಂದ ಅದು ಸರ್ವಪ್ರಾಣಿಗಳಿಗೂ ಆಶ್ರಯವಾಗಿದೆ.

೬-೮ ಆ ಪರ್ವತವಲ್ಲಿ ಉತ್ತಮವಾದ ಪದ್ಮವನವೂ, ಅದರ ಮಧ್ಯದಲ್ಲಿ ಕೋಟಿದಳಗಳಿಂದಕೂಡಿಯೂ, ಸೂರ್ಯನಂತೆ ಕಾಂತಿಯುಳ್ಳದ್ದೂ, ಅತಿವಿಶಾಲವೂ, ಕೇಸರಸಮೂಹಗಳಿಂದಲಂಕೃತವೂ, ಮದಿಸಿದ ದುಂಬಿಗಳ ಝೇಂಕಾರಯುಕ್ತವೂ ಆದ ಒಂದು ಮಹಾಕಮಲವಿರುತ್ತದೆ. ಅದರಲ್ಲಿ ಮಹಾಲಕ್ಷ್ಮಿಯು ಯಾವಾಗಲೂ ವಾಸಿಸುವಳು. ಆ ಮಹಾಕಮಲವು ಮೂರ್ತಿಮತ್ತಳಾಗಿರುವ ಲಕ್ಷ್ಮೀದೇವಿಯ ಆವಾಸಕ್ಕೆ ಯೋಗ್ಯವಾಗಿದೆ.

೯-೧೧. ಆ ಕೊಳದ ಪೂರ್ವಭಾಗದ ತೀರದಲ್ಲಿ ಸಿದ್ಧಪುರುಷರಿಂದಸೇವಿತವೂ, ಸಾರ್ವಕಾಲಿಕವಾದ ಪುಷ್ಪಫಲಗಳಿಂದಪೂರ್ಣವೂ, ಅತಿವಿಶಾಲವೂ ಆದ ಬಿಲ್ವವನವೊಂದಿರುತ್ತದೆ. ಆ ಬಿಲ್ವವನವು ನೂರುಯೋಜನವಿಸ್ತೀರ್ಣವೂ, ಮುನ್ನೂರು ಯೋಜನದೀರ್ಘವೂ ಆಗಿದೆ. ಅಲ್ಲಿರುವ ಸಾವಿರಾರು ವೃಕ್ಷಗಳು ಗಗನಚುಂಬಿ

ಶಾಖಾಸಹಸ್ರಕಲಿತೈರ್ಮಹಾಸ್ಕಂಧೈಃ ಸಮಾಕುಲಂ ।
ಫಲೈಃ ಸುವರ್ಣಸಂಕಾಶೈರ್ಹರಿತೈಃ ಪಾಂಡರೈಸ್ತಥಾ ॥ ೧೧ ॥

ಅಮೃತಸ್ವಾದುಸದೃಶೈರ್ಭೇರೀಮಾತ್ರೈಃ ಸುಗಂಧಿಭಿಃ ।
ಶೀರ್ಯಮಾಣೈಃ ಪತದ್ಭಿಶ್ಚ ಕೀರ್ಣಾಭೂಮಿರ್ನಿರಂತರಾ ॥ ೧೨ ॥

ನಾಮ್ನಾ ತಚ್ಛ್ರೀವನಂ ನಾಮ ಸರ್ವಲೋಕೇಷು ವಿಶ್ರುತಂ ।
ಗಂಧರ್ವೈಃ ಕಿನ್ನರೈರ್ಯಕ್ಷೈರ್ಮಹಾನಾಗೈಶ್ಚ ಸೇವಿತಂ ॥ ೧೩ ॥

ಸಿದ್ಧೈಶ್ಚೈವ ಸಮಾಕೀರ್ಣಂ ನಿತ್ಯಂ ಬಿಲ್ವಫಲಾಶಿಭಿಃ ।
ವಿವಿಧೈರ್ಭೂತಸಂಘೈಶ್ಚ ನಿತ್ಯಮೇವ ನಿಷೇವಿತಂ ॥ ೧೪ ॥

ತಸ್ಮಿನ್ ವನೇ ಭಗವತೀ ಸಾಕ್ಷಾಚ್ಛ್ರೀರ್ನಿತ್ಯಮೇವ ಹಿ ।
ದೇವೀ ಸನ್ನಿಹಿತಾ ತತ್ರ ಸಿದ್ಧಸಂಘೈರ್ನಮಸ್ಕೃತಾ ॥ ೧೫ ॥

---

ಗಳಾಗಿಯೂ, ಶಾಖಾಸಹಸ್ರಯುಕ್ತವಾಗಿಯೂ, ಮಹತ್ತಾದ ಬುಡಗಳಿಂದ ಸಹಿತವಾಗಿಯೂ. ಹಸರು, ಕೆಂಪು, ಬಿಳಪು ಆದ ಫಲಗಳಿಂದ ಕೂಡಿಯೂ ಇರುತ್ತವೆ.

೧೨. ಆ ಫಲಗಳು ಅಮೃತಕ್ಕೆ ಸಮನಾಗಿಯೂ, ಭೇರಿಯಂತೆ ಮಹತ್ತಾಗಿಯೂ, ಸುವಾಸನೆಯಾಗಿಯೂ, ಪಕ್ವವಾಗಿಯೂ ಇರುತ್ತವೆ. ಆ ಭೂಭಾಗವು ಕೆಳಗೆಬಿದ್ದು ಒಡೆದುಹೋಗಿರುವ ಹಣ್ಣುಗಳಿಂದ ವ್ಯಾಪ್ತವಾಗಿದೆ.

೧೩-೧೪. ಅಂತಹ ಆ ಶ್ರೀವನವು ಮೂರುಲೋಕಗಳಲ್ಲಿ ಪ್ರಸಿದ್ಧವಾಗಿಯೂ, ಗಂಧರ್ವರು, ಕಿನ್ನರರು, ಯಕ್ಷರು, ಮಹಾಸರ್ಪಗಳು, ಬಿಲ್ವಫಲಾಕಾಂಕ್ಷಿಗಳಾದ ಸಿದ್ಧರು, ವಿವಿಧಭೂತಸಂಘಗಳು ಇವುಗಳಿಂದ ವ್ಯಾಪ್ತವಾಗಿಯೂ ಇರುತ್ತದೆ.

೧೫. ಅಂತಹ ವನದಲ್ಲಿ ಶ್ರೀದೇವಿಯು ಸದಾಕಾಲದಲ್ಲಿಯೂ ಸನ್ನಿಹಿತಳಾಗಿರುವಳು. ಪೂಜ್ಯಳೂ, ಭಗವಂತಳೂ ಆದ ಅವಳನ್ನು ಸೇವಿಸುವುದಕ್ಕಾಗಿ ಸಿದ್ಧರು, ಚಾರಣರು ಬಂದು ವಂದಿಸಿ ಪೂಜಿಸುತ್ತಿರುವರು.

ವಿಶಂಕಸ್ಯಾಚಲೇಂದ್ರಸ್ಯ ಮಣಿಶೈಲಸ್ಯ ಚಾಂತರೇ ।
ಶತಯೋಜನವಿಸ್ತೀರ್ಣಂ ದ್ವಿಯೋಜನಶತಾಯುತಂ ॥ ೧೬ ॥

ವಿಪುಲ್ಲಚಂಪಕವನಂ ಸಿದ್ಧಚಾರಣಸೇವಿತಂ ।
ಪುಷ್ಪಲಕ್ಷ್ಮ್ಯಾವೃತಂ ಭಾತಿ ಜ್ವಲಂತಮಿವ ನಿತ್ಯದಾ ॥ ೧೭ ॥

ಅರ್ಧಕ್ರೋಶೋಚ್ಚಶಿಖರೈರ್ಮಹಾಸ್ಕಂಧೈಃ ಪಲಾಶಿಭಿಃ ।
ಪ್ರಫುಲ್ಲಶಾಖಾಶಿಖರೈಃ ಪಿಂಜರಂ ಭಾತಿ ತದ್ವನಂ ॥ ೧೮ ॥

ದ್ವಿಬಾಹುಪರಿಣಾಹೈಸ್ತೈಸ್ತ್ರಿಹಸ್ತಾಯಾಮವಿಸ್ತರೈಃ ।
ಮನಃಶಿಲಾಚೂರ್ಣನಿಭೈಃ ಪಾಂಡುಕೇಸರಶಾಲಿಭಿಃ ॥ ೧೯ ॥

ಪುಷ್ಪೈರ್ಮನೋಹರೈರ್ವ್ಯಾಪ್ತಂ ವ್ಯಾಕೋಶೈರ್ಗಂಧಶಾಲಿಭಿಃ ।
ವಿರಾಜತೇ ವನಂ ಸರ್ವಂ ಮತ್ತಭ್ರಮರನಾದಿತಂ ॥ ೨೦ ॥

---

೧೬-೧೭ ವಿಶಂಕ ಮತ್ತು ಮಣಿಶೈಲಗಳ ಮಧ್ಯಭಾಗದಲ್ಲಿ ನೂರುಯೋಜನ ವಿಸ್ತೀರ್ಣವೂ ಇನ್ನೂರುಯೋಜನ ಉದ್ದವೂ, ಅತಿವಿಶಾಲವೂ, ಸಿದ್ಧಚಾರಣ ಸೇವಿತವೂ, ಪುಷ್ಪಸಮೃದ್ಧಿಯಿಂದ ಸಹಿತವೂ ಪ್ರಕಾಶಮಾನವೂ ಆದ ಚಂಪಕವನವು ಶೋಭಿಸುತ್ತಿರುವುದು.

೧೮. ಆ ವನದಲ್ಲಿರುವ ಮರಗಳು ಅತ್ಯುನ್ನತಗಳಾದ ಶಿಖರಗಳಿಂದಲೂ, ವಿಶಾಲವಾದ ಬುಡಗಳಿಂದಲೂ, ದಟ್ಟವಾದ ಎಲೆಗಳಿಂದಲೂ, ವಿಕಸಿತವಾದ ಪುಷ್ಪಗಳಿಂದಲೂ ಕೂಡಿ ಶೋಭಿಸುತ್ತವೆ. ಇದರಿಂದ ಆ ವನವು ಹಸುರಾಗಿ ಹೊಳೆಯುತ್ತಿದೆ.

೧೯-೨೦. ಆ ವನದಲ್ಲಿರುವ ಹೂಗಳು ಎರಡು ಮಾರು ಉದ್ದವೂ ಮೂರು ಮೊಳ ಅಗಲವೂ ಆಗಿರುತ್ತವೆ. ಮತ್ತು ಮನಶ್ಶಿಲೆಯಂತೆ ಹಸುರಾದ ಚೂರ್ಣದಿಂದಲೂ ಬಿಳುಪಾದ ಕೇಸರಗಳಿಂದಲೂ ಕೂಡಿರುತ್ತವೆ. ಇಂತಹ ಮನೋಹರಗಳೂ, ವಿಕಸಿತಗಳೂ. ಸುಗಂಧಿಗಳೂ ಆದ ಪುಷ್ಪಗಳಿಂದ ಆ ವನವು ಹೊಳೆಯುತ್ತಿದೆ.

ತದ್ವನಂ ದಾನವೈರ್ದೇವಗಂಧರ್ವೈರ್ಯಕ್ಷರಾಕ್ಷಸೈಃ ।
ಕಿನ್ನರೈರಪ್ಸರೋಭಿಶ್ಚ ಮಹಾನಾಗೈಶ್ಚ ಸೇವಿತಂ ॥ ೨೧ ॥

ತತ್ರಾಶ್ರಮಂ ಭಗವತಃ ಕಶ್ಯಪಸ್ಯ ಪ್ರಜಾಪತೇಃ ।
ಸಿದ್ಧಸಾಧ್ಯಗಣಾಕೀರ್ಣಂ ನಾನಾಶ್ರುತಿವಿಭೂಷಿತಂ ।
ಮಹಾನೀಲಕುಮುಂಜಾಭ್ಯಾಮಂತರೇಷ್ಯಚಲಾವಥ ॥ ೨೨ ॥

ಮಹಾನದ್ಯಾಃ ಸುಖಾಯಾಸ್ತು ತೀರೇ ಸಿದ್ಧನಿಷೇವಿತೇ ।
ಪಂಚಾಶದ್ಯೋಜನಾಯಾಮಂ ತ್ರಿಂಶದ್ಯೋಜನವಿಸ್ತರಂ ॥
ರಮ್ಯಂ ತಾಲವನಂ ತದ್ಧಿ ಅರ್ಧಕ್ರೋಶೋಚ್ಚಮಸ್ತಕಂ ॥ ೨೩ ॥

---

೨೧. ಆ ಮಹಾವನವು ದೇವದಾನವಗಂಧರ್ವರಿಂದಲೂ, ಯಕ್ಷರಾಕ್ಷಸ ಪಿಶಾಚಗಳಿಂದಲೂ, ಕಿನ್ನರರು, ಕಿಂಪುರುಷರು, ಅಪ್ಸರಸ್ತ್ರೀಯರು ಇವರೇ ಮೊದಲಾದವರಿಂದಲೂ ಮಹಾಸರ್ಪಗಳಿಂದಲೂ ಸೇವಿಸಲ್ಪಡುತ್ತಿದ್ದಿತು..

೨೨. ಆ ವನದಲ್ಲಿ ಕಶ್ಯಪರ ದಿವ್ಯಾಶ್ರಮವು ಪ್ರಕಾಶಿಸುತ್ತಿದ್ದಿತು. ಅದರಲ್ಲಿ ಸಿದ್ಧರೇ ಮೊದಲಾದ ದೇವತೆಗಳೂ ಮಹರ್ಷಿಗಳೂ ಸಹ ನಾನಾವಿಧ ವೇದಘೋಷವನ್ನು ಮಾಡುತ್ತಿದ್ದರು ಮಹಾನೀಲಕುಮುಂಜಗಳೆಂಬ ಪರ್ವತಗಳ ಮಧ್ಯದಲ್ಲಿ ಅನೇಕ ಮಹಾನದಿಗಳು ಉತ್ಪನ್ನವಾಗುತ್ತವೆ.

೨೩ ಮೇಲೆ ಹೇಳಿದ ಪರ್ವತಗಳ ಮಧ್ಯದಲ್ಲಿ ಸುಖಾನಾಮಕ ಮಹಾನದಿಯ ತೀರಪ್ರದೇಶದಲ್ಲಿ ಸಿದ್ಧರೇ ಮೊದಲಾದ ದೇವತೆಗಳಿಂದ ಸೇವಿಸಲ್ಪಟ್ಟ ರಮ್ಯವಾದ ತಾಲವನವಿರುತ್ತದೆ. ಅದು ಐವತ್ತು ಯೋಜನ ಉದ್ದವಾಗಿಯೂ ಮೂವತ್ತು ಯೋಜನ ವಿಸ್ತೀರ್ಣವಾಗಿಯೂ ಅರ್ಧಕ್ರೋಶದಷ್ಟು ಎತ್ತರವಾದ ಶಿಖರಗಳಿಂದ ಸಹಿತವಾಗಿಯೂ ಇರುತ್ತದೆ.

ಮಹಾಮೂಲೈರ್ಮಹಾಸಾರೈಃ ಸ್ಥಿರೈರವಿರಲೈಃ ಶುಭೈಃ ।
ಕುಮುದಾಂಜನಸಂಸ್ಥಾನೈಃ ಪರಿವೃತ್ತೈರ್ಮಹಾಫಲೈಃ ॥
ಮೃಷ್ಟಗಂಧರಸೋಪೇತೈರುಪೇತಂ ಸಿದ್ಧಸೇವಿತಂ ॥ ೨೪ ॥

ಮಾಹೇಂದ್ರಸ್ಯ ದ್ವಿಪೇಂದ್ರಸ್ಯ ತತ್ರ ವಾಸ ಉದಾಹೃತಃ ।
ಐರಾವತಸ್ಯ ಭದ್ರಸ್ಯ ಸರ್ವಲೋಕೇಷು ವಿಶ್ರುತಃ ॥ ೨೫ ॥

ವೇಣುಮಂತಸ್ಯ ಶೈಲಸ್ಯ ಸುಮೇಧಸ್ಯೋತ್ತರೇಣ ಚ ।
ಸಹಸ್ರಯೋಜನಾಯಾಮಂ ವಿಸ್ತೀರ್ಣಂ ಶತಯೋಜನಂ ॥ ೨೬ ॥

ವೃಕ್ಷಗುಲ್ಮಲತಾಗುಚ್ಛೈಃ ಸರ್ವವೀರುದ್ಭಿರೀರಿತಂ ।
ದೂರ್ವಾಪ್ರಸ್ತಾರಮೇವಾಥ ಸರ್ವಸತ್ವವಿವರ್ಜಿತಂ ॥ ೨೭ ॥

ತಥಾ ನಿಷೇಧಶೈಲಸ್ಯ ದೇವಶೈಲಸ್ಯ ಚೋತ್ತರೇ ।
ಸಹಸ್ರಯೋಜನಾಯಾಮಾ ಶತಯೋಜನವಿಸ್ತೃತಾ ॥ ೨೮ ॥

---

೨೪. ಆ ವನದಲ್ಲಿ ಅತ್ಯುನ್ನವೂ ಅತ್ಯಂತ ದಪ್ಪವೂ ದಟ್ಟವೂ ಮಂಗಳಕರವೂ ಆದ ಮಹಾವೃಕ್ಷಗಳು ಇರುತ್ತವೆ. ಅದರ ಫಲಗಳು ದೊಡ್ಡದಾಗಿಯೂ, ದುಂಡಾಗಿಯೂ, ಪೂರ್ಣವಾದ ರಸಗಂಧಭರಿತವಾಗಿಯೂ, ಸಿದ್ಧಸೇವಿತವಾಗಿಯೂ ಇವೆ.॥

೨೫ ಆ ಪರ್ವತದಲ್ಲಿ ದೇವೇಂದ್ರನ ವಾಹನವಾದ ಐರಾವತವೂ ಭದ್ರವೆಂಬ ಆನೆಯೂ ಸಹ ವಾಸಮಾಡುತ್ತವೆ. ಆ ವನವು ಲೋಕವಿಖ್ಯಾತವಾಗಿದೆ.

೨೬-೨೭. ವೇಣುಮಂತ ಸುಮೇಧವೆಂಬ ಪರ್ವತಗಳ ಮಧ್ಯದಲ್ಲಿ ಸಹಸ್ರಯೋಜನ ವಿಸ್ತೀರ್ಣವೂ, ನೂರುಯೋಜನ ಉದ್ದವೂ ವೃಕ್ಷ, ಪೊದೆ, ಲತೆ, ಪೊದರು ಇವುಗಳಿಂದ ಸಹಿತವೂ ಸಮಸ್ತ ಮೂಲಿಕೆಗಳಿಂದ ಯುಕ್ತವೂ, ಗರಿಕೆಯ ಮೈದಾನದಿಂದ ಯುಕ್ತವೂ ಸರ್ವಪ್ರಾಣಿಗಳಿಗೆ ಆಶ್ರಯವೂ ಆದ ಪ್ರದೇಶವು ಇರುತ್ತದೆ.

೨೮-೩೦. ಅದರಂತೆ ನಿಷಧದೇವಶೈಲಗಳ ಉತ್ತರದಲ್ಲಿ ಸಹಸ್ರಯೋಜನ ಉದ್ದವೂ ನೂರುಯೋಜನ ವಿಸ್ತೀರ್ಣವೂ ಏಕಶಿಲಾಮಯವೂ ವೃಕ್ಷಲತಾದಿ

ಸರ್ವಾ ಹ್ಯೇಕಶಿಲಾ ಭೂಮಿರ್ವೃಕ್ಷವೀರುದ್ವಿವರ್ಜಿತಾ।
ಆಪ್ಲುತಾ ಪಾದಮಾತ್ರೇಣ ಹ್ಯುದಕೇನ ಸಮಂತತಃ ॥ ೨೯ ॥

ಇತ್ಯೇತಾ ಹ್ಯಂತರದ್ರೋಣ್ಯೋ ನಾನಾಕಾರಾಃ ಪ್ರಕೀರ್ತಿತಾಃ।
ಮೇರೋಃ ಪೂರ್ವೇಣ ವಿಪ್ರೇಂದ್ರಾ ಯಥಾವದನುಪೂರ್ವಶಃ ॥ ೩೦ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಭುವನವಿನ್ಯಾಸೋ" ನಾಮ ಸಪ್ತತ್ರಿಂಶೋಽಧ್ಯಾಯಃ

---

ರಹಿತವೂ ಸುತ್ತಲೂ ಪಾದಮಾತ್ರದಷ್ಟು ನೀರಿರುವ ಸ್ಥಳದಿಂದ ಯುಕ್ತವೂ ನಾನಾಕಾರಗಳೂ ಆದ ಅನೇಕ ಪ್ರದೇಶಗಳು ಪ್ರಖ್ಯಾತವಾಗಿದ್ದವು. ಎಲೈ ಮುನಿವರ್ಯರೇ, ಮೇಲೆ ಹೇಳಿದ ಉದ್ಯಾನಗಳೂ ಪರ್ವತಗಳೂ ಕೂಡ ಮೇರುವಿನ ಪೂರ್ವಭಾಗದಲ್ಲಿವೆಯೆಂಬುದನ್ನು ತಿಳಿಯಿರೆಂದು ಸೂತಮುನಿಯು ಹೇಳಿದನು

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಭುವನವಿನ್ಯಾಸ" ವೆಂಬ ಮೂವತ್ತೇಳನೆಯ ಅಧ್ಯಾಯವು ಸಮಾಪ್ತವು.

## ಮೂವತ್ತೇಳನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಭುವನವಿನ್ಯಾಸವು ವರ್ಣಿತವಾಗಿದೆ. ಮಹಾಮೇರುವಿನ ಪೂರ್ವಭಾಗದಲ್ಲಿ ಶೀತೋದುಕ ಮಂಜಗಳೆಂಬ ಎರಡು ಪರ್ವತಗಳಿವೆ. ಅವುಗಳ ಮಧ್ಯಭಾಗವು ಅತಿ ವಿಸ್ತಾರವಾಗಿಯೂ ಅನೇಕೋದ್ಯಾನಗಳಿಂದ ಸಹಿತವಾಗಿಯೂ ಇದೆ. ಆ ವನಗಳ ಮಧ್ಯದಲ್ಲಿ ನಾನಾವಿಧ ಕುಂದಮಂದಾರಕಮಲಕಲ್ಹಾರಾದಿ ಪುಷ್ಪಗಳಿಂದಲಂಕೃತವೂ ವಿವಿಧ ಗಂಧದಿಂದ ರಮ್ಯವೂ ಆದ ಶ್ರೀವನವೆಂಬ ಪದ್ಮ ವನವು ಹೊಳೆಯುತ್ತಿದೆ. ಅದರ ಮಧ್ಯದಲ್ಲಿ ಸಹಸ್ರದಳಗಳಿಂದ ಯುಕ್ತವೂ ಅತಿ ಸುಗಂಧಿಯೂ ವಿವಿಧಕಾಂತಿಯುತವೂ ಅತಿ ವಿಶಾಲವೂ ಆದ ಮಹಾಪದ್ಮವಿದೆ. ಅದರಲ್ಲಿ ಮಹಾಲಕ್ಷ್ಮಿಯು ಸಾಕ್ಷಾತ್ತಾಗಿ ಸದಾಕಾಲದಲ್ಲಿಯೂ ವಾಸಮಾಡುವಳು. ಆ ಮಹಾಲಕ್ಷ್ಮಿಯ ಸೇವೆಗಾಗಿ ಇಂದ್ರಾದಿ ಸಕಲ ದೇವತೆಗಳೂ ಸಿದ್ಧರಾಗಿರುವರು. ಆ ಶ್ರೀವನದ ಪೂರ್ವಭಾಗದಲ್ಲಿ ಬಿಲ್ವವನವೂ ಅದರ ಪಕ್ಕದಲ್ಲಿ ಚಂಪಕವನವೂ ಅದರ ಸಮೀಪದಲ್ಲಿ ಕಶ್ಯಪಾಶ್ರಮವೂ ಅದರ ಹತ್ತಿರದಲ್ಲಿ ಮಹಾಕಾಲವನವೂ ಇವೆ. ಇವು ಅನೇಕ ಯೋಜನ ವಿಸ್ತೀರ್ಣವಾಗಿಯೂ ಅನೇಕ ವೃಕ್ಷಗಳಿಂದ ಪೂರ್ಣವಾಗಿಯೂ ಪ್ರಖ್ಯಾತವಾಗಿಯೂ ಇವೆ. ಹೀಗೆ ಮೇರುಗಿರಿಯ ಪೂರ್ವಭಾಗದಲ್ಲಿ ಅನೇಕ ಪ್ರಖ್ಯಾತವಾದ ಗಿರಿಗಳೂ ಉಪವನಗಳೂ ವಿಶೇಷವಾಗಿವೆಯೆಂಬ ವಿಷಯಗಳು ವಿಶೇಷವಾಗಿ ವರ್ಣಿತಗಳಾಗಿವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀ ಮ ದ್ವಾ ಯು ಪು ರಾ ಣ ಂ

## ಅಷ್ಟತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ದಕ್ಷಿಣಾಂ ದಿಶಮಾಶ್ರಿತಾಃ ।
ಯಾಃ ದ್ರೋಣ್ಯಃ ಸಿದ್ಧಚಾರಿತಾಃ ಶ್ರುಣು ತಾ ಹ್ಯನುಪೂರ್ವಶಃ ॥ ೧ ॥

ಶಿಶಿರಸ್ಯಾಚಲೇಂದ್ರಸ್ಯ ಪತಂಗಸ್ಯಾಂತರೇಣ ಚ ।
ಶ್ಲಕ್ಷ್ಣಭೂಮಿಶ್ರಿಯಾ ಯುಕ್ತಂ ಲತಾಲಿಂಗಿತಪಾದಪಂ ॥ ೨ ॥

ಪೃಥುಕ್ಷೇಪೋಚ್ಚಶಿಖರೈಃ ಪಾದಪೈರುಪಶೋಭಿತಂ ।
ಉದುಂಬರವನಂ ರಮ್ಯಂ ಪಕ್ಷಿಸಂಘನಿಷೇವಿತಂ ॥ ೩ ॥

---

## ಮೂವತ್ತೆಂಟನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಮೇರುಪರ್ವತ ಪೂರ್ವಭಾಗವನ್ನು ವರ್ಣಿಸಿದ ತರುವಾಯ ದಕ್ಷಿಣಭಾಗದಲ್ಲಿ ಪರ್ವತಗಳ ಮಧ್ಯಗತವೂ ಸಿದ್ಧಚಾರಣ ಸೇವಿತವೂ ರಮ್ಯವೂ ಆದ ಪ್ರದೇಶಗಳನ್ನು ವರ್ಣಿಸುವೆನು ಕೇಳಿ ಎಂದನು.

೨-೩. ಪರ್ವತೋತ್ತಮಗಳಾದ ಶಿಶಿರಪತಂಗಗಳೆಂಬ ಗಿರಿಗಳ ಮಧ್ಯಭಾಗವು ಸುಂದರವಾದ ಭೂಸಂಪತ್ತಿನಿಂದಲೂ ಲತೆಗಳಿಂದಲಂಕೃತವಾದ ವೃಕ್ಷಗಳಿಂದಲೂ ಎತ್ತರವಾದ ತುದಿಗಳುಳ್ಳ ವೃಕ್ಷಗಳಿಂದಲೂ ಯುಕ್ತವಾಗಿದೆ. ಅವುಗಳ ಮಧ್ಯದಲ್ಲಿ ಪಕ್ಷಿಸಂಘಗಳಿಂದ ಸೇವಿತವೂ ರಮ್ಯವೂ ಆದ ಉದುಂಬರವನವು ಶೋಭಿಸುತ್ತಿದೆ.

ಪಕ್ವೈರ್ವಿದ್ರುಮಸಂಕಾಶೈರ್ಮಧುಪೂರ್ಣೈರ್ಮನೋರಮೈಃ ।
ಜ್ವಲಿತಂ ತದ್ವನಂ ಭಾತಿ ಮಹಾಕುಂಭೋಪಮೈಃ ಫಲೈಃ ॥ ೪ ॥

ತತ್ ಸಿದ್ಧಯಕ್ಷಗಂಧರ್ವಾಃ ಕಿನ್ನರಾ ಉರಗಾಸ್ತಥಾ ।
ವಿದ್ಯಾಧರಾಶ್ಚ ಮುದಿತಾ ಉಪಜೀವಂತಿ ನಿತ್ಯಶಃ ॥ ೫ ॥

ಪ್ರಸನ್ನಸ್ವಾದುಸಲಿಲಾಸ್ತತ್ರ ನದ್ಯೋ ಬಹೂದಕಾಃ ।
ಸುರಸಾಮಲತೋಯಾಸ್ತಾಃ ಸರಾಂಸಿ ಚ ಸಮಂತತಃ ॥ ೬ ॥

ತತ್ರಾಶ್ರಮಂ ಭಗವತಃ ಕರ್ದಮಸ್ಯ ಪ್ರಜಾಪತೇಃ ।
ರಮ್ಯಂ ಸುರಗಣಾಕೀರ್ಣಂ ಸರ್ವತಶ್ಚಿತ್ರಕಾನನಂ ॥
ಸಮಂತಾದ್ಯೋಜನಶತಂ ತದ್ವನಂ ಪರಿಮಂಡಲಂ ॥ ೭ ॥

---

೪. ಆ ಉದುಂಬರ ಫಲಗಳು (ಅತ್ತೀಹಣ್ಣುಗಳು) ಪಕ್ವವಾಗಿಯೂ ಹವಳದಂತೆ ಕೆಂಪಾಗಿಯೂ ರಸಭರಿತವಾಗಿಯೂ ಮನೋಹರವಾಗಿಯೂ ಮಹಾಕುಂಭದಂತೆ ಮಹತ್ತಾಗಿಯೂ ಇವೆ. ಇಂತಹ ಫಲಗಳಿಂದ ಆ ವನವು ರಮ್ಯವಾಗಿರುವುದು.

೫. ಆ ಮಹಾವನದಲ್ಲಿ ಸಿದ್ಧರೂ ಯಕ್ಷಗಂಧರ್ವಪಿಶಾಚಗಳೂ ಕಿನ್ನರರೂ ಉರಗಗಳೂ ವಿದ್ಯಾಧರರೂ ಇವರೇ ಮೊದಲಾದವರು ನಿತ್ಯವೂ ಅನಾಯಾಸವಾಗಿ ಸುಖದಿಂದ ಜೀವಿಸುತ್ತಿರುವರು.

೬. ಆ ವನದ ಸುತ್ತಮುತ್ತಲೂ ನಿರ್ಮಲವೂ ಶುಚಿಯೂ ಅತ್ಯಧಿಕವೂ ಶೀತವೂ ಸುರಸವೂ ಸ್ವಚ್ಛವೂ ಆದ ಜಲವುಳ್ಳ ಅನೇಕ ನದಿಗಳು, ಕೊಳಗಳು, ತಟಾಕಗಳು, ಇವುಗಳು ವಿಶೇಷವಾಗಿದ್ದುವು.

೭. ಅದರಲ್ಲಿ ಪೂಜ್ಯರಾದ ಕರ್ದಮಪ್ರಜಾಪತಿಯ ಆಶ್ರಮವಿರುತ್ತದೆ ಅದು ರಮ್ಯವಾಗಿಯೂ ಸುರಗಣದಿಂದ ಸೇವಿತವಾಗಿಯೂ ಸುತ್ತಲೂ ಚಿತ್ರವನಗಳುಳ್ಳದ್ದಾಗಿಯೂ ನೂರುಯೋಜನ ವಿಸ್ತೀರ್ಣವಾಗಿಯೂ ವಿಶಾಲವಾಗಿಯೂ ಇರುತ್ತದೆ.

ತಾಮ್ರವರ್ಣಸ್ಯ ಶೈಲಸ್ಯ ಪತಂಗಸ್ಯಾಂತರೇಣ ತು ।
ಶತಯೋಜನವಿಸ್ತೀರ್ಣಂ ದ್ವಿಯೋಜನಶತಾಯುತಂ ॥ ೮ ॥

ತರುಣಾದಿತ್ಯಸಂಕಾಶೈಃ ಪುಂಡರೀಕೈಃ ಸಮಂತತಃ ।
ಸಹಸ್ರಪತ್ರೈರ್ವಿಕಚೈರ್ಮಹಾಪದ್ಮೈರಲಂಕೃತಂ ॥ ೯ ॥

ತಥಾ ಭ್ರಮರಸಂಲೀನೈಃ ಶತಪತ್ರೈಃ ಸುಗಂದಿಭಿಃ ।
ಪ್ರಫುಲ್ಲೈಃ ಶೋಭಿತಜಲಂ ರಕ್ತನೀಲೈರ್ಮಹೋತ್ಪಲೈಃ ॥ ೧೦ ॥

ಸರೋವರಂ ಮಹಾಪುಣ್ಯಂ ದೇವದಾನವಸೇವಿತಂ ।
ಮಹೋರಗೈರಧ್ಯುಷಿತಂ ನೀಲಜಾಲವಿಭೂಷಿತಂ ॥ ೧೧ ॥

ತಸ್ಯ ಮಧ್ಯೇ ಜನಪದೋ ಹ್ಯಾಯತಃ ಶತಯೋಜನಃ ।
ತ್ರಿಂಶದ್ಯೋಜನವಿಸ್ತೀರ್ಣೋ ರಕ್ತಧಾತುವಿಭೂಷಿತಃ ॥ ೧೨ ॥

---

೮-೧೧. ತಾಮ್ರವರ್ಣ ಪತಂಗಪರ್ವತಗಳ ಮಧ್ಯದಲ್ಲಿ ಇನ್ನೂರು ಯೋಜನ ಉದ್ದವೂ, ನೂರು ಯೋಜನ ವಿಸ್ತೀರ್ಣವೂ, ಸುತ್ತಲೂ ಪ್ರೌಢಸೂರ್ಯನಂತೆ ಕಾಂತಿಯುತವಾದ ಬಿಳೀಕಮಲಗಳು ಅರಳಿರುವ ಮಹಾಕಮಲಗಳು ಮತ್ತು ಕಲ್ಹಾರ ಪುಷ್ಪಗಳು. ಇವುಗಳಿಂದಲಂಕೃತವೂ, ಭ್ರಮರಗಳಿಂದ ಸಹಿತವೂ, ಸುಗಂಧಿಯೂ, ವಿಕಸಿತವೂ, ಆದ ನೈದಲೇ ಮತ್ತು ರಕ್ತೋತ್ಪಲ ಇವುಗಳಿಂದ ಸಹಿತವೂ, ಅತ್ಯಂತ ಪುಣ್ಯಪ್ರದವೂ, ದೇವತೆಗಳು, ದಾನವರು ಇವರಿಂದ ಸೇವಿತವೂ, ಮಹಾ ಸರ್ಪಗಳಿಗೆ ಆಶ್ರಯವೂ, ಪಾವಚಿಯಿಂದ ಭೂಷಿತವೂ, ಆದ ಸರೋವರವು ಪ್ರಕಾಶಿಸುತ್ತಿದೆ.

೧೨. ಮತ್ತು ಆ ಪರ್ವತಗಳ ಮಧ್ಯದಲ್ಲಿ ನೂರುಯೋಜನ ಉದ್ದವೂ ಮುನ್ನೂರು ಯೋಜನ ವಿಸ್ತೀರ್ಣವೂ,ಕೆಂಪು ಧಾತುಗಳಿಂದ ಯುಕ್ತವೂ, ಉತ್ತಮವೂ ಆದ ದೇಶವು ಹೊಳೆಯುತ್ತಿದೆ

ತಸ್ಯೋಪರಿ [illegible]ಾರಮ್ಯಾ ಪಾಂಡುಪ್ರಾಕಾರತೋರಣಾ ।
ನ[illegible]ರ್ಣಾ ಸ್ಥಿತಾ ವಿಭವವಿಸ್ತರೈಃ ॥ ೧೩ ॥

[illegible]ರ್ಮಣಿಭಿತ್ತಿವಿಚಿತ್ರಿತೈಃ ।
ರತ್ನ[illegible]ತತಲೈಃ ಶ್ಲಕ್ಷ್ಣಚಿತ್ರೋತ್ತರಚ್ಛದೈಃ ॥ ೧೪ ॥

ಮಹಾಭವನಮಾಲಾಭಿರ್ಮಹಾಪ್ರಾಂಶುಭಿರುತ್ತಮೈಃ ।
ವಿದ್ಯಾಧರಪುರಂ ತತ್ರ ಶೋಭತೇ ಭ್ರಾಜಯಚ್ಛುಭಂ ॥ ೧೫ ॥

ವಿದ್ಯಾಧರಪತಿಸ್ತತ್ರ ಪುಲೋಮಾ ತತ್ರ ವಿಶ್ರುತಃ ।
ಚಿತ್ರವೇಷಧರಃ ಸ್ರಗ್ವೀ ಮಾಹೇಂದ್ರಸದೃಶದ್ಯುತಿಃ ॥ ೧೬ ॥

ದೀಪ್ತಾನಾಂ ಚಿತ್ರವೇಷಾಣಾಂ ಸೂರ್ಯಪ್ರತಿಮತೇಜಸಾಂ ।
ವಿದ್ಯಾಧರಸಹಸ್ರಾಣಾಮನೇಕೇಷಾಂ ಸ ರಾಜರಾಟ್ ॥ ೧೭ ॥

---

೧೩-೧೫. ಅದರ ಮೇಲ್ಭಾಗದಲ್ಲಿ ಅತಿಸುಂದರವೂ, ಉನ್ನತವಾದ ಪುರದ್ವಾರದಿಂದ ಸಹಿತವೂ, ನರನಾರಿಯರ ಗಣಗಳಿಂದ ವ್ಯಾಪ್ತವೂ, ಮಹದೈಶ್ವರ್ಯಗಳಿಂದ ಸಮೃದ್ಧವೂ, ಉತ್ತಮವಾದ ಮೇಲ್ಛಾವಣಿಗಳಿಂದ ಸಹಿತವೂ, ರಕ್ತಖಚಿತಸ್ತಂಭಗಳಿಂದಲಂಕೃತವೂ, ರತ್ನಮಯವಾದ ಭೂಭಾಗದಿಂದ ಸಹಿತವೂ, ಸ್ವಚ್ಛವಾದ ಮೇಲ್ಕಟ್ಟಿನಿಂದ ಭೂಷಿತವೂ ಆದ ಉಪ್ಪರಿಗೆ ಮನೆಗಳಿಂದಲೂ ಕೋಟೆಯಿಂದಲೂ ಕೂಡಿ ಮಂಗಳಕರವೂ, ಕಾಂತಿಯುತವೂ ಆದ ವಿದ್ಯಾಧರರ ನಗರಿಯೊಂದು ಪ್ರಖ್ಯಾತವಾಗಿರುತ್ತದೆ.

೧೬. ಅಂತಹ ನಗರಿಯನ್ನು ಪುಲೋಮಾನನೆಂಬ ವಿದ್ಯಾಧರೇಶ್ವರನು ಪ್ರಸಿದ್ಧನಾಗಿ ಆಳುತ್ತಿರುವನು. ಅವನು ಚಿತ್ರವೇಷಧಾರಿಯೂ, ಮಾಲಾಭೂಷಿತನೂ, ದೇವೇಂದ್ರಸಮಾನ ಕಾಂತಿವಂತನೂ ಆಗಿದ್ದನು.

೧೭. ಅವನು ಕಾಂತಿವಂತರೂ, ವಿಚಿತ್ರವೇಷಿಗಳೂ, ಸೂರ್ಯನಿಗೆ ಸಮಾನತೇಜಸ್ವಿಗಳೂ, ಸಹಸ್ರಾರು ಸಂಖ್ಯಾಕರೂ ಆದ ವಿದ್ಯಾಧರರಿಗೆ ಅಧಿಪತಿಯಾಗಿದ್ದನು.

ವಿಶಾಖಸ್ಯಾಚಲೇಂದ್ರಸ್ಯ ಪತಂಗಸ್ಯಾಂತರೇಣ ಚ ।
ಸರಸಸ್ತಾಮ್ರವರ್ಣಸ್ಯ ಪೂರ್ವೇ ತೀರೇ ಪರಿಶ್ರುತಂ ॥ ೧೮ ॥

ಪಂಚೇಷುಕ್ಷೇಪಣೈರ್ವಿದ್ಧಂ ಸುಶಾಖಂ ವರ್ಣಶೋಭಿತಂ ।
ಸರ್ವಕಾಲಫಲಂ ತತ್ರ ಸ್ಥಿತಂ ಚಾಮ್ರವನಂ ಮಹತ್ ॥ ೧೯ ॥

ಫಲೈಃ ಕನಕಸಂಕಾಶೈರ್ಮಹಾಸ್ವಾದೈಃ ಸುಗಂಧಿಭಿಃ ।
ಮಹಾಕುಂಭಪ್ರಮಾಣೈಶ್ಚಾತನು ಶಾಖೈಃ ಸಮಂತತಃ ॥ ೨೦ ॥

ಗಂಧರ್ವಕಿನ್ನರಾ ಯಕ್ಷಾ ನಾಗಾ ವಿದ್ಯಾಧರಾಸ್ತಥಾ ।
ಪಿಬಂತ್ಯಾಮ್ರರಸಂ ತತ್ರ ಸುಸ್ವಾದುಂ ಹ್ಯಮೃತೋಪಮಂ ॥ ೨೧ ॥

ತತ್ರಾಮ್ರರಸಪೀತಾನಾಂ ಮುದಿತಾನಾಂ ಮಹಾತ್ಮನಾಂ ।
ಶ್ರೂಯಂತೇ ಹೃಷ್ಟಪುಷ್ಟಾನಾಂ ನಾದಾಸ್ತಸ್ಮಿನ್ ಮಹಾವನೇ ॥ ೨೨ ॥

---

೧೮-೧೯. ವಿಶಾಖಪರ್ವತ ಪತಂಗಗಿರಿ ಇವುಗಳ ಮಧ್ಯದಲ್ಲಿರುವ ತಾಮ್ರ ವರ್ಣದ ಸರೋವರದ ಪೂರ್ವತೀರದಲ್ಲಿ ಪ್ರಖ್ಯಾತವೂ, ಪಂಚಬಾಣಗಳ ಹೊಡತದಿಂದ ರಚಿತವೂ, ವಿಶಾಖಿವರ್ಣದಿಂದ ಶೋಭಿತವೂ, ಸಾರ್ವಕಾಲಿಕ ಫಲಗಳಿಂದ ಸಹಿತವೂ, ಅತಿ ವಿಶಾಲವೂ ಆದ ಆ ವನವು (ಮಾವಿನತೋಪು) ಹೊಳೆಯುತ್ತಿತ್ತು.

೨೦. ಆ ಆಮ್ರಫಲಗಳು, ಸುವರ್ಣಚ್ಛಾಯೆಯುಳ್ಳವುಗಳೂ. ಅತಿರುಚಿಗಳೂ, ಸುಗಂಧಿಗಳೂ, ಮಹಾಕುಂಭಪ್ರಮಾಣಗಳೂ, ಬಹುಶಾಖಾಸಂಭೂತಗಳೂ ಆಗಿದ್ದವು.

೨೧. ಗಂಧರ್ವರು, ಕಿನ್ನರರು, ಯಕ್ಷರು, ನಾಗಗಳು, ವಿದ್ಯಾಧರರು ಇವರೇ ಮೊದಲಾದವರು ಅಮೃತಕ್ಕೆ ಸಮಾನವೂ ಅತಿಸ್ವಾದುವೂ ಆದ ಆ ಮಾವಿನ ಹಣ್ಣಿನ ರಸವನ್ನು ಪಾನಮಾಡುವರು.

೨೨. ಆ ದೇವತೆಗಳು ಆ ವನದಲ್ಲಿ ಮಾವಿನ ಹಣ್ಣಿನ ರಸವನ್ನು ಪಾನಮಾಡಿ ಸಂತೋಷದಿಂದ ಗಾನಮಾಡುವ ಧ್ವನಿಯು ಎಲ್ಲೆಲ್ಲಿಯೂ ಕೇಳುವುದು. ಮಹಾತ್ಮರು ಆ ಆಮ್ರರಸ ಪಾನದಿಂದ ಹೃಷ್ಟಪುಷ್ಟಾಂಗರಾಗುವರು.

ಸುಮೂಲಸ್ಯಾಚಲೇಂದ್ರಸ್ಯ ವಸುಧಾರಸ್ಯ ಚಾಂತರೇ ।
ಸಮಾ ಸುರಭಿಪೂರ್ಣಾರ್ಥಾ ವಿಹಂಗೈರುಪಶೋಭಿತಾ ॥ ೨೩ ॥

ತ್ರಿಂಶದ್ಯೋಜನವಿಸ್ತೀರ್ಣಾ ಪಂಚಾಶದ್ಯೋಜನಾಯತಾ ।
ತತ್ರ ಬಿಲ್ವಸ್ಥಲೀ ವಿಪ್ರಾಃ ಶುದ್ಧಾ ನಿಮ್ನ ಫಲದ್ರುಮಾಃ ॥ ೨೪ ॥

ಸುಸ್ವಾದೈರ್ವಿದ್ರುಮನಿಭೈಃ ಫಲೈರ್ಬಿಲ್ವೈರ್ಮಹೋಪಮೈಃ ।
ಶೀರ್ಯಮಾಣೈರ್ವಿಶೀರ್ಣೈಶ್ಚ ಪ್ರಕ್ಲಿನ್ನತಲವೃತ್ತಿಕಾಃ ॥ ೨೫ ॥

ತಾಂ ಸ್ಥಲೀಮುಪಜೀವಂತಿ ಯಕ್ಷಗಂಧರ್ವಕಿನ್ನರಾಃ ।
ಸಿದ್ಧಾ ನಾಗಾಶ್ಚ ಬಹುಶೋ ನಿತ್ಯಂ ಬಿಲ್ವಫಲಾಶಿನಃ ॥ ೨೬ ॥

ಅಂತರೇ ವಸುಧಾರಸ್ಯ ರತ್ನಧಾರಸ್ಯ ಚಾಂತರೇ ।
ತ್ರಿಂಶದ್ಯೋಜನವಿಸ್ತೀರ್ಣಮಾಯತಂ ಶತಯೋಜನಂ ॥ ೨೭ ॥

ಸುಗಂಧಂ ಕಿಂಶುಕವನಂ ನಿತ್ಯಂ ಪುಷ್ಪಿತಪಾದಪಂ ।
ಪುಷ್ಪಲಕ್ಷ್ಮ್ಯಾವೃತಂ ಭಾತಿ ಪ್ರದೀಪ್ತಮಿವ ಸರ್ವತಃ ॥ ೨೮ ॥

---

೨೩-೨೪. ಸುಮೂಲಾಚಲ ವಸುಧಾರಗಿರಿ ಇವುಗಳ ಮಧ್ಯದಲ್ಲಿ ಸಮವೂ, ಸುವಾಸನೆಯಿಂದ ಯುಕ್ತವೂ, ನಾನಾವಿಧ ಪಕ್ಷಿಗಳಿಂದ ಶೋಭಿತವೂ, ಮೂವತ್ತು ಯೋಜನ ವಿಸ್ತೀರ್ಣವೂ, ಐವತ್ತು ಯೋಜನ ಉದ್ದವೂ, ಪರಿಶುದ್ಧವೂ ವಿವಿಧ ಫಲವೃಕ್ಷಗಳಿಂದ ಸಹಿತವೂ, ಆದ (ಬಿಲ್ವಸ್ಥಳಿಯು) ಬಿಲ್ವವನವು ಶೋಭಿಸುತ್ತದೆ.

೨೫. ಆ ಬಿಲ್ವಫಲಗಳು ರುಚಿಯಾಗಿಯೂ, ಹವಳದಂತೆ ಕೆಂಪಾಗಿಯೂ, ದಪ್ಪವಾಗಿಯೂ, ಇರುತ್ತವೆ. ಅವುಗಳು ಒಡೆದು ರಸಗಳು ಕೆಳಗೆ ಸುರಿದಿರುವುದರಿಂದ ಭೂಮಿಯು ಕೆಸರಾಗಿರುವುದು.

೨೬. ಆ ವನದಲ್ಲಿ ಯಕ್ಷ, ಗಂಧರ್ವ, ಕಿನ್ನರ, ಸಿದ್ಧ ನಾಗ ಇವರೇ ಮೊದಲಾದವರು ಆ ಫಲಗಳನ್ನು ತಿಂದು ಸುಖವಾಗಿ ಜೀವಿಸುತ್ತಿರುವರು.

೨೭-೨೮. ವಸುಧಾರಗಿರಿ ಮತ್ತು ರತ್ನಧಾರಗಿರಿ ಇವುಗಳ ಮಧ್ಯದಲ್ಲಿ ಮೂವತ್ತು ಯೋಜನ ವಿಸ್ತೀರ್ಣವೂ, ನೂರು ಯೋಜನ ಉದ್ದವೂ, ಸುಗಂಧಿಯೂ, ಕುಸುಮಿತ ವೃಕ್ಷಗಳುಳ್ಳದ್ದೂ ಆದ ಕಿಂಶುಕವನವು ಪ್ರಖ್ಯಾತವಾಗಿರುತ್ತದೆ. ಅದು ಪುಷ್ಪಸಮೃದ್ಧಿಯಿಂದ ಸೂರ್ಯನಂತೆ ಯಾವಾಗಲೂ ಪ್ರಕಾಶಿಸುವುದು.

ಯಸ್ಯ ಗಂಧೇನ ದಿವ್ಯೇನ ವಾಸ್ಯತೇ ಪರಿಮಂಡಲಂ ।
ಸಮಗ್ರಂ ಯೋಜನಶತಂ ಕಾನನಾನಿ ಸಮಂತತಃ ॥ ೨೯ ॥

ತತ್ ಸಿದ್ಧಚಾರಣಗಣೈರಪ್ಸರೋಭಿಶ್ಚ ಸೇವಿತಂ ।
ರಮ್ಯಂ ತತ್ ಕಿಂಶುಕವನಂ ಜಲಾಶಯವಿಭೂಷಿತಂ ॥ ೩೦ ॥

ತತ್ರಾದಿತ್ಯಸ್ಯ ದೇವಸ್ಯ ದೀಪ್ತಮಾಯತನಂ ಮಹತ್ ।
ಮಾಸೇ ಮಾಸೇಽವತರತಿ ತತ್ರ ಸೂರ್ಯಃ ಪ್ರಜಾಪತಿಃ ॥ ೩೧ ॥

ತತ್ರ ಕಾಲಸ್ಯ ಕರ್ತಾರಂ ಸಹಸ್ರಾಂಶು ಸುರೋತ್ತಮಂ ।
ಸಿದ್ಧಸಂಘಾಃ ನಮಸ್ಯಂತಿ ಸರ್ವಲೋಕನಮಸ್ಕೃತಂ ॥ ೩೨ ॥

ಪಂಚಕೂಟಸ್ಯ ಶೈಲಸ್ಯ ಕೈಲಾಸಸ್ಯಾಂತರೇಣ ತು ।
ಷಟ್‌ತ್ರಿಂಶದ್ಯೋಜನಾಯಾಮಂ ವಿಸ್ತೀರ್ಣಂ ಶತಯೋಜನಂ ॥ ೩೩ ॥

ಕ್ಷುದ್ರಸತ್ವೈರನಾಧೃಷ್ಯಂ ಸರ್ವತೋ ಹಂಸಪಾಂಡುರಂ ।
ದುಷ್ಪಾರಂ ಸರ್ವಸತ್ವಾನಾಂ ದುರ್ಗಮಂ ಲೋಮಹರ್ಷಣಂ ॥ ೩೪ ॥

---

೨೯ ಆ ವನದ ವಾಸನೆಯು ದಿಙ್ಮಂಡಲದ ವರೆಗೂ ವ್ಯಾಪ್ತವಾಗಿರುವುದು. ನೂರು ಯೋಜನದಷ್ಟು ಸುತ್ತಲೂ ವಾಸನೆಯು ಹರಡಿರುವುದು.

೩೦. ಸಿದ್ಧರು, ಚಾರಣರು, ಅಪ್ಸರಸ್ತ್ರೀಯರು ಇವರ ಗುಂಪಿನಿಂದ ಸದಾ ಸೇವಿತವೂ, ರಮ್ಯವೂ, ಸರೋವರಗಳಿಂದಲಂಕೃತವೂ ಆದ ಕಿಂಶುಕವನವು ಸದಾ ಕಾಲದಲ್ಲಿಯೂ ಹೊಳೆಯುತ್ತಿರುವುದು

೩೧. ಆ ಬಿಲ್ವವನದಲ್ಲಿ ಸೂರ್ಯದೇವನ ದೇದೀಪ್ಯಮಾನವೂ ವಿಶಾಲವೂ ಆದ ದೇವಾಲಯವಿರುವುದು. ಪ್ರಜಾಪಾಲಕನಾದ ಸೂರ್ಯದೇವನು ಪ್ರತಿ ತಿಂಗಳಲ್ಲಿಯೂ ಅಲ್ಲಿಗೆ ಬಂದು ಆನಂದವನ್ನು ಅನುಭವಿಸುವನು.

೩೨. ಸಿದ್ಧರೇ ಮೊದಲಾದ ದೇವತೆಗಳು ಅಂತಹ ಸಮಯದಲ್ಲಿ ಕಾಲನಿಯಾಮಕನೂ, ಸಹಸ್ರಕಿರಣಮಾಲಿಯೂ, ದೇವೋತ್ತಮನೂ, ಸರ್ವಲೋಕವಂದಿತನೂ ಆದ ಸೂರ್ಯನಿಗೆ ನಮಸ್ಕಾರಗಳನ್ನು ಮಾಡುವರು.

೩೩-೩೪. ಪಂಚಕೂಟ ಮತ್ತು ಕೈಲಾಸ ಈ ಪರ್ವತಗಳ ಮಧ್ಯದಲ್ಲಿ ಮೂವತ್ತಾರು ಯೋಜನ ವಿಸ್ತೀರ್ಣವೂ, ನೂರು ಯೋಜನ ಉದ್ದವೂ, ಕ್ಷುದ್ರಪ್ರಾಣಿಗಳು ಪ್ರವೇಶಿಸಲಸಾಧ್ಯವೂ, ಶತ್ರುಗಳು ಪ್ರವೇಶಿಸಲಶಕ್ಯವೂ, ಸಂತೋಷಜನಕವೂ ಆದ ಮಹಾವನವೊಂದು ಶೋಭಿಸುತ್ತಿದೆ.

ಇತ್ಯೇತಾ ಹ್ಯಂತರದ್ರೋಣ್ಯೋ ದಕ್ಷಿಣೇ ಪರಿಕೀರ್ತಿತಾಃ ।
ಯಥಾನುಪೂರ್ವಮಖಿಲಾಃ ಸಿದ್ಧಸಂಘನಿಷೇವಿತಾಃ ॥ ೩೫ ॥

ಪಶ್ಚಿಮಾಯಾಂ ದಿಶಿ ತಥಾ ಯೇಽಂತದ್ರೋಣಿವಿಸ್ತರಾಃ ।
ತಾನ್ ವರ್ಣ್ಯಮಾನಾಂಸ್ತತ್ವೇನ ಶೃಣುತೇಮಾನ್ ದ್ವಿಜೋತ್ತಮಾಃ ॥ ೩೬ ॥

ಅಂತರಾಲೇ ಗಿರೌ ತಸ್ಮಿನ್ ಸುವಕ್ಷಃ ಶಿಖಿಶೈಲಯೋಃ ।
ಸಮಂತಾದ್ಯೋಜನಶತಮೇಕಭೂಮಂ ಶಿಲಾತಲಂ ॥ ೩೭ ॥

ನಿತ್ಯತಪ್ತಂ ಮಹಾಘೋರಂ ದುಃಸ್ಪರ್ಶಂ ರೋಮಹರ್ಷಣಂ ।
ಅಗಮ್ಯಂ ಸರ್ವಸತ್ವಾನಾಮೀಶ್ವರಾಣಾಂ ಸುದಾರುಣಂ ॥ ೩೮ ॥

ಮಧ್ಯೇ ತಸ್ಯಾಂ ಶಿಲಾಸ್ಥಲ್ಯಾಂ ತ್ರಿಂಶದ್ಯೋಜನಮಂಡಲಂ ।
ಜ್ವಾಲಾಸಹಸ್ರಕಲಿಲಂ ವಹ್ನಿಸ್ಥಾನಂ ಸುದಾರುಣಂ ॥ ೩೯ ॥

---

೩೫. ಇವೇ ಮೊದಲಾದ ಅನೇಕ ಪ್ರದೇಶಗಳೂ ಹಿಮಾಲಯದ ದಕ್ಷಿಣ ದಿಕ್ಕಿನಲ್ಲಿವೆ. ಕ್ರಮವಾಗಿ ಈ ಮೇಲೆ ಹೇಳಿದ ಸ್ಥಳಗಳೆಲ್ಲವೂ ಸಿದ್ಧರೇ ಮೊದಲಾದವರಿಂದ ಸೇವಿಸಲ್ಪಟ್ಟುವುಗಳಾಗಿಯೂ ಇವೆ.

೩೬. ಎಲೈ ಮುನಿವರ್ಯರೇ ಇದುವರೆಗೂ ಪೂರ್ವದಕ್ಷಿಣಭಾಗಗಳಲ್ಲಿರುವ ಪ್ರದೇಶಗಳನ್ನು ವರ್ಣಿಸಿದ್ದಾಗಿದೆ. ಈಗ ಪಶ್ಚಿಮದಿಕ್ಕಿನಲ್ಲಿರುವ ಪ್ರದೇಶಗಳನ್ನು ನಿಮಗಾಗಿ ವಿಸ್ತಾರವಾಗಿ ನಿರೂಪಿಸುವೆನು ಕೇಳಿ ಎಂದನು.

೩೭-೪೦. ಹಿಮಾಲಯದ ಪಶ್ಚಿಮಭಾಗದಲ್ಲಿರುವ ಸುವಕ್ಷಸ ಶಿಖಿಶೈಲ ಇವುಗಳ ಮಧ್ಯಭಾಗದಲ್ಲಿ ನೂರುಯೋಜನ ವಿಸ್ತೀರ್ಣವೂ ಒಂದೇ ಶಿಲಾಮಯವೂ ಸರ್ವದಾ ಉಷ್ಣವೂ, ಮಹಾಭಯಂಕರವೂ. ಸ್ಪರ್ಶಿಸಲು ಅಸಾಧ್ಯವೂ, ಆಶ್ಚರ್ಯ ಜನಕವೂ, ಸರ್ವಪ್ರಾಣಿಗಳು ಪ್ರವೇಶಿಸಲಶಕ್ಯವೂ, ದೊರೆಗಳಿಗೆ ಭಯಪ್ರದವೂ, ಆದ ಮಹಾವನವಿರುತ್ತದೆ. ಅದರ ಮಧ್ಯದಲ್ಲಿ ಮೂವತ್ತುಯೋಜನ ಅಗಲವಾದ ಸಾವಿರ ಕಿರಣಗಳಿಂದ ಸಹಿತವೂ, ಅತಿ ಭಯಂಕರವೂ ಆದ ಅಗ್ನಿಕುಂಡವೊಂದು

ಅನಿಂಧನಸ್ತತ್ರ ಸದಾ ಜ್ವಾಲಾಮಾಲೀ ವಿಭಾವಸುಃ ।
ಜ್ವಲತ್ಯೇಷ ಸದಾ ದೇವಃ ಶಶ್ವತ್ತತ್ರ ಹುತಾಶನಃ ॥ ४೦ ॥

ಅಧಿದೇವಕೃತೇ ಯೋಽಸಾವಗ್ನೇರ್ಭಾಗೋ ವಿಧೀಯತೇ ।
ಸ ತತ್ರ ಜ್ವಲತೇ ನಿತ್ಯಂ ಲೋಕಸಂವರ್ತಕೋಽನಲಃ ॥ ४೧ ॥

ಅಂತರೇ ಶೈಲವರಯೋರ್ದೇವಾ ವಾಪಿ ತಯೋಃ ಶುಭಾಃ ।
ಮಾತುಲುಂಗಸ್ಥಲೀ ತತ್ರ ಹ್ಯಾಯಾಮಾದ್ದಶಯೋಜನಾ ॥ ४೨ ॥

ಮಧುವ್ಯಂಜನಸಂಸ್ಥಾನೈಃ ಸುರಸೈಃ ಕನಕಪ್ರಭೈಃ ।
ಫಲೈಃ ಪರಿಣತೈಃ ಸರ್ವಾ ಶೋಭಿತಾ ಸಾ ಮಹಾಸ್ಥಲೀ ॥ ४೩ ॥

ತತ್ರಾಶ್ರಮಂ ಮಹಾಪುಣ್ಯಂ ಸಿದ್ಧಸಂಘನಿಷೇವಿತಂ ।
ಬೃಹಸ್ಪತೇಃ ಪ್ರಮುದಿತಂ ಸರ್ವಕಾಮಗುಣೈರ್ಯುತಂ ॥ ४४ ॥

---

ಪ್ರಜ್ವಲಿಸುತ್ತಿದೆ ಅದರಲ್ಲಿ ಸೌದೆಯಿಲ್ಲದೇ ಅಗ್ನಿಯು ಸರ್ವಕಾಲದಲ್ಲಿಯೂ ಎಡಬಿಡದೆ ಉರಿಯುತ್ತಿರುವುದು.

४೧. ಆ ವನದಲ್ಲಿ ಭೂತಾಗ್ನಿಯೂ ಅಗ್ನಿಗೆ ಅಭಿಮಾನಿಯಾದ ಯಜ್ಞಪುರುಷನೂ ವಾಸಿಸುವರು. ಆ ಅಗ್ನಿಯೇ ದೇವತೆಗಳಿಗೆ ಹೋಮಮಾಡಿದ ಭಾಗಗಳನ್ನು ಅವರವರಿಗೆ ತಲಪಿಸುವುದಾಗಿದೆ. ಅದೇ ಅಗ್ನಿಯೇ ಪ್ರಲಯಕಾಲದಲ್ಲಿ ಸರ್ವವನ್ನೂ ದಹಿಸುವ ಪ್ರಲಯಾಗ್ನಿಯೂ ಆಗಿರುವುದು.

४೨ ಆ ಪರ್ವತದ ಮಧ್ಯದಲ್ಲಿ ಅನೇಕ ದೇವತೆಗಳೂ ವಾಸಿಸುವರು. ಅದರಲ್ಲಿ ಮಾತುಲಂಗವೆಂಬ ಜಾಗವು ಅತಿ ಪ್ರಶಸ್ತವೂ ಹತ್ತು ಯೋಜನ ಉದ್ದವೂ ಆಗಿರುತ್ತದೆ.

४೩. ಆ ಮಹಾ ವನದ ಎಲ್ಲಾ ಭಾಗಗಳಲ್ಲಿಯೂ ಮಧುರರಸಭರಿತವೂ ಸುರಸವೂ, ಸುವರ್ಣಕಾಂತಿಯುತವೂ, ಪಕ್ವವೂ ಆದ ಮಹಾಫಲಗಳು ಪೂರ್ಣವಾಗಿರುವುವು

४४. ಅಲ್ಲಿ ಅತಿಪವಿತ್ರವೂ, ಸಿದ್ಧರ ಸಂಘದಿಂದ ಸೇವಿತವೂ, ಸರ್ವದಾ ಸಂತುಷ್ಟವೂ, ಸರ್ವೇಷ್ಟಾರ್ಥಗಳಿಂದ ಪೂರ್ಣವೂ ಆದ ಬೃಹಸ್ಪತಿಗಳ ಆಶ್ರಮವು ಶೋಭಿಸುತ್ತಿದೆ.

ತಥೈವ ಶೈಲವರಯೋಃ ಕುಮುದಾಂಜನಯೋರಪಿ ।
ಅಂತರೇ ಕೇಸರದ್ರೋಣೀ ಹ್ಯನೇಕಾಯಾಮಯೋಜನಾ ॥ ೪೫ ॥

ದ್ವಿಬಾಹುಪರಿಣಾಹೈಸ್ತೈಸ್ತ್ರಿಹಸ್ತಾಯತವಿಸ್ತೃತೈಃ ।
ಚಂದ್ರಾಂಶುವರ್ಣೈರ್ವ್ಯಾಕಾಶೈರ್ಮತ್ತಷಟ್ಪದನಾದಿತೈಃ ॥ ೪೬ ॥

ಮಧುಸರ್ಪಿರ್ರಜಃ ಪೃಕ್ತೈರ್ಮಹಾಗಂಧೈರ್ಮನೋಹರೈಃ ।
ಶಬಲಂ ತದ್ವನಂ ಭಾತಿ ಕುಸುಮೈಃ ಸರ್ವಕಾಲಜೈಃ ॥ ೪೭ ॥

ತತ್ರ ವಿಷ್ಣೋಃ ಸುರಗುರೋರ್ದಿವ್ಯಮಾಯತನಂ ಮಹತ್ ।
ಪ್ರಕಾಶಂ ತ್ರಿಷು ಲೋಕೇಷು ಸರ್ವಲೋಕನಮಸ್ಕೃತಂ ॥ ೪೮ ॥

ಅಂತರೇ ಶೈಲವರಯೋಃ ಕೃಷ್ಣಪಾಂಡುರಯೋರಪಿ ।
ತ್ರಿಂಶದ್ಯೋಜನವಿಸ್ತೀರ್ಣಂ ನವತ್ಯಾಯತಯೋಜನಂ ॥ ೪೯ ॥

---

೪೫. ಇವುಗಳಂತೆಯೇ ಕುಮುದಾಂಜನಗಳೆಂಬ ಗಿರಿವರಗಳ ಮಧ್ಯಭಾಗದಲ್ಲಿ ಅನೇಕ ಯೋಜನ ವಿಸ್ತೀರ್ಣವಾದ ಕೇಸರಿ ದ್ರೋಣಿಯೆಂದು ಪ್ರಖ್ಯಾತವಾದ ಸ್ಥಾನವೂ ಕೂಡ ಇರುತ್ತದೆ.

೪೬-೪೭. ಆ ವನದಲ್ಲಿ ಎರಡುಮಾರು ಉದ್ದವೂ ಮೂರುಮಾರು ವಿಸ್ತೀರ್ಣವೂ, ಚಂದ್ರಕಿರಣಗಳಂತೆ ಕಾಂತಿಯುತವೂ, ವಿಕಸಿತವೂ, ಭ್ರಮರಗಳ ಝೇಂಕಾರಸಹಿತವೂ, ಜೇನುತುಪ್ಪ ರಜಸ್ಸುಗಳಿಂದ ಮಂಡಿತವೂ, ಮಹಾವಾಸನೆಯುಳ್ಳದ್ದೂ, ಮನೋಹರವೂ, ಸಾರ್ವಕಾಲಿಕವೂ, ಆದ ಮಹಾ ಕುಸುಮಗಳು ಸದಾ ಕಾಲದಲ್ಲಿಯೂ ಬಿಡುವುದರಿಂದ ವನವು ಚಿತ್ರವರ್ಣವಾಗಿರುವುದು.

೪೮. ಆ ಆಶ್ರಮದಲ್ಲಿ ದೇವಗುರುವಾದ ಮಹಾವಿಷ್ಣುವಿನ ದೇವಾಲಯವು ಅತಿ ವಿಶಾಲವಾಗಿ ಪ್ರಜ್ವಲಿಸುತ್ತಿರುತ್ತದೆ. ಅದು ಸರ್ವ ಜನರಿಂದ ವಂದಿತವೂ ಮೂರುಲೋಕಪ್ರಖ್ಯಾತವೂ ಆಗಿದೆ.

೪೯-೫೦. ಕೃಷ್ಣಪಾಂಡುರವೆಂಬ ಪರ್ವತೋತ್ತಮಗಳ ಮಧ್ಯದಲ್ಲಿ ಮೂವತ್ತು ಯೋಜನ ವಿಸ್ತೀರ್ಣವೂ, ತೊಂಬತ್ತು ಯೋಜನದಷ್ಟು ಉದ್ದವೂ, ಮನೋಹರವೂ

ಶ್ಲಕ್ಷ್ಣಮೇಕಶಿಲಂ ದೇಶಂ ವೃಕ್ಷವೀರುದ್ವಿವರ್ಜಿತಂ ।
ಸುಖಪಾದಪ್ರಚಾರಂ ಚ ನಿಮ್ನೋನ್ನತವಿವರ್ಜಿತಂ ॥ ೫೦ ॥

ಮಧ್ಯೇ ತು ಸರಸಸ್ತಸ್ಯ ರಮ್ಯಾ ತು ಸ್ಥಲಪದ್ಮಿನೀ ।
ಸಹಸ್ರಪತ್ರೈರ್ವ್ಯಾಕೋಶೈಃ ಛತ್ರಮಾತ್ರೈರಲಂಕೃತಾ ॥ ೫೧ ॥

ಪುಂಡರೀಕೈರ್ಮಹಾಪದ್ಮೈಃರುಚಿರೈರ್ಗಂಧಶಾಲಿಭಿಃ ।
ಶತಪತ್ರೈಶ್ಚ ವಿಕಚೈರುತ್ಪಲೈರ್ನೀಲಪತ್ರಕೈಃ ॥ ೫೨ ॥

ಮದೋತ್ಕಟೈರ್ಮಧುಕರೈರ್ಭ್ರಮರೈಶ್ಚ ಮದೋತ್ಕಟೈಃ ।
ಮೃದುಗದ್ಗದಕಂಠಾನಾಂ ಕಿನ್ನರಾಣಾಂ ಚ ನಿಸ್ವನೈಃ ॥ ೫೩ ॥

ಉಪಗೀತಪದ್ಮಖಂಡಾಢ್ಯಾ ವಿಸ್ತೀರ್ಣಾ ಸ್ಥಲಪದ್ಮಿನೀ ।
ಯಕ್ಷಗಂಧರ್ವಚರಿತಾ ಸಿದ್ಧಚಾರಣಸೇವಿತಾ ॥ ೫೪ ॥

---

ವಿಶಾಲವಾವೂ ಆದ ಒಂದೇ ಹಾಸುಕಲ್ಲಿರುವುದೂ, ವೃಕ್ಷ ಬಳ್ಳಿಗಳಿಂದ ರಹಿತವೂ ಸುಖವಾಗಿ ಸಂಚರಿಸಲರ್ಹವೂ, ಹಳ್ಳ ದಿಣ್ಣೆಗಳಿಂದ ರಹಿತವೂ ಆದ ಸ್ಥಾನವು ಶೋಭಿಸುತ್ತಿರುವುದು.

೫೧-೫೨. ಆ ಸ್ಥಳದಲ್ಲೊಂದು ಕೊಳವಿರುತ್ತದೆ. ಅದರ ಮಧ್ಯದಲ್ಲಿ ಸುಂದರವೂ ಸಹಸ್ರ ದಳಗಳಿಂದ ಯುಕ್ತವೂ ವಿಕಸಿತವೂ, ಛತ್ರಿಯಂತೆ ಅತಿವಿಶಾಲವೂ, ಆದ ಸ್ಥಳಕಮಲಗಳೂ, ಸಿತಾಂಭೋಜಗಳೂ, ಸುಂದರವೂ ಸುವಾಸನೆಯೂ ಇರುವ ಕಲ್ಹಾರ ಪುಷ್ಪಗಳೂ, ಅರಳಿರುವ ನೈದಲೇ ಕುಸುಮಗಳೂ, ನೀಲಿ ಕಮಲಗಳೂ ವಿಶೇಷವಾಗಿ ಶೋಭಿಸುತ್ತಿದ್ದುವು

೫೩. ಆ ಪದ್ಮವನವು ಮದೋನ್ಮತ್ತಗಳಾದ ದುಂಬಿಗಳ ಝೇಂಕಾರದಿಂದಲೂ ಮದದಿಂದ ರೇಗಿದ ಪಕ್ಷಿಗಳ ರವದಿಂದಲೂ, ಗದ್ಗದ ಧ್ವನಿಯುಳ್ಳ ಕಿನ್ನರರ ಗಾನದಿಂದಲೂ, ಕೋಗಿಲೆಗಳ ಗಾನದಿಂದಲೂ ವ್ಯಾಪ್ತವಾಗಿರುತ್ತದೆ.

೫೪. ಮತ್ತು ಆ ಪದ್ಮವನವು ಅತಿ ವಿಶಾಲವೂ ಗೀತಗಂಧಗಳಿಂದ ಭರಿತವೂ ಯಕ್ಷಗಂಧರ್ವಸೇವಿತವೂ, ಸಿದ್ಧಚಾರಣ ಪೂಜಿತವೂ ಆಗಿರುತ್ತದೆ.

ಮಧ್ಯೇ ತಸ್ಯಾಶ್ಚ ಪದ್ಮಿನ್ಯಾಃ ಪಂಚಯೋಜನಮಂಡಲಃ ।
ನ್ಯಗ್ರೋಧೋ ವಿಪುಲಸ್ಕಂಧೋ ಹ್ಯನೇಕಾರೋಹಮಂಡಿತಃ ॥ ೫೫ ॥

ತತ್ರ ಚಂದ್ರಪ್ರಭಃ ಶ್ರೀಮಾನ್ ಪೂರ್ಣಚಂದ್ರನಿಭಾನನಃ ।
ಸಹಸ್ರವದನೋ ದೇವೋ ನೀಲವಾಸಾಃ ಸುರಾರಿಹಾ ॥ ೫೬ ॥

ಪದ್ಮಮಾಲ್ಯಧರಸ್ಥಲ್ಯಾಂ ಮಹಾಭಾಗೋಽಪರಾಜಿತಃ ।
ಇಜ್ಯತೇ ಯಕ್ಷಗಂಧರ್ವೈರ್ವಿದ್ಯಾಧರಗಣೈಸ್ತಥಾ ॥ ೫೭ ॥

ತಸ್ಮಿನ್ನಾಯತನೇ ಸಾಕ್ಷಾದನಾದಿನಿಧನೋ ಹರಿಃ ।
ಪದ್ಮೋಪಹಾರೈರ್ವಿವಿಧೈರಿಜ್ಯತೇ ಸಿದ್ಧಚಾರಣೈಃ ॥ ೫೮ ॥

ತದನಂತಸದೋ ನಾಮ ಸರ್ವಲೋಕೇಷು ವಿಶ್ರುತಂ ।
ಪದ್ಮಮಾಲಾವಲಂಬಾಭಿರ್ಮಾಲಾಭಿರುಪಶೋಭಿತಂ ॥ ೫೯ ॥

---

೫೫. ಆ ಪದ್ಮವನದ ಮಧ್ಯದಲ್ಲಿ ಐದು ಯೋಜನದಷ್ಟು ಮಂಡಲಾಕಾರವೂ, ಅನೇಕ ಶಾಖಾಯುಕ್ತವೂ, ಅನೇಕ ವಿಧ ಆರೋಹಣ ಮಾರ್ಗಗಳಿಂದ ಸಹಿತವೂ ಆದ ಆಲದಮರವು ಶೋಭಿಸುತ್ತಿರುವುದು.

೫೬-೫೮. ಆ ಪದ್ಮವನದಲ್ಲಿ ವಿಶಾಲವಾದ ದೇವಾಲಯವಿದೆ. ಆ ದೇವಾಲಯದಲ್ಲಿ ಚಂದ್ರನಂತೆ ಕಾಂತಿವಂತನೂ, ಶ್ರೀಮಂತನೂ, ಪೂರ್ಣಚಂದ್ರನಿಗೆ ಸಮವಾದ ಮುಖವುಳ್ಳವನೂ, ಸಹಸ್ರಮುಖಿಯೂ, ಸ್ವಾಮಿಯೂ, ನೀಲಾಂಬರನೂ, ಶತ್ರುನಾಶಕನೂ, ಪದ್ಮಮಾಲೆಯನ್ನು ಧರಿಸಿರುವವನೂ, ಮಹಾಭಾಗ್ಯಶಾಲಿಯೂ, ಅಪರಾಜಿತನೂ, ಅನಾದ್ಯನಂತನೂ ಆದ ಶ್ರೀ ಹರಿಯು ಯಕ್ಷಗಂಧರ್ವರಿಂದಲೂ, ವಿದ್ಯಾಧರ ಗಣಗಳಿಂದಲೂ, ಯಾವಾಗಲೂ ಪೂಜಿಸಲ್ಪಡುತ್ತಾನೆ. ಸಿದ್ಧಚಾರಣರೇ ಮೊದಲಾದ ದೇವತೆಗಳು ವಿವಿಧಗಳಾದ ಪುಷ್ಪಗಳಿಂದ ಆ ಹರಿಯನ್ನು ಸದಾ-ಪೂಜಿಸುತ್ತಿರುವರು.

೫೯. ಭಗವಂತನ ಅನಂತ ನಾಮಕವಾದ ಆ ಸಭೆಯು ಪದ್ಮಮಾಲೆಗಳಿಂದಲೂ, ವಿಚಿತ್ರ ತೋರಣಗಳಿಂದಲೂ, ಅಲಂಕೃತವಾಗಿ ಸರ್ವ ಲೋಕದಲ್ಲಿಯೂ ಪ್ರಖ್ಯಾತವಾಗಿದೆ.

ತಥಾ ಸಹಸ್ರಶಿಖರಕುಮುದಸ್ಯಾಂತರೇಣ ಚ ।
ಪಂಚಾಶದ್ಯೋಜನಾಯಾಮಂತ್ರಿಂಶದ್ಯೋಜನವಿಸ್ತರಂ ॥
ಇಷುಕ್ಷೇಪೋಚ್ಚಶಿಖರಂ ನಾನಾವಿಹಗಸೇವಿತಂ ॥ ೬೦ ॥

ಮಹಾಗಂಧೈರ್ಮಹಾಸ್ವಾದೈರ್ಗಜದೇಹ ನಿಭೈಃ ಫಲೈಃ ।
ಮಧುಸ್ರವೈರ್ಮಹಾವೃಕ್ಷೈರುಪೇತಂ ತತ್ ಸಮಂತತಃ ॥ ೬೧ ॥

ತತ್ರಾಶ್ರಮಂ ಮಹಾಪುಣ್ಯಂ ದೇವರ್ಷಿಗಣಸೇವಿತಂ ।
ಶುಕ್ರಸ್ಯ ಪ್ರಥಿತಂ ತತ್ರ ಭಾಸ್ವರಂ ಪುಣ್ಯಕರ್ಮಣಃ ॥ ೬೨ ॥

ತಂಕುಕೂಟಸ್ಯ ಶೈಲಸ್ಯ ವೃಷಭಸ್ಯಾಂತರೇಣ ಚ ।
ಪರೂಷಕಸ್ಥಲೀ ರಮ್ಯಾ ಹ್ಯನೇಕಾಯುತಯೊಜನಾ ॥ ೬೩ ॥

---

೬೦-೬೧. ಅನಂತರ ಸಹಸ್ರಶಿಖರಕುಮುದಪರ್ವತಗಳ ಮಧ್ಯದಲ್ಲಿ ಐವತ್ತು ಯೋಜನ ಉದ್ದವೂ, ಮೂವತ್ತುಯೋಜನ ಅಗಲವೂ, ಇರುವ ಉನ್ನತವಾದ ಶಿಖರಗಳುಳ್ಳ ಇಷುಕ್ಷೇಪವೆಂಬ ಕ್ಷೇತ್ರವು ಇರುವುದು. ಆ ವನವು ನಾನಾ ಪಕ್ಷಿಗಳಿಗೆ ಆಶ್ರಯವಾಗಿಯೂ, ಅತ್ಯಂತವಾದ ಗಂಧರಸ ಇವುಗಳಿಂದ ಪೂರ್ಣವೂ, ಗಜಾಕಾರವೂ ಆದ ಫಲಗಳ ಭಾರದಿಂದ ತಗ್ಗುವ ವೃಕ್ಷಗಳಿಗೆ ಆಧಾರವಾಗಿಯೂ ಇದೆ. ಆ ಫಲಗಳಿಂದ ಸದಾ ಕಾಲದಲ್ಲಿಯೂ ರಸವು ಸುರಿದು ಹರಿಯುತ್ತಿದೆ

೬೨ ಅಲ್ಲಿ ಮಹಾಪುಣ್ಯಪ್ರದವೂ ದೇವರ್ಷಿಗಣಸೇವಿತವೂ ಆದ ಪುಣ್ಯಪುರುಷರಾದ ಶುಕ್ರಾಚಾರ್ಯರ ದಿವ್ಯಾಶ್ರಮವು ಜಾಜ್ವಲ್ಯಮಾನವಾಗಿಯೂ ಪ್ರಖ್ಯಾತವಾಗಿಯೂ ಇರುತ್ತದೆ.

೬೩ ಅನಂತರ ಶಂಕುಕೂಟವೃಷಭವೆಂಬ ಪರ್ವತಗಳ ಮಧ್ಯದಲ್ಲಿ ಅನೇಕ ಯೋಜನ ವಿಶಾಲವೂ, ರಮ್ಯವೂ, ಆದ ಪರೂಷಕಸ್ಥಲೀ ಎಂಬ ಪ್ರಖ್ಯಾತವಾದ ಪ್ರದೇಶವು ಶೋಭಿಸುತ್ತಿದೆ.

ಬಿಲ್ವಪ್ರಮಾಣೈಶ್ಚ ಶುಭೈರ್ಮಹಾಸ್ವಾದೈಃ ಸುಗಂದಿಭಿಃ ।
ಫಲೈಃ ಪ್ರಕ್ಲಿದ್ಯತೇ ಭೂಮಿಃ ಪರುಷೈರ್ವ್ರಣಂತವಿಚ್ಯುತೈಃ ॥ ೬೪ ॥

ತಾಂ ಸ್ಥಲೀಮುಪಜೀವಂತಿ ಕಿನ್ನರೋರಗಸಾಧವಃ ।
ಪರೂಷಕರಸೋನ್ಮತ್ತಾ ಮಾನಾಢ್ಯಾಸ್ತತ್ರ ಚಾರಣಾಃ ॥ ೬೫ ॥

ಕಪಿಂಜಲಸ್ಯ ಶೈಲಸ್ಯ ನಾಗಶೈಲಸ್ಯ ಚಾಂತರೇ ।
ದ್ವಿಯೋಜನಶತಾಯಾಮಾ ವಿಸ್ತೀರ್ಣಾ ಶತಯೋಜನಾ ॥ ೬೬ ॥

ಸ್ಥಲೀ ಮನೋಹರಾ ಸಾ ಹಿ ನಾನಾವನವಿಭೂಷಿತಾ ।
ನಾನಾಪುಷ್ಪಫಲೋಪೇತಾ ಕಿನ್ನರೋರಗಸೇವಿತಾ ॥ ೬೭ ॥

ದ್ರಾಕ್ಷಾವನಾನಿ ರಮ್ಯಾಣಿ ತಥಾ ನಾಗವನಾನಿ ಚ ।
ಖರ್ಜೂರವನಖಂಡಾನಿ ನೀಲಾಶೋಕವನಾನಿ ಚ ॥ ೬೮ ॥

---

೬೪. ಆ ಆಶ್ರಮದಲ್ಲಿ ಅನೇಕ ಫಲವೃಕ್ಷಗಳಿವೆ. ಅವುಗಳ ಫಲಗಳು ರುಚಿಯೂ, ಸುವಾಸನೆಯೂ ಆಗಿ ಬಿಲ್ವಫಲದಷ್ಟು ದಪ್ಪವಾಗಿಯೂ, ಮಂಗಳದಾಯಕವಾಗಿಯೂ ಇವೆ. ಆ ಫಲಗಳಿಂದ ರಸಗಳು ಸುರಿದು ಭೂಮಿಯು ಮೃದುವಾಗಿಯೂ ದೂಳಿಲ್ಲದ್ದಾಗಿಯೂ ಇದೆ.

೬೫. ಅದರಲ್ಲಿ ಕಿನ್ನರರ., ಉರಗಗಳು, ಸಾಧುಗಳು ಮತ್ತು ಚಾರಣರು ಇವರು ಪರೂಷಕರಸಪಾನದಿಂದ ಮತ್ತರೂ, ಬಲಾಢ್ಯರೂ, ಮಾನಿಷ್ಠರೂ ಆಗಿ ಸುಖವಾಗಿ ವಾಸಿಸುತ್ತಾರೆ.

೬೬-೬೮. ಕಪಿಂಜಲ ಮತ್ತು ನಾಗಶೈಲಗಳ ಮಧ್ಯದಲ್ಲಿ ಇನ್ನೂರುಯೋಜನ ಉದ್ದವೂ, ನೂರುಯೋಜನ ಅಗಲವೂ, ಮನೋಹರವೂ, ವಿವಿಧವನಗಳಿಂದಲಂಕೃತವೂ, ವಿವಿಧಫಲಪುಷ್ಪಭರಿತವೂ, ಕಿನ್ನರೋಗಸವಿತವೂ, ರಮ್ಯವೂ ಆದ ದ್ರಾಕ್ಷಾವನಗಳೂ ಮತ್ತು ನಾಗವನಗಳೂ ಖರ್ಜೂರವನಗಳೂ ಕೂಡ ವಿಶೇಷವಾಗಿ ಶೋಭಿಸುತ್ತವೆ.

ದಾಂಡಿಮಾನಾಂ ಚ ಸ್ವಾದೂನಾಮಕ್ಷೋಟಕವನಾನಿ ಚ ।
ಅತಸೀತಿಲಕಾನಾಂ ಚ ಕದಲೀನಾಂ ವನಾನಿ ಚ ॥ ೬೯ ॥

ಬದರೀಣಾಂ ಚ ಸ್ವಾದೂನಾಂ ವನಖಂಡಾನಿ ಸರ್ವಶಃ ।
ಸ್ವಾದುಶೀತಾಂಬುಪೂರ್ಣಾಭಿರ್ನದೀಭಿಃ ಶೋಭಿತಾನಿ ಚ ॥ ೭೦ ॥

ತಥಾ ಪುಷ್ಪಕಶೈಲಸ್ಯ ಮಹಾಮೇಘಸ್ಯ ಚಾಂತರೇ ।
ಷಷ್ಟಿಯೋಜನವಿಸ್ತೀರ್ಣಾ ಸಾ ಭೂಮಿಃ ಶತಮಾಯತಾ ॥ ೭೧ ॥

ಸಮಾ ಪಾಣಿತಲಪ್ರಖ್ಯಾ ಕಠಿನಾ ಪಾಂಡುರಾಘನಾ ।
ವೃಕ್ಷಗುಲ್ಮಲತಾಗುಲ್ಮೈಸ್ತೃಣೈಶ್ಚಾಪಿ ವಿವರ್ಜಿತಾ ॥ ೭೨ ॥

ವರ್ಜಿತಾ ವಿವಿಧೈಃ ಸತ್ತ್ವೈರ್ನಿತ್ಯಮಸ್ಮಿನ್ ನಿರಾಶ್ರಯಾ ।
ಸಾ ಕಾನನಸ್ಥಲೀ ನಾಮ ದಾರುಣಾರೋಮಹರ್ಷಣಾ ॥ ೭೩ ॥

---

೬೯-೭೦. ರುಚಿಯಾದ ದಾಳಿಂಬೇವನವೂ, ಗೋಣೀವನವೂ, ಅಗಸೇ ವನವೂ, ತಿಲಿಕವನವೂ, ಬಾಳೇವನವೂ, ಬದರೀವನವೂ, ಇವೇ ಮೊದಲಾದ ವನ ಭಾಗಗಳು ಶೀತಲವಾದ ನದಿಗಳಿಂದಲೂ, ರುಚಿಯೂ ಜಲಪೂರ್ಣವೂ ಆದ ಸರಸು ಗಳಿಂದಲೂ, ಮಂಡಿತಗಳಾಗಿವೆ.

೭೧. ಪೂರ್ವದ ಹಾಗೆಯೇ ಪುಷ್ಕರಶೈಲ ಮಹಾಮೇಘಪರ್ವತ ಇವುಗಳ ಮಧ್ಯದಲ್ಲಿ ಅರವತ್ತುಯೋಜನ ವಿಸ್ತೀರ್ಣವೂ, ನೂರುಯೋಜನ ಉದ್ದವೂ, ಆದ ಭೂಭಾಗವಿರುತ್ತದೆ.

೭೨. ಅದು ಸಮವಾಗಿಯೂ ಪಾಣಿತಲನಾಮಕವಾಗಿಯೂ ಕಠಿಣವಾಗಿಯೂ ಪಾಂಡುರವರ್ಣವಾಗಿಯೂ ದಟ್ಟವಾಗಿಯೂ ಮರಗಿಡಬಳ್ಳಿಗಳಿಂದಲೂ ಗುಲ್ಮತೃಣ ಗಳಿಂದಲೂ ರಹಿತವಾಗಿಯೂ ಇರುತ್ತದೆ

೭೩. ಆ ಸ್ಥಳದಲ್ಲಿ ಯಾವ ಪ್ರಾಣಿಗಳೂ ವಾಸಿಸುವುದಿಲ್ಲ. ಅದು ನಿರಾಶ್ರಯ ವಾಗಿದೆ. ಆ ಕಾನನಪ್ರದೇಶವು ಭಯಂಕರವಾಗಿಯೂ, ರೋಮಾಂಚಜನಕ ವಾಗಿಯೂ ಇರುತ್ತದೆ.

ಮಹಾಸರಾಂಸಿ ಚ ತಥಾ ಮಹಾವೃಕ್ಷಾಸ್ತಥೈವ ಚ ।
ಮಹಾವನಾನಿ ಸರ್ವಾಣಿ ಕಾಂತನಾಮಾನಿ ಸರ್ವಶಃ ॥ ೭೪ ॥

ಸರಸಾಂ ಚ ವನಾನಾಂ ಚ ಸಾಸ್ಥಲೀ ಚ ಪ್ರಜಾಪತೇಃ ।
ಕ್ಷುದ್ರಾಣಾಂ ಸರಸಾಂಚೈವ ಸಂಖ್ಯಾ ತತ್ರ ನ ವಿದ್ಯತೇ ॥ ೭೫ ॥

ದಶ ದ್ವಾದಶ ಸಪ್ತಾಷ್ಟೌ ವಿಂಶತ್ರಿಂಶಚ್ಚ ಯೋಜನಾಃ ।
ಸ್ಥಲ್ಯೋ ದ್ರೋಣ್ಯಶ್ಚ ವಿಖ್ಯಾತಾಃ ಸರಾಂಸಿ ವನಾನಿ ಚ ॥ ೭೬ ॥

ಕೇಚಿತ್ ಸಂತಿ ಮಹಾಘೋರಾಃ ಶ್ಯಾಮಾಃ ಪರ್ವತಕುಕ್ಷಯಃ ।
ಸೂರ್ಯಾಂಶುಜಾಲೈರಸ್ಪೃಷ್ಟಾ ನಿತ್ಯಂ ಶಿತಾ ದುರಾಸದಾಃ ॥ ೭೭ ॥

---

೭೪-೭೫. ಆದರಲ್ಲಿ ಮಹಾಸರಸ್ಸುಗಳೂ, ಮಹಾವೃಕ್ಷಗಳೂ, ಮಹಾವನಗಳೂ, ಸಮಸ್ತ ಪ್ರದೇಶಗಳೂ, ಕೂಡ ರಮ್ಯವಾಗಿವೆ. ಇದೂ ಅಲ್ಲದೆ ಸಾಮಾನ್ಯವಾದ ಸರಸ್ಸುಗಳು ವನಗಳು ಪ್ರಜಾಪತಿಯ ಸ್ಥಲಗಳು ಸಣ್ಣ ಸಣ್ಣ ಸರೋವರಗಳು ಇವುಗಳ ಸಂಖ್ಯೆಯನ್ನು ತಿಳಿಸುವುದು ಅಸಾಧ್ಯವಾಗಿದೆ.

೭೬. ಆ ಭಾಗದಲ್ಲಿರುವ ಸ್ಥಲಗಳು ಪ್ರದೇಶಗಳು ಸರಸ್ಸುಗಳು ವನಗಳೂ ಕೂಡ ಹತ್ತು ಹನ್ನೆರಡು ಹದಿನೈದು ಇಪ್ಪತ್ತು ಮೂವತ್ತು ಯೋಜನಗಳಷ್ಟು ವಿಸ್ತಾರವಾಗಿರುತ್ತವೆ.

೭೭. ಕೆಲವು ಪ್ರದೇಶಗಳು ಮಹಾಘೋರವಾಗಿಯೂ ಕೆಲವು ಕಪ್ಪಾಗಿಯೂ, ಕೆಲವು ಪರ್ವತದ ಮಧ್ಯಭಾಗವು ಸೂರ್ಯಕಿರಣಗಳು ಪ್ರವೇಶಿಸಲು ಅಸಾಧ್ಯವಾಗಿಯೂ, ಅತಿ ಶೀತವಾಗಿಯೂ ಪ್ರವೇಶಿಸಲಸಾಧ್ಯವಾಗಿಯೂ ಇರುತ್ತವೆ.

**ತಥಾ ಹ್ಯನಲತಪ್ತಾನಿ ಸರಾಂಸಿ ದ್ವಿಜಸತ್ತಮಾಃ ।**
**ಶೈಲಕುಕ್ಷ್ಯಂತರಸ್ಥಾನಿ ಸಹಸ್ರಾಣಿ ಶತಾನಿ ಚ** **॥ ೭೮ ॥**

**ಇತಿ ಶ್ರೀಃ ಮಹಾಪುರಾಣೇ ವಾಯುಪ್ರೋಕ್ತೇ "ಭುವನವಿನ್ಯಾಸೋ"**
**ನಾಮಾಽಷ್ಟತ್ರಿಂಶೋಽಧ್ಯಾಯಃ**

---

೭೮. ಎಲೈ ಮುನಿವರ್ಯರೇ, ಕೆಲವು ಕೊಳಗಳ ಜಲವು ಅಗ್ನಿಯಿಂದ ತಪ್ತವಾಗಿಯೂ, ಕೆಲವು ಪರ್ವತದ ಕುಕ್ಷಿಭಾಗಗತವಾಗಿಯೂ, ಸಹಸ್ರ ಸಂಖ್ಯಾಕಗಳಾಗಿಯೂ, ಅತಿ ರಮ್ಯವಾಗಿಯೂ, ಪ್ರಖ್ಯಾತವಾಗಿಯೂ ಇರುತ್ತವೆ.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಭುವನವಿನ್ಯಾಸವೆಂಬ "
ಮೂವತ್ತೆಂಟನೆಯ ಅಧ್ಯಾಯವು ಸಮಾಪ್ತವಾದುದು

## ಮೂವತ್ತೆಂಟನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಶಿಶಿರಪತಂಗ ಪರ್ವಗತಗಳ ಮಧ್ಯದಲ್ಲಿರುವ ಕರ್ದಮ ಪ್ರಜಾಪತಿಯ ಆಶ್ರಮವೂ ತಾಮ್ರಪತಂಗಗಳಂತರದಲ್ಲಿರುವ ವಿದ್ಯಾಧರಾಶ್ರಮವೂ, ವಿಶಾಖಪತಂಗಗಳ ಮಧ್ಯದಲ್ಲಿ ಆಮ್ರವನವೂ, ಸುಮೂರ ವಸುಧಾರಗಿರಿಗಳ ಮಧ್ಯದಲ್ಲಿ ಬಿಲ್ವವನವೂ, ವಸುಧಾರ ರತ್ನಾಕರಗಳ ಮಧ್ಯದಲ್ಲಿ ಸೂರ್ಯನ ದೇವಾಲಯವೂ, ಇರುವುವು. ಅಲ್ಲಿಗೆ ಅನೇಕ ದೇವಾದಿಗಳು ಬಂದು ಸೂರ್ಯ ನಮಸ್ಕಾರವನ್ನು ಮಾಡುವರು. ಮತ್ತು ದಕ್ಷಿಣಪರ್ವತದ ಮಧ್ಯದಲ್ಲಿ ಅಗ್ನಿ ದೇವನ ಆಶ್ರಮವೂ, ಕುಮುದಾಂಜನಗಳ, ಮಧ್ಯದಲ್ಲಿ ಕಮಲವನವೂ, ಇರುವುವು. ಅದರಲ್ಲಿ ಶ್ರೀ ಹರಿಯು ಸದಾ ವಾಸಿಸುವ ಸಂಗತಿಯೂ, ಶುಕ್ರಾಚಾರ್ಯ, ಬಿಲ್ವವನ, ಆಮ್ರವನ, ನಾಗವನ, ತಾಳವನ, ದಾಳಿಂಬವನ, ಇವೇ ಮೊದಲಾದುವುಗಳ ವಿಷಯ ಗಳೂ ವಿಶೇಷವಾಗಿ ವರ್ಣಿತವಾಗಿವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಏಕೋನಚತ್ವಾರಿಂಶೋಽಧ್ಯಾಯಃ

॥ ಸೂತ ಉವಾಚ ॥

**ಅತಃ ಪರಂ ಪ್ರವಕ್ಷ್ಯಾಮಿ ಯಸ್ಮಿನ್ ಯಸ್ಮಿನ್ ಶಿಲೋಚ್ಚಯೇ ।**
**ಯೇ ಸನ್ನಿವಿಷ್ಟಾ ದೇವಾನಾಂ ವಿವಿಧಾನಾಂ ಗೃಹೋತ್ತಮಾಃ ॥ ೧ ॥**

**ತತ್ರ ಯೋಽಸೌ ಮಹಾಶೈಲಃ ಶೀತಾಂತೋ ನೈಕವಿಸ್ತರಃ ।**
**ನೈಕಧಾತುಶತೈಶ್ಚಿತ್ರೈರ್ನೈಕರತ್ನಾಕರಾಕರಃ ॥ ೨ ॥**

**ನಿತಂಬೈಃ ಪುಷ್ಪಸಾಲಂಬೈರ್ನೈಕಸತ್ವಗುಣಾಲಯಃ ।**
**ಮಹಾರ್ಹಮಣಿ ಚಿತ್ರಾಭಿರ್ಹೇಮವಂಶೈರಲಂಕೃತಃ ॥ ೩ ॥**

---

## ಮೂವತ್ತೊಂಬತ್ತನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು:—ಈಗ ಯಾವ ಯಾವ ಪರ್ವತಗಳ ಶಿಖರಗಳಲ್ಲಿ ಯಾವ ಯಾವ ದೇವತೆಗಳ ಮಹಾಸದನಗಳಿವೆಯೋ ಅವುಗಳನ್ನು ಈಗ ವರ್ಣಿಸುವೆನು ಕೇಳಿ ಎಂದು ಮಹರ್ಷಿಗಳಿಗೆ ಹೇಳಿದನು.

೨. ಅವುಗಳಲ್ಲಿ ಅತಿ ವಿಶಾಲವೂ, ನೂರಾರು ಧಾತುಗಳಿಂದ ವಿಚಿತ್ರವೂ, ಅನೇಕ ರತ್ನಗಣಿಗಳಿಗೆ ಆಶ್ರಯವೂ, ಆದ ಶೀತಾಂತವೆಂಬ ಮಹಾಪರ್ವತವು ಶೋಭಿಸುತ್ತಿದೆ.

೩. ಆ ಗಿರಿಯು ಮಹಾಸತ್ವಗಳಿಗೆ ಆಶ್ರಯವಾಗಿಯೂ, ಪುಷ್ಪಭರಿತವಾದ ನಿತಂಬಪ್ರದೇಶಗಳಿಂದಲೂ, ಅಮೂಲ್ಯವಾದ ರತ್ನಗಳಿಂದ ಕೆತ್ತಲ್ಪಟ್ಟ ಸುವರ್ಣಮಯಗಳಾದ ಬಿದುರುಗಳಿಂದಲೂ, ಅಲಂಕೃತವಾಗಿಯೂ ಇದೆ.

ನಿತಂಬೈಃ ಷಟ್ಪದೋದ್ಗೀತೈಃ ಪ್ರವಾಲೈರ್ಹೇಮಚಿತ್ರಕೈಃ ।
ತಟೈಃ ಕುಸುಮಸಂಕೀರ್ಣೈರ್ಮತ್ತಭ್ರಮರನಾದಿತೈಃ ॥ ೪ ॥

ಲತಾಲಂಬೈಶ್ಚಿತ್ರವದ್ಭಿಶ್ಚಿತ್ರೈರ್ಧಾತುಶತಾರ್ಚಿತೈಃ ।
ಸಾನುಭೀ ರತ್ನಚಿತ್ರೈಶ್ಚ ಪುಷ್ಪಾಢ್ಯೈಶ್ಚ ವಿಭೂಷಿತಃ ॥ ೫ ॥

ವಿಮಲಸ್ವಾದುಪಾನೀಯೈರ್ನೈಕ ಪ್ರಸ್ರವಣೈರ್ಯುತಃ ।
ನಿಕುಂಜೈಃ ಕುಸುಮೋತ್ಕೀರ್ಣೈರನೇಕೈಶ್ಚ ವಿಭೂಷಿತಃ ॥ ೬ ॥

ಪುಷ್ಪೋಡುಪವಹಾಭಿಶ್ಚ ಸ್ರವಂತೀಭಿರಲಂಕೃತಃ ।
ಕಿನ್ನರಾಚಾರಿತಾಭಿಶ್ಚ ದರೀಭಿಃ ಸರ್ವತಸ್ತತಃ ॥ ೭ ॥

---

೪. ಮತ್ತು ಆ ಗಿರಿಯು ಸುವರ್ಣದಿಂದ ಚಿತ್ರವೂ ಚಿಗುರೆಲೆಗಳಿಂದ ರಮ್ಯವೂ, ದುಂಬಿಗಳ ಗಾನದಿಂದ ಮನೋಹರವೂ, ವಿವಿಧ ಕುಸುಮಗಳಿಂದಲೂ ಮದಿಸಿದ ದುಂಬಿಗಳ ನಾದಗಳಿಂದಲೂ, ವ್ಯಾಪ್ತವೂ, ಆದ ತೀರಗಳಿಂದ ಶೋಭಿಸುತ್ತದೆ.

೫. ಆ ಪರ್ವತವು ವಿಚಿತ್ರವಾಗಿ ಹೊಳೆಯುವ ಲತೆಗಳಿಂದಲೂ, ನೂರಾರು ಧಾತುಗಳಿಂದ ವಿಚಿತ್ರವೂ, ರತ್ನಚಿತ್ರವೂ, ಪುಷ್ಪಗಳಿಂದ ಮನೋಹರವೂ ಆದ ನಾಸುಗಳಿಂದ ಅಲಂಕೃತವೂ ಆಗಿದೆ.

೬. ಮತ್ತು ಆ ಭೂಧರವು ವಿಮಲವೂ, ರುಚಿಯೂ, ಆದ ಜಲದಿಂದ ಪೂರ್ಣವೂ, ಝರಿಗಳಿಂದಲೂ, ಅನೇಕವೂ, ಕುಸುಮಾಲಂಕೃತವೂ, ಆದ ಲತಾಗಳಿಂದ ಭೂಷಿತವೂ ಆಗಿದೆ.

೭. ಆ ಗಿರಿಯಲ್ಲಿ ಅನೇಕ ಗುಹೆಗಳಿವೆ. ಅವುಗಳಲ್ಲಿ ಕಿನ್ನರರೇ ಮೊದಲಾದ ದೇವತೆಗಳು ವಾಸಿಸುವರು. ಆ ಗವಿಗಳ ಮುಂದೆ ಚಂದ್ರಕಾಂತ ಶಿಲೆಗಳಿವೆ. ಚಂದ್ರೋದಯವಾದಾಗ ಅವುಗಳಿಂದ ಜಲವು ಸುರಿದು ಪ್ರವಾಹವಾಗಿ ಹರಿಯುವುದು.

ಯಕ್ಷಗಂಧರ್ವಚರಿತೈರನೇಕೈಃ ಕಂದರೋದರೈಃ ।
ಶೋಭಿತಶ್ಚ ಸುಖಾಸೇವ್ಯೈಶ್ಚಿತ್ರೈರ್ಗಹನಸಂಕಟೈಃ ॥ ೮ ॥

ನಾನಾಸತ್ವಗಣಾಕೀರ್ಣೈಃ ಸುಪಾನೀಯೈಃ ಸುಖಾಶ್ರಯೈಃ ।
ನಾನಾಪುಷ್ಪಫಲೋಪೇತೈಃ ಪಾದಪೈಃ ಸಮಲಂಕೃತಃ ॥ ೯ ॥

ತಸ್ಮಿನ್ ಗುಹಾಶ್ರಯಾಕೀರ್ಣೇ ಅನೇಕೋದರಕಂದರೇ ।
ಕ್ರೀಡಾವನಂ ಮಹೇಂದ್ರಸ್ಯ ಸರ್ವಕಾಮಗುಣೈರ್ಯುತಂ ॥ ೧೦ ॥

ತತ್ರ ತದ್ದೇವರಾಜಸ್ಯ ಪಾರಿಜಾತವನಂ ಮಹತ್ ।
ಪ್ರಕಾಶಂ ತ್ರಿಷು ಲೋಕೇಷು ಗೀಯತೇ ಶ್ರುತಿನಿಶ್ಚಯಾತ್ ॥ ೧೧ ॥

ತರುಣಾದಿತ್ಯಸಂಕಾಶೈರ್ಮಹಾಗಂಧೈಃ ಮನೋಹರೈಃ ।
ಪುಷ್ಪೈರ್ಭಾತಿ ನಗಶ್ರೇಷ್ಠಃ ಸುದೀಪ್ತ ಇವ ಸರ್ವಶಃ ॥ ೧೨ ॥

---

೮. ಆ ಪರ್ವತದ ಗವಿಗಳಲ್ಲಿ ಯಕ್ಷರೂ ಗಂಧರ್ವರೂ ವಾಸಿಸುವರು. ಸುಖಕರವೂ, ಚಿತ್ರವೂ, ಆದ ಅನೇಕ ಲತಾಗೃಹಗಳೂ ಅಲ್ಲಿ ಇರುತ್ತವೆ.

೯. ಅದು ವಿವಿಧಪ್ರಾಣಿಗಳಿಗೆ ಆಶ್ರಯವೂ, ಒಳ್ಳೆಯ ಜಲಭರಿತವೂ, ಸುಖದಾಯಕವೂ, ನಾನಾಪುಷ್ಪಗಳಿಂದಲಂಕೃತವೂ, ಆದ ವೃಕ್ಷಗಳಿಂದ ಶೋಭಿಸುತ್ತದೆ.

೧೦. ಆ ಗಿರಿಯಲ್ಲಿ ದೇವತೆಗಳಿಗೆ ವಾಸಾರ್ಹವಾದ ಅನೇಕ ಗವಿಗಳೂ, ಗುಹೆಗಳೂ ಇರುತ್ತವೆ. ಅದರಲ್ಲಿ ಸಕಲೇಷ್ಟಾರ್ಥಗಳನ್ನೂ ಕೊಡತಕ್ಕ ದೇವೇಂದ್ರನ ಕ್ರೀಡಾವನವು ಶೋಭಿಸುತ್ತಿದೆ.

೧೧. ದೇವೇಂದ್ರನ ಆ ಕ್ರೀಡಾವನದಲ್ಲಿ ಮೂರು ಲೋಕಗಳಲ್ಲಿ ಪ್ರಖ್ಯಾತವೂ ಶ್ರುತಿಪ್ರಸಿದ್ಧವೂ, ಮಹತ್ತೂ, ಪ್ರಕಾಶವೂ, ಆದ ಪಾರಿಜಾತವನವು ಇದೆ. ಅದನ್ನು ಎಲ್ಲರೂ ಹೊಗಳುವರು

೧೨. ಇಂತಹ ಬಾಲಸೂರ್ಯನಂತೆ ಕಾಂತಿಯುತವೂ, ಮಹಾಸುವಾಸನೆಯುಳ್ಳದ್ದೂ, ಮನೋಹರವೂ, ವಿಕಸಿತವೂ ಆದ ಆ ಪಾರಿಜಾತಪುಷ್ಪಗಳಿಂದ ಆ ಗಿರಿಯು ಸುತ್ತಲೂ ಕಾಂತಿಯುಕ್ತವಾದಂತೆ ಹೊಳೆಯುತ್ತದೆ.

ಸಮುಗ್ರಂ ಯೋಜನಶತಂ ತಂ ಗಂಧಮನಿಲೋವಹೌ ।
ಪಾರಿಜಾತಕಪುಷ್ಪಾಣಾಂ ಮಾಹೇಂದ್ರವನನಿರ್ಗತಃ ॥ ೧೩ ॥

ವೈದೂರ್ಯನೀಲೈಃ ಕಮಲೈಃ ಸಾವರ್ಣೈರ್ವಜ್ರಕೇಸರೈಃ ।
ಸರ್ವಗಂಧಬಲೋಪೇತೈರ್ಮತ್ತಷಟ್ ಪದನಾದಿತೈಃ ॥ ೧೪ ॥

ವ್ಯಾಕೋಶೈರ್ವಿಕಚೈಶ್ಚಾಪಿ ಶತಪತ್ರೈರ್ಮನೋಹರೈಃ ।
ಸಪಂಕಜೈರ್ಮಹಾಪತ್ರೈರ್ವಾಪ್ಯಸ್ತತ್ರ ವಿಭೂಷಿತಾಃ ॥ ೧೫ ॥

ವಿರೇಜುರಂತರಂಬುಸ್ಥಾಃ ಸೌವರ್ಣ ಮಣಿಭೂಷಿತಾಃ ।
ಪರಿಸ್ಪಂದೇಕ್ಷಣಾ ನಿತ್ಯಂ ಮೀನಯೂಥಾಃ ಸಹಸ್ರಶಃ ॥ ೧೬ ॥

ಕೂರ್ಮಾಶ್ಚಾನೇಕಸಂಸ್ಥಾನೈರ್ಹೇಮರತ್ನ ಪರಿಷ್ಕೃತೈಃ ।
ಚಂಚೂರ್ಯಮಾಣೈಃ ಸಲಿಲೈರ್ಭಾತಿ ಚಿತ್ರಂ ಸಮಂತತಃ ॥ ೧೭ ॥

---

೧೩. ಆ ದೇವೇಂದ್ರನ ನಂದನವನದಲ್ಲಿರುವ ಪಾರಿಜಾತಪುಷ್ಪಗಳ ಸುವಾಸನೆಯು ಗಾಳಿಯು ಬೀಸುವುದರಿಂದ ನೂರಾರು ಯೋಜನಗಳವರೆಗೂ ವ್ಯಾಪ್ತವಾಗಿರುವುದು.

೧೪-೧೫. ಆ ದೇವೇಂದ್ರನ ನಂದನವನದಲ್ಲಿ ಅನೇಕ ಕೊಳಗಳಿವೆ ಅವುಗಳಲ್ಲಿ ವೈಡೂರ್ಯದಂತೆ ಕಾಂತಿಯುಕ್ತವೂ, ಸುವರ್ಣಮಯವೂ, ವಜ್ರಕ್ಕೆಸಮಾನ ಕೇಸರಗಳುಳ್ಳದ್ದೂ, ವಿವಿಧಗಂಧೋಪೇತವೂ, ಮದಿಸಿದ ಜೇನುಹುಳುಗಳ ಝೇಂಕಾರ ಸಹಿತವೂ, ವಿಕಸಿತವೂ, ಮನೋಹರವೂ ಆದ ಕಮಲಕಲ್ಹಾರಪುಷ್ಪಗಳೂ, ನೈದಲೇ ಕುಸುಮಗಳೂ, ಪತ್ರಸಹಿತವಾಗಿ ಶೋಭಿಸುತ್ತವೆ

೧೬. ಆ ಕೊಳಗಳಲ್ಲಿ ಸುವರ್ಣಮಣಿಗಳಿಂದಲಂಕೃತವೂ, ಚಂಚಲಾಕ್ಷಿಗಳೂ, ಆದ ಮೀನುಗಳ ಸಂಘಗಳು ಅಲ್ಲಿಂದಿಲ್ಲಿಗೆ ಸದಾ ಸಂಚರಿಸುತ್ತಾ ಅಲಂಕರಿಸುತ್ತವೆ.

೧೭. ಸುವರ್ಣರತ್ನಗಳಿಂದಲಂಕೃತಗಳೂ, ಅನೇಕವಿಧಗಳೂ, ಜಲದಲ್ಲಿ ಸದಾ ಸಂಚಾರಿಗಳೂ ಆದ ಆಮೆಗಳು ಕೊಳಗಳನ್ನು ವಿಚಿತ್ರರೀತಿಯಿಂದ ಅಲಂಕರಿಸುತ್ತವೆ.

ನಾನಾವರ್ಣೈಶ್ಚ ಶಕುನೈರ್ನಾನಾರತ್ನ ರತ್ನ ತನೂರುಹೈಃ ।
ಸುವರ್ಣಪುಷ್ಪೈಶ್ಚಾನೇಕೈರ್ಮಣಿತುಂಡೈರ್ದ್ವಿಜಾತಿಭಿಃ ॥ ೧೮ ॥

ವಲ್ಗುಸ್ವರೈಃ ಸದೋನ್ಮತ್ತೈಃ ಸಂಪತದ್ಭಿಃ ಸಮಂತತಃ ।
ಶುಶುಭೇ ತದ್ವನಂ ರಮ್ಯಂ ಸಹಸ್ರಾಕ್ಷಸ್ಯ ಧೀಮತಃ ॥ ೧೯ ॥

ಮತ್ತಭ್ರಮರುಸನ್ನಾದೈರ್ವಿಹಂಗಾನಾಂಚ ಕೂಜಿತೈಃ ।
ನಿತ್ಯಮಾನಂದಿತವನಂ ತಸ್ಮಾತ್ ಕ್ರೀಡಾವನಂ ಮಹತ್ ॥ ೨೦ ॥

ಸುವರ್ಣಪಾರ್ಶ್ವೈಶ್ಚ ನಗೈರ್ಮಣಿ ಮುಕ್ತಾಪುರಸ್ಕೃತೈಃ ।
ಮಣಿಶೃಂಗಕಲಾಪನ್ನೈಃ ಪತದ್ಭಿಶ್ಚ ಸಮಂತತಃ ॥ ೨೧ ॥

ಶಾಖಾಮೃಗೈಶ್ಚ ಚಿತ್ರಾಂಗೈರ್ನಾನಾರತ್ನ ತನೂರುಹೈಃ ।
ನಾನಾವರ್ಣಪ್ರಕಾರೈಶ್ಚ ಸತ್ವೈರನ್ಯೈಃ ಸಮಾಕುಲಂ ॥ ೨೨ ॥

---

೧೮-೧೯. ನಾನಾರತ್ನ ಖಚಿತವಾದ ರೆಕ್ಕೆಗಳುಳ್ಳವೂ, ವಿವಿಧವರ್ಣವುಳ್ಳವೂ ಆದ ವಿವಿಧಪಕ್ಷಿಗಳೂ, ಸುವರ್ಣಮಯವಾದ ಪುಷ್ಪಗಳೂ, ರತ್ನ ತುಂಡಗಳಾದ ಶುಕಾದಿಗಳೂ, ಮನೋಹರವಾಗಿ ಗಾನಮಾಡುವುವೂ, ಉನ್ಮತ್ತಗಳೂ ಆದ ಪಿಕಾರಾದಿಗಳೂ ಕೂಡ, ಅಲ್ಲಿಂದಿಲ್ಲಿಗೆ ಹಾರಾಡುತ್ತಾ ಜ್ಞಾನಿಯಾದ ದೇವೇಂದ್ರನ ರಮ್ಯವಾದ ಆ ವನವನ್ನು ಪ್ರಕಾಶಗೊಳಿಸುತ್ತವೆ.

೨೦. ಮದಿಸಿದ ದುಂಬಿಗಳ ಧ್ವನಿಗಳೂ, ಪಕ್ಷಿಗಳ ಇಂಪಾದ ಕೂಜಿತಗಳೂ ಸಹ ಸರ್ವಕಾಲದಲ್ಲಿಯೂ ಆ ವನದಲ್ಲಿರುವುದರಿಂದ ಆ ಉಪವನವು ಕ್ರೀಡಾವನವಾಗಿರುತ್ತದೆ

೨೧. ಆ ಪರ್ವತದ ನಾಲ್ಕು ಭಾಗಗಳೂ ಸುವರ್ಣರತ್ನ ಮುತ್ತು ಮಣಿ ಇವುಗಳಿಂದ ಅಲಂಕೃತವಾಗಿಯೂ, ರಮ್ಯವಾಗಿಯೂ ಇದ್ದುವು. ರತ್ನ ಖಚಿತವಾದ ಶಿಖರಗಳಿಂದ ಸಹಿತವೂ, ಸಂಚರಿಸುವುವೂ ಆದ ಗಿರಿಗಳು ಶೋಭಿಸುತ್ತವೆ.

೨೨. ಆ ಉದ್ಯಾನವನದಲ್ಲಿ ಕಪಿಗಳು ವಿಚಿತ್ರವಾದ ಅವಯವಗಳಿಂದಲೂ, ನಾನಾರತ್ನಮಯಕೇಶಗಳಿಂದಲೂ ಕೂಡಿ ಸಂಚರಿಸುತ್ತಿದ್ದವು. ಮತ್ತು ನಾನಾವರ್ಣಗಳೂ, ಆಕಾರಗಳೂ, ಆದ ವಿವಿಧಪ್ರಾಣಿಗಳಿಂದ ಆ ವನವು ವ್ಯಾಪ್ತವಾಗಿತ್ತು.

ಮುಂಚಂತಿ ಪುಷ್ಪವರ್ಷಂಚ ತತ್ರ ಬಾಲಲತಾದ್ರುಮಾಃ ।
ಪಾರಿಜಾತಕಪುಷ್ಪಾಣಾಂ ಮಂದಮಾರುತ ಕಂಪಿತಾಃ ॥ ೨೩ ॥

ಶಯನಾಸನನಿರ್ವ್ಯೂಹ್ಯೈಃ ಸ್ತೀರ್ಣೈರ್ ರತ್ನವಿಭೂಷಿತೈಃ ।
ವಿಹಾರಭೂಮಯಸ್ತತ್ರ ದ್ವಿಜಾಃ ಶಕ್ರವನೇ ಶುಭಾಃ ॥
ನ ಚ ಶೀತೋ ನ ಚಾಪ್ಯುಷ್ಣೋ ರವಿಸ್ತತ್ರ ಸಮಃ ಸದಾಃ ॥ ೨೪ ॥

ನಿತ್ಯಮುನ್ಮಾದಜನನೋ ಮಧುಮಾಧವಸಂಭವಃ ।
ವಾತಿ ಚಾಪಿನಿಲಸ್ತತ್ರ ನಾನಾಪುಷ್ಪಾಧಿವಾಸಿತಃ ।
ನಿತ್ಯಂ ಸಂಗಸುಖಾಹ್ಲಾದೀ ಶ್ರಮಕ್ಲಮವಿನಾಶನಃ ॥ ೨೫ ॥

ತಸ್ಮಿಂನ್ನಿಂದ್ರವನೇ ಶುಭ್ರೇ ದೇವದಾನವಪನ್ನಗಾಃ ।
ಯಕ್ಷರಾಕ್ಷಸಗುಹ್ಯಾಶ್ಚ ಗಂಧರ್ವಾಶ್ಚಾಮಿತೌಜಸಃ ॥ ೨೬ ॥

ವಿದ್ಯಾಧರಾಶ್ಚ ಸಿದ್ಧಾಶ್ಚ ಕಿನ್ನರಾಶ್ಚ ಮುದಾಯುತಾಃ ।
ಅಥಾಪ್ಸರೋಗಣಾಶ್ಚೈವ ನಿತ್ಯಂ ಕ್ರೀಡಾಪರಾಯಣಾಃ ॥ ೨೭ ॥

---

೨೩. ಆ ವನದಲ್ಲಿರುವ ಬಾಲಲತೆಗಳೂ, ವೃಕ್ಷಗಳೂ, ಪಾರಿಜಾತಾದಿವೃಕ್ಷಗಳೂ ಮಂದಮಾರುತದಿಂದ ಅಲ್ಲಾಡಿಸಲ್ಪಟ್ಟು ಪುಷ್ಪವೃಷ್ಟಿಯನ್ನು ಸುರಿಸುತ್ತವೆ.

೨೪. ದೇವೇಂದ್ರವನದ ಭೂಭಾಗವು ವಿಸ್ತೀರ್ಣವೂ, ವಿಶಾಲವೂ ಆದ ಶಯನಾಸನಗಳಿಂದಲೂ, ವಿಹಾರಭೂಮಿಗಳಿಂದಲೂ, ಪಕ್ಷಿಗಳಿಂದಲೂ ಭೂಷಿತವಾಗಿದ್ದಿತು. ಸೂರ್ಯನು ಆ ನಂದನವನದಲ್ಲಿ ಅತ್ಯುಷ್ಣವನ್ನು, ಅತಿಶೀತವನ್ನೂ ಉಂಟುಮಾಡದೇ ಸಮಶೀತೋಷ್ಣವಾಗಿಯೇ ಇರುವನು

೨೫. ಆ ನಂದನವನದಲ್ಲಿ ಮಂದಮಾರುತವು ಸದಾಕಾಲದಲ್ಲಿಯೂ, ವಸಂತಕಾಲದಂತೆ ವಿಕಾರಜನಕವಾಗಿಯೂ, ನಾನಾಪುಷ್ಪಗಳಿಂದ ಸುವಾಸನೆಯಾಗಿಯೂ, ಶ್ರಮಪರಿಹಾರಕವಾಗಿಯೂ, ಆಹ್ಲಾದಜನಕವಾಗಿಯೂ ಬೀಸುತ್ತದೆ.

೨೬-೨೭. ದೇವೇಂದ್ರನ ಆ ನಂದನವನದಲ್ಲಿ ದೇವದಾನವಪನ್ನಗಳೂ, ಯಕ್ಷರಾಕ್ಷಸಗುಹ್ಯಕರೂ, ಗಂಧರ್ವರೂ, ವಿದ್ಯಾಧರರೂ, ಸಿದ್ಧರೂ, ಕಿನ್ನರರೂ, ಅಪ್ಸರಸಿಯರು ಇವರು ಯಾವಾಗಲೂ ಕ್ರೀಡಾಸಕ್ತರೂ, ಸಂತೋಷಯುಕ್ತರೂ ಆಗಿರುವರು.

ತಸ್ಯ ಪರ್ವತರಾಜಸ್ಯ ಪೂರ್ವೇ ಪಾರ್ಶ್ವೇ ಮಹೋಚಿತಂ ।
ಕುಮುಂಜಂ ಶೈಲರಾಜಾನಂ ನೈಕನಿರ್ಜರಕಂದರಂ ॥ ೨೮ ॥

ತಸ್ಯ ಧಾತುವಿಚಿತ್ರೇಷು ಕೂಟೇಷು ಬಹುವಿಸ್ತರಾಃ ।
ಅಷ್ಟೌ ಪುರ್ಯೋ ಹ್ಯುದೀರ್ಣಾಶ್ಚ ದಾನವಾನಾಂ ಮಹಾತ್ಮನಾಂ ॥ ೨೯ ॥

ವಜ್ರಕೇ ಪರ್ವತೇ ಚಾಪಿ ಅನೇಕಶಿಖರೋದರೈಃ ।
ಉದೀರ್ಣಾ ರಾಕ್ಷಸಾವಾಸಾ ನರನಾರೀಸಮಾಕುಲಾಃ ॥ ೩೦ ॥

ನೀಲಕಾ ನಾಮತೇ ಘೋರಾ ರಾಕ್ಷಸಾಃ ಕಾಮರೂಪಿಣಃ ।
ತತ್ರ ತೇಭಿರತಾ ನಿತ್ಯಂ ಮಹಾಬಲಪರಾಕ್ರಮಾಃ ॥ ೩೧ ॥

ಮಹಾನೀಲೇಪಿ ಶೈಲೇಂದ್ರೇ ಪುರಾಣಿ ದಶಪಂಚ ಚ ।
ಹಯಾನನಾನಾಂ ವಿಖ್ಯಾತಾಃ ಕಿನ್ನರಾಣಾಂ ಮಹಾತ್ಮನಾಂ ॥ ೩೨ ॥

---

೨೮. ಆ ಮಹಾಮೇರುವಿನ ಪೂರ್ವದಿಗ್ಭಾಗದಲ್ಲಿ ಅತ್ಯುತ್ತಮವೂ, ಅನೇಕ ಝರಿಗಳಿಂದ ಯುಕ್ತವೂ ಆದ ಕುಮುಂಜವೆಂಬ ಪರ್ವತರಾಜನಿರುವನು.

೨೯. ಆ ಕುಂಜಗಿರಿಯು ಬಹುವಿಸ್ತಾರವೂ, ಧಾತುಗಳಿಂದ ವಿಚಿತ್ರವೂ ಆದ ಶಿಖರಗಳಲ್ಲಿ ಮಹಾತ್ಮರಾದ ದಾನವರ ವಿಶಾಲವಾದ ಎಂಟು ನಗರಿಗಳು ಶೋಭಿಸುತ್ತಿವೆ.

೩೦ ಹಾಗೆಯೇ ಅನೇಕ ಶಿಖರಗಳು, ಗುಹೆಗಳು ಇವುಗಳಿಂದ ಕೂಡಿದ ವಜ್ರಕವೆಂಬ ಗಿರಿಯಲ್ಲಿಯೂ ಕೂಡ ಸ್ತ್ರೀಪುರುಷರಿಂದ ವ್ಯಾಪ್ತವೂ, ವಿಶಾಲವೂ ಆದ ಅನೇಕ ಗೃಹಗಳು ಶೋಭಿಸುತ್ತಿರುವುವು.

೩೧. ಆ ವಜ್ರಕಪರ್ವತದಲ್ಲಿ ಭಯಂಕರರೂ ಕಾಮರೂಪಿಗಳೂ ಮಹಾಬಲ ಪರಾಕ್ರಮಿಗಳೂ ನೀಲನಾಮಕರೂ ಆದ ರಾಕ್ಷಸರು ಸದಾಕಾಲದಲ್ಲಿಯೂ ಸುಖವಾಗಿ ವಾಸಮಾಡುವರು.

೩೨. ಮಹಾನೀಲಪರ್ವತದ ಅತಿ ವಿಶಾಲವಾದ ಶಿಬರಗಳಲ್ಲಿ ಮಹಾತ್ಮರೂ ಅಶ್ವಮುಖಿಗಳೂ ಆದ ಕಿನ್ನರರ ಹದಿನೈದು ನಗರಿಗಳು ಪ್ರಖ್ಯಾತವಾಗಿವೆ.

ದೇವಸೇನೋ ಮಹಾಬಾಹುರ್ಬಲಮಿಂದ್ರಾದಯಸ್ತಥಾ ।
ತತ್ರ ಕಿನ್ನರರಾಜಾನೋ ದಶಪಂಚ ಚ ಗರ್ವಿತಾಃ ॥ ೩೩ ॥

ಸುಪರ್ಣಪಾರ್ಶ್ವಾಃ ಪ್ರಾಯೇಣ ನಾನಾವರ್ಣಸಮಾಕುಲೈಃ ।
ಬಿಲಪ್ರವೇಶೈರ್ನಗರೈಃ ಶೈಲೇಂದ್ರಃ ಸೋಽಭ್ಯಲಂಕೃತಃ ॥ ೩೪ ॥

ಅತಿದಾರುಣಾ ದೃಷ್ಟಿವಿಷಾ ಹ್ಯಗ್ನಿಕೋಪ ದುರಾಸದಾಃ ।
ಮಹೋರಗಶತಾಸ್ತತ್ರ ಸುವರ್ಣವಶವರ್ತಿನಃ ॥ ೩೫ ॥

ಸುನಾಗೇಪಿ ಮಹಾಶೈಲೇ ದೈತ್ಯಾವಾಸಾಃ ಸಹಸ್ರಶಃ ।
ಹರ್ಮ್ಯಪ್ರಾಸಾದಕಲಿಲಾಃ ಪ್ರಾಂಶುಪ್ರಾಕಾರತೋರಣಾಃ ॥ ೩೬ ॥

ವೇಣುಮಂತೇ ಮಹಾಶೈಲೇ ವಿದ್ಯಾಧರಪುರತ್ರಯಂ ।
ತ್ರಿಂಶದದ್ಯೋಜನವಿಸ್ತೀರ್ಣಂ ಪಂಚಾಶದ್ಯೋಜನಾಯುತಂ ॥ ೩೭ ॥

---

೩೩. ಮಹಾಬಲಶಾಲಿಯಾದ ದೇವಸೇನನೂ ಇಂದ್ರಾದಿ ದೇವತೆಗಳೂ ಮತ್ತು ಕಿನ್ನರರಾಜರೂ ಸಹ ಹದಿನೈದು ನಗರಿಗಳಲ್ಲಿ ಪ್ರಖ್ಯಾತರಾಗಿ ವಾಸಿಸುವರು.

೩೪. ಆ ಗಿರಿವರವು ಸುವರ್ಣಮಯ ವಾದ ಪಾರ್ಶ್ವಗಳುಳ್ಳದ್ದಾಗಿದೆ. ನಾನಾ ವರ್ಣಗಳಿಂದ ಕೂಡಿದ ಗವಿಗಳಲ್ಲಿ ನಾನಾ ನಗರಿಗಳು ಪ್ರಕಾಶಿಸುತ್ತವೆ. ಇಂತಹ ನಗರಿಗಳಿಂದ ಆ ಪರ್ವತವು ಅಲಂಕೃತವಾಗಿದೆ.

೩೫. ಆ ಪರ್ವತದ ಗವಿಗಳಲ್ಲಿ ಅತಿ ಭಯಂಕರಗಳೂ ದರ್ಶನಮಾತ್ರದಿಂದ ಮಾರಕಗಳೂ ಅಗ್ನಿಕೋಪಿಗಳೂ ಹೊಂದಲಶಕ್ಯವೂ ಆದ ನೂರಾರು ಹೆಬ್ಬಾವುಗಳು ಸದಾ ವಾಸಮಾಡುತ್ತಿವೆ.

೩೬. ಸುನಾಗವೆಂಬ ಮಹಾಪರ್ವತದಲ್ಲಿ ಸಾವಿರಾರು ದೈತ್ಯರು ನಾನಾವಿಧ ತೋರಣಗಳಿಂದಲಂಕೃತವೂ ವಿಚಿತ್ರವೂ ಆದ ಅನೇಕ ರಾಜಭವನಗಳಲ್ಲಿಯೂ ಉಪ್ಪರಿಗೆ ಮನೆಗಳಲ್ಲಿಯೂ ಯಾವಾಗಲೂ ವಾಸಿಸುವರು.

೩೭. ಅತಿ ವಿಶಾಲವಾದ ವೇಣುಮಂತವೆಂಬ ಮಹಾಪರ್ವತದಲ್ಲಿ ವಿಧ್ಯಾಧರರ ಪುರತ್ರಯಗಳಿವೆ. ಅವು ಮೂವತ್ತುಯೋಜನ ವಿಸ್ತೀರ್ಣವಾಗಿಯೂ ಐವತ್ತು ಯೋಜನ ಉದ್ದವಾಗಿಯೂ ಇರುತ್ತವೆ

ಉಲೂಕೋ ರೋಮಶಶ್ಚೈವ ಮಹಾನೇತ್ರಶ್ಚ ವೀರ್ಯವಾನ್ ।
ವಿದ್ಯಾಧರವರಾಸ್ತತ್ರ ಶಕ್ರತುಲ್ಯ ಪರಾಕ್ರಮಾಃ ॥ ೩೮ ॥

ವೈಕಂಕೇ ಶೈಲಶಿಖರೇ ಹ್ಯಂತಃಕಂದರನಿರ್ಝರೇ ।
ಮಹೋಚ್ಚ ಶೃಂಗೇ ರುಚಿರೇ ರತ್ನಧಾತುವಿಚಿತ್ರಿತೇ ॥ ೩೯ ॥

ತತ್ರಾಸ್ತೇ ಗಾರುಡಿರ್ನಿತ್ಯಂ ಉರಗಾರಿರ್ದುರಾಸದಃ ।
ಮಹಾವಾಯುಜವಶ್ಚಂಡಃ ಸುಗ್ರೀವೋ ನಾಮ ವೀರ್ಯವಾನ್ ॥ ೪೦ ॥

ಮಹಾಪ್ರಮಾಣೈರ್ವಿಕ್ರಾಂತೈರ್ಮಹಾಬಲಪರಾಕ್ರಮೈಃ ।
ಸ ಶೈಲೋ ಹ್ಯಾವೃತಃ ಸರ್ವಃ ಪಕ್ಷಿಭಿಃ ಪನ್ನಗಾರಿಭಿಃ ॥ ೪೧ ॥

ಕರಂಜೋಭಿರತೋ ನಿತ್ಯಂ ಸಾಕ್ಷಾದ್ಭೂತಪತಿಃ ಪ್ರಭುಃ ।
ವೃಷಭಾಂಕೋ ಮಹಾದೇವಃ ಶಂಕರೋ ಯೋಗಿನಾಂ ಪ್ರಭುಃ ॥ ೪೨ ॥

---

೩೮ ಆ ಮೂರು ನಗರಗಳಲ್ಲಿಯೂ ಇಂದ್ರನಿಗೆ ಸಮಪರಾಕ್ರಮಿಗಳೂ ಅತಿ ಶೂರರೂ ಆದ ಉಲೂಕ, ರೋಮಶ, ಮಹಾನೇತ್ರರೆಂಬ ಮೂವರು ವಿದ್ಯಾಧರೋತ್ತಮರು ವಾಸಿಸುವರು

೩೯-೪೦. ವೈಕಂಕವೆಂಬ ಪರ್ವತದಲ್ಲಿ ಅನೇಕ ಶಿಖರಗಳಿವೆ. ಅವುಗಳಲ್ಲಿ ಅನೇಕ ಗುಹೆಗಳೂ ಅನೇಕ ಝರಿಗಳೂ ಇವೆ. ಅವುಗಳಲ್ಲಿ ರತ್ನಧಾತುಗಳಿಂದ ಚಿತ್ರಿತವೂ ಮನೋಹರವೂ ಆದ ಒಂದು ಶಿಖರದಲ್ಲಿ ಸರ್ಪಗಳ ವೈರಿಯೂ ದುರ್ಧರ್ಷನೂ ವಾಯುವೇಗವುಳ್ಳವನೂ ಕ್ರೂರನೂ ವೀರ್ಯವಂತನೂ ಸುಗ್ರೀವನಾಮಕನೂ ಆದ ಗರುಡದೇವನು ವಾಸಮಾಡುತ್ತಿರುವನು.

೪೧. ಆ ಪರ್ವತದಲ್ಲಿ ಅತಿ ದೊಡ್ಡದಾದ ಆಕಾರವುಳ್ಳವೂ ಮಹತ್ತಾದ ವೀರ್ಯ, ಶೌರ್ಯ, ಪರಾಕ್ರಮ ಇವುಗಳುಳ್ಳವೂ ನಾಗಾರಿಗಳೂ ಆದ ಅನೇಕ ಪಕ್ಷಿಗಳು ಸರ್ವಕಾಲದಲ್ಲಿಯೂ ವಾಸಿಸುತ್ತವೆ.

೪೨. ಕರಂಜನಾಮಕವಾದ ಪರ್ವತೋತ್ತಮದಲ್ಲಿ ಭೂತಪತಿಯೂ ಸ್ಥಾಯಿಯೂ ವೃಷಭಧ್ವಜನೂ ಯೋಗಿವರ್ಯನೂ ಮಹಾದೇವನೂ ಆದ ಶಂಕರನು ಸಾಕ್ಷಾತ್ತಾಗಿ ವಾಸಮಾಡುವನು.

ನಾನಾವೇಷಧರೈರ್ಭೂತೈಃ ಪ್ರಮಥೈಶ್ಚ ದುರಾಸದೈಃ ।
ಕರಂಜೇ ಸಾನವಃ ಸರ್ವೇ ಹ್ಯವಕೀರ್ಣಾಃ ಸಮಂತತಃ ॥ ೪೩ ॥

ವಸುಧಾರೇ ವಸುಮತಾಂ ವಸುನಾಮ ಮಿತೌಜಸಾಂ ।
ಅಷ್ಟಾವಾಯತನಾನ್ಯಾಹುಃ ಪೂಜಿತಾನಿ ಮಹಾತ್ಮನಾಂ ॥ ೪೪ ॥

ರತ್ನಧಾರೌ ಗಿರಿವರೇ ಋಷೀಣಾಂಚ ಮಹಾತ್ಮನಾಂ ।
ಸಪ್ತಾಶ್ರಮಾಣಿ ಪುಣ್ಯಾನಿ ಸಿದ್ಧಾವಾಸಯುತಾನಿ ಚ ॥ ೪೫ ॥

ಮಹಾಪ್ರಜಾಪತೇಃ ಸ್ಥಾನಂ ಹೇಮಶೃಂಗೇ ನಗೋತ್ತಮೇ ।
ಚಾತುರ್ವಕ್ತ್ರಸ್ಯ ದೇವಸ್ಯ ಸರ್ವಭೂತನಮಸ್ಕೃತಾಃ ॥ ೪೬ ॥

ಗಜಶೈಲೇ ಭಗವತೋ ನಾನಾಭೂತಗಣಾವೃತಾಃ ।
ರುದ್ರಾಃ ಪ್ರಮುದಿತಾಃ ನಿತ್ಯಂ ಸರ್ವಭೂತ ನಮಸ್ಕೃತಾಃ ॥ ೪೭ ॥

---

೪೩. ಆ ಕರಂಜಪರ್ವತ ತಪ್ಪಲುಗಳಲ್ಲಿ ನಾನಾವೇಷಧಾರಿಗಳೂ ಸುರಾಸರರೂ ಆದ ಭೂತಗಳೂ ಪ್ರಮಥಗಣಗಳೂ ಸಹ ವ್ಯಾಪ್ತವಾಗಿರುತ್ತವೆ.

೪೪. ವಸುಧಾರನಾಮಕವಾದ ಗಿರಿಯಲ್ಲಿ ಅ ಮಿ ತ ಪ ರಾ ಕ್ರ ಮಿ ಗಳೂ ಶ್ರೀಮಂತರೂ ಆದ ಅಷ್ಟವಸುಗಳು ಮಹಾತ್ಮರಿಂದ ಪೂಜಿತವಾದ ಎಂಟು ದೇವಾಲಯಗಳು ಸುಪ್ರಸಿದ್ಧಗಳಾಗಿವೆ.

೪೫. ರತ್ನಧಾತುನಾಮಕವಾದ ಗಿರಿವರದಲ್ಲಿ ಮಹಾತ್ಮರಾದ ಮಹರ್ಷಿಗಳ ಪವಿತ್ರಗಳೂ ಸಿದ್ಧರ ಆವಾಸದಿಂದ ಯುತವೂ ಆದ ಏಳು ಆಶ್ರಮಗಳು ಲೋಕವಿಖ್ಯಾತಗಳಾಗಿವೆ.

೪೬. ಹೇಮಶೃಂಗವೆಂಬ ಪರ್ವತೋತ್ತಮದಲ್ಲಿ ಸಕಲ ಭೂತಪತಿಯೂ ಚತುರ್ಮುಖನೂ ಆದ ಬ್ರಹ್ಮದೇವನ ಸರ್ವಭೂತವಂದಿತವಾದ ದೇವಾಲಯವು ಪ್ರಜ್ವಲಿಸುತ್ತಿದೆ.

೪೭. ಗಜಶೈಲದಲ್ಲಿ ಪರಮೇಶ್ವರನ ಕಿಂಕರರೂ ಸರ್ವಭೂತವಂದಿತರೂ ಸಂತೋಷಯುತರೂ ಆದ ಏಕಾದಶರುದ್ರರೂ ನಾನಾಭೂತಗಳ ಗಣಗಳೂ ಸಹ ವಾಸ ಮಾಡುತ್ತವೆ.

**ಸುಮೇಧೇ ಧಾತುಚಿತ್ರಾಢ್ಯೇ ಶೈಲೇಂದ್ರೇ ಮೇಘಸನ್ನಿಭೇ ।**
**ನೈಕೋದರದರೀವಪ್ರನಿಕುಂಜೈಶ್ಶೋಪಶೋಭಿತೇ ॥ ೪೮ ॥**

**ಆದಿತ್ಯಾನಾಂ ವಸೂನಾಂ ಚ ರುದ್ರಾಣಾಂ ಚಾಮಿತೌಜಸಾಂ ।**
**ತತ್ರಾಯತನವಿನ್ಯಾಸೌ ರಮ್ಯಾಶ್ಚೈವಾಶ್ವಿನೋರಪಿ ॥ ೪೯ ॥**

**ಸ್ಥಾನಾನಿ ಸಿದ್ಧೈರ್ದೇವಾನಾಂ ಸ್ಥಾಪಿತಾನಿ ನಗೋತ್ತಮೇ ।**
**ತತ್ರ ಪೂಜಾಪರಾ ನಿತ್ಯಂ ಯಕ್ಷಗಂಧರ್ವಕಿನ್ನರಾಃ ॥ ೫೦ ॥**

**ಗಂಧರ್ವನಗರೀ ಸ್ಫೀತಾ ಹೇಮಕಕ್ಷೇ ನಗೋತ್ತಮೇ ।**
**ಅಶೀತ್ಯಾಮರಪುರ್ಯಾಭಾ ಮಹಾಪ್ರಾಕಾರತೋರಣಾ ॥ ೫೧ ॥**

**ಸಿದ್ಧಾ ಹ್ಯಪತ್ತನಾ ನಾಮ ಗಂಧರ್ವಾ ಯುದ್ಧಶಾಲಿನಃ ।**
**ಯೇಷಾಮಧಿಪತಿರ್ದೇವೋ ರಾಜರಾಜಃ ಕಪಿಂಜಲಃ ॥ ೫೨ ॥**

---

೪೮-೪೯. ಧಾತುಗಳಿಂದ ಚಿತ್ರವೂ, ಆಢ್ಯವೂ, ಪರ್ವತೋತ್ತಮವೂ, ಮೇಘಸಮಾನವೂ, ಅಸಂಖ್ಯಾಕವಾದ ಗವಿ, ಗುಹೆ, ವಪ್ರಲತಾಗೃಹ ಇವುಗಳಿಂದ ಭೂಷಿತವೂ ಆದ ಸುಮೇಧವೆಂಬ ಪರ್ವತೋತ್ತಮದಲ್ಲಿ ದ್ವಾದಶಾದಿತ್ಯರೂ, ಅಷ್ಟವಸುಗಳೂ, ಏಕಾದಶರುದ್ರರೂ, ಅಮಿತತೇಜಸ್ಕರೂ ಆದ ಅಶ್ವಿನೀದೇವತೆಗಳೂ, ಇವರ ರಮ್ಯವಾದ ದೇವಾಲಯಗಳು ಕಂಗೊಳಿಸುತ್ತವೆ.

೫೦. ಸಿದ್ಧಪುರುಷರು ಆ ಪರ್ವತೋತ್ತಮಗಳಲ್ಲಿ ದೇವತೆಗಳಿಗೋಸ್ಕರ ನಾನಾದೇವಾಲಯಗಳನ್ನು ನಿರ್ಮಿಸಿರುವರು. ಅಲ್ಲಿ ಯಕ್ಷರು, ಗಂಧರ್ವರು, ಕಿನ್ನರರೂ ಕೂಡ ಭಗವಂತನ ಪೂಜೆಯಲ್ಲಿ ಸದಾ ಆಸಕ್ತರಾಗಿರುವರು.

೫೧. ಹೇಮಕೂಟವೆಂಬ ಪರ್ವತೋತ್ತಮದಲ್ಲಿ ಅತಿವಿಶಾಲವಾದ ಗಂಧರ್ವನಗರಿಯು ಇದೆ ಅದು ಕೋಟೆಕೊತ್ತಳಗಳಿಂದಸಹಿತವೂ, ಎಂಬತ್ತು ಯೋಜನ ವಿಸ್ತೀರ್ಣವೂ, ದೇವೇಂದ್ರನ ಅಮರಾವತಿಯಂತೆ ಕಾಂತಿಯುತವೂ ಆಗಿ ಶೋಭಿಸುತ್ತಿದೆ.

೫೨ ಆ ನಗರಿಯಲ್ಲಿ ಸಿದ್ಧಪುರುಷರೂ, ಅಪತ್ತನಾಮಕರೂ, ಯುದ್ಧದಲ್ಲಿ ಶೂರರೂ ಆದ ಗಂಧರ್ವರೂ ವಾಸಿಸುವರು. ಅವರಿಗೆ ಅಧಿಪತಿಯೂ, ದೇವನೂ, ಕಪಿಂಜಲನಾಮಕನೂ ಆದ ಕುಬೇರನು ಯಜಮಾನನಾಗಿರುವನು

ಅನಲೇ ರಾಕ್ಷಸಾವಾಸಾಃ ಪಂಚಕೂಟೇಽಪಿ ದಾನವಾಃ ।
ಊರ್ಜಿತಾಃ ದೇವರಿಪವೋ ಮಹಾಬಲಪರಾಕ್ರಮಾಃ ॥ ೫೩ ॥

ಶತಶೃಂಗೇ ಪುರಶತಂ ಯಕ್ಷಾಣಾಮಮಿತೌಜಸಾಂ ।
ತಾಮ್ರಾಭೇ ಕಾದ್ರವೇಯಸ್ಯ ತಕ್ಷಕಸ್ಯ ಪುರೋತ್ತಮಂ ॥ ೫೪ ॥

ವಿಶಾಖೇ ಪರ್ವತಶ್ರೇಷ್ಠೇ ನೈಕವಪ್ರದರೀಶುಭೇ ।
ಗುಹಾನಿರತವಾಸಸ್ಯ ಗುಹಸ್ಯಾಯತನಂ ಮಹತ್ ॥ ೫೫ ॥

ಶ್ವೇತೋದರೇ ಮಹಾಶೈಲೇ ಮಹಾಭವನಮಂಡಿತೇ ।
ಪುರಂ ಗರುಡಪುತ್ರಸ್ಯ ಸುನಾಭಸ್ಯ ಮಹಾತ್ಮನಃ ॥ ೫೬ ॥

---

೫೩. ಅಗ್ನಿಪರ್ವತದಲ್ಲಿ ರಾಕ್ಷಸರೂ, ಪಂಚಕೂಟದಲ್ಲಿ ದಾನವರೂ ವಾಸಿಸುವರು. ಅವರು ಮಹಾಬಲಿಷ್ಠರೂ, ಪರಾಕ್ರಮಿಗಳೂ, ಊರ್ಜಿತರೂ, ದೇವರಿಪುಗಳೂ ಆಗಿರುವರು.

೫೪. ಶತಶೃಂಗಗಿರಿಯಲ್ಲಿ ಮಹಾಶೂರರಾದ ಯಕ್ಷರ ನೂರಾರು ನಗರಗಳಿವೆ. ತಾಮ್ರಕೂಟದಲ್ಲಿ ಕದ್ರೂದೇವಿಯ ಪುತ್ರನಾದ ತಕ್ಷಕನ ಉತ್ತಮವಾದ ನಗರಿಯು ಶೋಭಿಸುತ್ತಿದೆ.

೫೫. ಅಸಂಖ್ಯಾಕವಾದ ಕೋಟೆಕೊತ್ತಳಗಳೂ, ಗುಹೆಗಳೂ ಇವುಗಳಿಂದ ಅಲಂಕೃತವೂ, ಪರ್ವತೋತ್ತಮವೂ ಆದ ವಿಶಾಖಗಿರಿಯಲ್ಲಿ ಗುಹಾವಾಸದಲ್ಲಿ ಪ್ರೀತಿಯುಳ್ಳ ಗುಹನ ವಿಶಾಲವಾದ ಆಲಯವಿರುತ್ತದೆ.

೫೬. ವಿಶಾಲವಾದ ಉಪ್ಪರಿಗೆಗಳಿಂದಲಂಕೃತವೂ, ಶ್ವೇತೋದನಾಮಕವೂ, ಆದ ಮಹಾಗಿರಿಯಲ್ಲಿ ಮಹಾತ್ಮನೂ, ಗರುಡದೇವನ ಮಗನೂ ಆದ ಸುನಾಭನ ನಗರಿಯು ಶೋಭಿಸುತ್ತಿದೆ.

**ಪಿಶಾಚಕೇ ಗಿರಿವರೇ ಹರ್ಮ್ಯಂ ಪ್ರಾಸಾದಮಂಡಿತಂ ।**
**ಯಕ್ಷಗಂಧರ್ವಚರಿತಂ ಕುಬೇರಭವನಂ ಮಹತ್ ॥ ೫೭ ॥**

**ಹರಿಕೂಟೇ ಹರಿರ್ದೇವಃ ಸರ್ವಭೂತನಮಸ್ಕೃತಃ ।**
**ಪ್ರಭಾವಾತ್ತಸ್ಯ ಶೈಲೋಽಸೌ ಮಹಾನಾಭಃ ಪ್ರಕಾಶತೇ ॥ ೫೮ ॥**

**ಕುಮುದೇ ಕಿನ್ನರಾವಾಸಾ ಅಂಜನೇ ಚ ಮಹೋರಗಾಃ ।**
**ಕೃಷ್ಣೇ ಗಂಧರ್ವನಗರಾ ಮಹಾಭವನಶಾಲಿನಃ ॥ ೫೯ ॥**

**ಪಾಂಡುರೇ ಚಾರುಶಿಖರೇ ಮಹಾಪ್ರಾಕಾರತೋರಣೇ ।**
**ವಿದ್ಯಾಧರಪುರಂತತ್ರ ಮಹಾಭವನಮಾಲಿನಂ ॥ ೬೦ ॥**

---

೫೭. ಪಿಶಾಚನಾಮಕವಾದ ಪರ್ವತೋತ್ತಮದಲ್ಲಿ ಉಪ್ಪರಿಗೆ ಭವನಗಳಿಂದ ಮಂಡಿತವಾದ ಅರಮನೆಯು ಇರುತ್ತದೆ. ಆ ಅರಮನೆಯಲ್ಲಿ ಯಕ್ಷಗಂಧರ್ವರಿಗೆ ಅಧಿಪತಿಯಾದ ಕುಬೇರನು ವಾಸಮಾಡುವನು.

೫೮. ಹರಿಕೂಟವೆಂಬ ಗಿರಿಯಲ್ಲಿ ಸರ್ವಭೂತನಮಸ್ಕೃತನೂ, ದೇವದೇವನೂ ಆದ ಶ್ರೀ ಹರಿಯು ವಾಸಿಸುವನು. ಆ ಭಗವಂತನ ಮಹಿಮೆಯಿಂದ ಪರ್ವತ ವೆಲ್ಲವೂ ಮಹಾಕಾಂತಿಯುತವಾಗಿ ಹೊಳೆಯುತ್ತಿದೆ.

೫೯. ಕುಮುದಗಿರಿಯಲ್ಲಿ ಕಿನ್ನರರೂ, ಅಂಜನಪರ್ವತದಲ್ಲಿ ಮಹಾಸರ್ಪ ಗಳೂ, ಮಹಾಭವನಗಳಿಂದ ಭೂಷಿತವಾದ ಕೃಷ್ಣಗಿರಿಯಲ್ಲಿ ಗಂಧರ್ವರೂ ವಾಸ ಮಾಡುವರು.

೬೦ ಮಹಾಪ್ರಾಕಾರತೋರಣಗಳಿಂದಲಂಕೃತವೂ, ಮನೋಹರವಾದ ಶಿಖರ ಗಳಿಂದ ಭೂಷಿತವೂ ಆದ ಪಾಂಡರಗಿರಿಯಲ್ಲಿ ಉನ್ನತವಾದ ಮನೆಗಳ ಸಾಲುಗಳುಳ್ಳ ವಿದ್ಯಾಧರನಗರಿಯು ಪ್ರಕಾಶಿಸುತ್ತಿದೆ.

ಸಹಸ್ರಶಿಖರೇ ಶೈಲೇ ದೈತ್ಯಾನಾಮುಗ್ರಕರ್ಮಣಾಂ ।
ಪುರಾಣಿ ಸಮುದೀರ್ಣಾನಾಂ ಸಹಸ್ರಂ ಹೇಮಮಾಲಿನಾಂ ॥ ೬೧ ॥

ಮುಕುಟೇ ಪನ್ನಗಾವಾಸಾ ಅನೇಕಾಃ ಪರ್ವತೋತ್ತಮಾಃ ।
ಪುಷ್ಪಕೇ ವೈ ಮುನಿಗಣಾ ನಿತ್ಯಮೇವ ಮುದಾಯುತಾಃ ॥ ೬೨ ॥

ವೈವಸ್ವತಸ್ಯ ಸೋಮಸ್ಯ ವಾಯೋರ್ನಾಗಾಧಿಪಸ್ಯ ಚ ।
ಸುಪಕ್ಷೇ ಪರ್ವತವರೇ ಚತ್ವಾರ್ಯಾಯತನಾನಿ ಚ ॥ ೬೩ ॥

ಗಂಧರ್ವೈಃ ಕಿನ್ನರೈರ್ಯಕ್ಷೈರ್ನಾಗೈರ್ವಿದ್ಯಾಧರೋತ್ತಮೈಃ ।
ಸಿದ್ಧೈರ್ಹಿ ತೇಷು ಸ್ಥಾನೇಷು ನಿತ್ಯಮಿಷ್ಟಃ ಪ್ರಪೂಜ್ಯತೇ ॥ ೬೪ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಭುವನವಿನ್ಯಾಸೋ"
ನಾಮೈಕೋನಚತ್ವಾರಿಂಶೋಽಧ್ಯಾಯಃ

---

೬೧. ಸಾವಿರಾರು ಶಿಖರಗಳುಳ್ಳ ಪರ್ವತದಲ್ಲಿ ಕ್ರೂರಕರ್ಮಿಗಳೂ, ದುಷ್ಟರೂ ಆದ ದೈತ್ಯರ ಮಹಾವೈಭವಯುಕ್ತವೂ, ಅತಿವಿಶಾಲವೂ, ಸುವರ್ಣಮಯವೂ ಆದ ಸಾವಿರಾರು ಪಟ್ಟಣಗಳಿರುತ್ತವೆ.

೬೨. ಮುಕುಟನಾಮಕಗಿರಿಯಲ್ಲಿ ಅನೇಕ ಬೆಟ್ಟಗುಡ್ಡಗಳಿವೆ. ಅವುಗಳಲ್ಲಿ ಅಸಂಖ್ಯಾಕಗಳಾದ ಸರ್ಪಗಳು ವಾಸಿಸುತ್ತವೆ. ಪುಷ್ಪಕಗಿರಿಯಲ್ಲಿ ಅನೇಕ ಮುನಿಗಳು ಸಂತೋಷಯುಕ್ತವಾಗಿ ಸದಾಕಾಲದಲ್ಲಿಯೂ ವಾಸಮಾಡುತ್ತಾರೆ.

೬೩. ವೈವಸ್ವತ, ಸೋಮ, ವಾಯು, ಸರ್ಪರಾಜ ಇವರ ನಾಲ್ಕು ರಾಜಭವನಗಳು ಪರ್ವತೋತ್ತಮವಾದ ಸುಪಕ್ಷಗಿರಿಯಲ್ಲಿ ಶೋಭಿಸುತ್ತವೆ.

೬೪. ಈ ರೀತಿಯಾಗಿ ಗಂಧರ್ವರು, ಯಕ್ಷರು, ಕಿನ್ನರರು, ನಾಗಗಳು, ವಿದ್ಯಾಧರರು, ಸಿದ್ಧರು ಇವರೇ ಮೊದಲಾದವರು ತಮ್ಮ ತಮ್ಮ ಸ್ಥಾನಗಳಲ್ಲಿ ಸಂತೋಷದಿಂದ ಸದಾಕಾಲದಲ್ಲಿಯೂ ವಾಸಿಸುತ್ತಿರುವರು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಜಗತ್ಸೃಷ್ಟಿನಿರೂಪಣ "ವೆಂಬ
ಮೂವತ್ತೊಂಬತ್ತನೆಯ ಅಧ್ಯಾಯವು ಸಮಾಪ್ತವಾದುದು.

# ಮೂವತ್ತೊಂಬತ್ತನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ವಿವಿಧಪರ್ವತಗಳು, ನಾನಾವನಗಳು, ಅವುಗಳಲ್ಲಿ ವಾಸಿಸುವ ಅನೇಕ ದೇವತೆಗಳು ಇವರ ವಿಷಯಗಳು ವರ್ಣಿತವಾಗಿವೆ. ಶೀತಾಂತಪರ್ವತದಲ್ಲಿ ದೇವೇಂದ್ರನ ದಿವ್ಯವಾದ ಅರಮನೆಯು, ಅದರ ಸಮೀಪದಲ್ಲಿ ನಾನಾಜಲಚರ ಪ್ರಾಣಿಗಳಿಂದಲೂ, ಕಮಲಗಳಿಂದಲೂ ಸಹಿತವಾದ ಸರೋವರವಿರುವುದು. ವಜ್ರಗಿರಿಯಲ್ಲಿ ರಾಕ್ಷಸರೂ, ನೀಲಗಿರಿಯಲ್ಲಿ ದೇವಸೇನನೂ, ಸುನಾಗದಲ್ಲಿ ದೈತ್ಯರೂ, ವೇಣುಮಂತದಲ್ಲಿ ವಿದ್ಯಾಧರರೂ, ವೈಕಂಕದಲ್ಲಿ ಗರುಡಪುತ್ರನೂ, ಕಂದರದಲ್ಲಿ ರುದ್ರನೂ, ಸಾನುಗಳಲ್ಲಿ ಪ್ರಮಥಗಣಗಳೂ, ರತ್ನಧಾತುವಿನಲ್ಲಿ ಋಷಿಗಳೂ, ಹೇಮಶೃಂಗದಲ್ಲಿ ಬ್ರಹ್ಮನೂ, ಗಜಶೈಲದಲ್ಲಿ ರುದ್ರನೂ, ಸುಮೇಧದಲ್ಲಿ ಆದಿತ್ಯವಸುಗಳೂ, ಹೇಮಕಕ್ಷದಲ್ಲಿ ಗಂಧರ್ವರೂ, ಪಂಚಕೂಟದಲ್ಲಿ ದಾನವರೂ, ಶತಶೃಂಗದಲ್ಲಿ ಯಕ್ಷರೂ, ತಾಮ್ರಾಭದಲ್ಲಿ ವಿಶಾಖರೂ ಹಾಗೆಯೇ ಶ್ವೇತೋದ, ಹರಿಕೂಟ, ಕುಮುದ, ಪಾಂಡರ ಇವೇ ಮೊದಲಾದ ಗಿರಿಗಳಲ್ಲಿ ಅನೇಕ ದೈತ್ಯದಾನವಯಕ್ಷಾದಿಗಳೂ ವಾಸ ಮಾಡುವರೆಂಬ ವಿಷಯಗಳು ವರ್ಣಿಸಲ್ಪಟ್ಟಿವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಚತ್ವಾರಿಂಶೋಽಧ್ಯಾಯಃ

॥ ಸೂತ ಉವಾಚ ॥

ಮರ್ಯಾದಾ ಪರ್ವತೇ ಶುಭ್ರೇ ದೇವಕೂಟೆ ನಿಬೋಧತ ।
ವಿಸ್ತೀರ್ಣೇ ಶಿಖರೇ ತಸ್ಯ ಕೂಟೇ ಗಿರಿವರಸ್ಯ ಹ ॥ ೧ ॥

ಸಮಂತಾದ್ಯೋಜನಶತಂ ಮಹಾಭವನಮಂಡಿತಂ ।
ಜನ್ಮಕ್ಷೇತ್ರಂ ಸುಪರ್ಣಸ್ಯ ವೈನತೇಯಸ್ಯ ಧೀಮತಃ ॥ ೨ ॥

ನೈಕೈರ್ಮಹಾಪಕ್ಷಿಗಣೈರ್ಗಾರುಡೈಃ ಶೀಘ್ರವಿಕ್ರಮೈಃ ।
ಸಂಪೂರ್ಣವೀರ್ಯಸಂಪನ್ನೈರ್ದಮನೈರುರಗಾರಿಭಿಃ ॥ ೪ ॥

---

## ನಲವತ್ತನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಎಲೈ ಮುನಿಗಳೇ, ಅತ್ಯುತ್ತಮವಾದ ದೇವಕೂಟಗಿರಿಯ ಎಲ್ಲೆಗಳನ್ನೂ ಮತ್ತು ಉದ್ದ, ಸುತ್ತಳತೆ ಇವುಗಳನ್ನೂ, ಅದರಲ್ಲಿ ವಾಸಿಸುವ ಜನಗಳ ವಿಷಯವನ್ನೂ ವಿಶದವಾಗಿ ನಿರೂಪಿಸುವೆನು ಕೇಳಿರೆಂದನು.

೨. ಜ್ಞಾನಿಯೂ, ವಿನತಾಪುತ್ರನೂ ಆದ ಗರುಡದೇವನ ಜನ್ಮಸ್ಥಾನವಾದ ದೇವಕೂಟಗಿರಿಯು ನೂರುಯೋಜನಸುತ್ತಳತೆಯುಳ್ಳದ್ದಾಗಿಯೂ, ಮಹಾಸೌಧ ಗಳಿಂದಲಂಕೃತವಾಗಿಯೂ ಇದೆ

೩. ಪಕ್ಷಿರಾಜನಾದ ಗರುಡದೇವನ ಭೃತ್ಯರೂ, ಅಸಂಖ್ಯಾಕರೂ, ಶೀಘ್ರವಿಕ್ರಮಿ ಗಳೂ, ಸಂಪೂರ್ಣವಾದ ವೀರ್ಯವಂತರೂ, ಸರ್ಪಗರ್ವಭಂಜಕರೂ, (ಗಾರುಡ ಮಂತ್ರಜ್ಞರೂ) ಪಕ್ಷಿರೂಪರೂ ಆಗಿರುವರು

ಪಕ್ಷಿರಾಜಸ್ಯ ಭವನಂ ಪ್ರಥಮಂ ತನ್ಮಹಾತ್ಮನಃ ।
ಮಹಾವಾಯುಪ್ರವೇಗಸ್ಯ ಶಾಲ್ಮಲಿದ್ವೀಪವಾಸಿನಃ ॥ ೪ ॥

ತಸ್ಯೈವ ಚಾರುಮೂರ್ಧ್ನಸ್ತು ಕೂಟೇಷು ಚ ಮಹಾದ್ರಿಷು ।
ದಕ್ಷಿಣೇಷು ವಿಚಿತ್ರೇಷು ಸಪ್ತಸ್ವಪಿ ತು ಶೋಭಿನಃ ॥ ೫ ॥

ಸಂಧ್ಯಾಭ್ರಾಭಾಃ ಸುಮುದಿತಾ ರುಕ್ಮಪ್ರಾಕಾರತೋರಣಾಃ ।
ಮಹಾಭವನಮಾಲೀಭಿಃ ಶೋಭಿತಾ ದೇವನಿರ್ಮಿತಾಃ ॥ ೬ ॥

ತ್ರಿಂಶದ್ಯೋಜನವಿಸ್ತೀರ್ಣಾಶ್ಚತ್ವಾರಿಂಶತ್ತಮಾಯತಾಃ ।
ಸಪ್ತ ಗಂಧರ್ವನಗರಾ ನರನಾರೀಸಮಾಕುಲಾಃ ॥ ೭ ॥

ಆಗ್ನೇಯಾ ನಾಮ ಗಂಧರ್ವಾ ಮಹಾಬಲಪರಾಕ್ರಮಾಃ ।
ಕುಬೇರಾನುಚರಾ ದೀಪ್ತಾಸ್ತೇಷಾಂ ತೇ ಭವನೋತ್ತಮಾಃ ॥ ೮ ॥

---

೪-೫. ಮಹಾವಾಯುವೇಗವುಳ್ಳವನೂ, ಮಹಾತ್ಮನೂ, ಶಾಲ್ಮಲಿದ್ವೀಪ ವಾಸಿಯೂ ಪಕ್ಷಿರಾಜನೂ ಆದ ಗರುಡದೇವನ ಅರಮನೆಯು ಮೊದಲನೆಯದಾಗಿದೆ. ಆ ರಾಜಭವನವು ಅದೇ ಪರ್ವತದ ದಕ್ಷಿಣಭಾಗದಲ್ಲಿರುವ ವಿಚಿತ್ರಗಳೂ, ಋದ್ಧಿ ಸಂಪನ್ನಗಳೂ ಆದ ಸಪ್ತಶೃಂಗಗಳಿಗೆ ಅಲಂಕಾರಪ್ರಾಯವಾಗಿದೆ

೬. ಆ ಭವನಗಳು ಸಾಯಂಕಾಲದ ಮೇಘದಂತೆ ಕಾಂತಿಯುಕ್ತಗಳೂ, ಸುವರ್ಣಮಯಕೋಟೆಯ ಪ್ರಾಕಾರ, ಪುರದ್ವಾರಗಳು ಇವುಗಳಿಂದ ಸಹಿತವೂ, ಉನ್ನತವಾದ ಮನೆಗಳ ಸಾಲುಗಳಿಂದ ಯುಕ್ತವೂ ದೇವನಿರ್ಮಿತವೂ, ಪ್ರಕಾಶಕವೂ ಆಗಿವೆ.

೭. ಸ್ತ್ರೀಪುರುಷರಿಂದ ಸಹಿತಗವೂ ಸಪ್ತಸಂಖ್ಯಾಕವೂ ಆದ ಗಂಧರ್ವನಗರ ಗಳು ನಾನ್ನೂರು ಯೋಜನಗಳಷ್ಟು ಉದ್ದವೂ, ಮುನ್ನೂರು ಯೋಜನದಷ್ಟು ಅಗಲವೂ ಆಗಿವೆ.

೮. ಅವರು ಆಗ್ನೇಯನಾಮಕ ಗಂಧರ್ವರಾಗಿರುವರು. ಅವರು ಮಹಾ ಶೂರರೂ ಬಲಿಷ್ಠರೂ ಆಗಿರುವರು. ಮತ್ತು ಕುಬೇರನ ಭೃತ್ಯರೂ ದೀಪ್ತಿಮಂತರೂ ಆಗಿರುವರು. ಆ ಮನೆಗಳೆಲ್ಲವೂ ಅವರದಾಗಿವೆ.

ತಸ್ಯ ಚೋತ್ತರಕೂಟೇಷು ಭುವನಸ್ಯ ಮಹಾಗಿರೇಃ ।
ಹರ್ಮ್ಯಪ್ರಾಸಾದಬದ್ಧಂಚ ಉದ್ಯಾನವನಶೋಭಿತಂ ॥ ೯ ॥

ಪುರಮಾಶೀವಿಷ್ಯೈಃ ಪೂರ್ಣಂ ಮಹಾಪ್ರಾಕಾರತೋರಣಂ ।
ವಾದಿತ್ರಶತನಿರ್ಘೋಷೈರಾನಂದಿತವನಾಂತರಂ ॥ ೧೦ ॥

ದುಷ್ಪ್ರಸಹ್ಯಮಮಿತ್ರಾಣಾಂ ತ್ರಿಂಶದ್ಯೋಜನ ಮಂಡಲಂ ।
ನಗರಂ ಸೈಂಹಿಕೇಯಾನಾಮುದೀರ್ಣಂ ದೇವವಿದ್ವಿಷಾಂ ॥
ಸಿದ್ಧದೇವರ್ಷಿಚರಿತಂ ದೇವಕೂಟೇ ನಿಬೋಧತ ॥ ೧೧ ॥

ದ್ವಿತೀಯೇ ದ್ವಿಜಶಾರ್ದೂಲ ಮರ್ಯಾದಾಪರ್ವತೇ ಶುಭೇ ।
ಮಹಾಭವನಮಾಲಾಭಿರ್ನಾನಾವರ್ಣಾಭಿರಾವೃತಂ ॥ ೧೨ ॥

ಸುವರ್ಣಮಣಿಚಿತ್ರಾಭಿರನೇಕಾಭಿಲರಂಕೃತಂ ।
ವಿಶಾಲರಥ್ಯಂ ದುರ್ಧರ್ಷಂ ನಿತ್ಯಂ ಪ್ರಮುದಿತಂ ಶಿವಂ ॥ ೧೩ ॥

---

೯-೧೦. ಜಗದ್ರೂಪವಾದ ಆ ಮಹಾಗಿರಿಯ ಉತ್ತರಶಿಖರದಲ್ಲಿ ಉಪ್ಪರಿಗೆ ಮನೆಗಳಿಂದಲೂ, ಅರಮನೆಗಳಿಂದಲೂ, ಉದ್ಯಾನವನಗಳಿಂದಲೂ, ಸರ್ಪಗಳಿಂದಲೂ, ಮಹಾಪ್ರಾಕಾರ ತೋರಣಗಳಿಂದಲೂ, ನೂರಾರು ವಾದ್ಯಘೋಷಗಳಿಂದಲೂ, ಯುಕ್ತವೂ, ಮನೋಹರವೂ, ಉದ್ಯಾನಯುಕ್ತವೂ ಆದ ನಗರವು ಶೋಭಿಸುತ್ತದೆ.

೧೧. ಶತ್ರುಗಳಿಗೆ ಪ್ರವೇಶಿಸಲಶಕ್ಯವೂ, ಮೂವತ್ತುಯೋಜನ ವಿಸ್ತೀರ್ಣವೂ, ಉತ್ಕೃಷ್ಟವೂ ಆದ ನಗರವು ಶೋಭಿಸುತ್ತದೆ. ಅದು ದೇವತೆಗಳಿಗೆ ವೈರಿಗಳಾದ ಸಿಂಹಿಕಾಪುತ್ರರ ನಗರವಾಗಿದೆ. ಸಿದ್ಧರು, ದೇವತೆಗಳು, ಋಷಿಗಳು ಇವರ ನಡೆನುಡಿಗಳು ದೇವಕೂಟದಲ್ಲಿ ವಿಶೇಷವಾಗಿವೆ.

೧೨. ಎಲೈ ಮುನಿವರ್ಯರೇ ಮಂಗಳಕರವಾದ ಎರಡನೆಯ ಪರ್ವತದ (ಮರ್ಯಾದೆಯನ್ನು) ಎಲ್ಲೆಯನ್ನು ವಿಸ್ತಾರವಾಗಿ ನಿರೂಪಿಸುವೆನು. ಅದರಲ್ಲಿ ಅನೇಕ ಹರ್ಮ್ಯಗಳ ಸಾಲುಗಳು ವಿಚಿತ್ರವಾಗಿಯೂ ವಿವಿಧವರ್ಣಗಳಾಗಿಯೂ ಇವೆ.

೧೩-೧೫. ಕಾಲಕೇಯನಾಮಕರಾದ ಅಸುರರ ನಗರಿಯು ಅನೇಕವಾದ ಸುವರ್ಣಮಣಿ ಇವುಗಳ ಚಿತ್ರದಿಂದಲಂಕೃತವೂ, ವಿಶಾಲವಾದ ಬೀದಿಗಳಿಂದ ಭಯಜನಕವೂ, ನಿತ್ಯವಾಗಿ ಸಂತುಷ್ಟರಾದ ಜನರಿಂದ ಪೂರ್ಣವೂ, ಮಂಗಳಪ್ರದವೂ,

ನರನಾರೀಗಣಾಕೀರ್ಣಂ ಪ್ರಾಂಶುಪ್ರಾಕಾರತೋರಣಂ ।
ಷಷ್ಟಿಯೋಜನವಿಸ್ತೀರ್ಣಂ ಶತಯೋಜನಮಾಯತಂ ॥ ೧೪ ॥

ನಗರಂ ಕಾಲಕೇಯಾನಾಮಸುರಾಣಾಂ ದುರಾಸದಂ ।
ದೇವಕೂಟತಟೇ ರಮ್ಯೇ ಸನ್ನಿವಿಷ್ಟಂ ಸುದುರ್ಜಯಂ ॥
ಮಹಾಭ್ರಚಯಸಂಕಾಶಂ ಸುನಾಸನ್ನಾಮ ವಿಶ್ರುತಂ ॥ ೧೫ ॥

ತಸ್ಯೈವ ದಕ್ಷಿಣೇ ಕೂಟೇ ವಿಂಶದ್ಯೋಜನವಿಸ್ತರಂ ।
ದ್ವಿಷಷ್ಟಿಯೋಜನಾಯಾಮಂ ಹೇಮಪ್ರಾಕಾರತೋರಣಂ ॥ ೧೬ ॥

ಹೃಷ್ಟಪುಷ್ಟಾವಲಿಪ್ತಾನಾಂ ಆವಾಸಾಃ ಕಾಮರೂಪಿಣಾಂ ।
ಔತ್ಕಚಾನಾಂ ಪ್ರಮುದಿತಂ ರಾಕ್ಷಸಾಣಾಂ ಮಹಾಪುರಂ ॥ ೧೭ ॥

ಮಧ್ಯಮೇ ತು ಮಹಾಕೂಟೇ ದೇವಕೂಟಸ್ಯ ವೈ ಗಿರೇಃ ।
ಸುವರ್ಣಮಣಿಪಾಷಾಣೈಶ್ಚಿತ್ರೈಃ ಶ್ಲಕ್ಷ್ಣತರೈಃ ಶುಭೈಃ ॥
ಶಾಖಾಶತಸಹಸ್ರಾಢ್ಯೈರ್ನೈಕಾರೋಹಸಮಾಕುಲಂ ॥ ೧೮ ॥

---

ಸ್ತ್ರೀಪುರುಷರಿಂದ ವ್ಯಾಪ್ತವೂ, ಉನ್ನತವಾದ ಕೋಟೆಯುಗೋಡೆ ಪುರದ್ವಾರ ಇವು ಗಳಿಂದ ಸಹಿತವೂ. ಅರವತ್ತುಯೋಜನ ವಿಸ್ತೀರ್ಣವೂ, ನೂರುಯೋಜನ ಉದ್ದವೂ, ದೊಡ್ಡದಾದ ಮೇಘಸಂಘಕ್ಕೆ ಸಮವೂ, ಸುನಾಸನಾಮಕವೂ, ಲೋಕವಿಖ್ಯಾತವೂ ಆಗಿ ಸುಂದರವಾದ ದೇವಕೂಟಗಿರಿಯಲ್ಲಿದೆ.

೧೬-೧೭. ಆ ದೇವಕೂಟಗಿರಿಯ ದಕ್ಷಿಣ ಶಿಖರದಲ್ಲಿ ಇಪ್ಪತ್ತುಯೋಜನ ವಿಸ್ತೀರ್ಣವೂ, ಅರವತ್ತೆರಡು ಯೋಜನದಷ್ಟು ಉದ್ದವೂ, ಸುವರ್ಣಮಯ ಕೋಟೆ ಕೊತ್ತಳಗಳಿಂದಲೂ, ದ್ವಾರಗಳಿಂದಲೂ ಸಹಿತ ಕಾಮರೂಪಿಗಳೂ ಹೃಷ್ಟ ಪುಷ್ಟಾಂಗರೂ, ಗರ್ವಿಷ್ಠರೂ, ಔತ್ಕೋಚನಾಮಕರೂ, ಆದ ರಾಕ್ಷಸರ ನಗರಿಯು ಪ್ರಖ್ಯಾತವಾಗಿದೆ.

೧೮-೨೦. ವಿಶಾಲಶಿಖರಗಳುಳ್ಳ ದೇವಕೂಟಗಿರಿಯ ಮಧ್ಯಶಿಖರದಲ್ಲಿ ಸುವರ್ಣಮಯವೂ ಮತ್ತು ರತ್ನಮಯವೂ, ವಿಚಿತ್ರವೂ, ನುಣಪೂ, ಶುಭ್ರವೂ ಆದ ಕಲ್ಲುಗಳಿಂದ ವ್ಯಾಪ್ತವೂ, ಸಹಸ್ರಾರು ಶಾಖೆಗಳಿಂದ ಸ್ವರ್ಗಾರೋಹಣಸೋಪಾನವೋ

ಸ್ನಿಗ್ಧಪರ್ಣಮಹಾಮೂಲಮನೇಕಸ್ಕಂಧವಾಹನಂ ।
ರಮ್ಯಂ ಹ್ಯವಿರಲಚ್ಛಾಯಾಂ ದಶಯೋಜನಮಂಡಲಂ ॥ ೧೯ ॥
ತತ್ರ ಭೂತವಟಸ್ನಾಮ ನಾನಾಭೂತಗಣಾಲಯಂ ।

ಮಹಾದೇವಸ್ಯ ಪ್ರಥಿತಂ ತ್ರ್ಯಂಬಕಸ್ಯ ಮಹಾತ್ಮನಃ ॥
ದೀಪ್ತಮಾಯತನಂ ತತ್ರ ಸರ್ವಲೋಕೇಷು ವಿಶ್ರುತಂ ॥ ೨೦ ॥

ವರಾಹಗಜಸಿಂಹರ್ಕ್ಷಶಾರ್ದೂಲಕರಭಾನನೈಃ ।
ಗೃಧ್ರೋಲೂಕಮುಖೈಶ್ಚೈವ ಮೇಷೋಷ್ಟ್ರಾಜಮಹಾಮುಖೈಃ ॥ ೨೧ ॥

ಕದಂಬೈರ್ವಿಕಟೈಃ ಸ್ಥೂಲೈರ್ಲಂಬಕೇಶತನೂರುಹೈಃ ।
ನಾನಾವರ್ಣಾಕೃತಿಧರೈರ್ನಾನಾಸಂಸ್ಥಾನಸಂಸ್ಥಿತೈಃ ॥ ೨೨ ॥

ದೀಪ್ತೈರನೇಕೈರುಗ್ರಾಸ್ಯೈಃ ಭೂತೈರುಗ್ರಪರಾಕ್ರಮೈಃ ।
ಅಶೂನ್ಯಮಭವನ್ನಿತ್ಯಂ ಮಹಾಪಾರಿಷದೈಸ್ತಥಾ ॥ ೨೩ ॥

---

ಎಂಬಂತೆಯೂ, ಸುಂದರವಾದ ಪತ್ರವಿಶಿಷ್ಟವೂ, ದಪ್ಪವಾದ ಬುಡಸಹಿತವೂ ಆದ ವೃಕ್ಷಸಂಘದಿಂದಲಂಕೃತವೂ, ಸುಂದರವೂ, ದಟ್ಟವೂ ಆದ ಛಾಯೆಯುಳ್ಳದ್ದೂ, ನೂರು ಯೋಜನ ವಿಸ್ತೀರ್ಣವೂ, ನಾನಾಭೂತಗಳಿಗೆ ಆಶ್ರಯವೂ ಆದ ಭೂತವಟವೆಂಬ ವನವು ಸುಪ್ರಸಿದ್ಧವಾಗಿದೆ. ಆ ವನದಲ್ಲಿ ಮಹಾತ್ಮನೂ, ತ್ರಿನೇತ್ರನೂ ಆದ ಪರಮೇಶ್ವರನ ಮೂರುಲೋಕಖ್ಯಾತವೂ, ಕಾಂತಿಯುತವೂ, ಪ್ರಸಿದ್ಧವೂ ಆದ ದೇವಾಲಯವು ಹೊಳೆಯುತ್ತಿದೆ.

೨೧-೨೩ ಇಂತಹ ದೇವಾಲಯದ ಹೊರಗಿನ ಪ್ರಾಕಾರದ ಸುತ್ತಲೂ ಸಿಂಹ, ಶಾರ್ದೂಲ, ವರಾಹ, ಕರಡಿ, ಆನೆ, ಒಂಟೆ ಇವೇ ಮೊದಲಾದ ದುಷ್ಟಮೃಗಗಳ ಕತ್ತುಗಳೂ, ಹದ್ದು, ಗೂಬೆ, ಕಾಗೆ ಮೊದಲಾದ ಪಕ್ಷಿಗಳ ಮುಖಗಳೂ, ಆಡು, ಮೇಕೆ ಒಂಟೆ, ಕೋಣ ಇವುಗಳ ಮೋರೆಗಳೂ (ಇವುಗಳು) ಗುಂಪುಗುಂಪಾಗಿಯೂ, ಭಯಂಕರ ವಾಗಿಯೂ, ಸ್ಥೂಲವಾಗಿಯೂ, ನೇತಾಡುವ ಕೇಶಗಳುಳ್ಳದ್ದಾಗಿಯೂ ನಾನಾ ವರ್ಣಗಳಿಂದ ಚಿತ್ರಿತವಾಗಿಯೂ, ನಾನಾಕಾರಿಗಳಾಗಿಯೂ, ನೇತಾಡುತ್ತಿದ್ದುವು. ಮತ್ತು ಭೂತ ಪ್ರೇತ ಪಿಶಾಚಾದಿಗಳು ಭಯಂಕರವಾಗಿಯೂ, ಮಹಾಪರಾಕ್ರಮಿ ಗಳಾಗಿಯೂ, ಆ ದೇವಾಲಯದಲ್ಲಿ ವ್ಯಾಪ್ತವಾಗಿದ್ದುವು. ಪ್ರಮಥಗಣಗಳೂ ಕೂಡ ಸರ್ವದಾ ಸನ್ನಿಹಿತವಾಗಿದ್ದುವು.

ತತ್ರ ಭೂತಪತೇರ್ಭರ್ಕಾ ನಿತ್ಯಂ ಪೂಜಾಂ ಪ್ರಯುಂಜತೇ ।
ಝರ್ಝರೈಃ ಶಂಖಪಟಹೈರ್ಭೇರೀಡಿಂಡಿಮಗೋಮುಖೈಃ ॥ ೨೪ ॥

ರಣಿತಾಲಸಿತೋದ್ಗೀತೈರ್ನಿತ್ಯಂ ವಲಿತವರ್ಜಿತೈಃ ।
ವಿಸ್ಫೂರ್ಜಿತಶತೈಸ್ತತ್ರ ಪೂಜಾಯುಕ್ತಾ ಗಣೇಶ್ವರಾಃ ॥
ಪ್ರೀತಾಃ ಪುರಾರಿಪ್ರಮಥಾಸ್ತತ್ರ ಕ್ರೀಡಾಪರಾಃ ಸದಾ ॥ ೨೫ ॥

ಸಿದ್ಧದೇವರ್ಷಿಗಂಧರ್ವಯಕ್ಷನಾಗೇಂದ್ರ ಪೂಜಿತಃ ।
ಸ್ಥಾನೇ ತಸ್ಮಿನ್ ಮಹಾದೇವಃ ಸಾಕ್ಷಾಲ್ಲೋಕಶಿವಃ ಶಿವಃ ॥ ೨೬ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಭುವನವಿನ್ಯಾಸೋ" ನಾಮ ಚತ್ವಾರಿಂಶೋಽಧ್ಯಾಯಃ

---

೨೪-೨೫. ಆ ದೇವಾಲಯದಲ್ಲಿರುವ ಮಹಾದೇವನನ್ನು ಭೂತಾದಿಗಳು ನಿರಂತರವೂ ಪೂಜೆಯನ್ನು ಮಾಡುತ್ತವೆ. ಪೂಜಾಕಾಲದಲ್ಲಿ ಮೃದಂಗ, ಶಂಖ, ಕಹಳೆ, ತಮಟೆ, ಭೇರೀ, ಕೊಂಬು ಇವೇ ಮೊದಲಾದ ನಾನಾಧ್ವನಿಗಳೂ, ನೃತ್ಯಗೀತ ವಾದ್ಯಾದಿಗಳೂ ವಿಶೇಷವಾಗಿದ್ದುವು. ಗಣೇಶ್ವರರು ಅತಿಪ್ರೀತಿಯಿಂದ ಪೂಜಾದಿಗಳನ್ನು ಮಾಡಿ ಸಂತೋಷದಿಂದ ಕ್ರೀಡಾಸಕ್ತರಾಗಿದ್ದರು

೨೬. ಇಂತಹ ದೇವಾಲಯದಲ್ಲಿ ಸಿದ್ಧರು, ಚಾರಣರು, ದೇವತೆಗಳು, ಋಷಿಗಳು, ಗಂಧರ್ವರು, ಯಕ್ಷರು, ನಾಗೇಂದ್ರರು ಇವರು ಸದಾಕಾಲದಲ್ಲಿಯೂ, ಲೋಕಕಲ್ಯಾಣಕರನೂ, ಮಂಗಳಪ್ರದನೂ ಆದ ಮಹಾದೇವನನ್ನು ಸೇವಿಸುತ್ತಾ ಸಂತೋಷದಿಂದಿರುವರು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಜಗದ್ವಿನ್ಯಾಸಕಥನ" ವೆಂಬ ನಲವತ್ತಯ ಅಧ್ಯಾಯವು ಮುಗಿದುದು.

# ನಲವತ್ತನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ದೇವಕೂಟಗಿರಿಯು ವಿಶೇಷವಾಗಿ ವರ್ಣಿತವಾಗಿದೆ. ಆ ಗಿರಿಯ ಪೂರ್ವ ಶಿಖರದಲ್ಲಿ ಗರುಡದೇವನ ದಿವ್ಯಾಲಯವೂ, ಉತ್ತರ ಶಿಖರದಲ್ಲಿ ರಾಹುಕೇತುಗಳ ದಿವ್ಯಾಲಯಗಳೂ ದಕ್ಷಿಣ ಶಿಖರದಲ್ಲಿ ರಾಕ್ಷಸರ ಭವನಗಳೂ, ದೇವ ಕೂಡದಮಧ್ಯಶಿಖರದಲ್ಲಿ ಅತಿವಿಸ್ತೀರ್ಣವೂ, ಅತಿಸುಂದರವೂ, ಭೂತಪ್ರೇತಪಿಶಾಚಾದಿ ಗಳಿಂದ ಅತಿಭಯಂಕರವೂ ಆದ ಪರಮೇಶ್ವರನ ದಿವ್ಯಾಲಯವೂ ಪ್ರಜ್ವಲಿಸುತ್ತಿರುವುವು. ಎಂಬ ವಿಷಯವು ನಿರೂಪಿತವಾಗಿದೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಏಕ ಚತ್ವಾರಿಂಶೋಽಧ್ಯಾಯಃ

॥ ಸೂತ ಉವಾಚ ॥

**ವಿವಿಕ್ತಚಾರುಶಿಖರಂ ಪವಿತ್ರಂ ಶಂಖವರ್ಚಸಂ ।**
**ಕೈಲಾಸಂ ದೇವಭಕ್ತಾನಾಂ ಆಲಯಂ ಸುಕೃತಾತ್ಮನಾಂ ॥ ೧ ॥**

**ತಸ್ಯ ಕೂಟತಟೇ ರಮ್ಯೇ ಮಧ್ಯಮೇ ಕುಂದಸನ್ನಿಭೇ ।**
**ಯೋಜನಾನಾಂ ಶತಾಯಾಮೋ ಪಂಚಾಶಚ್ಚ ತಥಾಯತಂ ॥ ೨ ॥**

---

## ನಲವತ್ತೊಂದನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು:—ಆ ದೇವಕೂಟದ ಮಧ್ಯದಲ್ಲಿರುವ ಕೈಲಾಸಪರ್ವತವು ಪ್ರತ್ಯೇಕಪ್ರತ್ಯೇಕವೂ, ಅತಿಸುಂದರವೂ, ಪವಿತ್ರವೂ, ಶಂಖದಂತೆ ಅತಿಶುಭ್ರವೂ, ಆದ ಶಿಖರಗಳಿಂದ ಯುಕ್ತವೂ ಆಗಿದೆ. ಆ ಕೈಲಾಸಗಿರಿಯು ಮಹಾ ಭಾಗ್ಯಶಾಲಿಗಳಾದ ಈಶ್ವರನ ಭಕ್ತರಿಗೆ ಆಶ್ರಯವಾಗಿದೆ

೨. ಆ ಶಿಖರಗಳ ಮಧ್ಯದಲ್ಲಿ ಅತಿಸುಂದರವೂ, ಕುಂದಪುಷ್ಪದಂತೆ ಅತಿ ಶುಭ್ರವೂ, ಆದ ಕೈಲಾಸಗಿರಿಯು ನೂರುಯೋಜನ ಉದ್ದವೂ ಐನೂರುಯೋಜನ ವಿಸ್ತಾರವೂ ಆಗಿದೆ.

ಸುವರ್ಣಮಣಿಚಿತ್ರಾಭಿರನೇಕಾಭಿರಲಂಕೃತಂ ।
ಮಹಾಭವನಮಾಲಾಭಿರ್ಭೂಷಿತಂ ನೈಕವಿಸ್ತರಂ ॥ ೩ ॥

ಧನಾಧ್ಯಕ್ಷಸ್ಯ ದೇವಸ್ಯ ಕುಬೇರಸ್ಯ ಮಹಾತ್ಮನಃ ।
ನಗರಂ ತದನಾಧೃಷ್ಯಮೃದ್ಧಿಯುಕ್ತಂ ಮುದಾಯುತಂ ॥ ೪ ॥

ತಸ್ಯ ಮಧ್ಯೇ ಸಭಾ ರಮ್ಯಾ ನಾನಾಕನಕಮಂಡಿತಾ ।
ವಿಪುಲಾ ನಾಮ ವಿಖ್ಯಾತಾ ವಿಪುಲಸ್ತಂಭತೋರಣಾ ॥ ೫ ॥

ತತ್ರ ತತ್ಪುಷ್ಪಕಂ ನಾಮ ನಾನಾರತ್ನವಿಭೂಷಿತಂ ।
ಮಹಾವಿಮಾನಂ ರುಚಿರಂ ಸರ್ವಕಾಮಗುಣೈರ್ಯುತಂ ॥ ೬ ॥

ಮನೋಜವಂ ಕಾಮಗಮಂ ಹೇಮಜಾಲವಿಭೂಷಿತಂ ।
ವಾಹನಂ ಯಕ್ಷರಾಜಸ್ಯ ಕುಬೇರಸ್ಯ ಮಹಾತ್ಮನಃ ॥ ೭ ॥

---

೩-೪. ಆ ಶಿಖರಗಳ ಮತ್ತೊಂದು ಭಾಗದಲ್ಲಿ ನೂರುಯೋಜನ ಉದ್ದವೂ ಐನೂರುಯೋಜನ ವಿಸ್ತಾರವೂ ಸುವರ್ಣರತ್ನಗಳ ನಾನಾಚಿತ್ರಗಳಿಂದಲಂಕೃತವೂ, ದೊಡ್ಡ ದೊಡ್ಡ ಉಪ್ಪರಿಗೆಗಳಿಂದ ಭೂಷಿತವೂ ಅತಿ ವಿಶಾಲವೂ, ಸಕಲ ಸಮೃದ್ಧಿಗಳಿಂದ ಯುಕ್ತವೂ, ಸಂತೋಷಕರವೂ, ವೈರಿಗಳಿಂದ ಪ್ರವೇಶಿಸಲಶಕ್ಯವೂ, ಆದ ಧನಾಧಿಪತಿಯೂ ಮಹಾತ್ಮನೂ ಆದ ಕುಬೇರನ ದಿವ್ಯನಗರವು ಕಂಗೊಳಿಸುತ್ತಿರುವುದು.

೫. ಆ ನಗರಿಯ ಮಧ್ಯಭಾಗದಲ್ಲಿ ಕುಬೇರನ ವಿಪುಲಾನಾಮಕ ಮಹಾಸಭೆಯು ಶೋಭಿಸುತ್ತಿದೆ. ಅದು ಸುವರ್ಣಮಯವೂ ರತ್ನಖಚಿತವೂ ಆದ ಸಹಸ್ರಾರು ಕಂಬಗಳಿಂದಲೂ ವಿವಿಧ ತೋರಣಗಳಿಂದಲೂ, ಜಗತ್ತಿಗೆ ವಿಸ್ಮಯ ಜನಕವಾಗಿದೆ.

೬-೭. ಆ ಮಹಾಸಭೆಯಲ್ಲಿ ನಾನಾ ರತ್ನಾಲಂಕೃತವೂ, ಮನೋಹರವೂ, ಸಕಲಗುಣಯುತವೂ, ಮನೋವೇಗವುಳ್ಳದ್ದೂ, ಸ್ವೇಚ್ಛಾಚಾರಿಯೂ, ಸುವರ್ಣದ ಗೆಜ್ಜೆಗಳಿಂದ ಭೂಷಿತವೂ ಆದ ಕುಬೇರನ ಪುಷ್ಪಕವಿಮಾನವು ಜ್ವಲಿಸುತ್ತಿದೆ. ಮಹಾತ್ಮನೂ ಯಕ್ಷರಾಜನೂ ಆದ ಕುಬೇರನು ಅದರಿಂದ ಸಂಚಾರಮಾಡುವನು

ತತ್ರೈಕಪಿಂಗಲೋ ದೇವೋ ಮಹಾದೇವಸಖಃ ಸ್ವಯಂ ।
ವಸತಿ ಸ್ಮ ಸ ಯಕ್ಷೇಂದ್ರಃ ಸರ್ವಭೂತನಮಸ್ಕೃತಃ ॥ ೮ ॥

ತತ್ರಾಪ್ಸರೋಗಣೈರ್ಯಕ್ಷೈರ್ಗಂಧರ್ವೈಃ ಸಿದ್ಧಚಾರಣೈಃ ।
ವಸತಿ ಸ್ಮ ಮಹಾತ್ಮಾಸೌ ಕುಬೇರೋ ದೇವಸತ್ತಮಃ ॥ ೯ ॥

ತತ್ರ ಪದ್ಮಮಹಾಪದ್ಮೌ ತಥಾ ಮಕರಕಚ್ಛಪೌ ।
ಕುಮುದಃ ಶಂಖನೀಲೌ ಚ ನಂದನೋ ನಿಧಿಸತ್ತಮಃ ॥ ೧೦ ॥

ಅಷ್ಟಾವೇತೇಽಕ್ಷಯಾ ದಿವ್ಯಾ ಧನೇಶಸ್ಯ ಮಹಾತ್ಮನಃ ।
ಮಹಾನಿಧಾನಾಸ್ತಿಷ್ಠಂತಿ ಸಭಾಯಾಂ ರತ್ನಸಂಚಿತಾಃ ॥ ೧೧ ॥

ತಥೇಂದ್ರಾಗ್ನಿಯಮಾದೀನಾಂ ದೇವಾನಾಮಪ್ಸರೋಗಣೈಃ ।
ತೇಷಾಂ ಕೈಲಾಸ ಆವಾಸೋ ಯತ್ರ ಯಕ್ಷೇಶ್ವರಃ ಪ್ರಭುಃ ॥ ೧೨ ॥

---

೮ ಆ ಮಹಾಸಭೆಯಲ್ಲಿ ಮಹಾದೇವನ ಮಿತ್ರನೂ, ಯಕ್ಷೇಂದ್ರನೂ, ಸರ್ವಭೂತನಮಸ್ಕೃತನೂ ಪಿಂಗಳನಾಮಕನಾದ ದೇವನು ವಾಸಿಸುತ್ತಿರುವನು.

೯. ಇಂತಹ ನಗರಿಯಲ್ಲಿ ದೇವೋತ್ತಮನೂ ಮಹಾತ್ಮನೂ ಆದ ಕುಬೇರನು ಸಿದ್ಧಚಾರಣರೂ, ಯಕ್ಷಗಂಧರ್ವರೂ, ಅಪ್ಸರೋಗಣಗಳು ಇವುಗಳಿಂದ ಸೇವಿಸುತ್ತಾ ಆಳುತ್ತಿರುವನು.

೧೦. ಆ ಕುಬೇರನ ಸಭೆಯಲ್ಲಿ ಪದ್ಮ, ಮಹಾಪದ್ಮ, ಮಕರ, ಕಚ್ಛಪ, ಕುಮುದ, ಶಂಖ, ನೀಲ ಮತ್ತು ನಂದನಗಳೆಂಬ ಅಷ್ಟನಿಧಿಗಳು ಶೋಭಿಸುತ್ತಿವೆ.

೧೧. ಮಹಾತ್ಮನೂ ಧನೇಶನೂ ಆದ ಕುಬೇರನ ದಿವ್ಯಸಭೆಯಲ್ಲಿ ದಿವ್ಯವೂ ಅಕ್ಷಯವೂ ಆದ ಈ ಎಂಟು ಮಹಾನಿಧಿಗಳು ಸರ್ವಕಾಲದಲ್ಲಿಯೂ ನವರತ್ನಗಳಿಂದ ಪೂರ್ಣವಾಗಿ ಹೊಳೆಯುತ್ತಿರುತ್ತವೆ.

೧೨. ಯಾವ ಕೈಲಾಸಕ್ಷೇತ್ರದಲ್ಲಿ ಯಕ್ಷೇಶನೂ ಧನೇಶನೂ ಆದ ಕುಬೇರನು ವಾಸಿಸುವನೋ ಅಲ್ಲಿಯೇ ಇಂದ್ರ, ಅಗ್ನಿ, ಯಮ, ನೈರುತ. ವರುಣ, ವಾಯು, ಈಶ್ವರನೇ ಮೊದಲಾದ ಅಷ್ಟದಿಕ್ಪಾಲಕರೂ ವಾಸಿಸುವರು.

ಕೃತ್ವಾ ಪೂರ್ವಮುಪಾಸ್ಥಾನಂ ಯಕ್ಷೇಂದ್ರಸ್ಯ ಮಹಾತ್ಮನಃ ।
ಪಶ್ಚಾದ್ಗಚ್ಛಂತಿ ಯೇ ಯಸ್ಯ ವಿಹಿತಾಃ ಪರಿಚಾರಕಾಃ ॥ ೧೩ ॥

ತತ್ರ ಮಂದಾಕಿನೀ ನಾಮ ಸುರಮ್ಯಾ ವಿಪುಲೋದಕಾ ।
ಸುವರ್ಣಮಣಿಸೋಪಾನಾ ನಾನಾಪುಷ್ಪೋತ್ಕಟೋತ್ಕಟಾ ॥ ೧೪ ॥

ಜಾಂಬೂನದಮಯೈಃ ಪದ್ಮೈರ್ಗಂಧಸ್ಪರ್ಶಗುಣಾನ್ವಿತೈಃ ।
ನೀಲವೈಡೂರ್ಯಪತ್ರೈಶ್ಚ ಗಂಧೋಪೇತೈರ್ಮಹೋತ್ಪಲೈಃ ॥ ೧೫ ॥

ತಥಾ ಕುಮುದಖಂಡೈಶ್ಚ ಮಹಾಪದ್ಮೈರಲಂಕೃತಾ ।
ಯಕ್ಷಗಂಧರ್ವನಾರೀಭಿರಪ್ಸರೋಭಿಶ್ಚ ಶೋಭಿತಾ ॥ ೧೬ ॥

ದೇವದಾನವಗಂಧರ್ವೈರ್ಯಕ್ಷರಾಕ್ಷಸಪನ್ನಗೈಃ ।
ಉಪಸ್ಪೃಷ್ಟಜಲಾ ರಮ್ಯಾ ವಾಪೀ ಮಂದಾಕಿನೀ ತಥಾ ॥ ೧೭ ॥

---

೧೩. ಆ ನಗರಿಯಲ್ಲಿ ಕುಬೇರನ ಭೃತ್ಯರು ಮೊದಲು ಮಹಾತ್ಮನೂ ಯಕ್ಷಾಧಿಪತಿಯೂ ಆದ ಕುಬೇರನಿಗೆ ಮರ್ಯಾದೆಯನ್ನು ಮಾಡಿ ತರುವಾಯ ತಂತಮ್ಮ ಕಾರ್ಯಗಳಲ್ಲಿ ಆಸಕ್ತರಾಗುವರು.

೧೪-೧೭. ಅಲ್ಲಿ ಅತಿಮನೋಹರವೂ ಅಧಿಕಜಲಯುಕ್ತವೂ ಮಂದಾಕಿನೀ ನಾಮಕವೂ ಆದ ದೇವಗಂಗೆಯು ಇರುವುದು ಆ ದೇವಗಂಗೆಯು ಸುವರ್ಣ ರತ್ನಖಚಿತವಾದ ಸೋಪಾನಗಳಿಂದಲೂ, ನಾನಾ ಪುಷ್ಪಗಳಿಂದ ಮಂಡಿತವೂ, ಸುವರ್ಣ ಮಯಗಳಾದ ಕಮಲಗಳಿಂದಲಂಕೃತವೂ, ಪೂರ್ಣಗಂಧಯುತಗಳಾದ ನೈದಲೆಯ ಪುಷ್ಪಗಳಿಂದ ಭೂಷಿತವೂ, ನೀಲವೈಡೂರ್ಯಮಣಿಗಳಂತಿರುವ ಪತ್ರಗಳಿಂದ ಸಹಿತವೂ ಸುಗಂಧೋಪೇತವೂ ಆದ ಮಹಾನೈದಲೆಯ ಕುಸುಮಗಳಿಂದ ರಂಜಿತವೂ, ಆಗಿರುತ್ತದೆ. ಮತ್ತು ಕೆಂಪು ಕಮಲಗಳಿಂದಲೂ, ಮಹಾಕಮಲಗಳಿಂದಲೂ ಮನೋಹರವೂ, ಯಕ್ಷರು ಗಂಧರ್ವರು ಇವರ ನಾರಿಯರೂ, ಅಪ್ಸರಸಿಯರು ಇವರಿಂದ ಶೋಭಿತವೂ, ದೇವದಾನವ, ಗಂಧರ್ವ, ಯಕ್ಷ, ರಾಕ್ಷಸ, ನಾಗ ಇವುಗಳಿಂದ ಸದಾ ಸೇವಿತವೂ, ರಮ್ಯವೂ, ಮಂದಾಕಿನೀಜನಕವೂ ಆದ ಮಹಾಸರಸ್ಸು ಪ್ರಕಾಶಿಸುತ್ತಿದೆ.

ತಥಾ ಅಲಕನಂದಾ ಚ ನಂದಾ ಚ ಸರಿತಾಂ ವರಾ ।
ಏತೈರೇವ ಗುಣೈರ್ಯುಕ್ತಾ ನದ್ಯೋ ದೇವರ್ಷಿಸೇವಿತಾಃ ॥ ೧೮ ॥

ತಸ್ಯೈವ ಶೈಲರಾಜಸ್ಯ ಪೂರ್ವೇ ಕೋಟೇ ಪರಿಶ್ರುತಾಃ ।
ಸಹಸ್ರಯೋಜನಾಯಾಮಾಸ್ತ್ರಿಂಶದ್ಯೋಜನವಿಸ್ತರಾಃ ॥ ೧೯ ॥

ದಶ ಗಂಧರ್ವನಗರಾಃ ಸಮೃದ್ಧಾಃ ಪರಯಾ ಯುತಾಃ ।
ಮಹಾಭವನಮಾಲಾಭಿರನೇಕಾಭಿರ್ವಿಭೂಷಿತಾಃ ॥ ೨೦ ॥

ಸುಬಾಹುಹರಿಕೇಶಾದ್ಯಾಶ್ಚಿತ್ರಸೇನಜರಾದಯಃ ।
ದಶ ಗಂಧರ್ವರಾಜಾನೋ ದೀಪ್ತವಹ್ನಿಪರಾಕ್ರಮಾಃ ॥ ೨೧ ॥

ತಸ್ಯೈವ ಪಶ್ಚಿಮೇ ಕೋಟೇ ಕುಂದೇಂದುಸದೃಶಪ್ರಭೇ ।
ನಾನಾಧಾತುಶತೈಶ್ಚಿತ್ರೈಃ ಸಿದ್ಧದೇವರ್ಷಿಸೇವಿತೇ ॥ ೨೨ ॥

೧೮. ಅದೇ ಗಿರಿಯಲ್ಲಿಯೇ ದೇವರ್ಷಿಗಳಿಂದ ಪೂಜಿತವೂ ಮೇಲೆ ಹೇಳಿದ ಗುಣಗಳಿಂದಯುಕ್ತವೂ, ನದಿಗಳಲ್ಲಿ ಉತ್ತಮವೂ ಆದ ಅಲಕನಂದೆ, ನಂದೆ ಎಂಬ ಎರಡು ನದಿಗಳೂ ಕೂಡ ಪ್ರಕಾಶಿಸುತ್ತವೆ.

೧೯-೨೦. ಅದೇ ದೇವಕೂಟಗಿರಿಯ ಪೂರ್ವಶಿಖರದಲ್ಲಿ ಅತ್ಯಂತ ಪ್ರಖ್ಯಾತವೂ, ಸಾವಿರಯೋಜನ ಉದ್ದವೂ, ಮೂವತ್ತುಯೋಜನ ಅಗಲವೂ, ಮಹಾವಿಭವಯುತವೂ, ಅಸಂಖ್ಯಾತವೂ ಉನ್ನತವೂ ಆದ ಭವನಸಾಲುಗಳಿಂದ ಮಂಡಿತವೂ ಆದ ಹತ್ತು ಗಂಧರ್ವನಗರಗಳು ಪ್ರಖ್ಯಾತವಾಗಿವೆ.

೨೧. ಆ ಹತ್ತು ಗಂಧರ್ವನಗರಗಳಲ್ಲಿಯೂ ಸುಬಾಹು, ಹರಿಕೇಶ, ಚಿತ್ರಸೇನ ಇವರೇ ಮೊದಲಾದ ಹತ್ತು ಜನ ಗಂಧರ್ವರಾಜರು ಉರಿಯುವ ಅಗ್ನಿಗೆ ಸಮಾನ ತೇಜಸ್ವಿಗಳಾಗಿ ಆಳುತ್ತಿರುವರು

೨೨-೨೩. ಅದೇ ಪರ್ವತದ ಪಶ್ಚಿಮಶೃಂಗದಲ್ಲಿ ಪ್ರತಿಯೊಬ್ಬ ಯಕ್ಷರಾಜನ ಗೃಹವಿರುವುದು. ಆ ಪ್ರತಿಯೊಂದು ಗೃಹವೂ ಜಾಜಿ, ಚಂದ್ರ ಇವರಿಗೆ ಸಮಾನ ತೇಜಸ್ವಿಯಾಗಿಯೂ, ನಾನಾಧಾತುಗಳಿಂದ ಚಿತ್ರಿತವಾಗಿಯೂ, ಸಿದ್ಧರು, ದೇವತೆ

**ಅಶೀತಿಯೋಜನಾಯಾಮಂ ಚತ್ವಾರಿಂಶತ್ಪ್ರವಿಸ್ತರಂ ।
ಐಕ್ಯೈಕಯಕ್ಷಭವನಂ ಮಹಾಭವನಮಾಲಿನಂ ॥ ೨೩ ॥**

**ಮಹಾಯಕ್ಷಾಲಯಾನ್ಯತ್ರ ತ್ರಿಂಶದಾಢ್ಯಾನಿ ಮೇ ಶೃಣು ।
ಮುದ್ರಾಥ ಪರಸುದ್ಧ್ಯರ್ಥ ಚ ಸಂಯುಕ್ತಾನಿ ಸಮಂತತಃ ॥ ೨೪ ॥**

**ಮಹಾಮಾಲಿಸುನೇತ್ರಾದ್ಯಾಸ್ತಥಾ ಮಣಿವರಾದಯಃ ।
ಉದೀರ್ಣಾ ಯಕ್ಷರಾಜಾನಸ್ತತ್ರ ತ್ರಿಂಶತ್ಸದಾ ಬಭುಃ ॥ ೨೫ ॥**

**ಇತ್ಯೇತೇ ಕಥಿತಾ ಯಕ್ಷಾ ವಾಯ್ವಗ್ನಿಸಮತೇಜಸಃ ।
ಯೇಷಾಮಧಿಪತಿರ್ದೇವಃ ಶ್ರೀಮಾನ್ ವೈಶ್ರವಣಃ ಪ್ರಭುಃ ॥ ೨೬ ॥**

**ತಸ್ಯೈವ ದಕ್ಷಿಣೇ ಪಾರ್ಶ್ವೇ ಹಿಮವತ್ಯಚಲೋತ್ತಮೇ ।
ನಿಕುಂಜನಿರ್ಝರಗುಹಾನೈಕಸಾನುದರೀತಟೇ ॥ ೨೭ ॥**

---

ಗಳು, ಋಷಿಗಳು ಇವರಿಂದ ಸೇವಿತವಾಗಿಯೂ, ತೊಂಬತ್ತು ಯೋಜನ ಉದ್ದವಾಗಿಯೂ, ನಲವತ್ತು ಯೋಜನ ಅಗಲವಾಗಿಯೂ, ಮಹಾಗೃಹಗಳಪಂಕ್ತಿಯಿಂದಲಂಕೃತವಾಗಿಯೂ ಇರುತ್ತದೆ.

೨೪. ಮತ್ತು ಆ ಶಿಖರದಲ್ಲಿ ಮೂವತ್ತು ಮಹಾಯಕ್ಷರ ಭವನಗಳಿರುತ್ತವೆ. ಅವು ಅಮೂಲ್ಯವಾಗಿವೆ. ಅವುಗಳನ್ನು ಹೇಳುವೆನು ಕೇಳಿ. ಆ ಉಪ್ಪರಿಗೆಗಳು ಪರಮಸಮೃದ್ಧಿಯಿಂದಲೂ, ಸಂತುಷ್ಟರಾದ ಪ್ರಜೆಗಳಿಂದಲೂ ಕೂಡಿಯಿರುತ್ತವೆ

೨೫. ಆ ಮೂವತ್ತು ನಗರಗಳಲ್ಲಿಯೂ ಮಹಾಪರಾಕ್ರಮಿಗಳಾದ ಮಹಾಮಾಲಿ, ಸುನೇತ್ರ, ಮಣಿವರ ಇವರೇ ಮೊದಲಾದ ಯಕ್ಷರಾಜರು ಪ್ರಕಾಶಿಸುತ್ತಿರುವರು.

೨೬. ಮೇಲೆ ಹೇಳಿದ ರೀತಿಯಾಗಿ ಯಕ್ಷರು, ವಾಯು, ಅಗ್ನಿಗಳಿಗೆ ಸಮಾನ ತೇಜಸ್ವಿಗಳಾಗಿಯೂ ಇದ್ದರು. ಇಂತಹ ಯಕ್ಷರಿಗೆ ಶ್ರೀಮಂತನೂ, ಶೂರನೂ ಆದ ಕುಬೇರನು ಅಧಿಪತಿಯಾಗಿದ್ದನು.

೨೭-೨೮. ಅದರ ದಕ್ಷಿಣದಿಕ್ಕಿನಲ್ಲಿರುವ ಪರ್ವತೋತ್ತಮವೂ, ಪೊದೆಗಳು, ಝುರಿಗಳು, ಗುಹೆಗಳು, ಅನೇಕ ಸಾನುಗಳು, ಗವಿಗಳು ಇವುಗಳಿಂದ ಸಹಿತವೂ, ಪೂರ್ವ

**ಅರ್ಣವಾದರ್ಣವಂ ಯಾವತ್ ಪೂರ್ವಪಶ್ಚಾಯತೇಚಲೇ ।**
**ಕಿನ್ನರಾಣಾಂ ಪುರಶತಂ ನಿವಿಷ್ಟಂ ವೈ ಕ್ವಚಿತ್ ಕ್ವಚಿತ್ ॥ ೨೮ ॥**

**ನೈಕಶೃಂಗಕಲಾಪಸ್ಯ ಶೈಲರಾಜಸ್ಯ ಕುಕ್ಷಿಷು ।**
**ನರನಾರೀಪ್ರಮುದಿತಂ ಹೃಷ್ಟಪುಷ್ಟಜನಾಕುಲಂ ॥ ೨೯ ॥**

**ದ್ರುಮಸುಗ್ರೀವಸೈನ್ಯಾದ್ಯಾ ಭಗದತ್ತಪುರಃಸರಾಃ ।**
**ಯತ್ರ ರಾಜಶತಂ ತೇಷಾಂ ದೀಪ್ತಾನಾಂ ಬಲಶಾಲಿನಾಂ ॥ ೩೦ ॥**

**ವಿವಾಹೋ ಯತ್ರ ರುದ್ರಸ್ಯ ಮಹಾದೇವ್ಯೋಮಯಾ ಸಹ ।**
**ತಪಸ್ತಪ್ತವತೀ ಚೈವ ಯತ್ರ ದೇವೀ ವರಾಂಗನಾ ॥ ೩೧ ॥**

**ಕಿರಾತರೂಪಿಣಾ ಚೈವ ಯತ್ರ ರುದ್ರೇಣ ಕ್ರೀಡಿತಂ ।**
**ಯತ್ರ ಚೈವ ಕೃತಂ ತಾಭ್ಯಾಂ ಜಂಬೂದ್ವೀಪಾವಲೋಕನಂ ॥ ೩೨ ॥**

---

ಪಶ್ಚಿಮಸಮುದ್ರಗಳವರೆಗೂ ವ್ಯಾಪ್ತವೂ, ಆದ ಹಿಮಾಲಯದ ಆಯಾ ಪ್ರದೇಶಗಳಲ್ಲಿ ಕಿನ್ನರರ ನೂರಾರು ವಾಸಸ್ಥಾನಗಳು ಇವೆ.

೨೯-೩೦. ಅನೇಕ ಶೃಂಗಗಳಿಂದಲಂಕೃತವಾದ ಶೈಲರಾಜನ ಮಧ್ಯಪ್ರದೇಶದಲ್ಲಿ ಸ್ತ್ರೀ ಪುರುಷರ ಸಂತೋಷದಿಂದಯುಕ್ತವೂ, ಹೃಷ್ಟರೂ, ಪುಷ್ಟರೂ ಆದ ಜನರ ವೃಂದದಿಂದ ಮಂಡಿತವೂ ಆದ ಅನೇಕ ಭವನಗಳಿವೆ ಅವುಗಳಲ್ಲಿ ದ್ರುಮ, ಸುಗ್ರೀವ, ಸೈನ್ಯ, ಭಗದತ್ತ ಇವರೇ ಮೊದಲಾದ ಶೂರರೂ, ಬಲಶಾಲಿಗಳೂ, ಕಾಂತಿವಂತರೂ ಆದ ನೂರಾರು ರಾಜರು ಧರ್ಮದಿಂದ ಆಳುತ್ತಿರುವರು.

೩೧. ಯಾವ ಸ್ಥಳದಲ್ಲಿ ಪಾರ್ವತೀಪರಮೇಶ್ವರರಿಗೆ ವಿವಾಹವು ಸಂಭವಿಸಿತೋ ಮತ್ತು ಸುಂದರಾಂಗಿಯಾದ ಪಾರ್ವತೀದೇವಿಯು ಘೋರವಾದ ತಪಸ್ಸನ್ನು ಮಾಡಿ ಫಲವನ್ನು ಹೊಂದಿದಳೋ.

೩೨. ಯಾವ ಪ್ರದೇಶದಲ್ಲಿ ರುದ್ರದೇವನು ಕಿರಾತರೂಪಿಯಾಗಿ ಅರ್ಜುನನೊಡನೆ ಪ್ರೇಮಕಲಹವನ್ನು ಮಾಡಿದನೋ ಮತ್ತು ಉಮಾಮಹೇಶ್ವರರಿಬ್ಬರೂ ಎಲ್ಲಿ ನಿಂತುಕೊಂಡು ಜಂಬೂದ್ವೀಪವನ್ನು ನೋಡಿದರೋ,

ಯತ್ರ ತಾಃ ಸಮುದ್ದಾಯುಕ್ತಾ ನಾನಾಭೂತಗಣೈರ್ಯುತಾಃ ।
ಚಿತ್ರಪುಷ್ಪಫಲೋಪೇತಾ ರುದ್ರಸ್ಯಾಕ್ರೀಡಭೂಮಯಃ ॥ ೩೩ ॥

ಕೃಷ್ಟಾ ಗಿರಿದರೀವಾಸಃ ಕೃಶೋದರ್ಯೋ ಮನೋರಮಾಃ ।
ಸುಂದರ್ಯೋ ಯತ್ರ ಕಿನ್ನರ್ಯೋ ರಮಂತೇ ಸ್ಮ ಸುಲೋಚನಾಃ ॥ ೩೪ ॥

ವಿಶಾಲಾಕ್ಷಾಸ್ತಥಾ ಯಕ್ಷಾ ಅನ್ಯಶ್ಚಾಪ್ಸರಸಾಂಗಣಾಃ ।
ಗಂಧರ್ವಾಶ್ಚಾಂಗಶಾಲಿನ್ಯೋ ಯತ್ರ ತತ್ರ ಮುದಾ ಯುತಾಃ ॥ ೩೫ ॥

ತತ್ರೈವೋಮಾವನಂ ನಾಮ ಸರ್ವಲೋಕೇಷು ವಿಶ್ರುತಂ ।
ಅರ್ಧನಾರೀನರಂ ರೂಪಂ ಧೃತವಾನ್ ಯತ್ರ ಶಂಕರಃ ॥ ೩೬ ॥

ತಥಾ ಶರವಣಂ ನಾಮ ಯತ್ರ ಜಾತಃ ಷಡಾನನಃ ।
ಯತ್ರ ಚೈವ ಕೃತೋತ್ಸಾಹಃ ಕ್ರೌಂಚಶೈಲವನಂ ಪ್ರತಿ ॥ ೩೭ ॥

---

೩೩-೩೪. ಯಾವ ಜಾಗದಲ್ಲಿ ಸಂತೋಷಯುಕ್ತರೂ, ನಾನಾಭೂತಗಣಗಳಿಂದ ಯುತರೂ, ಚಿತ್ರಪುಷ್ಪಗಳಿಂದರಂಜಿತರೂ ಆದ ಉಮಾಮಹೇಶ್ವರರು ನಾನಾವಿಹಾರ ಗಳನ್ನು ಮಾಡಿದರೋ, ಮತ್ತು ಸಂತುಷ್ಟರೂ, ಗಿರಿಗವಿಯಲ್ಲಿ ವಾಸಮಾಡುವವರೂ, ಕೃಶೋದರಿಯರೂ, ಸುಂದರವಾದ ನೇತ್ರಗಳುಳ್ಳವರೂ ಆದ ಕಿನ್ನರಿಯರು ಸ್ವೇಚ್ಛೆ ಯಾಗಿ ನಾನಾವಿಹಾರಗಳನ್ನು ಮಾಡಿದ್ದರೋ,

೩೫. ವಿಶಾಲಾಕ್ಷರಾದ ಯಕ್ಷರೂ, ಅಪ್ಸರಸ್ತ್ರೀಯರ ಗುಂಪುಗಳೂ, ಸುಂದ ರಾಂಗರಾದ ಗಂಧರ್ವರೂ ಯಾವ ಯಾವ ಪ್ರದೇಶದಲ್ಲಿ ಸಂತೋಷದಿಂದ ವಿಹರಿಸು ತ್ತಿದ್ದರೋ,

೩೬. ಅಂತಹ ಪ್ರದೇಶದಲ್ಲಿ ಸರ್ವಲೋಕವಿಶ್ರುತವಾದ ಉಮಾವನವಿರುತ್ತದೆ. ಆ ಉಮಾವನದಲ್ಲಿ ಶಂಕರನು ಅರ್ಧನಾರೀಶ್ವರರೂಪವನ್ನು ಧರಿಸಿದ್ದನು.

೩೭. ಅಂತಹ ಪ್ರದೇಶದಲ್ಲಿ ಷಣ್ಮುಖನು ಜನಿಸಿದ ಶರವಣವು ಇರುತ್ತದೆ. ಅಲ್ಲಿಯೇ ಕ್ರೌಂಚಶೈಲವನವಿರುವುದು. ಆದುದರಿಂದ ಪ್ರಜೆಗಳ ಪ್ರೋತ್ಸಾಹವು ವಿಶೇಷವಾಗಿರುವುದು.

**ಧ್ವಜಾಪತಾಕಿನಂ ಚೈವ ಕಿಂಕಿಣೀಜಾಲಮಾಲಿನಂ ।**
**ಯತ್ರ ಸಿಂಹರಥಂ ಯುಕ್ತಂ ಕಾರ್ತಿಕೇಯಸ್ಯ ಧೀಮತಃ ॥ ೩೮ ॥**

**ಚಿತ್ರಪುಷ್ಪನಿಕುಂಜಸ್ಯ ಕ್ರೌಂಚಸ್ಯ ಚ ಗಿರೇಸ್ತಟೇ ।**
**ದೇವಾರಿಸ್ಯಂದನಃ ಸ್ಕಂದೋ ಯತ್ರ ಶಕ್ತಿಂ ವಿಮುಕ್ತವಾನ್ ॥ ೩೯ ॥**

**ಯತ್ರಾಭಿಷಿಕ್ತಶ್ಚ ಗುಹಃ ಸೇಂದ್ರೋಪೇಂದ್ರೈಃ ಸುರೋತ್ತಮೈಃ ।**
**ಸೇನಾಪತ್ಯೇ ಚ ದೈತ್ಯಾರಿರ್ದ್ವಾದಶಾರ್ಕಪ್ರತಾಪವಾನ್ ॥ ೪೦ ॥**

**ಭೂತಸಂಘಾವಕೀರ್ಣಾನಿ ಏತಾನ್ಯನ್ಯಾನಿ ಚ ದ್ವಿಜಾಃ ।**
**ತತ್ರ ತತ್ರ ಕುಮಾರಸ್ಯ ಸ್ಥಾನಾನ್ಯಾಯತನಾನಿ ಚ ॥ ೪೧ ॥**

**ತಥಾ ಪಾಂಡುಶಿಲಾ ನಾಮ ಹ್ಯಕ್ರೀಡಾ ಕ್ರೌಂಚಘಾತಿನಃ ।**
**ನಾನಾಭೂತಗಣಾಕೀರ್ಣೇ ಪೃಷ್ಠೇ ಹಿಮವತಃ ಶುಭೇ ॥ ೪೨ ॥**

೩೮. ಅಂಥ ಕ್ರೌಂಚಶೈಲವನದಲ್ಲಿ ಜ್ಞಾನಿಯಾದ ಷಣ್ಮುಖನ ಧ್ವಜಪತಾಕಾಲಂಕೃತವೂ, ಗೆಜ್ಜೆಗಳ ಸರಗಳಿಂದ ಮಂಡಿತವೂ ಆದ ಸಿಂಹರಥವು ದೇದೀಪ್ಯಮಾನವಾಗಿ ಹೊಳೆಯುವುದು.

೩೯. ವಿಚಿತ್ರವಾದ ಪುಷ್ಪಗಳಸಮೂಹವುಳ್ಳ ಕ್ರೌಂಚಗಿರಿಯ ತಟದಲ್ಲಿ ದೇವತೆಗಳಿಗೆ ಶತ್ರುಗಳಾದ ದೈತ್ಯರನ್ನು ನಾಶಮಾಡುವುದಕ್ಕಾಗಿ ಷಣ್ಮುಖನು ಎಲ್ಲಿ ಶಕ್ತ್ಯಾಯುಧವನ್ನು ಪ್ರಯೋಗಮಾಡಿದನೋ

೪೦. ಮತ್ತು ಯಾವ ಗಿರಿಯಲ್ಲಿ ಇಂದ್ರ, ಉಪೇಂದ್ರರಿಂದ ಸಹಿತರಾದ ದೇವೋತ್ತಮರು, ದೈತ್ಯಾರಿಯೂ, ದ್ವಾದಶಸೂರ್ಯರಂತೆ ಕಾಂತಿಯುತನೂ ಆದ ಕುಮಾರಸ್ವಾಮಿಯನ್ನು ಸೇನಾಪತಿಯನ್ನಾಗಿ ನೇಮಕಮಾಡಿದರೋ,

೪೧. ಎಲೈ ಮುನಿವರ್ಯರೇ, ಭೂತಸಂಘಗಳಿಂದ ಪರಿವೃತಗಳಾದ ಯಾವ ಯಾವ ಸ್ಥಾನಗಳಿವೆಯೋ ಅವುಗಳೆಲ್ಲ ಕುಮಾರಸ್ವಾಮಿಯ ಗೃಹಗಳಾಗಿಯೂ ಅವನು ವಿಹಾರಮಾಡಿದ ಸ್ಥಾನಗಳಾಗಿಯೂ ಇರುತ್ತವೆ.

೪೨. ನಾನಾಭೂತಗಳಿಂದ ವ್ಯಾಪ್ತವೂ, ರಮ್ಯವೂ ಆದ ಹಿಮವತ್ಪರ್ವತದ ಪೃಷ್ಠಭಾಗದಲ್ಲಿ ಕ್ರೌಂಚಾಸುರನನ್ನು ಸಂಹಾರಮಾಡಿದ ಷಣ್ಮುಖನ ಕ್ರೀಡಾಸ್ಥಾನವಾದ ಪಾಂಡುಶಿಲೆಯು ಪ್ರಖ್ಯಾತವಾಗಿದೆ.

ತಸ್ಯ ಪೂರ್ವೇ ತಟೇ ರಮ್ಯೇ ಸಿದ್ಧಾವಾಸಮುದಾಹೃತಂ ।
ಕಲಾಪಗ್ರಾಮಮಿತ್ಯೇವಂ ನಾಮ್ನಾ ಖ್ಯಾತಂ ಮನೀಷಿಭಿಃ ॥ ೪೩ ॥

ಮೃಕಂಡಸ್ಯ ವಸಿಷ್ಠಸ್ಯ ಭರತಸ್ಯ ನಲಸ್ಯ ಚ ।
ವಿಶ್ವಾಮಿತ್ರಸ್ಯ ವಿಪ್ರೇಷ್ಟೈಸ್ತಥೈವೋದ್ಧಾಲಕಸ್ಯ ಚ ॥ ೪೪ ॥

ಅನ್ಯೇಷಾಂ ಚೋಗ್ರತಪಸಾಂ ಋಷೀಣಾಂ ಭಾವಿತಾತ್ಮನಾಂ ।
ಹಿಮವತ್ಯಾಶ್ರಮಾಣಾಂ ಚ ಸಹಸ್ರಾಣಿ ಶತಾನಿ ಚ ॥ ೪೫ ॥

ನೈಕಸಿದ್ಧಗಣಾವಾಸಂ ಸ್ಥಾನಾಯತನಮಂಡಿತಂ ।
ಯಕ್ಷಗಂಧರ್ವಚರಿತಂ ನಾನಾಮ್ಲೇಚ್ಛಗಣೈರ್ಯುತಂ ॥ ೪೬ ॥

ನಾನಾರತ್ನಾಕರಾಪೂರ್ಣಂ ನಾನಾಸತ್ವನಿಷೇವಿತಂ ।
ನಾನಾನದೀಸಹಸ್ರಾಣಾಂ ಸಂಭವಂ ವರಪರ್ವತಂ ॥ ೪೭ ॥

---

೪೩-೪೫. ಅದರ ಪೂರ್ವಭಾಗದ ದಡದಲ್ಲಿ ರಮ್ಯವಾದ ಸಿದ್ಧರ ವಾಸಸ್ಥಾನವು ಇರುತ್ತದೆ. ಜ್ಞಾನಿಗಳು ಅದನ್ನು ಕಲಾಪಗ್ರಾಮವೆಂಬ ಹೆಸರಿನಿಂದ ಕರೆಯುತ್ತಾರೆ. ಆ ಹಿಮಾಲಯದ ಮಧ್ಯಭಾಗದಲ್ಲಿ ಮೃಕಂಡು, ವಸಿಷ್ಠ, ಭರತ, ನಲ, ವಿಶ್ವಾಮಿತ್ರ, ವಿಪ್ರರ್ಷಿಯಾದ ಉದ್ದಾಲಕ ಮತ್ತು ಉಗ್ರತಪಸ್ವಿಗಳೂ, ಸ್ಥಿರ ಮನಸ್ವಿಗಳೂ ಆದ ಇತರರಾದ ಮಹರ್ಷಿಗಳ ಆಶ್ರಮಗಳೂ ಇವೆ. ಆ ಹಿಮಾಲಯದ ನಾನಾಭಾಗಗಳಲ್ಲಿ ಸಹಸ್ರಾರು ಮಹರ್ಷಿಗಳೂ, ನೂರಾರು ಮುನಿಗಳೂ ಆಶ್ರಮಗಳಲ್ಲಿ ವಾಸಿಸುತ್ತಾರೆ.

೪೬-೪೭. ಆ ಹಿಮಾಲಯದಲ್ಲಿ ಅನೇಕ ಸಿದ್ಧಾಶ್ರಮಗಳೂ, ಅನೇಕ ಆಲಯಗಳೂ, ಯಕ್ಷರೂ, ಗಂಧರ್ವರೂ ಇವರ ನಡೆನುಡಿಗಳೂ, ನಾನಾಮ್ಲೇಚ್ಛಗಣಗಳೂ, ನಾನಾರತ್ನಗಳಗಣಿಗಳೂ, ನಾನಾಪ್ರಾಣಿಗಳವಾಸಸ್ಥಾನಗಳೂ, ನಾನಾವಿಧಸಾವಿರಾರು ನದಿಗಳಿಗೆ ಆಶ್ರಯಗಳೂ, ಸಾವಿರಾರು ಪರ್ವತಗಳಿಗೆ ಅವಕಾಶವೂ ವಿಶೇಷವಾಗಿರುತ್ತವೆ.

ಪಶ್ಚಿಮಸ್ಯಾಚಲೇಂದ್ರಸ್ಯ ನಿಷಧಸ್ಯ ಯಥಾರ್ಥವತ್ ।
ಕೀರ್ತ್ಯಮಾನಮಶೇಷೇಣ ವಿಶೇಷಂ ಶೃಣುತ ದ್ವಿಜಾಃ ॥ ೪೮ ॥

ವಿಸ್ತೀರ್ಣೇ ಮಧ್ಯಮೇ ಕೂಟೇ ಹೇಮಧಾತುವಿಭೂಷಿತೇ ।
ದೀಪ್ತಮಾಯತನಂ ವಿಷ್ಣೋಃ ಸಿದ್ಧರ್ಷಿಗಣಸೇವಿತಂ ॥
ಯಕ್ಷಾಪ್ಸರಃ ಸಮಾಕೀರ್ಣಂ ಗಂಧರ್ವಗಣಸೇವಿತಂ ॥ ೪೯ ॥

ತತ್ರ ಸಾಕ್ಷಾನ್ಮಹಾದೇವಃ ಪಿತಾಂಬರಧರೋ ಹರಿಃ ।
ವರದಃ ಸೇವ್ಯತೇ ಸಿದ್ಧೈರ್ಲೋಕಕರ್ತಾ ಸನಾತನಃ ॥ ೫೦ ॥

ತಸ್ಯೈವಾಭ್ಯಂತರೇ ಕೂಟೇ ನಾನಾಧಾತುವಿಭೂಷಿತೇ ।
ತಟೇ ನಿಷಧಕೂಟಸ್ಯ ಶ್ಲಕ್ಷ್ಣಚಾರುಶಿಲಾತಲೇ ॥ ೫೧ ॥

ರುಕ್ಮಕಾಂಚನನಿರ್ಯೂಹಂ ತಪ್ತಕಾಂಚನತೋರಣಂ ।
ಅನೇಕವಲಭೀಕೂಟಪ್ರತೋಲೀಶತಸಂಕಟಂ ॥ ೫೨ ॥

---

೪೮. ಎಲೈ ವಿಪ್ರೋತ್ತಮರೇ, ಹಿಮಾಲಯದ ಪಶ್ಚಿಮದಲ್ಲಿರುವ ನಿಷಧ ಪರ್ವತವು ಅನ್ವರ್ಥಕವಾಗಿದೆ. ಅದರ ವಿಶೇಷವರ್ತಮಾನಗಳನ್ನು ವಿವರವಾಗಿ ತಿಳಿಸುವೆನು ಕೇಳಿ ಎಂದನು

೪೯. ವಿಸ್ತೀರ್ಣವಾದ ಹಿಮಾಲಯದ ಮಧ್ಯಭಾಗದಲ್ಲಿ ಮಹಾವಿಷ್ಣುವಿನ ದೇವಾಲಯವಿರುತ್ತದೆ. ಅದು ದೀಪ್ತವಾದ ರತ್ನಮಯವಾಗಿಯೂ, ಪ್ರಕಾಶಮಾನ ವಾಗಿಯೂ, ಯಕ್ಷರು, ಅಪ್ಸರಸ್ತ್ರೀಯರು ಇವರಿಂದಲೂ, ಗಂಧರ್ವಗಣದಿಂದಲೂ ವ್ಯಾಪ್ತವಾಗಿಯೂ ಇರುತ್ತದೆ.

೫೦. ಇಂತಹ ದಿವ್ಯವಾದ ದೇವಾಲಯದಲ್ಲಿ ದೇವೋತ್ತಮನೂ, ಪೀತಾಂಬರ ಧಾರಿಯೂ, ವರಪ್ರದನೂ, ಲೋಕಕರ್ತನೂ, ಪುರಾಣಪುರುಷನೂ ಆದ ಶ್ರೀಹರಿಯು ಸಿದ್ಧರೇ ಮೊದಲಾದ ದೇವತೆಗಳಿಂದ ಸದಾಕಾಲದಲ್ಲಿಯೂ ಸೇವಿಸಲ್ಪಡುತ್ತಾನೆ.

೫೧-೫೨. ಅದೇ ನಿಷಧಕೂಟಗಿರಿಯ ಮಧ್ಯಪ್ರದೇಶದಲ್ಲಿ ರಾಕ್ಷಸರ ನಗರಿಯು ಶೋಭಿಸುತ್ತಿದೆ. ಅದು ನಾನಾಧಾತುಗಳಿಂದಲಂಕೃತವೂ, ಸುವರ್ಣ ಮತ್ತು ರತ್ನ ಇವುಗಳ ವಿಕಾರವುಳ್ಳದ್ದೂ ಶೋಧಿಸಿದ ಚಿನ್ನದ ತೋರಣಗಳಿಂದ ಭೂಷಿತವೂ, ಅನೇಕ

ಹರ್ಮ್ಯಪ್ರಾಸಾದಮತುಲಂ ತಪ್ತಕಾಂಚನಭೂಷಿತಂ ।
ಹರ್ಮ್ಯಪ್ರಾಸಾದಬದ್ಧಂ ಚ ಮುದಿತಂ ಚಾತಿವಿಸ್ತರಂ ॥ ೫೩ ॥

ಉದ್ಯಾನಮಾಲಾಕಲಿತಂ ತ್ರಿಂಶದ್ಯೋಜನಮಾಯುತಂ ।
ದುಃಪ್ರಸಹ್ಯಮಮಿತ್ರೈಸ್ತತ್ ಪೂರ್ಣಮಾಶೀವಿಷೋಪಮೈಃ ॥
ಉಲಂಘೀನಾಂ ಪ್ರವದಿತಂ ರಕ್ಷಸಾಂ ರಾಕ್ಷಸಂ ಪುರಂ ॥ ೫೪ ॥

ತಸ್ಯೈವ ದಕ್ಷಿಣೇ ಪಾರ್ಶ್ವೇ ನೈಕದೈತ್ಯಗಣಾಲಯೇ ।
ಗುಹಾಪ್ರವೇಶಂ ನಗರಂ ಶೈಲಕುಕ್ಷೌ ದುರಾಸದಂ ॥ ೫೫ ॥

ತಥೈವ ಪಶ್ಚಿಮೇ ಕೋಟೇ ಪಾರಿಜಾತಶಿಲೋಚ್ಚಯೇ ।
ದೇವದಾನವಭಾಗಾನಾಂ ಸಮೃದ್ಧಾನಿ ಪುರಾಣಿ ತು ॥ ೫೬ ॥

ತತ್ರ ಸೋಮಶಿಲಾ ನಾಮ ಗಿರೇಸ್ತಸ್ಯ ಮಹಾತಟೇ ।
ಸೋಮೋ ಯತ್ರಾವತರತಿ ಸದಾ ಪೂರ್ವಸು ಪರ್ವಸು ॥ ೫೭ ॥

---

ವಾದ ಮೇಲ್ಛಾವಣೀ ರಥ್ಯೆ ಇವುಗಳ ನೂರರಿಂದ ಸಹಿತವೂ ಶತ್ರುಗಳು ಪ್ರವೇಶಿಸಲಶಕ್ಯವೂ, ಅಸಂಖ್ಯಾಕವಾದ ಸರ್ಪಗಳಿಂದ ಪೂರ್ಣವೂ, ದುಷ್ಟರಿಗೆ ಆಶ್ರಯವೂ, ಉದ್ಯಾನಮಾಲೆಗಳಿಂದ ಭೂಷಿತವೂ, ಮೂವತ್ತುಯೋಜನ ವಿಸ್ತೀರ್ಣವೂ, ಆಗಿದೆ.

೫೫. ಆ ರಾಕ್ಷಸನಗರಿಗೆ ದಕ್ಷಿಣಭಾಗದಲ್ಲಿ ಅನೇಕ ದೈತ್ಯಸಂಘಗಳಿಗೆ ಆಶ್ರಯವೂ, ಆ ಶಿಲೆಯ ಮಧ್ಯಭಾಗದಲ್ಲಿ ಶತ್ರುಗಳಿಗೆ ಪ್ರವೇಶಿಸಲಶಕ್ಯವೂ ಆದ ಗುಹಾಪ್ರವೇಶವೆಂಬ ನಗರಿಯು ಶೋಭಿಸುತ್ತಿದೆ.

೫೬. ಹೀಗೆಯೇ ನಿಷಧಗಿರಿಯ ಪಶ್ಚಿಮಶಿಖರದಲ್ಲಿ ಪಾರಿಜಾತ ಶಿಲೆಯಿಂದ ಮಂಡಿತವೂ, ದೇವದಾನವಾದಿಗಳಿಗೆ ಆಶ್ರಯವೂ ಸಕಲೈಶ್ವರ್ಯಗಳಿಂದ ಸಮೃದ್ಧವೂ, ಆದ ನೂರಾರು ನಗರಿಗಳು ಪ್ರಕಾಶಿಸುತ್ತಿವೆ.

೫೭. ಅದೇ ಪರ್ವತದ ಅತಿವಿಶಾಲವಾದ ಮಹಾತಟದಲ್ಲಿ ಸೋಮಶಿಲೆಯು ಪ್ರಕಾಶಿಸುತ್ತಿದೆ. ಆ ಶಿಲಾತಲದಲ್ಲಿ ಪ್ರತಿಪರ್ವಕಾಲದಲ್ಲಿಯೂ ಚಂದ್ರನು ಅವತರಿಸಿ ಮರ್ಯಾದಿಸಲ್ಪಡುವನು.

ಉಪಾಸತೇಽತ್ರ ಶ್ರೀಮಂತಂ ತಾರಾಪತಿಮನಿಂದಿತಂ ।
ಋಷಿಕಿನ್ನರಗಂಧರ್ವಾಃ ಸಾಕ್ಷಾದ್ದೇವಂ ತಮೋನುದಂ ॥ ೫೮ ॥

ತತ್ರೈವ ಚೋತ್ತರೇ ಕೂಟೇ ಬ್ರಹ್ಮಪಾರ್ಶ್ವಮಿತಿ ಸ್ಮೃತಂ ।
ಸ್ಥಾನಂ ತತ್ರ ಸುರೇಶಸ್ಯ ಬ್ರಹ್ಮಣಃ ಪ್ರಥಿತಂ ದಿವಿ ॥ ೫೯ ॥

ಇಜ್ಯಾಪೂಜಾನಮಸ್ಕಾರೈಸ್ತತ್ರ ಸಿದ್ಧಾಃ ಸ್ವಯಂಭುವಂ ।
ಉಪಾಸತೇ ಮಹಾತ್ಮಾನಂ ಯಕ್ಷಗಂಧರ್ವದಾನವಾಃ ॥ ೬೦ ॥

ತಥೈವಾಯತನಂ ವಹ್ನೇಃ ಸರ್ವಲೋಕೇಷು ವಿಶ್ರುತಂ ।
ತತ್ರ ವಿಗ್ರಹವಾನ್ ವಹ್ನಿಃ ಸೇವ್ಯತೇ ಸಿದ್ಧಚಾರಣೈಃ ॥ ೬೧ ॥

---

೫೮. ಆ ಗಿರಿಯಲ್ಲಿ ವಾಸಮಾಡುವ ಋಷಿ, ಕಿನ್ನರ, ಗಂಧರ್ವರು, ಕಾಂತಿ ಯುತನೂ ನಕ್ಷತ್ರಗಳಿಗೆ ಒಡೆಯನೂ ನಿರ್ದೋಷಿಯೂ, ಅಂಧಕಾರ ನಿವಾರಕನೂ ಆದ ಚಂದ್ರನನ್ನು ಸದಾಕಾಲದಲ್ಲಿಯೂ ಪೂಜಿಸುವರು.

೫೯. ಅದೇ ದೇವಕೂಟಗಿರಿಯ ಉತ್ತರಶೃಂಗದ ಸ್ವರ್ಗಲೋಕವೆಂದು ಪ್ರಖ್ಯಾತವಾದ ಸ್ಥಳದಲ್ಲಿ, ದೇವತೆಗಳಿಗೆ ಒಡೆಯನಾದ ಬ್ರಹ್ಮದೇವನ ಬ್ರಹ್ಮಪಾರ್ಶ್ವ ವೆಂಬ ಸುಪ್ರಸಿದ್ಧವಾದ ಸ್ಥಾನವು ಶೋಭಿಸುತ್ತದೆ.

೬೦. ಆ ಬ್ರಹ್ಮಸ್ಥಾನದಲ್ಲಿ ಸಿದ್ಧರು, ಯಕ್ಷರು, ಗಂಧರ್ವರು, ದಾನವರು. ದೇವತೆಗಳು ಇವರು ಹೋಮ ಪೂಜಾ ನಮಸ್ಕಾರ ಇವುಗಳಿಂದ ದೇವದೇವನೂ ಮಹಾತ್ಮನೂ ಆದ ಬ್ರಹ್ಮದೇವನನ್ನು ಪೂಜಿಸುವರು.

೬೧. ಅದೇ ಪರ್ವತದಲ್ಲಿಯೇ ಮೂರುಲೋಕ ಪ್ರಖ್ಯಾತವಾದ ಅಗ್ನಿದೇವನ ದೇವಾಲಯವು ಜ್ವಲಿಸುತ್ತಿರುವುದು. ಅದರಲ್ಲಿ ಸಿದ್ಧಚಾರಣರು ಶರೀರಧಾರಿಯಾದ ಯಜ್ಞಪುರುಷನನ್ನು ಸೇವಿಸುವರು.

ತಥೈವ ಚೋತ್ತರೇ ರಮ್ಯೇ ತ್ರಿಶೃಂಗೇ ವರಪರ್ವತೇ ।
ಋಷಿಸಿದ್ಧಾನುಚರಿತೇ ನಾನಾಭೂತಗಣಾಲಯೇ ॥
ಪುರಂ ತತ್ ತ್ರಿಷು ಲೋಕೇಷು ಹೇಮಚಿತ್ರಂ ತು ವಿಶ್ರುತಂ ॥ ೬೨ ॥

ತ್ರಯಾಣಾಂ ದೇವಮುಖ್ಯಾನಾಂ ತ್ರೀಣ್ಯೇವಾಯತನಾನಿ ಚ ।
ನಾರಾಯಣಸ್ಯಾಯತನಂ ಪೂರ್ವಕೂಟೇ ದ್ವಿಜೋತ್ತಮಾಃ ॥
ಮಧ್ಯಮೇ ಬ್ರಹ್ಮಣಃ ಸ್ಥಾನಂ ಶಂಕರಸ್ಯ ತು ಪಶ್ಚಿಮೇ ॥ ೬೩ ॥

ದೈತ್ಯದಾನವಗಂಧರ್ವೈರ್ಯಕ್ಷರಾಕ್ಷಸಪನ್ನಗೈಃ ।
ಇಜ್ಯಾನಾ ಅಭಿಪೂಜ್ಯಂತೇ ದೇವದೇವಾ ಮಹಾಬಲಾಃ ॥ ೬೪ ॥

ತಥಾ ಪುರಾಣಿ ರಮ್ಯಾಣಿ ದೇಶೇ ಚೈವ ಕ್ವಚಿತ್ ಕ್ವಚಿತ್ ।
ಯಕ್ಷಗಂಧರ್ವನಾಗಾನಾಂ ತ್ರಿಶೃಂಗೇ ವರಪರ್ವತೇ ॥ ೬೫ ॥

---

೬೨. ಅದೇ ಪರ್ವತದ ಉತ್ತರಭಾಗದಲ್ಲಿ, ರಮ್ಯವೂ ಋಷಿಗಳೂ ಸಿದ್ಧರೂ ಇವರ ನಡೆನುಡಿಗಳುಳ್ಳದ್ದೂ ನಾನಾ ಭೂತಗಣಗಳಿಗೆ ಆಶ್ರಯವೂ ಮೂರುಲೋಕ ಖ್ಯಾತವೂ ಆದ ತ್ರಿಶಿಂಗಗಿರಿಯು ಸುಪ್ರಸಿದ್ಧವಾಗಿದೆ. ಅದರಲ್ಲಿ ರಮ್ಯವಾದ ಹೇಮ ಚಿತ್ರಾಲಯವು ಲೋಕವಂದಿತವಾಗಿದೆ.

೬೩. ಎಲೈ ಮುನಿವರ್ಯರೇ, ಆ ಗಿರಿಯಲ್ಲಿ ಸಕಲಲೋಕವಂದಿತರಾದ ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಮೂವರು ದೇವತೆಗಳ ಮೂರು ದೇವಾಲಯಗಳು ಹೊಳೆಯುತ್ತಿವೆ. ಅವುಗಳಲ್ಲಿ ಶ್ರೀಮನ್ನಾರಾಯಣನ ದೇವಾಲಯವು ಪೂರ್ವ ಭಾಗದಲ್ಲಿಯೂ ಬ್ರಹ್ಮದೇವನ ದೇವಾಲಯವು ಮಧ್ಯದಲ್ಲಿಯೂ ಪಶ್ಚಿಮದಲ್ಲಿ ಈಶ್ವರನ ದೇವಾಲಯವೂ ಹೊಳೆಯುತ್ತಿರುವುವು

೬೪. ದೇವ, ದಾನವ, ದೈತ್ಯ, ಗಂಧರ್ವ, ಯಕ್ಷ, ರಾಕ್ಷಸ, ಉರಗರುಗಳು ಇವರು ದೇವದೇವರೂ ಮಹಾಬಲಿಷ್ಠರೂ ಆದ ಆ ಬ್ರಹ್ಮ ವಿಷ್ಣು ಮಹೇಶ್ವರರನ್ನು ಯಾಗಾದಿಗಳಿಂದ ಪೂಜಿಸುವರು.

೬೫. ಅದರಂತೆಯೇ ತ್ರಿಶಿಂಗ ಪರ್ವತದ ಆಯಾ ರಮ್ಯವಾದ ಪ್ರದೇಶಗಳಲ್ಲಿ ಯಕ್ಷರು ಗಂಧರ್ವರು ನಾಗಗಳು ಇವೇ ಮೊದಲಾದ ದೇವತೆಗಳ ಹತ್ತು ದೇವಾಲಯ ಗಳು ಪ್ರಖ್ಯಾತವಾಗಿವೆ.

ತತ್ರೈವ ಚೋತ್ತರೇ ದೇಶೇ ಜಾರುಧೌ ದೇವಪರ್ವತೇ ।
ಅನೇಕಶೃಂಗಕಲಿತೇ ಸಿದ್ಧಸಾಧುನಿಷೇವಿತೇ ॥ ೬೬ ॥

ಯಕ್ಷಾಣಾಂ ಕಿನ್ನರಾಣಾಂ ಚ ಗಂಧರ್ವಾಣಾಂ ಸಹಸ್ರಶಃ ।
ನಾಗಾನಾಂ ರಾಕ್ಷಸಾನಾಂ ಚ ದೈತ್ಯಾನಾಂ ಚ ಮಹಾಬಲೇ ॥ ೬೭ ॥

ಕೋಟೇ ತು ಮಧ್ಯಮೋ ತಸ್ಯ ಸಿದ್ಧಸಂಘನಿಷೇವಿತೇ ।
ರಮ್ಯೇ ದೇವರ್ಷಿಚರಿತೇ ರತ್ನಧಾತು ವಿಭೂಷಿತೇ ॥ ೬೮ ॥

ಪದ್ಮೋತ್ಪಲವನೈಃ ಫುಲ್ಲೈಃ ಸೌಗಂಧಿಕವನೈಸ್ತಥಾ ।
ತಥಾ ಕುಮುದಖಂಡೈಶ್ಚ ವಿಕಚೈರುಪಶೋಭಿತೇ ॥ ೬೯ ॥

ವಿಹಂಗಸಂಘಸಂಘುಷ್ಟಂ ನಾನಾಸತ್ವನಿಷೇವಿತಂ ।
ಹಂಸಕಾರಂಡವಾಕೀರ್ಣಂ ಮತ್ತಷಟ್‌ಪದಸೇವಿತಂ ॥ ೭೦ ॥

---

೬೬-೬೭. ಆ ತ್ರಿಶಿಂಗಗಿರಿಯ ಉತ್ತರಭಾಗದ ದೇಶದಲ್ಲಿರುವ ದೇವ ಪರ್ವತದ ಜಾರುಧಿ ದೇಶದಲ್ಲಿ ಸಿದ್ಧಚಾರಣರಿಂದ ಸೇವಿತವಾದ ಅನೇಕ ಶಿಖರಗಳಲ್ಲಿ ಯಕ್ಷರು, ರಾಕ್ಷಸರು. ಕಿನ್ನರರು, ಗಂಧರ್ವರು, ನಾಗಗಳು, ದೈತ್ಯರು ಇವರೇ ಮೊದಲಾದವರ ಸಾವಿರಾರು ಸ್ಥಾನಗಳು ಪ್ರಖ್ಯಾತವಾಗಿರುವುವು.

೬೮-೭೦. ಸಿದ್ಧರ ಸಂಘದಿಂದ ಸೇವಿತವೂ, ರಮ್ಯವೂ, ದೇವರ್ಷಿಗಳ ಚರಿತ್ರೆಯುಳ್ಳದ್ದೂ ರತ್ನಧಾತುಗಳಿಂದ ಮಂಡಿತವೂ ಪದ್ಮಗಳೂ ನೈದಲೆಗಳೂ ವಿಕಸಿತವಾದ ಸೌಗಂಧಿಕಾಪುಷ್ಪಗಳೂ, ಸುಗಂಧಿಯೂ, ವಿಕಸಿತವೂ ಆದ ಕುಮುದಖಂಡಗಳು ಇವುಗಳಿಂದ ಅಲಂಕೃತವೂ, ಅನೇಕವಾದ ಪಕ್ಷಿಗಳ ಸಂಘದಿಂದ ವ್ಯಾಪ್ತವೂ, ನಾನಾ ಪ್ರಾಣಿಗಳಿಂದ ಭಯಂಕರವೂ, ಹಂಸ, ಬಾತು ಇವುಗಳಿಂದ ರಂಜಿತವೂ, ಮದಿಸಿರುವ ಜೇನುಹುಳುಗಳೇ ಮೊದಲಾದುವುಗಳಿಂದ ವ್ಯಾಪ್ತವೂ ಪವಿತ್ರವೂ ಆದ ಸರೋವರವು ಶೋಭಿಸುತ್ತಿರುವುದು.

ನಾನಾಸತ್ವಗಣಾಕೀರ್ಣಂ ವಿಹಂಗೈರುಪಶೋಭಿತಂ ।
ಚಾರುತೀರ್ಥಸುಸಂಬಾಧಂ ತ್ರಿಂಶದ್ಯೋಜನಮಂಡಲಂ ॥ ೭೧ ॥

ಸಿದ್ಧೈರುಪಸ್ಪೃಷ್ಟಜಲಂ ಜಲದೋಷವಿವರ್ಜಿತಂ ।
ತತ್ರಾನಂದಜಲನ್ನಾಮ ಮಹಾಪುಣ್ಯಜಲಂ ಸರಃ ॥ ೭೨ ॥

ತತ್ರ ನಾಗಪತಿಶ್ಚಂಡಶ್ಚಂಡೋ ನಾಮ ದುರಾಸದಃ ।
ಶತಶೀರ್ಷಾ ಮಹಾಭಾಗೋ ವಿಷ್ಣುಚಕ್ರಾಂಕಚಿಹ್ನಿತಃ ॥
ಇತ್ಯೇವಮಷ್ಟೌ ವಿಜ್ಞೇಯಾ ವಿಚಿತ್ರಾ ದೇವಪರ್ವತಾಃ ॥ ೭೩ ॥

ಪುರೈರಾಯತನೈಃ ಪುಣ್ಯೈಃ ಪುಣ್ಯೋದೈಶ್ಚ ಸರೋವರೈಃ ।
ಸುವರ್ಣಪರ್ವತೈರ್ನೈಕೈಸ್ತಥಾ ರಜತಪರ್ವತೈಃ ॥ ೭೪ ॥

ನಾನಾರತ್ನಪ್ರಭಾಸೈಶ್ಚ ನೈಕೈಶ್ಚ ಮಣಿಪರ್ವತೈಃ ।
ಹರಿತಾಲಪರ್ವತೈರ್ನೈಕೈಸ್ತಥಾ ಹಿಂಗುಲಕಾಂಚನೈಃ ॥ ೭೫ ॥

---

೭೧-೭೨. ನಾನಾ ಸತ್ವಪ್ರಾಣಿಗಳ ಗುಂಪಿನಿಂದ ವ್ಯಾಪ್ತವೂ, ಪಕ್ಷಿಗಳಿಂದ ಮಂಡಿತವೂ ಅನೇಕೋತ್ತಮ ತೀರ್ಥಗಳಿಂದ ಸಹಿತವೂ, ಮೂವತ್ತುಯೋಜನ ವಿಸ್ತೀರ್ಣವೂ, ಸಿದ್ಧಪುರುಷರ ಸ್ನಾನಪಾನಾದಿಗಳಿಗೆ ಯೋಗ್ಯವೂ ಜಲದೋಷ ಶೂನ್ಯವೂ, ಮಹಾಪುಣ್ಯಪ್ರದವೂ ಆನಂದನಾಮಕವೂ ಆದ ಸರೋವರವು ಶೋಭಿಸುತ್ತಿದೆ.

೭೩. ಅದರಲ್ಲಿ ಶತ್ರುನಾಶಕನೂ, ನೂರಾರು ಹೆಡೆಗಳುಳ್ಳವನೂ ಮಹಾ ಭಾಗ್ಯಶಾಲಿಯೂ ವಿಷ್ಣುವಿನ ಚಕ್ರಾಯುಧದಿಂದ ಗುರುತಿಸಲ್ಪಟ್ಟವನೂ, ಚಂಡ ನಾಮಕನೂ ಆದ ನಾಗರಾಜನು ಸದಾಕಾಲದಲ್ಲಿಯೂ ವಾಸಮಾಡುವನು. ಹೀಗೆ ಈ ಎಂಟು ದೇವಪರ್ವತಗಳೂ ಬಹಳ ವಿಚಿತ್ರವಾಗಿವೆಯೆಂದು ತಿಳಿಯಬೇಕು.

೭೪-೭೬. ಆ ಮೇರುಪರ್ವತವು ಪವಿತ್ರವೂ ವಿಶಾಲವೂ ಆದ ಪಟ್ಟಣ ಗಳಿಂದಲೂ, ಪುಣ್ಯಕರವಾದ ಸರೋವರಗಳಿಂದಲೂ, ಅಸಂಖ್ಯಾಕವಾದ ಸುವರ್ಣ ಪರ್ವತಗಳು ರಜತಪರ್ವತಗಳು ಇವುಗಳಿಂದ ಮಂಡಿತವೂ, ವಿವಿಧರತ್ನಕಾಂತಿಯುಕ್ತ ವಾದ ಮಣಿಪರ್ವತಗಳಿಂದ ರಂಜಿತವೂ, ಅನೇಕವಾದ ಹರಿತಾಳ ಗಿರಿಗಳಿಂದಲೂ,

ಶುದ್ಧೈರ್ಮನಃ ಶಿಲಾಜಾಲೈರ್ಭಾಸ್ವರೈರರುಣಪ್ರಭೈಃ ।
ನಾನಾಧಾತುವಿಚಿತ್ರೈಶ್ಚ ನೈಕೈಶ್ಚ ಮಣಿಪರ್ವತೈಃ ॥ ೭೬ ॥

ಪೂರ್ಣಾ ವಸುಮತೀ ಸರ್ವಾ ಗಿರಿಭಿರ್ನೈಕವಿಸ್ತರೈಃ ।
ನದೀಕಂದರಶೈಲಾದ್ಯೈರನೇಕೈಶ್ಚಿತ್ರಸಾನುಭಿಃ ॥ ೭೭ ॥

ಇತ್ಯೇವಮುಚಲೈರ್ಯುಕ್ತೈರ್ದೈತ್ಯರಾಕ್ಷಸಸಾಧುಭಿಃ ।
ಕಿನ್ನರೋರಗಗಂಧರ್ವೈರ್ವಿಚಿತ್ರೈಃ ಸಿದ್ಧಚಾರಣೈಃ ॥ ೭೮ ॥

ಗಂಧರ್ವೈರಪ್ಸರೋಭಿಶ್ಚ ಸೇವಿತಾ ನೈಕವಿಸ್ತರಾಃ ।
ಪುಣ್ಯಕೃದ್ಭಿಃ ಸಮಾಕೀರ್ಣಾ ಕೇಸರಾಕೃತಯೋ ನಗಾಃ ॥ ೭೯ ॥

ಗಿರಿಜಾಲಂ ತು ತನ್ಮೇರೋಃ ಸಿದ್ಧಲೋಕಮಿತಿ ಸ್ಮೃತಂ ।
ಚಿತ್ರಂ ನಾನಾಶ್ರಯೋಪೇತಂ ಪ್ರಚಾರಂ ಸುಕೃತಾತ್ಮನಾಂ ॥ ೮೦ ॥

ಹಿಂಗುಲ (ಇಂಗು) ಪರ್ವತಗಳಿಂದಲೂ, ಸುವರ್ಣಪರ್ವತಗಳಿಂದಲೂ, ಭೂಷಿತವೂ, ಶುದ್ಧಮನಃಶಿಲಾಪರ್ವಗಳೂ, ಶುಭ್ರವೂ, ಅರುಣಕಾಂತಿಯುತವೂ, ನಾನಾ ಧಾತುಗಳಿಂದ ವಿಚಿತ್ರವೂ ಆದ ಮಣಿಪರ್ವತಗಳಿಂದಲೂ. ಅತಿವಿಸ್ತಾರವಾದ ಗಿರಿಗಳಿಂದ ಭೂಷಿತವೂ ಆದ ಭೂಭಾಗಗಳಿಂದಲೂ ವ್ಯಾಪ್ತವಾಗಿದೆ

೭೭-೭೯. ಹೀಗೆ ಆ ಭೂಭಾಗವು ಅನೇಕ ವಿಧವಾದ ಕಂದರ ನದೀ ಶೈಲ ತಪ್ಪಲು ಇವುಗಳಿಂದ ವ್ಯಾಪ್ತವೂ, ದೈತ್ಯದಾನವರಿಂದಲೂ, ರಾಕ್ಷಸರಿಂದಲೂ, ಸಾಧುಗಳಿಂದಲೂ, ಕಿನ್ನರ. ಉರಗ, ಗಂಧರ್ವ, ಸಿದ್ಧಚಾರಣ, ಅಪ್ಸರಸ್ತ್ರೀ ಇವರಿಂದ ಸಹಿತವೂ, ಅತ್ಯಂತ ವಿಸ್ತಾರವೂ, ಮಹಾತ್ಮರಿಂದ ಪೂರ್ಣವೂ, ಆಗಿ ಕೇಸರಾಕಾರವಾದ ಪರ್ವತಗಳಂತೆ ಹೊಳೆಯುತ್ತಿದೆ.

೮೦. ಆ ಮೇರುಪರ್ವತದ ಪ್ರದೇಶಗಳಲ್ಲಿ ಅನೇಕ ಸಿದ್ಧರು ವಾಸ ಮಾಡುವುದರಿಂದ ಸಿದ್ಧಲೋಕವೆಂದು ಪ್ರಸಿದ್ಧವಾಗಿದೆ. ಅದು ನಾನಾ ಪ್ರಾಣಿಗಳಿಗೆ ಆಶ್ರಯವಾಗಿರುವುದರಿಂದ ಚಿತ್ರವಾಗಿಯೂ, ಮಹಾತ್ಮರಿಗೆ ಆಶ್ರಯವಾಗಿರುವುದರಿಂದ ಪ್ರಖ್ಯಾತವಾಗಿಯೂ ಇದೆ.

ನಾತ್ಯುಗ್ರಕರ್ಮಸಿದ್ಧಾನಾಂ ಪ್ರತಿಮಾ ಮಧ್ಯಮಾ ಸ್ಮೃತಾಃ ।
ಸಹಿ ಸ್ವರ್ಗ ಇತಿ ಖ್ಯಾತಃ ಕ್ರಮತ್ವೇಷ ಪ್ರಕೀರ್ತಿತಃ ॥ ೮೧ ॥

ಚತುರ್ಮಹಾದ್ವೀಪವತೋಸೇಯಮುರ್ವೀ ಪ್ರಕೀರ್ತಿತಾ ।
ನಾನಾವರ್ಣಪ್ರಪೂರ್ಣೈರ್ಹಿ ನಾನಾವರ್ಣಬಲೈಸ್ತಥಾ ॥ ೮೨ ॥

ನಾನಾಭಕ್ಷ್ಯಾನ್ನಪಾನೈಶ್ಚ ನಾನಾಚ್ಛಾದನಭೂಷಣೈಃ ।
ಪ್ರಜಾವಿಕಾರೈರ್ವಿವಿಧೈಶ್ಚಿತ್ರೈರಧ್ಯುಷಿತೈಃ ಸಹ ॥ ೮೩ ॥

ಚತ್ವಾರೋ ನೈಕವರ್ಣಾದ್ಯಾ ಮಹಾದ್ವೀಪಾಃ ಪರಿಶ್ರುತಾಃ ।
ಭದ್ರಾಶ್ಚ ಭರತಾಶ್ಚೈವ ಕೇತುಮಾಲಾಶ್ಚ ಪಶ್ಚಿಮಾಃ ॥
ಉತ್ತರಾಃ ಕುರವಶ್ಚೈವ ಕೃತಪುಣ್ಯಪ್ರತಿಶ್ರಯಾಃ ॥ ೮೪ ॥

ಸೈಷಾ ಚತುರ್ಮಹಾದ್ವೀಪಾ ನಾನಾದ್ವೀಪಸಮಾಕುಲಾ ।
ಪೃಥಿವೀ ಕೀರ್ತಿತಾ ಕೃತ್ಸ್ನಾ ಪದ್ಮಾಕಾರಾ ಮಯಾ ದ್ವಿಜಾಃ ॥ ೮೫ ॥

---

೮೧. ಅತ್ಯುಗ್ರಕರ್ಮಗಳನ್ನು ಮಾಡಿರುವ ಸಿದ್ಧಪುರುಷರಿಗೆ ಅದು ಮಧ್ಯಮ ಲೋಕವೆಂದು ಪ್ರಖ್ಯಾತವಾಗಿದೆ. ಅದೇ ಸ್ವರ್ಗಲೋಕವೆಂದು ಪ್ರಸಿದ್ಧವಾಗಿದೆ.

೮೨. ಆ ಭೂಭಾಗವು ನಾಲ್ಕು ಮಹಾದ್ವೀಪಗಳಿಂದ ವ್ಯಾಪ್ತವಾಗಿದೆ. ನಾನಾ ವರ್ಣಗಳು, ನಾನಾಕಾರಗಳು, ವಿವಿಧಶಕ್ತಿಗಳು, ಇರುವ ಪ್ರಾಣಿಗಳಿಂದ ಸಹಿತವೂ ಆಗಿದೆ.

೮೩. ನಾನಾಭಕ್ಷ್ಯ ಅನ್ನಪಾನ ಇವುಗಳಿಂದಲೂ, ನಾನಾವಸ್ತ್ರಭೂಷಣ ಗಳಿಂದಲೂ ವಿಚಿತ್ರಗಳು, ನಾನಾಕಾರವೇಷಿಗಳು, ಇವುಗಳಿಂದ ಆಶ್ರಿತವೂ, ಆಗಿ ಆ ಭೂಭಾಗವು ಮನೋರಂಜಕವಾಗಿದೆ.

೮೪. ಆ ಮೇರುವಿನಲ್ಲಿ ಅನೇಕ ವರ್ಣಗಳಿಂದ ವ್ಯಾಪ್ತವೂ, ಪುಣ್ಯಾತ್ಮರಿಗೆ ಆಶ್ರಯವೂ ಆದ ಭದ್ರಾಶ್ವ, ಭರತ, ಕೇತುಮಾಲ, ಉತ್ತರಕುರುವೆಂಬ ನಾಲ್ಕು ಮಹಾದ್ವೀಪಗಳು ಅತ್ಯಂತ ಪ್ರಖ್ಯಾತವಾಗಿವೆ.

೮೫. ಎಲೈ ವಿಪ್ರೋತ್ತಮರೇ ನಾನಾದ್ವೀಪಗಳಿಂದ ಸಹಿತವಾದ ಚತುರ್ಮಹಾ ದ್ವೀಪಗಳುಳ್ಳ ಸಂಪೂರ್ಣವಾದ ಈ ಭೂಮಿಯು ಪದ್ಮಾಕಾರವಾಗಿದೆಯೆಂದು ತಿಳಿಯ ಬೇಕು.

ತದೇಷಾ ಸಾಂತರದ್ವೀಪಾ ಸಶೈಲವನಕಾನನಾ ।
ಪದ್ಮೇತ್ಯಭಿಹಿತಾ ಕೃತ್ಸ್ನಾ ಪೃಥಿವೀ ಬಹುವಿಸ್ತರಾ ॥ ೮೬ ॥

ಸ ಬ್ರಹ್ಮಸದನಂ ಲೋಕಂ ಸ ದೇವಾಸುರಮಾನುಷಾ ।
ತ್ರಿಲೋಕಮಿತಿ ವಿಖ್ಯಾತಂ ಯತ್ಸತ್ತ್ವೈರ್ಣವಹಾರ್ಯತೇ ॥ ೮೭ ॥

ಚಂದ್ರಾದಿತ್ಯಾವತಪ್ತಂ ಯತ್ತಜ್ಜಗತ್ಪರಿಗೀಯತೇ ।
ಗಂಧವರ್ಣರಸೋಪೇತಂ ಶಬ್ದಸ್ಪರ್ಶಗುಣಾನ್ವಿತಂ ॥ ೮೮ ॥

ತಂ ಲೋಕಪದ್ಮಂ ಶ್ರುತಿಭಿಃ ಪದ್ಮಮಿತ್ಯಭಿಧೀಯತೇ ।
ಏಷ ಸರ್ವಪುರಾಣೇಷು ಕ್ರಮಃ ಸುಪರಿನಿಶ್ಚಿತಃ ॥ ೮೯ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಭುವನವಿನ್ಯಾಸೋ" ನಾಮೈಕಚತ್ವಾರಿಂಶೋಽಧ್ಯಾಯಃ

---

೮೬. ಅವಾಂತರದ್ವೀಪದಿಂದಲೂ ಪರ್ವತ ಉಪವನ ಅರಣ್ಯ ಇವುಗಳಿಂದಲೂ ಸಹಿತವೂ, ಬಹುವಿಸ್ತಾರವೂ, ಸಂಪೂರ್ಣವೂ ಆದ ಈ ಭೂಮಿಯು ಪದ್ಮಾಕಾರವಾಗಿದೆಯೆಂದು ಪ್ರಖ್ಯಾತವಾಗಿದೆ.

೮೭. ಬ್ರಹ್ಮದೇವನ ಗೃಹದಿಂದಲೂ, ದೇವತೆಗಳು ಅಸುರರು ಮನುಷ್ಯರು ಇವರಿಂದಲೂ ಸಹಿತವೂ ಆದ ಈ ಲೋಕವು ತ್ರಿಲೋಕವೆಂಬುದಾಗಿ ಪ್ರಖ್ಯಾತವಾಗಿದೆಯೆಂದು ಜ್ಞಾನಿಗಳು ಹೇಳುವರು.

೮೮-೮೯. ಯಾವುದು ಚಂದ್ರಸೂರ್ಯರ ಕಾಂತಿಯಿಂದ ಯುಕ್ತವಾಗಿರುತ್ತದೆಯೋ ಅದೇ ಜಗತ್ತೆಂದು ಪ್ರಖ್ಯಾತವಾಗಿದೆ. ಗಂಧವರ್ಣರಸ ಇವುಗಳಿಂದ ಸಹಿತವೂ ಶಬ್ದಸ್ಪರ್ಶವೆಂಬ ಗುಣಗಳಿಂದ ಯುಕ್ತವೂ, ಪದ್ಮಾಕಾರವೂ ಆದ ಈ ಲೋಕವನ್ನು ಶ್ರುತಿಗಳು ಪದ್ಮವೆಂಬುದಾಗಿ ಹೊಗುಳುತ್ತವೆ. ಇದೇ ಸರ್ವ ಪುರಾಣಗಳಲ್ಲಿಯೂ ಸುನಿಶ್ಚಿತವಾದ ವಿಷಯವಾಗಿದೆ

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಭುವನವಿನ್ಯಾಸ"ವೆಂಬ ನಲವತ್ತೊಂದನೆಯ ಅಧ್ಯಾಯವು ಸಮಾಪ್ತವು

## ನಲವತ್ತೊಂದನೆಯ ಅಧ್ಯಾಯದ ಸಾರಾಂಶವು

ಸಕಲ ದೇವತೆಗಳಿಂದಲೂ ಬ್ರಹ್ಮಸದನದಿಂದಲೂ ಸಹಿತವಾದ ಈ ಜಗತ್ತು ಲೋಕಪದ್ಮವೆಂಬುದಾಗಿ ವರ್ಣಿತವಾಗಿದೆ. ರಮ್ಯವಾದ ಕೈಲಾಸಗಿರಿಯು ಸುಂದರವಾದ ಮಧ್ಯ ಶಿಖರದಲ್ಲಿ ಅತಿ ವಿಶಾಲವೂ ಸುವರ್ಣಮಯವೂ ಆದ ಕುಬೇರನ ಅಲಕಾರನಗರಿಯೂ ಅದರ ಮಧ್ಯದಲ್ಲಿ ದಿವ್ಯಸಭೆಯೂ, ವಿಚಿತ್ರವಾದ ಪುಷ್ಪಕ ವಿಮಾನವೂ, ಪದ್ಮಾದಿನವನಿಧಿಗಳೂ, ಇಂದ್ರಾದಿ ಅಷ್ಟದಿಕ್ಪಾಲಕರ ನಗರಗಳೂ, ದೇವಗಂಗೆ ಅಲಕನಂದೆಯೇ ಮೊದಲಾದ ನದಿಗಳೂ ಪ್ರಕಾಶಿಸುತ್ತವೆ.

ಕೈಲಾಸಗಿರಿಯ ಪೂರ್ವಶಿಖರದಲ್ಲಿ ಅತ್ಯಂತ ವಿಶಾಲವಾದ ಗಂಧರ್ವನಗರಗಳೂ ಚಿತ್ರಸೇನನೇ ಮೊದಲಾದವರ ದಿವ್ಯಭವನಗಳೂ ಇವೆ. ಪಶ್ಚಿಮಶಿಖರದಲ್ಲಿಯಾದರೋ ವಿಚಿತ್ರವಾದ ಅನೇಕ ನಗರಗಳೂ ಯಕ್ಷೇಶ್ವರ ಭವನಗಳೂ ಇವೆ ದಕ್ಷಿಣದ ಹಿಮಾಲಯದ ಭಾಗದಲ್ಲಿ ಕಿನ್ನರಾದಿಗಳ ವಾಸಸ್ಥಾನಗಳೂ ಉಮಾವನವೂ ಕುಮಾರ ಸ್ವಾಮಿಯು ಜನಿಸಿದ ಶರವಣವೂ ಅವನು ದೈತ್ಯರ ಸಂಗಡ ಯುದ್ಧಮಾಡಿದ ಸ್ಥಾನವೂ, ಉಮಾದೇವಿಯು ತಪಸ್ಸನ್ನು ಮಾಡಿದ ಪ್ರದೇಶವೂ, ವರ್ಣಿತವಾಗಿವೆ. ಅದರ ಪೂರ್ವಭಾಗದಲ್ಲಿ ಸುಪ್ರಸಿದ್ಧವಾದ ಕಲಾಪಗ್ರಾಮವೂ, ವಸಿಷ್ಠ, ಮೃಕಂಡು, ಭರತ, ನಲ, ವಿಶ್ವಾಮಿತ್ರ, ಇವರ ಆಶ್ರಮಗಳೂ, ಯಕ್ಷ ರಾಕ್ಷಸ ಮ್ಲೇಚ್ಛಾದಿಗಳ ವಾಸಸ್ಥಾನಗಳೂ ಇವೆ. ಪಶ್ಚಿಮಶಿಖರದಲ್ಲಿ ಸೋಮಶಿಲೆಯೂ, ಉತ್ತರಭಾಗದಲ್ಲಿ ಬ್ರಹ್ಮಪಾರ್ಶ್ವವೆಂಬಸ್ಥಾನವೂ, ಅಗ್ನಿದೇವನ ಆಯತನೂ ಇರುತ್ತವೆ. ಪೂರ್ವಭಾಗದಲ್ಲಿ ಶ್ರೀಮನ್ನಾರಾಯಣನ ಆಲಯವೂ, ಮಧ್ಯದಲ್ಲಿ ಬ್ರಹ್ಮದೇವನ ಆಲಯವೂ, ಪಶ್ಚಿಮದಲ್ಲಿ ಈಶ್ವರಾಲಯವೂ, ಪ್ರಕಾಶಿಸುತ್ತವೆ. ಮತ್ತು ಯಕ್ಷರು, ಗಂಧರ್ವರು, ಕಿನ್ನರರು, ಕಿಂಪುರುಷರು, ಇವರ ಆಲಯಗಳೂ, ಸೌಗಂಧಿಕಾದಿವನಗಳೂ ಅನೇಕವಾದ ಬೆಟ್ಟಗಳೂ ನಾನಾವನಗಳೂ ಇವೆ. ಈ ಜಗತ್ತನ್ನು ಜ್ಞಾನಿಗಳು ಭೂಪದ್ಮವೆಂದು ಹೇಳುತ್ತಾರೆ. ಭದ್ರ, ಭರತ, ಕೇತುಮಾಲ. ಕುರುವೆಂಬ ನಾಲ್ಕು ದ್ವೀಪಗಳಿಂದ ಸಹಿತವಾಗಿದೆ. ಹೀಗೆ ಸಕಲದೇವತೆಗಳಿಗೆ ಆಶ್ರಯವೂ, ಚಂದ್ರಸೂರ್ಯರ ಕಾಂತಿಯುತವೂ, ಆದ ಈ ಹಿಮಾಲಯವೇ ಸ್ವರ್ಗಲೋಕವಾಗಿದೆ ಎಂಬ ವಿಷಯವೂ ಕೂಡ ವರ್ಣಿತವಾಗಿದೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ದ್ವಿಚತ್ವಾರಿಂಶೋಽಧ್ಯಾಯಃ

॥ ಸೂತ ಉವಾಚ ॥

ಸರೋವರೇಭ್ಯಃ ಪುಣ್ಯೋದಾಃ ದೇವನದ್ಯೋ ವಿನಿರ್ಗತಾಃ ।
ಮಹೌಘತೋಯಾ ನದ್ಯಶ್ಚ ತಾಃ ಶೃಣುಧ್ವಂ ಯಥಾಕ್ರಮಂ ॥ ೧ ॥

ಆಕಾಶಾಂಭೋನಿಧೇರ್ಯೋಽಸೌ ಸೋಮ ಇತ್ಯಭಿಧೀಯತೇ ।
ಆಧಾರಃ ಸರ್ವಭೂತಾನಾಂ ದೇವಾನಾಮಮೃತಾಕರಃ ॥ ೨ ॥

---

## ನಲವತ್ತೆರಡನೆಯ ಅಧ್ಯಾಯವು

೧. ಸೂತಮುನಿಗಳು ಹೇಳಿದರು:—ಆ ಹಿಮಾಲಯದಲ್ಲಿರುವ ಸರೋವರಗಳಿಂದ ಪವಿತ್ರವೂ, ಪುಣ್ಯದಾಯಕವೂ, ಅತ್ಯಂತ ಜಲಭರಿತವೂ ಆದ ಅನೇಕ ಮಹಾನದಿಗಳು ಉತ್ಪನ್ನವಾದ ವಿಷಯಗಳನ್ನು ಕ್ರಮವಾಗಿ ಹೇಳುವೆನು ಕೇಳಿರೆಂದನು.

೨. ಯಾವ ಚಂದ್ರನು ಆಕಾಶವೆಂಬ ಸಮುದ್ರದಲ್ಲಿ ಹೊಳೆಯುತ್ತಾನೆಯೋ (ಆಕಾಶ ಸಮುದ್ರದಲ್ಲಿ ಪ್ರಖ್ಯಾತನಾಗಿರುವನೋ) ಅಮೃತಾಕರನಾದ ಆ ಚಂದ್ರನು ಸಮಸ್ತ ಭೂತಗಳಿಗೂ ದೇವತೆಗಳಿಗೂ ಆಧಾರನಾಗಿರುತ್ತಾನೆ.

ತಸ್ಮಾತ್ ಪ್ರವೃತ್ತಾ ಪುಣ್ಯೋದಾ ನದೀ ಹ್ಯಾಕಾಶಗಾಮಿನೀ ।
ಸಪ್ತಮೇನಾನಿಲಪಥಾ ಪ್ರಯಾತಾ ವಿಮಲೋದಕಾ ॥ ೩ ॥

ಸಾ ಜ್ಯೋತಿಷಿ ನಿವರ್ತಂತೀ ಜ್ಯೋತಿರ್ಗಣನಿಷೇವಿತಾ ।
ತಾರಾಕೋಟಿಸಹಸ್ರಾಣಾಂ ನಭಸಶ್ಚ ಸಮಾಯುತಾ ॥ ೪ ॥

ಮಾಹೇಂದ್ರೇಣ ಗಜೇಂದ್ರೇಣ ಆಕಾಶಪಥಯಾಯಿನಾ ।
ಕ್ರೀಡಿತಾ ಹ್ಯಂತರತಲೇ ಯಾ ಸಾ ಚ ವಿಕ್ಷೋಭಿತೋದಕಾ ॥ ೫ ॥

ನೈಕೈರ್ವಿಮಾನಸಂಘಾತೈಃ ಪ್ರಕ್ರಾಮದ್ಭಿರ್ನಭಸ್ತಲಂ ।
ಸಿದ್ಧೈರುಪಸ್ಪೃಷ್ಟಜಲಾ ಮಹಾಪುಣ್ಯಜಲಾ ಶಿವಾ ॥ ೬ ॥

ವಾಯುನಾ ಪ್ರೇರ್ಯಮಾಣಾ ಚ ಅನೇಕಾಭೋಗಗಾಮಿನೀ ।
ಪರಿವರ್ತತ್ಯಹರಹರ್ಯಥಾ ಸೂರ್ಯಸ್ತಥೈವ ಸಾ ॥ ೭ ॥

---

೩-೪. ಆ ಚಂದ್ರಮಂಡಲದಿಂದ ಉತ್ಪನ್ನವೂ ಪವಿತ್ರವಾದ ಉದಕವುಳ್ಳದ್ದೂ ಆಕಾಶಗಾಮಿಯೂ ಆದ ಆ ನದಿಯು ಏಳನೆಯ ವಾಯುಮಾರ್ಗದಿಂದ ಹೊರಟು ಸ್ವಚ್ಛವಾದ ಜಲದಿಂದ ಕೂಡಿ ಜ್ಯೋತಿಮಂಡಲದಲ್ಲಿ ಹರಿದು ಜ್ಯೋತಿರ್ಗಣದಿಂದ ಸೇವಿತವಾಗಿ ಅಸಂಖ್ಯಾತವಾದ ನಕ್ಷತ್ರಗಳಿರುವ ಆಕಾಶದಲ್ಲಿ ಸಂಚರಿಸುವುದು.

೫. ಆಕಾಶದಲ್ಲಿ ಸಂಚರಿಸುವ ದೇವೇಂದ್ರನ ಐರಾವತವು ಆ ದೇವಗಂಗೆಯಲ್ಲಿ ವಿಹರಿಸಿ, ಆ ಜಲವನ್ನು ಅಲ್ಲೋಲಕಲ್ಲೋಲವನ್ನಾಗಿ ಮಾಡುತ್ತದೆ.

೬. ಆಕಾಶವನ್ನು ಪ್ರಕಾಶಗೊಳಿಸುವ ಅನೇಕ ವಿಮಾನಗಳಲ್ಲಿ ಸಂಚರಿಸುವ ಸಿದ್ಧರೇ ಮೊದಲಾದ ದೇವತೆಗಳು ಮಂಗಳಕರವೂ ಪವಿತ್ರವೂ ಆದ ದಿವ್ಯನದಿಯಲ್ಲಿ ಸ್ನಾನಪಾನಾದಿಗಳನ್ನು ಮಾಡುವರು.

೭. ಆ ಆಕಾಶಗಂಗೆಯು ವಾಯುವಿನಿಂದ ಪ್ರೇರಿತವಾಗಿ ಅನೇಕ ರೂಪವಾಗಿ ಹರಿದು ಪ್ರತಿ ದಿನದಲ್ಲಿಯೂ ಉದಯಿಸುವ ಸೂರ್ಯನಂತೆ ಹೊಳೆಯುವುದು.

ಚತ್ವಾರ್ಯಶೀತಿಃ ಪ್ರತತಾ ಯೋಜನಾನಾಂ ಸಮಂತತಃ ।
ವೇಗೇನ ಕುರ್ವತೀ ಮೇರುಂ ಸಾ ಪ್ರಯಾತಾ ಪ್ರದಕ್ಷಿಣಂ ॥ ೮ ॥

ವಿಭಿದ್ಯಮಾನಾ ಸಲಿಲೈಸ್ತ್ವೈಜಸೇನಾನಿಲೇನ ಚ ।
ಮೇರುತ್ತರಕೂಟೇಷು ಪತಿತಾಥ ಚತುರ್ಷ್ವಪಿ ॥ ೯ ॥

ಮೇರುಕೂಟತಟಾಂತೇಭ್ಯ ಉತ್ಕೃಷ್ಟೇಭ್ಯೋ ನಿವರ್ತಿತಾ ।
ವಿಕೀರ್ಯಮಾಣಸಲಿಲಾ ಚತುರ್ದ್ಧಾಸಂಸೃತೋದಕಾ ॥ ೧೦ ॥

ಷಷ್ಠಿಯೋಜನಸಾಹಸ್ರಂ ನಿರಾಲಂಬನಮಂಬರಂ ।
ನಿಪಪಾತ ಮಹಾಭಾಗಾ ಮೇರೋಸ್ತಸ್ಯ ಚತುರ್ದಿಶಂ ॥ ೧೧ ॥

ಸಾ ಚತುರ್ಷ್ವಭಿತಶ್ಚೈವ ಮಹಾಪಾದೇಷು ಶೋಭನಾ ।
ಪುಣ್ಯಾ ಮಂದರ ಪೂರ್ವೇಣ ಪತಿತಾ ಹಿ ಮಹಾನದೀ ॥ ೧೨ ॥

---

೮. ದೇವಗಂಗೆಯು ಆಕಾಶದಲ್ಲಿ ಎಂಬತ್ತುನಾಲ್ಕು ಯೋಜನದಷ್ಟು ವಿಸ್ತಾರವಾಗಿ ಸಂಚರಿಸಿ, ಮೇರುಪರ್ವತವನ್ನು ಪ್ರದಕ್ಷಿಣಾಕಾರವಾಗಿ ಸುತ್ತಿ ಸಂಚರಿಸುವುದು.

೯. ಆ ದೇವಗಂಗೆಯು ಕಾಂತಿಯುತವೂ ಗಾಳಿಯಿಂದ ಪ್ರೇರಿತವೂ, ಆಗಿ ಮೇರುವಿನ ಉತ್ತರಭಾಗದ ನಾಲ್ಕು ಶಿಖರಗಳಲ್ಲಿಯೂ ಧುಮುಕಿ ಶಿಖರಗಳನ್ನೂ ಭೇದಿಸುವುದು.

೧೦. ತರುವಾಯ ದೇವನದಿಯು ಆ ಮೇರುಗಿರಿಯ ನಾಲ್ಕು ಶಿಖರಗಳಲ್ಲಿ ಧುಮುಕಿ ಉತ್ತಮವಾದ ಶಿಖರಗಳ ಮಧ್ಯದಲ್ಲಿ ಹೊರಟು ಹರಡಿದ ಜಲಸಮೇತವಾಗಿ ನಾಲ್ಕು ಭಾಗವಾಗಿ ಹರಿಯುವುದು.

೧೧. ಮಹಾಭಾಗ್ಯವಂತಳಾದ ಆ ಗಂಗಾದೇವಿಯು ನಿರಾಶ್ರಯವಾದ ಆಕಾಶ ದಲ್ಲಿ ಸಂಚರಿಸುತ್ತಾ ಅರವತ್ತು ಸಹಸ್ರಯೋಜನದಷ್ಟು ಎತ್ತರದಿಂದ ಆ ಮಹಾ ಮೇರುವಿನ ನಾಲ್ಕು ದಿಕ್ಕುಗಳಲ್ಲಿಯೂ ಧುಮುಕಿದಳು.

೧೨. ಆ ಮಹಾನದಿಯು ಮೇರುವಿನ ನಾಲ್ಕು ಪಾದಗಳಲ್ಲಿಯೂ ಮೆರೆಯುತ್ತಾ ಸಂಚರಿಸಿ, ಮಂದರಗಿರಿಯ ಪೂರ್ವಭಾಗದಲ್ಲಿ ಬಿದ್ದು ಹರಿಯುವುದು.

ಪೂರ್ವೇಣಾಂಶೇನ ದೇವಾನಾಂ ಸರ್ವಸಿದ್ಧಗಣಾಲಯಂ ।
ಸುವರ್ಣಚಿತ್ರಕಟಕಂ ನೈಕನಿರ್ಝರಕಂದರಂ ॥ ೧೩ ॥

ಪ್ಲಾವಯಂತೀ ಸಶೈಲೇಂದ್ರಂ ಮಂದರಂಚಾರುಕಂದರಂ ।
ವಪ್ರಪ್ರತಾಪಶಮನ್ಯೈರನೇಕೈಃ ಸ್ಫಾಟಿಕೋದಕೈಃ ॥ ೧೪ ॥

ತಥಾ ಚೈತ್ರರಥಂ ರಮ್ಯಂ ಪ್ಲಾವಯಂತೀ ಪ್ರದಕ್ಷಿಣಂ ।
ಪ್ರವಿಷ್ಟಾ ಹ್ಯಂಬರನದೀ ಹ್ಯರುಣೋದಸರೋವರಂ ॥ ೧೫ ॥

ಅರುಣೋದಾನ್ನಿವೃತ್ತಾಽಥ ಶೀತಾಂತೇ ರಮ್ಯನಿರ್ಝರೇ ।
ಶೈಲೇ ಸಿದ್ಧಗಣಾವಾಸೇ ನಿಪಪಾತ ಸುಗಾಮಿನೀ ॥ ೧೬ ॥

ಸೀತಾ ನಾಮ ಮಹಾಪುಣ್ಯಾ ನದೀನಾಂ ಪ್ರವರಾ ನದೀ ।
ಸಾ ನಿಕುಂಜನಿರುದ್ಧಾ ತು ಅನೇಕಾಭೋಗಗಾಮಿನೀ ॥ ೧೭ ॥

---

೧೩-೧೫. ಹೀಗೆ ಆ ಗಂಗಾನದಿಯು ಪೂರ್ವಭಾಗದಿಂದ ಹೊರಟು, ದೇವತೆಗಳ ಸಕಲೇಷ್ಟಾರ್ಥಗಳಿಗೂ ಆಶ್ರಯವೂ ಸುವರ್ಣದಿಂದ ವಿಚಿತ್ರವೂ ಆದ ನಿತಂಬಪ್ರದೇಶವುಳ್ಳ, ಅನೇಕ ಗಿರಿನದಿಗಳಿಂದ ಪೂರ್ಣವಾದ ಕಂದಕಗಳುಳ್ಳ, ಮಂದರಗಿರಿಯನ್ನು ನೆನೆಸುತ್ತಲೂ ತನ್ನ ವೇಗದಿಂದ ಸ್ಫಟಿಕಶಿಲೆಗಳನ್ನು ಎಬ್ಬಿಸುತ್ತಲೂ (ಕೀಳುತ್ತಲೂ) ಅದರಂತೆಯೇ ರಮ್ಯವಾದ ಚೈತ್ರರಥವನ್ನು ಸುತ್ತಿ ಅವನ್ನೂ ನೆನಸಿ ಅಲ್ಲಿಂದ ಹೊರಟು ಅರುಣೋದ ಸರೋವರವನ್ನು ಪ್ರವೇಶಿಸಿತು.

೧೬. ಮಹಾನದಿಯಾದ ಗಂಗೆಯು ಆ ಅರುಣೋದ ಸರಸ್ಸಿನಿಂದ ಹೊರಟು ಅನೇಕ ಸಿದ್ಧರೇ ಮೊದಲಾದವರಿಂದ ಸೇವಿತವೂ ಅನೇಕ ಗಿರಿನದಿಗಳಿಗೆ ಆಶ್ರಯವೂ ಆದ ಸೀತಾಂತನಾಮಕವಾದ ಪರ್ವತದಲ್ಲಿ ಧುಮುಕಿ ಮಂದಗಾಮಿನಿಯಾಗುವುದು.

೧೭. ಆ ಗಂಗೆಯು ಶೀತಾಂತ ಪರ್ವತದಲ್ಲಿರುವುದೂ, ನದಿಗಳಲ್ಲಿ ಉತ್ತಮವೂ ಮಹಾಪುಣ್ಯಕರವೂ ಆದ ಸೀತಾನದಿಯೊಡನೆ ಕೂಡಿ ಅನೇಕ ಪೊದೆಗಳಿಂದ ತಡೆಯಲ್ಪಟ್ಟು ಅತಿ ಗಂಭೀರವಾದ ನಡಿಗೆಯಿಂದ ಸಂಚರಿಸುವುದು.

ಶೀತಾಂತಶಿಖರಾದ್ಭ್ರಷ್ಟಾ ಸುಕುಂಜೇ ವರಪರ್ವತೇ ।
ನಿಪಪಾತ ಮಹಾಭಾಗಾ ತಸ್ಮಾದಪಿ ಸುಮುಂಜಸಂ ॥ ೧೮ ॥

ತಸ್ಮಾನ್ಮಾಲ್ಯವತಂ ಶೈಲಂ ಭಾವಯಂತೀ ವರಾಪಗಾ ।
ವೈಕಂಕಂ ಸಮನುಪ್ರಾಪ್ತಾ ವೈಕಂಕಾನ್ಮಣಿಪರ್ವತಂ ।
ಮಣಿಪರ್ವತಾನ್ಮಹಾಶೈಲಂ ಋಷಭಂ ನೈಕಕಂದರಂ ॥ ೧೯ ॥

ಏವಂ ಶೈಲಸಹಸ್ರಾಣಿ ದಾರಯಂತೀ ಮಹಾನದೀ ।
ಪತಿತಾಽಥ ಮಹಾಶೈಲೇ ಜಠರೇ ಸಿದ್ಧಸೇವಿತೇ ॥ ೨೦ ॥

ತಸ್ಮಾದಪಿ ಮಹಾಶೈಲಂ ದೇವಕೂಟಂ ತರಂಗಿಣೀ ।
ತಸ್ಯ ಕುಕ್ಷಿಸಮುದ್ಭ್ರಾಂತಾ ಕ್ರಮೇಣ ಪೃಥಿವೀಂ ಗತಾ ॥ ೨೧ ॥

ಸೈವಂ ಸ್ಥಲೀಸಹಸ್ರಾಣಿ ಶೈಲರಾಜಶತಾನಿ ಚ ।
ವನಾನಿ ಚ ವಿಚಿತ್ರಾಣಿ ಸರಾಂಸಿ ವಿವಿಧಾನಿ ಚ ॥ ೨೨ ॥

---

೧೮-೧೯. ಹೀಗೆ ಆ ಮಹಾನದಿಯು ಶೀತಾಂತಶಿಖರದಿಂದ ನಿಕುಂಜವೆಂಬ ಪರ್ವತದಲ್ಲಿ ಬಿದ್ದು ಅಲ್ಲಿಂದ ಸುಮುಂಜಸವೆಂಬ ಗಿರಿಯಲ್ಲಿ ಧುಮುಕಿ ಅದರಿಂದ ಮಾಲ್ಯವತ್ಪರ್ವತಕ್ಕೆ ಹೋಗಿ ಆ ಪರ್ವತಭಾಗಗಳನ್ನು ತೋಯಿಸಿ ಅಲ್ಲಿಂದ ವೈಕಂಕ ಗಿರಿಗೆ ಹೋಗಿ ಅಲ್ಲಿಂದಲೂ ಮಣಿಪರ್ವತದಲ್ಲಿ ಇಳಿದು ಆ ಮಣಿಪರ್ವತದಿಂದ ಅನೇಕ ಗವಿಗಳಿರುವ ಪರ್ವತೋತ್ತಮವಾದ ಋಷಭ ಪರ್ವತಕ್ಕೆ ಬಂದು ಸಂಚರಿಸುವುದು.

೨೦-೨೧. ಹೀಗೆ ಮಹಾನದಿಯಾದ ಆ ಗಂಗೆಯು ಸಾವಿರಾರು ಪರ್ವತಗಳನ್ನು ಭೇದಿಸುತ್ತಾ ಸಿದ್ಧರಿಂದ ಸೇವಿತವೂ ಮಹಾಪರ್ವತವೂ ಆದ ಹಿಮಾಲಯದ ಮಧ್ಯದಲ್ಲಿ ಧುಮುಕಿ ಅಲ್ಲಿಂದ ಮಹಾಶೈಲವಾದ ದೇವಕೂಟಗಿರಿಗೆ ಹೋಗಿ ಅಲ್ಲಿಂದ ಹೊರಟು ಕ್ರಮವಾಗಿ ಸಮುದ್ರದವರೆಗೂ ಹೋಗಿ ಭೂಮಿಗೆ ಬಂದು ಸೇರಿತು.

೨೨-೨೩. ಆ ದೇವನದಿಯು ಹೀಗೆ ಸಾವಿರಾರು ಪ್ರದೇಶಗಳಲ್ಲಿಯೂ ಪರ್ವತೋತ್ತಮಗಳಲ್ಲಿಯೂ ವಿಚಿತ್ರವಾದ ವನಗಳಲ್ಲಿಯೂ, ನಾನಾವಿಧ ಸರಸ್ಸು

ಸ್ರಾವಯಂತೀ ಮಹಾಭಾಗಾ ವಿಸ್ಫಾರೇಷ್ವವಲೀಕದಾ ।
ನದೀ ಸಹಸ್ರಾನುಗತಾ ಪ್ರವೃತ್ತಾ ಚ ಮಹಾನದೀ ॥ ೧೩ ॥

ಭದ್ರಾಶ್ವಂಶ್ಚ ಸುಮಹಾದ್ವೀಪಂ ಪ್ಲಾವಯಂತೀ ವರಾಪಗಾ ।
ಪ್ರವಿಷ್ಟಾ ಹ್ಯರ್ಣವಂ ಪೂರ್ವಂ ಪೂರ್ವೇ ದ್ವೀಪೇ ಮಹಾನದೀ ॥ ೧೪ ॥

ದಕ್ಷಿಣೇಽಪಿ ಪ್ರಪನ್ನಾ ಯಾ ಶೈಲೇಂದ್ರೇ ಗಂಧಮಾದನೇ ।
ಚಿತ್ರೈಃ ಪ್ರಪಾತೈರ್ವಿವಿಧೈರ್ನೈಕವಿಸ್ಫಾಲಿತೋದಕಾ ॥ ೧೫ ॥

ತದ್ಗಂಧಮಾದನವನಂ ನಂದನಂ ದೇವನಂದನಂ ।
ಪ್ಲಾವಯಂತೀ ಮಹಾಭಾಗಾ ಪ್ರಯಾತಾ ಸಾ ಪ್ರದಕ್ಷಿಣಂ ॥ ೧೬ ॥

ನಾಮ್ನಾ ಹ್ಯಲಕನಂದೇತಿ ಸರ್ವಲೋಕೇಷು ವಿಶ್ರುತಾ ।
ಪ್ರವಿಶತ್ಯುತ್ತರಸರೋ ಮಾನಸಂ ದೇವಮಾನಸಂ ॥ ೧೭ ॥

---

ಗಳಲ್ಲಿಯೂ, ಸಂಚರಿಸಿ ಧನುಸ್ಸಿನಂತೆ ಘರ್ಜಿಸುತ್ತಾ ಸಹಸ್ರಾರು ನದಿಗಳಿಂದ ಕೂಡಿ, ಮಹಾನದಿಯಾಗಿ ಹೊರಟು ಹರಿಯುವುದು.

೧೪. ಮಹಾನದಿಯಾದ ಆ ದೇವಗಂಗೆಯು ಪೂರ್ವಭಾಗದಲ್ಲಿರುವ ಭದ್ರಾಶ್ವವೆಂಬ ಮಹಾದ್ವೀಪದಲ್ಲಿ ಸಂಚರಿಸಿ, ತರುವಾಯ ಪೂರ್ವಸಮುದ್ರವನ್ನು ಪ್ರವೇಶಿಸುವುದು.

೧೫-೧೭. ಹಾಗೆಯೇ ಆ ದೇವನದಿಯು, ದಕ್ಷಿಣಭಾಗದಲ್ಲಿರುವ ಪರ್ವತೋತ್ತಮವಾದ ಗಂಧಮಾದನದಲ್ಲಿ ನಾನಾ ರೀತಿಯಾದ ವಿಚಿತ್ರ ಪಾತಗಳಿಂದ ನಾನಾ ಧ್ವನಿಗಳನ್ನು ಮಾಡುತ್ತಲೂ ಜಲವನ್ನು ವಿವಿಧ ರೀತಿಯಲ್ಲಿ ಎರಚುತ್ತಲೂ, ಅಲ್ಲಿ ಸಂಚರಿಸಿ, ಅಲ್ಲಿಂದ ಗಂಧಮಾದನವನಕ್ಕೂ ಅಲ್ಲಿಂದ ದೇವತೆಗಳ ವಿಹಾರಭೂಮಿಯಾದ ನಂದನವನಕ್ಕೂ ಹೋಗಿ, ಸಮಸ್ತಲೋಕಗಳಲ್ಲಿಯೂ ಅಲಕನಂದೆಯೆಂದು ಪ್ರಖ್ಯಾತಿಪಡೆದು ದೇವತೆಗಳ ಸ್ವಚ್ಛವಾದ ಉತ್ತರ ದಿಕ್ಕಿನಲ್ಲಿರುವ ದೇವತೆಗಳ ಮನಸ್ಸಿನಂತಿರುವ ಮಾನಸಸರೋವರವನ್ನು ಪ್ರವೇಶಿಸುವುದು.

ಮಾನಸಾಚ್ಛೈಲರಾಜಾನಂ ರಮ್ಯಂ ತ್ರಿಶಿಖರಂ ಗತಾ ।
ತ್ರಿಕೂಟಾಚ್ಛೈಲಶಿಖರಾತ್ ಕಲಿಂಗಶಿಖರಂ ಗತಾ ॥ ೨೮ ॥

ಕಲಿಂಗಶಿಖರಾದ್ಭ್ರಷ್ಟಾ ರುಚಕೇ ನಿಪಪಾತ ಸಾ ।
ರುಚಕಾನ್ನಿಷಧಂ ಪ್ರಾಪ್ತಾ ತಾಮ್ರಾಭಂ ನಿಷಧಾದಪಿ । ॥ ೨೯ ॥

ತಾಮ್ರಾಭಶಿಖರಾದ್ಭ್ರಷ್ಟಾ ಗತಾ ಶ್ವೇತೋದರಂ ಗಿರಿಂ ।
ತಸ್ಮಾತ್ಸುಮೂಲಂ ಶೈಲೇಂದ್ರಂ ವಸುಧಾರಂಚ ಪರ್ವತಂ ॥ ೩೦ ॥

ಹೇಮಕೂಟಂ ಗತಾ ತಸ್ಮಾದ್ದೇವಶೃಂಗೇ ತತೋ ಗತಾ ।
ತಸ್ಮಾದ್ಗತಾ ಮಹಾಶೈಲಂ ಶತಶಾಖಿ ಪಿಶಾಚಕಂ ॥ ೩೧ ॥

ಪಿಶಾಚಕಾಚ್ಛೈಲವರಾತ್ ಪಂಚಕೂಟಂಗತಾ ಪುನಃ ।
ಪಂಚಕೂಟಾತ್ತು ಕೈಲಾಸಂ ದೇವಾವಾಸಂ ಶಿಲೋಚ್ಚಯಂ ॥ ೩೨ ॥

ತಸ್ಯ ಕುಕ್ಷಿಷು ವಿಭ್ರಾಂತಾ ನೈಕಕಂದರಸಾನುಷು ।
ಹಿಮವತ್ಯುತ್ತಮನದೀ ನಿಪಪಾತಾಚಲೋತ್ತಮೇ ॥ ೩೩ ॥

---

೨೮–೩೦. ಆ ದೇವನದಿಯು ಮಾನಸಸರಸ್ಸಿನಿಂದ ಹೊರಟು ಪರ್ವತೋತ್ತಮವೂ ರಮ್ಯವೂ ಆದ ತ್ರಿಕೂಟಗಿರಿಗೆ ಹೋಗಿ ಅಲ್ಲಿಂದ ಕಲಿಂಗಪರ್ವತದ ಶಿಖರದಲ್ಲಿ ಧುಮುಕಿ ಆ ಕಲಿಂಗಶಿಖರದಿಂದ ರುಚಿಕಗಿರಿಗೆ ಹೋಗಿ ಅಲ್ಲಿಂದ ನಿಷಧಗಿರಿಗೂ ಅಲ್ಲಿಂದ ತಾಮ್ರಾಭಗಿರಿಗೂ ಆ ಗಿರಿಯ ಶಿಖರದಿಂದ ಶ್ವೇತೋದರ ಗಿರಿಯಲ್ಲಿ ಧುಮುಕಿ ಅಲ್ಲಿಂದ ಹೊರಟು ಸುಮೂಲಶೈಲದಲ್ಲಿಯೂ ವಸುಧಾರಗಿರಿಯಲ್ಲಿಯೂ ಹರಿಯುವುದು.

೩೧-೩೩. ಉತ್ತರದಿಂದ ಹೊರಟ ಅಲಕನಂದಿನಿಯು ವಸುಧಾರಗಿರಿಯಿಂದ ಹೇಮಕೂಟಕ್ಕೂ ಆ ಹೇಮಕೂಟದಿಂದ ದೇವಶೃಂಗಕ್ಕೂ ಅದರಿಂದ ಮಹಾಶೈಲಕ್ಕೂ ಅಲ್ಲಿಂದ ಪಿಶಾಚಕಗಿರಿಗೂ, ಆ ಪಿಶಾಚಕಗಿರಿಯಿಂದ ಪಂಚಕೂಟಕ್ಕೂ ಅಲ್ಲಿಂದ ದೇವತೆಗಳಿಗೆ ವಾಸಸ್ಥಾನವೂ, ಪರ್ವತೋತ್ತಮವೂ, ಆದ ಕೈಲಾಸಕ್ಕೂ ಹೋಗಿ ಆ ಕೈಲಾಸ ಗಿರಿಯ ಅನೇಕ ಗವಿಗಳಲ್ಲಿಯೂ ತಪ್ಪಲುಗಳಲ್ಲಿಯೂ ಹರಿಯುವುದು. ಅಲ್ಲಿಂದ ಹೊರಟು ಪರ್ವತೋತ್ತಮವಾದ ಹಿಮಾಲಯದಲ್ಲಿ ಧುಮುಕುವುದು.

ಸ್ಯೈವಂ ಶೈಲಸಹಸ್ರಾಣಿ ದಾರಯಂತೀ ಮಹಾನದೀ ।
ಸ್ಥಲೀಶತಾಂನ್ಯನೇಕಾನಿ ಪ್ಲಾವಯಂತ್ಯಾಶುಗಾಮಿನೀ ॥ ೩೪ ॥

ವನಾನಾಂಚ ಸಹಸ್ರಾಣಿ ಕಂದರಾಣಾಂ ಶತಾನಿ ಚ ।
ಸ್ರಾವಯಂತೀ ಮಹಾಭಾಗಾ ಪ್ರಯಾತಾ ದಕ್ಷಿಣೋದಧಿಂ ॥ ೩೫ ॥

ರಮ್ಯಾ ಯೋಜನವಿಸ್ತೀರ್ಣಾ ಶೈಲಕುಕ್ಷಿಷು ಸಂವೃತಾ ।
ಯಾ ಧೃತಾ ದೇವದೇವೇನ ಶಂಕರೇಣ ಮಹಾತ್ಮನಾ ॥ ೩೬ ॥

ಪಾವನೀ ದ್ವಿಜಶಾರ್ದೂಲ ಘೋರಾಣಾಮಪಿ ಪಾಪ್ಮನಾಂ ।
ಶಂಕರಸ್ಯಾಂಗಸಂಪರ್ಶಾನ್ಮಹಾದೇವಸ್ಯ ಧೀಮತಃ ।
ದ್ವಿಗುಣಂ ಪವಿತ್ರಸಲಿಲಾ ಸರ್ವಲೋಕೇ ಮಹಾನದೀ ॥ ೩೭ ॥

ಅನುಶೈಲಂ ಸಮಂತಾಚ್ಚ ನಿರ್ಗತಾ ಬಹುಭಿರ್ಮುಖೈಃ ।
ಅಥಾಽನ್ಯೇನಾಭಿಧಾನೇನ ಖ್ಯಾತಾ ನದ್ಯಃ ಸಹಸ್ರಶಃ ॥ ೩೮ ॥

---

೩೪-೩೫. ಹೀಗೆ ಮಹಾನದಿಯಾದ ಅಲಕನಂದೆಯು ಸಹಸ್ರಾರು ಪರ್ವತಗಳಲ್ಲಿ ಸಂಚರಿಸಿ ನಾನಾ ಸ್ಥಲಗಳನ್ನು ಮುಳುಗಿಸಿ ಸಾವಿರಾರು ವನಗಳಲ್ಲಿಯೂ ನೂರಾರು ಗುಹೆಗಳಲ್ಲಿಯೂ ಪ್ರವೇಶಿಸಿ ಅನೇಕಾಶ್ರಮಗಳನ್ನು ನೆನೆಸುತ್ತಾ ದಕ್ಷಿಣ ಸಮುದ್ರವನ್ನು ಪ್ರವೇಶಿಸುವುದು.

೩೬. ರಮ್ಯಳೂ ಸಾವಿರಾರು ಯೋಜನ ವಿಸ್ತೀರ್ಣಳೂ ಅನೇಕ ಗಿರಿಕಂದರಗಳಲ್ಲಿ ಪ್ರವಿಷ್ಟಳೂ ಆದ ದೇವಗಂಗೆಯನ್ನು ಮಹಾತ್ಮನೂ ದೇವೇಶನೂ ಆದ ಶಂಕರನು ಶಿರಸ್ಸಿನಲ್ಲಿ ಧರಿಸಿದನು.

೩೭ ಎಲೈ ಮುನೀಶ್ವರರೇ, ಹೀಗೆ ಸ್ವತಃ ಪರಿಶುದ್ಧಳೂ ಘೋರಪಾಪನಾಶಕಳೂ ಆದ ದೇವಗ ಗೆಯು ಸುಖಪ್ರದನಾದ ಮಹಾದೇವನ ಅಂಗಸಂಪರ್ಕದಿಂದ ಅತ್ಯಂತ ಪರಿಶುದ್ಧಳೂ ಆಗಿ ಸರ್ವಲೋಕದಲ್ಲಿಯೂ ಪ್ರಖ್ಯಾತಳಾಗಿರುವಳು.

೩೮. ಹೀಗೆ ಆ ಮಹಾನದಿಯು ಪ್ರತಿಯೊಂದು ಪರ್ವತದಿಂದಲೂ ನಾನಾ ಮುಖವಾಗಿ ಹೊರಟು ನಾನಾ ನಾಮಗಳಿಂದ ಅನೇಕ ಸಹಸ್ರಾರು ನದಿಗಳಾಗಿ ಹರಿಯುವುದು

ತಸ್ಮಾದ್ಧಿಮವತೋ ಗಂಗಾ ಗತಾ ಸಾ ತು ಮಹಾನದೀ ।
ಏವಂ ಗಂಗೇತಿ ನಾಮ್ನಾದಿಪ್ರಕಾಶಾ ಸಿದ್ಧಸೇವಿತಾ ॥ ೩೯ ॥

ಧನ್ಯಾಸ್ತೇ ಸತ್ತಮಾ ದೇಶಾ ಯತ್ರ ಗಂಗಾ ಮಹಾನದೀ ।
ರುದ್ರಸಾಧ್ಯಾನಿಲಾದಿತ್ಯೈರ್ಜುಷ್ಟಾತೋಯಾ ಯಶಸ್ವತೀ ॥ ೪೦ ॥

ಮಹಾಪಾದಂ ಪ್ರವಕ್ಷ್ಯಾಮಿ ಮೇರೋರಪಿ ಹಿ ಪಶ್ಚಿಮಂ ।
ನಾನಾರತ್ನಾಕರಂ ಪುಣ್ಯಂ ಪುಣ್ಯಕೃದ್ಭಿರ್ನಿಷೇವಿತಂ ॥ ೪೧ ॥

ವಿಪುಲಂ ಶೈಲರಾಜಾನಾಂ ವಿಪುಲೋದರಕಂದರಂ ।
ನಿತಂಬಕುಂಜಕಟಕೈರ್ವಿಮಲೈರ್ಮಂಡಿತೋದರಂ ॥ ೪೨ ॥

---

೩೯. ಆ ದೇವಗಂಗೆಯು ಕೊನೆಗೆ ಹಿಮಾಲಯದಿಂದ ಹೊರಟ ಕಾರಣ ಮಹಾನದಿಯಾದ ಗಂಗೆಯೆಂದು ಪ್ರಖ್ಯಾತವಾಯಿತು. ಹೀಗೆ ಗಂಗಾದಿ ನಾನಾ ನಾಮಗಳಿಂದ ಪ್ರಸಿದ್ಧವೂ ಸಿದ್ಧಾದಿಗಳಿಂದ ಸೇವ್ಯವೂ ಆಗಿ ಭಾಗ್ಯಶಾಲಿಯಾಗಿರುವುದು.

೪೦. ರುದ್ರರು, ಸಾಧ್ಯರು, ವಾಯು, ಆದಿತ್ಯ ಇವರೇ ದೊದಲಾದ ದೇವತೆಗಳಿಂದ ಸೇವ್ಯಳೂ ಕೀರ್ತಿಯುತಳೂ ಆದ ಆ ಗಂಗಾಮಹಾದೇವಿಯು ಯಾವಯಾವ ದೇಶಗಳಲ್ಲಿ ಸಂಚರಿಸುವಳೋ ಆ ದೇಶಗಳೇ ಧನ್ಯಗಳು ಮತ್ತು ಉತ್ತಮವಾದುವು.

೪೧-೪೨. ಆ ಮಹಾಮೇರುವಿನ ಪಶ್ಚಿಮದಲ್ಲಿರುವ ಮಹಾಪಾದವನ್ನು ವರ್ಣಿಸುವೆನು ಕೇಳಿರಿ. ಅದು ನಾನಾವಿಧ ರತ್ನಗಳಿಗೆ ಗಣಿಯಾಗಿಯೂ ಪುಣ್ಯಕರವಾಗಿಯೂ ಪುಣ್ಯಶಾಲಿಗಳಿಂದ ಸೇವಿಸಲ್ಪಟ್ಟದ್ದಾಗಿಯೂ ವಿಶಾಲವಾಗಿಯೂ ಶೈಲರಾಜಸಂಬಂಧಿಯಾಗಿಯೂ ಅಧಿಕವಾದ ಉದಕ ಕಂದರ ಇವುಗಳಿಂದ ಸಹಿತವಾಗಿಯೂ ನಿತಂಬದೇಶ ಲತಾಗೃಹ ಮಧ್ಯಭಾಗ ಇವುಗಳಿಂದ ಅಲಂಕೃತವಾಗಿಯೂ ಇರುತ್ತದೆ.

ಅಪಿ ಯಾ ತ್ರ್ಯಂಬಕಸ್ಯೈಷಾ ತ್ರಿದಶೈಃ ಸೇವಿತೋದಕಾ ।
ವಾಯುವೇಗಾ ಗತಾಭೋಗಾ ಲತೇವ ಭ್ರಾಮಿತಾ ಪುನಃ ॥ ೪೩ ॥

ಮೇರುಕೂಟತಟಾದ್ಭ್ರಷ್ಟಾ ಪ್ರಹೃಷ್ಟೈಃ ಸ್ವಾದಿತೋದಕಾ ।
ವಿಸ್ತೀರ್ಯಮಾಣಸಲಿಲಾ ನಿರ್ಮಲಾಂಶುಕಸನ್ನಿಭಾ ॥ ೪೪ ॥

ತಸ್ಯ ಕೂಟೇಂಬರನದೀ ಸಿದ್ಧಚಾರಣಸೇವಿತಾ ।
ಪ್ರದಕ್ಷಿಣಮುಖಾವೃತ್ಯ ಪತಿತಾ ಸಾ ತು ಗಾಮಿನೀ ॥ ೪೫ ॥

ದೇವಭ್ರಾಜಂ ಮಹಾಭ್ರಾಜಂ ಸವೈಭಾಜಂ ಮಹಾವನಂ ।
ಪ್ಲಾವಯಂತೀ ಮಹಾಭಾಗಾ ನಾನಾಪುಷ್ಪಫಲೋದಕಾ ॥ ೪೬ ॥

ಪ್ರದಕ್ಷಿಣಂ ಪ್ರಕುರ್ವಾಣಾ ನಾನಾವನವಿಭೂಷಿತಾ ।
ಪ್ರವಿಷ್ಟಾ ಪಶ್ಚಿಮಸರಃ ಸಿತೋದಂ ವಿಮಲೋದಕಂ ॥ ೪೭ ॥

---

೪೩-೪೫. ದೇವತೆಗಳಿಂದ ಸೇವಿತವಾದ ಜಲವುಳ್ಳದ್ದೂ ವಾಯುವೇಗವತಿಯೂ ಮಹಾಭೋಗಶಾಲಿಯೂ ಆದ ಯಾವ ದೇವಗಂಗೆಯು ಈಶ್ವರನ ಜಟಾಮಂಡಲದಲ್ಲಿ ಲತೆಯಂತೆ ಹೊಳೆಯುತ್ತಿದ್ದಳೋ ಅಂಥ ಆ ಗಂಗೆಯು ಮೇರುಗಿರಿಯ ಶೃಂಗ ಮತ್ತು ತಟ ಇವುಗಳಿಂದ ಧುಮುಕಿ ಮಹರ್ಷಿಗಳ ಸ್ನಾನಪಾನಾದಿಗಳಿಗೆ ಅನುಕೂಲವೂ ನಿರ್ಮಲವಾದ ವಸ್ತ್ರದಂತಿರುವ ಸ್ವಚ್ಛವಾದ ಜಲದಿಂದ ಪೂರ್ಣವೂ ಅದರ ತಪ್ಪಲಿನಲ್ಲಿ ಪ್ರದಕ್ಷಿಣಾಕಾರವಾಗಿ ಸಂಚರಿಸಿ ಸಿದ್ಧಚಾರಣರಿಂದ ಸೇವಿತವೂ ಆಗಿ ಅಲ್ಲಿಂದ ಬೇರೊಂದು ಗಿರಿಗೆ ಹೊರಡುವುದು.

೪೬-೪೭. ಮಹಾಭಾಗ್ಯಶಾಲಿಯಾದ ಆ ಗಂಗೆಯು ಮೇರುಗಿರಿಯಿಂದ ಹೊರಟು ದೇವಭ್ರಾಜ, ಮಹಾಭ್ರಾಜ, ವೈಭ್ರಾಜವೆಂಬ ಪರ್ವತಗಳ ಮಹಾರಣ್ಯಗಳಲ್ಲಿ ಸಂಚರಿಸಿ ನಾನಾ ವನಗಳಿಂದ ಮಂಡಿತಳೂ ವಿವಿಧ ಫಲಪುಷ್ಪಗಳಿಂದ ಅಲಂಕೃತಳೂ ಆಗಿ ಪ್ರದಕ್ಷಿಣಾಕಾರವಾಗಿ ಹೊರಟು ವಿಮಲೋದಕವುಳ್ಳ ಸೀತೋದಕವೆಂಬ ಪಶ್ಚಿಮದಲ್ಲಿರುವ ಮಹಾಸರಸ್ಸನ್ನು ಪ್ರವೇಶಿಸಿದಳು.

ಸಾ ಸೀತೋದಾದ್ವಿನಿಷ್ಕ್ರಾಂತಾ ಸುಪಕ್ಷ ಪರ್ವತಂ ಗತಾ ।
ಸುಪಕ್ಷಿತಸ್ತು ಪುಣ್ಯೋದಾತ್ತತೋ ದೇವರ್ಷಿಸೇವಿತಾ ॥ ೪೮ ॥

ಸುಪಕ್ಷಕೂಟತಟಗಾ ತಸ್ಮಾಚ್ಚ ಸಂಶಿತೋದಕಾ ।
ನಿಪಪಾತ ಮಹಾಭಾಗಾ ರಮಣ್ಯಂ ಶಿಖಿಪರ್ವತಂ ॥ ೪೯ ॥

ಶಿಖೇಶ್ಚ ಪರ್ವತಾತ್ ಕಂಕಂ ಕಂಕಾದ್ವೈದೂರ್ಯಪರ್ವತಂ ।
ವೈದೂರ್ಯಾಶ್ ಕಪಿಲಂ ಶೈಲಂ ತಸ್ಮಾಚ್ಚ ಗಂಧಮಾದನಂ ॥ ೫೦ ॥

ತಸ್ಮಾದ್ಗಿರಿವರಾತ್ ಪ್ರಾಪ್ತಾ ಪಿಂಜರಂ ವರಪರ್ವತಂ ।
ಪಿಂಜರಾತ್ ಸರಸಂ ಯಾತಾ ತಸ್ಮಾಚ್ಚ ಕುಮುದಾಚಲಂ ॥ ೫೧ ॥

ಮಧುಮಂತಂ ಜನಂಚೈವ ಮುಕುಟಂಚ ಶಿಲೋಚ್ಚಯಂ ।
ಮುಕುಟಾಚ್ಛೈಲಶಿಖರಾತ್ ಕೃಷ್ಣಂ ಯಾತಾ ಮಹಾಗಿರಿಂ ॥ ೫೨ ॥

ಕೃಷ್ಣಾತ್ ಶ್ವೇತಂ ಮಹಾಶೈಲಂ ಮಹಾನಾಗನಿಷೇವಿತಂ ।
ಶ್ವೇತಾತ್ ಸಹಸ್ರಶಿಖರಂ ಶೈಲೇಂದ್ರಂ ಪತಿತಾ ಪುನಃ ॥ ೫೩ ॥

---

೪೮–೫೦. ಅನಂತರ ಆ ಮಹಾನದಿಯು ಅಲ್ಲಿಂದ ಹೊರಟು ಸುಪಕ್ಷವೆಂಬ ಪರ್ವತಕ್ಕೆ ಸೇರಿ ಅಲ್ಲಿರುವ ದೇವರ್ಷಿಗಳೇ ಮೊದಲಾದವರಿಂದ ಸೇವಿತವಾಗಿ ಆ ಸುಪಕ್ಷಕೂಟಶಿಖರದಿಂದ ಹೊರಟು ಅತಿ ರಮಣೀಯವಾದ ಶಿಖಿಪರ್ವತವನ್ನು ಸೇರಿ ಹೊಕ್ಕು ಅಲ್ಲಿಂದ ಕಂಕಗಿರಿಗೂ ಅದರಿಂದ ಕಪಿಲಗಿರಿಯನ್ನೂ ಅಲ್ಲಿಂದ ಗಂಧಮಾದನ ಗಿರಿಯನ್ನೂ ಪ್ರವೇಶಿಸಿತು.

೫೧–೫೩. ಆ ಮಹಾನದಿಯು ಗಂಧಮಾದನದಿಂದ ಪಿಂಜರಗಿರಿಗೂ ಆ ಪಿಂಜರಗಿರಿಯಿಂದ ಸರಸಪರ್ವತಕ್ಕೂ ಅದರಿಂದ ಕುಮುದಾಚಲಕ್ಕೂ ಅಲ್ಲಿಂದ ಕ್ರಮವಾಗಿ ಮಧುಮಂತ, ಜನ, ಮುಕುಟವೆಂಬ ಪರ್ವತಗಳಿಗೂ ಆ ಮುಕುಟಶೈಲಶಿಖರದಿಂದ ಕೃಷ್ಣವೆಂಬ ಮಹಾಗಿರಿಗೂ ಅದರಿಂದ ಮಹಾಪರ್ವತಗಳಿಂದ ಸೇವಿಸಲ್ಪಟ್ಟ ಶ್ವೇತಮಹಾಗಿರಿಗೂ ಅಲ್ಲಿಂದ ಪುನಃ ಸಹಸ್ರಶಿಖರಗಳಿರುವ ಹಿಮಾಲಯಕ್ಕೂ ಹೋಗಿ ಸೇರಿತು.

ಅನೇಕಾಭಿಃ ಸ್ರವಂತೀಭಿರಾಪ್ಯಾಯಿತಜಲಾ ಶಿವಾ ।
ಏವಂ ಶೈಲಸಹಸ್ರಾಣಿ ಸಾದಯಂತೀ ಮಹಾನದೀ ।
ಪಾರಿಜಾತೇ ಮಹಾಶೈಲೇ ನಿಪಪಾತಶುಗಾಮಿನೀ ॥ ೫೪ ॥

ಅನೇಕನಿರ್ಝರನದೀ ಗುಹಾಸಾನುಷು ರಾಜತೇ ।
ತಸ್ಯ ಕುಕ್ಷಿಷ್ವನೇಕಾಸು ಭ್ರಾಂತತೋಯಾ ತರಂಗಿಣೀ ॥ ೫೫ ॥

ವ್ಯಾಹನ್ಯಮಾನಸಂವೇಗಾ ಗಂಡಶೈಲೈರನೇಕಶಃ ।
ಸಂವಿದ್ಯಮಾನಸಲಿಲಾ ಗತಾ ಚ ಧರಣೀತಲೇ ॥ ೫೬ ॥

ಕೇತುಮಾಲಂ ಮಹಾದ್ವೀಪಂ ನಾನಾವ್ಲೇಚ್ಛಗಣೈರ್ಯುತಂ ।
ಪ್ಲಾವಯಂತೀ ಮಹಾಭಾಗಾ ಪ್ರಯಾತಾ ಪಶ್ಚಿಮಾರ್ಣವಂ ॥ ೫೭ ॥

ಸುವರ್ಣಚಿತ್ರಪಾರ್ಶ್ವೈಸ್ತು ಸುಪಾರ್ಶ್ವೈಸ್ಯಪ್ಯುತರೇ ಗಿರೌ ।
ಮೇರೋಶ್ಚಿತ್ರಮಹಾಪಾದೇ ಮಹಾಸತ್ವನಿಷೇವಿತೇ ॥ ೫೮ ॥

---

೫೪. ಈ ಮಹಾನದಿಯು ಅನೇಕ ಪ್ರವಾಹದಿಂದ ಅನೇಕ ಭಾಗಗಳನ್ನು ನೆನೆಸುತ್ತಲೂ ಮಂಗಳಕರವಾಗಿ ಸಾವಿರಾರು ಪರ್ವತಗಳ ಶಿಖರಗಳನ್ನು ಮುಳುಗಿಸುತ್ತಲೂ ಅತಿ ವೇಗವಾಗಿ ಹೊರಟು ಪಾರಿಜಾತಶಿಖರದಲ್ಲಿ ಬೀಳುವುದು.

೫೫-೫೭. ಮಹಾಗಂಗೆಯು ಅನೇಕ ನಿರ್ಜರ ನದೀ ಗುಹೆ ತಪ್ಪಲು ಇವುಗಳಲ್ಲಿ ಹೊಳೆಯುತ್ತಾ ಪರ್ವತಗಳ ಅನೇಕ ಮಧ್ಯಭಾಗಗಳಲ್ಲಿ ಸುತ್ತುತ್ತಾ ಅನೇಕ ಬೆಟ್ಟಗುಡ್ಡಗಳಿಂದ ತಡೆಯಲ್ಪಟ್ಟ ವೇಗವುಳ್ಳದ್ದಾಗಿ ನಿಧಾನವಾಗಿ ಭೂಮಂಡಲವನ್ನು ಸೇರುವುದು. ಆ ಭೂತಲಕ್ಕೆ ಬಂದಮೇಲೆ ನಾನಾ ಮ್ಲೇಂಛಮಯವಾದ ಕೇತುಮಾಲಗಿರಿಯಲ್ಲಿ ಸಂಚರಿಸಿ ಅನೇಕ ಭೂಭಾಗಗಳನ್ನು ಪ್ರವೇಶಿಸಿ ಪವಿತ್ರವನ್ನಾಗಿ ಮಾಡಿ ಕೊನೆಗೆ ಪಶ್ಚಿಮಸಮುದ್ರವನ್ನು ಸೇರುವುದು.

೫೮-೬೦. ಹಾಗೆಯೇ ಮೇರುಮಹಾಗಿರಿಯ ಉತ್ತರಭಾಗದಲ್ಲಿ ಹರಿಯುವ ಮಹಾನದಿಯು ಸುವರ್ಣಚಿತ್ರಪಾರ್ಶ್ವ ಸುಪಾರ್ಶ್ವವೆಂಬ ಗಿರಿಗಳಲ್ಲಿ ಸಂಚರಿಸಿ ಕೆಳಗೆ

ಮೇರುಕೂಟತಟಾದ್ಭ್ರಷ್ಟಾ ಪವನೇನೇರಿತೋದಕಾ ।
ಅನೇಕಾಭೋಗವಕ್ರಾಂಗೀ ಕ್ಷಿಪ್ಯಮಾಣಾ ನಭಸ್ತಲೇ ॥ ೫೯ ॥

ಷಷ್ಟಿಯೋಜನಸಾಹಸ್ರೇ ನಿರಾಲಂಬೇಽಂಬರೇ ಶುಭೇ ।
ವಿಕೀರ್ಯಮಾಣಾ ಮಾಲೇವ ನಿಪಪಾತ ಮಹಾನದೀ ॥ ೬೦ ॥

ಏವಂ ಕೂಟತಟೈರ್ಭ್ರಷ್ಟಾ ನೈಕೈರ್ದೇವರ್ಷಿಸೇವಿತೈಃ ।
ವಿಕೀರ್ಯಮಾಣಸಲಿಲಾ ನೈಕಪುಷ್ಪೋಡುಪೊತ್ಕಚಾ ॥ ೬೧ ॥

ನಾನಾರತ್ನವನೋದ್ದೇಶಮರಣ್ಯಂ ಸವಿತುರ್ವನಂ ।
ಮಹಾವನಂ ಮಹಾಭಾಗಾ ಪ್ಲಾವಯಂತೀ ಪ್ರದಕ್ಷಿಣಂ ॥ ೬೨ ॥

ಸರೋವರಂ ಮಹಾಪುಣ್ಯಂ ಮಹಾಭಾಗನಿಷೇವಿತಂ ।
ತತ್ರಾವಿವೇಶ ಕಲ್ಯಾಣಿ ಮಹಾಭದ್ರಂ ಸಿತೋದಕಾ ॥ ೬೩ ॥

---

ಬೀಳುವಾಗ ಗಾಳಿಯಿಂದ ಪ್ರೇರಿತವಾಗಿ ನಿರಾಲಂಬವೂ ಅರವತ್ತುಯೋಜನ ವಿಸ್ತೀರ್ಣವೂ ಆದ ಆಕಾಶದಲ್ಲಿ ನಾನಾಕಾರವಾಗಿಯೂ ಪುಷ್ಪಮಾಲೆಯಂತೆಯೂ ಶೋಭಿಸುತ್ತಾ ಆದೇ ಮೇರುವಿನ ಅತಿ ವಿಶಾಲವಾದ ಮಹಾಪಾದದಲ್ಲಿ ಬೀಳುವುದು.

೬೧ ಹೀಗೆ ಮೇರುವಿನ ಶೃಂಗದಿಂದ ಕೆಳಗೆ ಬಿದ್ದು ತಟದಲ್ಲಿ ವಾಸಿಸುವ ಸಹಸ್ರಾರು ದೇವರ್ಷಿಗಳಿಂದ ಸೇವಿತವಾಗಿ ಹರಡಲ್ಪಟ್ಟ ಜಲವುಳ್ಳದ್ದೂ ಅನೇಕ ಪುಷ್ಪಗಳೆಂಬ ಚಂದ್ರಮಂಡಲದಿಂದಲಂಕೃತವೂ ಆಗಿ ಮುಂದಕ್ಕೆ ಹೊರಡುವುದು.

೬೨. ಆ ಮಹಾನದಿಯು ನಾನಾರತ್ನಮಯವಾದ ಸ್ಥಲಗಳಿಂದಲಂಕೃತವೂ ಅತಿ ವಿಶಾಲವೂ ಆದ ಸೂರ್ಯವನದಲ್ಲಿ ಪ್ರದಕ್ಷಿಣಾಕಾರವಾಗಿ ಸಂಚರಿಸುವುದು

೬೩. ಅಲ್ಲಿಂದ ಹೊರಟಂಥ ಮಂಗಳಾಂಗಿಯೂ ಶುಭ್ರವಾದ ಜಲವುಳ್ಳವಳೂ ಆದ ಆ ಮಹಾನದಿಯು ಮಹಾನುಭಾವರಿಂದ ಸೇವಿಸಲ್ಪಟ್ಟದ್ದೂ ಮಹಾಪುಣ್ಯಪ್ರದವೂ ಆಗಿ ಮಹಾಭದ್ರವೆಂಬ ಸರೋವರವನ್ನು ಪ್ರವೇಶಿಸುವುದು.

ಭದ್ರಸೋಮೇತಿ ನಾಮ್ನಾ ಹಿ ಮಹಾಪಾರಾ ಮಹಾಜವಾ ।
ಮಹಾನದೀ ಮಹಾಪುಣ್ಯಾ ಮಹಾಭದ್ರಾ ವಿನಿರ್ಗತಾ ॥ ೬೪ ॥

ನೈಕನಿರ್ಝರವಪ್ರಾಢ್ಯಾ ಶಂಖಕೂಟತಟೇ ತು ಸಾ ।
ತತ್ರ ಕೂಟೇ ಗಿರಿತಟೇ ನಿಪಪಾತಾಶುಗಾಮಿನೀ ॥ ೬೫ ॥

ಶಂಖಕೂಟತಟಾದ್ಭ್ರಷ್ಟಾ ಪಪಾತ ವೃಷಪರ್ವತಂ ।
ವೃಷಪರ್ವತಾದ್ವತ್ಸಗಿರಿಂ ನಾಗಶೈಲಂ ತತೋ ಗತಾ ॥ ೬೬ ॥

ತಸ್ಮಾನ್ನೀಲಂ ನಾಗಶ್ರೇಷ್ಠಂ ಸಂಪ್ರಾಪ್ತಾ ವರ್ಷಪರ್ವತಂ ।
ನಿಲಾತ್ ಕಪಿಂಜಲಂಚೈವ ಇಂದ್ರನೀಲಂ ಚ ನಿಮ್ನಗಾ ॥ ೬೭ ॥

ತತಃ ಪರಂ ಮಹಾನೀಲಂ ಹೇಮಶೃಂಗಂಚ ಸಾಯಯೌ ।
ಹೇಮಶೃಂಗಾದ್ಗತಾ ಶ್ವೇತಂ ಶ್ವೇತಾಚ್ಚ ಸುನಗಂ ಯಯೌ ॥ ೬೮ ॥

---

೬೪. ಅನಂತರ ಆ ಮಹಾನದಿಯು ಭದ್ರಸೋಮವೆಂಬ ನಾಮವುಳ್ಳದ್ದೂ ಮಹಾದಡಗಳುಳ್ಳದ್ದೂ ಮಹಾವೇಗವತಿಯೂ ಮಹಾಪುಣ್ಯಕಾರಿಯೂ ಆಗಿ ಮಹಾ ಭದ್ರೆ ಎಂಬ ನಾಮಾಂತರದಿಂದ ಹೊರಟಿತು.

೬೫. ಅದು ಅನೇಕ ನದಿಗಳಿಂದಲೂ ದಡಗಳಿಂದಲೂ ಪೂರ್ಣವಾಗಿ ಹೊರಟು ಶಂಖಕೂಟವೆಂಬ ಮಹಾಪರ್ವತದ ತಪ್ಪಲಿನಲ್ಲಿ ಅತಿ ವೇಗವಾಗಿ ಪ್ರವೇಶಿಸಿತು.

೬೬–೬೮. ಆ ಗಂಗೆಯು ಶಂಖಕೂಟದಿಂದ ವೃಷಪರ್ವತವನ್ನೂ ಅಲ್ಲಿಂದ ವತ್ಸಗಿರಿಯನ್ನು ಅಲ್ಲಿಂದ ನಾಗಶೈಲವನ್ನೂ ಅದರಿಂದ ವೃಷಭಾಚಲವನ್ನೂ ಅಲ್ಲಿಂದ ಕಪಿಂಜಲಗಿರಿಯನ್ನೂ ಅದರಿಂದ ಇಂದ್ರನೀಲಗಿರಿಯನ್ನೂ ಅದರಿಂದ ಮಹಾನೀಲ ಗಿರಿಯನ್ನೂ ಅದರಿಂದ ಹೇಮಶೃಂಗವನ್ನೂ ಅದರಿಂದ ಶ್ವೇತಶೃಂಗವನ್ನೂ ಅದರಿಂದ ಸುನಾಗಗಿರಿಯನ್ನೂ ಹೊಂದಿತು (ಪ್ರವೇಶಿಸಿತು).

ಸುನಗಾತ್ ಶತಶೃಂಗಂಚ ಸಂಪ್ರಾಪ್ತಾ ಸಾ ಮಹಾನದೀ ।
ಶತಶೃಂಗಾನ್ಮಹಾಶೈಲಂ ಪುಷ್ಕರಂ ಪುಷ್ಪಮಂಡಿತಂ ॥ ೬೯ ॥

ಪುಷ್ಕರಾಚ್ಚ ಮಹಾಶೈಲಂ ದ್ವಿರಾಜಂ ಸುಮಹಾಬಲಂ ।
ವರಾಹಪರ್ವತಂ ತಸ್ಮಾನ್ಮಯೂರಂಚ ಶಿಲೋಚ್ಚಯಂ ॥ ೭೦ ॥

ಮಯೂರಾಚ್ಛೈಕಶಿಖರಂ ಕಂದರೋದರಮಂಡಿತಂ ।
ಚಾರುಧಿಂ ಶೈಲಶಿಖರಂ ನಿಪಪಾತಾಶುಗಾಮಿನೀ ॥ ೭೧ ॥

ಏವಂ ಗಿರಿಸಹಸ್ರಾಣಿ ದಾರಯಂತೀ ಮಹಾನದೀ ।
ತ್ರಿಶೃಂಗಂ ಶೃಂಗಕಲಿಲಂ ಮರ್ಯಾದಾಪರ್ವತಂ ಗತಾ ॥ ೭೨ ॥

ತ್ರಿಶೃಂಗಾತಟವಿಭ್ರಷ್ಟಾ ಮಹಾಭಾಗನಿಷೇವಿತಾ ।
ಮೇರುಕೂಟತಟಾದ್ಭ್ರಷ್ಟಾ ಪವನೇನೇರಿತೋದಕಾ ॥ ೭೩ ॥

---

೬೯–೭೦. ಆ ಮಹಾನದಿಯು ಸುನಾಗಗಿರಿಯಿಂದ ಶತಶೃಂಗಪರ್ವತವನ್ನು ಪ್ರವೇಶಿಸಿ ಅನಂತರ ಮಹಾಗಿರಿಯೂ ಪುಷ್ಪಮಂಡಿತವೂ ಆದ ಪುಷ್ಪಗಿರಿಯನ್ನು ಹೊಂದಿ ಅಲ್ಲಿಂದ ಹೊರಟು ಅತಿ ವಿಶಾಲವೂ ಮಹಾಬಲಿಷ್ಠವೂ ಆದ ದ್ವಿರಾಜಗಿರಿಯನ್ನು ಅಲ್ಲಿಂದ ವರಾಹಗಿರಿಯನ್ನೂ ಅನಂತರ ಕೇವಲ ಶಿಲಾಮಯವಾದ ಮಯೂರ ಗಿರಿಯನ್ನೂ ಹೊಂದಿತು.

೭೧-೭೨. ಆ ಮಯೂರಪರ್ವತದಿಂದ ಏಕಶಿಖರಿಯೂ ಕಂದರ ಮಧ್ಯಭಾಗ ಇವುಗಳಿಂದ ಮಂಡಿತವೂ ಆದ ಚಾರುಧಿಶಿಖರವನ್ನೂ ಹೊಂದಿ ಮುಂದಕ್ಕೆ ಹರಿಯುವುದು. ಹೀಗೆ ಆ ಮಹಾನದಿಯು ಸಹಸ್ರಾರು ಪರ್ವತಗಳನ್ನು ಭೇದಿಸಿಕೊಂಡು ಮಹಾಶೃಂಗಗಳಿಂದಲಂಕೃತವಾದ ತ್ರಿಶೃಂಗವೆಂಬ ಮರ್ಯಾದಾಗಿರಿಯನ್ನು ಹೊಂದಿತು.

೭೩-೭೪. ತರುವಾಯ ತ್ರಿಶೃಂಗಕೂಟದಿಂದ ಹೊರಟ ಮಹಾನದಿಯು ಅನೇಕ ಮಹಾಪ್ರದೇಶಗಳಲ್ಲಿ ಸಂಚರಿಸುವುದು. ಹೀಗೆ ಮೇರುವಿನ ಶಿಖರದಿಂದ

ವಿರುದ್ಧಂ ಪರ್ವತವರಂ ಪಪಾತ ವಿಮಲೋದಕಾ ।
ಪ್ಲಾವಯಂತೀ ಮಹಾಭಾಗಾ ಪ್ರಯಾತಾ ಪಶ್ಚಿಮಾರ್ಣವಂ ॥ ೭೪ ॥

ಸುವರ್ಣಭುವಿ ಪಾರ್ಶ್ವೇ ತು ಸುಪಾರ್ಶ್ವೇತ್ತರೇ ಗಿರೌ ।
ಮೇರೋಶ್ಚಿತ್ರೇ ಮಹಾಪಾದೇ ಮಹಾಸತ್ವೇ ನಿಷೇವಿತೇ ॥ ೭೫ ॥

ಕಂದರೋದರವಿಭ್ರಷ್ಟಾ ತಸ್ಮಾದಪಿ ತರಂಗಿಣೀ ।
ನೈಕಭೋಗಾ ಪಪಾತೋರ್ವೀಂ ಚಿತ್ರಪುಷ್ಪೋಡುಪೋತ್ಕಾಚಾ ॥ ೭೬ ॥

ಪ್ಲಾವಯಂತೀ ಪ್ರಮುದಿತಾ ಉತ್ತರಾನ್ ಸಾ ಕುರೂನ್ ಶಿವಾ ।
ಮಹಾದ್ವೀಪಸ್ಯ ಮಧ್ಯೇನ ಪ್ರಯಾತಾಸೋತ್ತರಾರ್ಣವಂ ॥ ೭೭ ॥

ಏವಂ ತಾಸ್ತು ಮಹಾನದ್ಯಶ್ಚತಸ್ರೋ ವಿಮಲೋದಕಾಃ ।
ಮಹಾಗಿರಿತಟಭ್ರಷ್ಟಾಃ ಸಂಪ್ರಯಾತಾಶ್ಚತುರ್ದಿಶಂ ॥ ೭೮ ॥

---

ಹೊರಟು ಗಾಳಿಯಿಂದ ಭಿನ್ನವಾದ ನೀರುಳ್ಳದ್ದಾಗಿ ವಿರುದ್ಧಪರ್ವತದಲ್ಲಿ ಬಿದ್ದು ಅಲ್ಲಿಂದ ಹೊರಟು ಅನೇಕ ದೇಶಗಳಲ್ಲಿ ಹರಿದು ಪ್ರಖ್ಯಾತಿಗೊಂಡು ಪಶ್ಚಿಮಸಮುದ್ರವನ್ನು ಪ್ರವೇಶಿಸಿತು.

೭೫-೭೭. ಅದರಂತೆಯೇ ಮತ್ತೊಂದು ಮಹಾನದಿಯು ಮೇರುವಿನ ಉತ್ತರ ಮಹಾಪಾದದಿಂದ ಹೊರಟು ಸುವರ್ಣಪಾರ್ಶ್ವದಲ್ಲಿ ಹರಿದು ತರುವಾಯ ಅನೇಕ ಮಹಾಪ್ರಾಣಿಗಳಿರುವ ಆ ಪರ್ವತದ ಮಹಾಕಂದರದಿಂದ ಹೊರಟು ಅನೇಕ ಭಾಗಗಳಲ್ಲಿ ಸಂಚರಿಸಿ ವಿಚಿತ್ರಪುಷ್ಪಗಳೆಂಬ ಚಂದ್ರಮಂಡಲದಿಂದಲಂಕೃತವಾಗಿ ಸಂತೋಷದಿಂದ ಉತ್ತರ ಕುರುದೇಶದಲ್ಲಿ ಹರಿದು ಮಹಾದ್ವೀಪದ ಮಧ್ಯಭಾಗಮಾರ್ಗವಾಗಿ ಹೊರಟು ಉತ್ತರಸಮುದ್ರವನ್ನು ಸೇರಿತು.

೭೮. ಹೀಗೆ ಆ ನಾಲ್ಕು ಮಹಾನದಿಗಳು ಸ್ವಚ್ಛವಾದ ಜಲವುಳ್ಳವುಗಳಾಗಿ ಮಹಾಮೇರುವಿನ ನಾಲ್ಕು ಭಾಗಗಳಿಂದಲೂ (ದಿಕ್ಕುಗಳಿಂದಲೂ) ಹೊರಟು ನಾಲ್ಕು ಸಮುದ್ರವನ್ನು ಸೇರಿದುವು.

ತತ್ಸೇಯಂ ಕಥಿತಪ್ರಾಯಾ ಪೃಥಿವೀ ಬಹುವಿಸ್ತರಾ ।
ಮೇರುಶೈಲಮಹಾಕೀರ್ಣಾಽವಿಶಚ್ಚ ಸರ್ವತೋದಿಶಂ ॥ ೭೯ ॥

ಚತುರ್ಮಹಾದ್ವೀಪವತೀ ಚತುರಾಕ್ರೀಡಕಾನನಾ ।
ಚತುಷ್ಕೇತುಮಹಾವೃಕ್ಷಾ ಚತುರ್ವರ ಸರಸ್ವತೀ ॥ ೮೦ ॥

ಚತುರ್ಮಹಾಶೈಲವತೀ ಚತುರ್ಭುಜಗಸಂಶ್ರಯಾ ।
ಅಷ್ಟೋತ್ತರಮಹಾಶೈಲಾ ತಥಾಷ್ಟವರಪರ್ವತಾ ॥ ೮೧ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಭುವನವಿನ್ಯಾಸೋ"
ನಾಮ ದ್ವಿಚತ್ವಾರಿಂಶೋಽಧ್ಯಾಯಃ

---

೭೯. ಈರೀತಿಯಾಗಿ ಬಹುವಿಶಾಲವೂ ಮಹಾಮೇರುಶಿಖರಗಳಿಂದ ವ್ಯಾಪ್ತವೂ ಆದ ಈ ಭೂಮಂಡಲವು ಸರ್ವಭಾಗಗಳಿಂದಲೂ ಸಮಸ್ತ ದಿಕ್ಕುಗಳನ್ನು ವ್ಯಾಪಸಿ ಕೊಂಡಿದೆಯೆಂಬ ವಿಷಯವು ಪ್ರಾಯಕವಾಗಿ ಹೇಳಿದ್ದೇ ಆಗಿರುತ್ತದೆ.

೮೦-೮೧. ಈ ಭೂಮಾತೆಯು ನಾಲ್ಕು ಮಹಾದ್ವೀಪಗಳಿಂದ ಕೂಡಿದವಳೂ ನಾಲ್ಕು ಕ್ರೀಡೋಪವನಗಳಿಂದ ಸಹಿತಳೂ ನಾಲ್ಕು ಧ್ವಜಗಳಂತಿರುವ ಮಹಾವೃಕ್ಷ ಗಳಿಂದ ಯುಕ್ತಳೂ ನಾಲ್ಕು ಮಹಾನದಿಗಳಿಂದ ಮಂಡಿತಳೂ ನಾಲ್ಕು ಮಹಾಶೈಲ ಗಳಿಂದಲಂಕೃತಳೂ ನಾಲ್ಕು ಸರ್ಪಗಳಾಧಾರವುಳ್ಳವಳೂ ನೂರೆಂಟು ಮಹಾಪರ್ವತ ಗಳಿಂದ ಭೂಷಿತಳೂ ಎಂಟು ಮಹಾಪರ್ವತಗಳಿಂದ ರಂಜಿತಳೂ ಆಗಿ ಜ್ವಲಿಸುತ್ತಿರು ವಳೆಂದು ಸೂತಮುನಿಯು ಋಷಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಭುವನಸ್ವರೂಪನಿರೂಪಣ"ವೆಂಬ ನಲವತ್ತೆರಡನೆಯ ಅಧ್ಯಾಯವು ಸಮಾಪ್ತವಾದುದು.

# ನಲವತ್ತೆರಡನೆಯ ಅಧ್ಯಾಯದ ಸಾರಾಂಶವು

ದೇವಗಂಗೆಯು ಆಕಾಶದಲ್ಲಿ ಹೊಳೆಯುವ ಸೋಮಸರೋವರದಿಂದ ಹೊರಟು ನಿರಾಧಾರವಾದ ಆಕಾಶದಲ್ಲಿ ಅರವತ್ತು ಸಹಸ್ರಯೋಜನದಷ್ಟು ಎತ್ತರವಾದ ಜ್ಯೋತಿ ಮಂಡಲಮಧ್ಯದಲ್ಲಿ ಸಂಚರಿಸಿ ಅತಿವಿಸ್ತಾರವಾಗಿ ಹೊಳೆಯುತ್ತಾ ಮಹಾಮೇರುವಿನ ನಾಲ್ಕು ಉನ್ನತವಾದ ಶಿಖರಗಳ ಮೇಲೆಯೂ, ಬೀಳುವುದು. ಹೀಗೆ ನಾಲ್ಕು ಶಿಖರಗಳ ಮೇಲೆ ಬಿದ್ದ ಆ ನದಿಯು ನಾಲ್ಕು ಮಹಾನದಿಗಳಾಗಿ ನಾಲ್ಕು ದಿಕ್ಕುಗಳಲ್ಲಿಯೂ ಸಂಚರಿಸಿ ಸಮುದ್ರವನ್ನು ಸೇರುವುದು. ಮಹಾಮೇರುವಿನ ಪೂರ್ವಶಿಖರದ ಮೇಲೆ ಬಿದ್ದ ಆಕಾಶಗಂಗೆಯು, ಚೈತ್ರರಥದ ಮೂಲಕ ಹೊರಟು ಸೀತಾನಾಮಕವಾಗಿ, ಸೀತಾಂತ ವೈಕಂಕಮಣಿಪರ್ವತ ದೇವಕಟಕಗಳೆಂಬ ಪರ್ವತಗಳಲ್ಲಿ ಸಂಚರಿಸಿ ಹಿಮಾಲಯದ ಮೂಲಕ ಭೂಮಿಗೆ ಇಳಿದು, ಭದ್ರಾಶ್ವಾದಿ ದ್ವೀಪಗಳಲ್ಲಿ ಹರಿದು ಪೂರ್ವಸಮುದ್ರವನ್ನು ಪ್ರವೇಶಿಸುವುದು. ಅದರಂತೆಯೇ ಮೇರುವಿನ ದಕ್ಷಿಣಶಿಖರದಲ್ಲಿ ಧುಮುಕಿದ ಆ ಗಂಗೆಯು, ಗಂಧಮಾದನ ಮೂಲಕ ಹೊರಟು ಅನೇಕವಾದ ಗಿರಿದೇಶಗಳಲ್ಲಿ ಸಂಚರಿಸಿ, ಚಿತ್ರಕೂಟ, ಕಲಿಂಗ, ಪಂಚಕೂಟ ಇವುಗಳ ಮೂಲಕ ದಕ್ಷಿಣ ಸಮುದ್ರವನ್ನು ಸೇರುವುದು. ಇದರಂತೆಯೇ ಪಶ್ಚಿಮ ಶಿಖರದ ಮೇಲೆ ಧುಮುಕಿದ ಮಹಾನದಿಯು ಮೇರುಕೂಟದಿಂದ ಹೊರಟು ದೇವಭ್ರಾಜ ಮಹಾಭ್ರಾಜ ದೇಶಾದಿಗಳಲ್ಲಿ ಹರಿದು, ಸೀತೋದದಿಂದ ಹೊರಟು ಪಿಂಜರ, ಕುಮುದ, ವೈದೂರ್ಯ, ಕೃಷ್ಣವೇಣೀ ಮೊದಲಾದ ಪರ್ವತಗಳಲ್ಲಿ ಸಂಚರಿಸಿ, ಮ್ಲೇಂಛದೇಶದ ಮೂಲಕ ಪಶ್ಚಿಮ ಸಮುದ್ರವನ್ನು ಪ್ರವೇಶಿಸುವುದು

ಇದರಂತೆಯೇ ಮಹಾಮೇರುವಿನ ಉತ್ತರಶಿಖರದ ಮೇಲೆ ಬಿದ್ದ ಮಹಾನದಿಯು ಸವಿತುರ್ವನ, ಶಂಖಕೂಟ, ವೃಷಭ, ಹೇಮಶೃಂಗ, ತ್ರಿಶೃಂಗ ಇವುಗಳ ಮೂಲಕವಾಗಿ ಸಂಚರಿಸಿ, ಉತ್ತರ ಕುರುದೇಶದ ಮೂಲಕ ಉತ್ತರ ಸಮುದ್ರವನ್ನು ಸೇರುವುದು. ಎಂಬ ವಿಷಯಗಳು ಈ ಅಧ್ಯಾಯದಲ್ಲಿ ನಿರೂಪಿತಗಳಾಗಿವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ॥ ತ್ರಿಚತ್ವಾರಿಂಶೋಽಧ್ಯಾಯಃ ॥

॥ ಸೂತ ಉವಾಚ ॥

ಗಂಧಮಾದನಪಾರ್ಶ್ವೇ ತು ಸ್ಥಿತಾ ಚೋಪರಿ ಗಂಡಿಕಾ ।
ದ್ವಾತ್ರಿಂಶತಂ ಸಹಸ್ರಾಣಿ ಯೋಜನೈಃ ಪೂರ್ವಪಶ್ಚಿಮಾ ॥ ೧ ॥

ಅಸ್ಯಾಯಾಮಶ್ಚತುಸ್ತ್ರಿಂಶತ್ಸಹಸ್ರಾಣಿ ಪ್ರಮಾಣತಃ ।
ತತ್ರ ತೇ ಶುಭಕರ್ಮಾಣಃ ಕೇತುಮಾಲಾಃ ಪರಿಶ್ರುತಾಃ ॥ ೨ ॥

ತತ್ರ ಕಾಲಾ ನರಾಃ ಸರ್ವೇ ಮಹಾಸತ್ವಾ ಮಹಾಬಲಾಃ ।
ಸ್ತ್ರಿಯಶ್ಚೋತ್ಪಲಪತ್ರಾಭಾಃ ಸರ್ವಾಸ್ತಾಃ ಪ್ರಿಯದರ್ಶನಾಃ ॥ ೩ ॥

---

## ನಲವತ್ತಮೂರನೆಯ ಅಧ್ಯಾಯವು

೧-೨. ಸೂತಮುನಿಯು ಹೇಳಿದನು :—ಗಂಧಮಾದನ ಪರ್ವತದ ಭೂಮಟ್ಟಕ್ಕಿಂತಲೂ ಸ್ವಲ್ಪ ಮೇಲ್ಭಾಗದಲ್ಲಿ ಅತಿವಿಶಾಲವೂ, ಪೂರ್ವಪಶ್ಚಿಮವಾಗಿ ಮೂವತ್ತೆರಡು ಸಹಸ್ರ ಯೋಜನದಷ್ಟು ವಿಸ್ತಾರವೂ ಮೂವತ್ತನಾಲ್ಕುಸಹಸ್ರ ಯೋಜನದಷ್ಟು ಉದ್ದವೂ ಇರುವ ಮಹಾಶಿಲೆಯು ಹೊಳೆಯುತ್ತಿರುವುದು. ಅದರಲ್ಲಿ ಶುಭಕರ್ಮಿಗಳೂ ಕೇತುಮಾಲಾ ನಾಮಕರೂ ಆದ ಪ್ರಜೆಗಳು ಪ್ರಖ್ಯಾತರಾಗಿರುವರು.

೩. ಅಲ್ಲಿನ ಮಹಾಜನಗಳು ಮಹಾಬಲಿಷ್ಠರೂ, ಮಹಾಸತ್ವಸಂಪನ್ನರೂ, ಕಾಲಾನಾಮಕರೆಂದು ಪ್ರಖ್ಯಾತರೂ ಆಗಿರುವರು. ಅಲ್ಲಿರುವ ಸ್ತ್ರೀಯರು ನೀಲಮೇಘಶ್ಯಾಮರಾಗಿಯೂ, ಪ್ರಿಯದರ್ಶಿನಿಯರಾಗಿಯೂ, ಸುಂದರಿಯರಾಗಿಯೂ ಇರುವರು.

ತತ್ರ ದಿವ್ಯೋ ಮಹಾನ್ವೃಕ್ಷಃ ಪನಸಃ ಷಡ್ರಸಾಶ್ರಯಃ ।
ಈಶ್ವರೋ ಬ್ರಹ್ಮಣಃ ಪುತ್ರಃ ಕಾಮಚಾರೀ ಮನೋಜವಃ ।
ತಸ್ಯ ಪೀತ್ವಾ ಫಲರಸಂ ಜೀವಂತಿ ಹಿ ಸಮಾಯುತಂ ॥ ೪ ॥

ಪಾರ್ಶ್ವೇ ಮಾಲ್ಯವತಶ್ಚಾಪಿ ಪೂರ್ವೇ ಪೂರ್ವಾ ತುಗಂಡಿಕಾ ।
ಆಯಾಮತೋಽಥ ವಿಸ್ತಾರಾದ್ಯಥೈವಾಪರಗಂಡಿಕಾ ॥ ೫ ॥

ಭದ್ರಾಶ್ವಾಸ್ತತ್ರ ವಿಜ್ಞೇಯಾ ನಿತ್ಯಂ ಮುದಿತಮಾನಸಾ ।
ಭದ್ರಂ ಸಾಲವನಂ ತತ್ರ ಕಾಲಾಮ್ರಾಶ್ಚ ಮಹಾದ್ರುಮಾಃ ॥ ೬ ॥

ತತ್ರ ತೇ ಪುರುಷಾಃ ಶ್ವೇತಾ ಮಹಾಸತ್ವಾ ಮಹಾಬಲಾಃ ।
ಸ್ತ್ರಿಯಃ ಕುಮುದವರ್ಣಾಭಾಃ ಸುಂದರ್ಯಃ ಪ್ರಿಯದರ್ಶನಾಂ ॥ ೭ ॥

ಚಂದ್ರಪ್ರಭಾಶ್ಚಂದ್ರವರ್ಣಾಃ ಪೂರ್ಣಚಂದ್ರನಿಭಾನನಾಃ ।
ಚಂದ್ರಶೀತಲಗಾತ್ರಾಶ್ಚ ಸ್ತ್ರಿಯಶ್ಚೋತ್ಪಲಗಂಧಿಕಾಃ ॥ ೮ ॥

---

೪. ಆ ಗಂಧಮಾದನಗಿರಿಯಲ್ಲಿ ಷಡ್ರಸೋಪೇತವೂ ಅತಿಮಹತ್ತೂ ಆದ ಹಲಸಿನ ಮರವು ಫಲಭರಿತವಾಗಿರುವುದು. ಅಲ್ಲಿ ಬ್ರಹ್ಮದೇವನ ಮಾನಸ ಪುತ್ರನೂ, ಸ್ವೇಚ್ಛಾಚಾರಿಯೂ ಮನೋವೇಗವಂತನೂ ಆದ ಈಶ್ವರನು ಆ ಹಲಸಿನ ಹಣ್ಣಿನ ರಸವನ್ನು ಪಾನಮಾಡಿ ಹತ್ತು ಸಹಸ್ರ ವರ್ಷಗಳು ಸುಖಿಯಾಗಿ ವಾಸಿಸಿದನು.

೫-೬. ಆ ಗಂಧಮಾದನ ಗಿರಿಯ ಪಕ್ಕದಲ್ಲಿರುವ ಮಾಲ್ಯವಂತಪರ್ವತದ ಪೂರ್ವಭಾಗದಲ್ಲಿ ಒಂದು ಮಹಾಶಿಲೆಯು ಇರುವುದು. ಅದು ವಿಸ್ತಾರದ ವಿಷಯದಲ್ಲಿ ಹಿಂದೆ ನಿರೂಪಿಸಿದಂತೆಯೇ ಇರುವವು. ಅಲ್ಲಿನ ಪ್ರಜೆಗಳು ಭದ್ರಾಶ್ವನಾಮಕರೂ ನಿತ್ಯತುಷ್ಟಿಗಳೂ ಆಗಿರುವರು ಆ ದೇಶದಲ್ಲಿ ಮಂಗಳಪ್ರದವಾದ ಸಾಲವನವೂ ಆ ವನದಲ್ಲಿ ಕಾಲಾಮ್ರನಾಮಕ ಮಹಾವೃಕ್ಷಗಳೂ ವಿಶೇಷವಾಗಿರುವುವು.

೭-೮. ಅಲ್ಲಿನ ಪುರುಷರು ಶುಭ್ರರೂ ಮಹಾಶಕ್ತಿವಂತರೂ ಮಹಾಬಲಿಷ್ಠರೂ ಆಗಿರುವರು. ಸ್ತ್ರೀಯರು ಸುಂದರಿಯರೂ, ಪ್ರಿಯದರ್ಶನವುಳ್ಳವರೂ, ಕುಮುದ ಪುಷ್ಪದಂತೆ ಕಾಂತಿಯುಳ್ಳವರೂ, ಚಂದ್ರಪ್ರಭೆಯುರೂ, ಚಂದ್ರನಂತೆ ಕಾಂತಿವಂತರೂ, ಪೂರ್ಣಚಂದ್ರನಂತೆ ಮುಖವುಳ್ಳವರೂ, ಚಂದ್ರನಂತೆ ಶೀತವಾದ ದೇಹವಂತೆಯರೂ, ಪುಷ್ಪಗಂಧಿಯರೂ ಆಗಿರುವರು.

ದಶವರ್ಷಸಹಸ್ರಾಣಿ ತೇಷಾಮಾಯುರ್ನಿರಾಮಯಂ ।
ಕಾಲಾಮ್ರಸ್ಯ ರಸಂ ಪೀತ್ವಾ ಸರ್ವದಾ ಸ್ಥಿರಯೌವನಾಃ ॥ ೯ ॥

॥ ಋಷಯ ಊಚುಃ ॥

ಪ್ರಮಾಣಂ ವರ್ಣಮಾಯುಶ್ಚ ಯಥಾತಥ್ಯೇನ ಕೀರ್ತಿತಂ ।
ಚತುರ್ಣಾಮಪಿ ದ್ವೀಪಾನಾಂ ಸಮಾಸಾನ್ನ ತು ವಿಸ್ತರಾತ್ ॥ ೧೦ ॥

॥ ಸೂತ ಉವಾಚ ॥

ಭದ್ರಾಶ್ವಾನಾಂ ಯಥಾ ಚಿನ್ಹಂ ಕೀರ್ತಿತಂ ಕೀರ್ತಿವರ್ಧನಾಃ ।
ತಚ್ಛೃಣುಧ್ವಂತು ಕಾರ್ತ್ಸ್ನ್ಯೇನ ಪೂರ್ವಸಿದ್ಧೈರುದಾಹೃತಂ ॥ ೧೧ ॥

ದೇವಕೂಟಸ್ಯ ಸರ್ವಸ್ಯ ಪ್ರಥಿತಸ್ಯೇಹ ಯತ್ಪರಂ ।
ಪೂರ್ವೇಣ ದಿಕ್ಷು ಸರ್ವಾಸು ಯಥಾವಚ್ಚ ಪ್ರಕೀರ್ತಿತಂ ॥ ೧೨ ॥

---

೯. ಅಲ್ಲಿನ ಪ್ರಜೆಗಳು ಆಮ್ರರಸವನ್ನು ಪಾನಮಾಡಿ ಯಾವವಿಧ ರೋಗವಿಲ್ಲದೆಯೇ ಸದಾ ಸ್ಥಿರಯೌವನರೂ ಹತ್ತುಸಹಸ್ರವರ್ಷ ಆಯುಸ್ಸುಳ್ಳವರೂ ಆಗಿರುವರು.

೧೦. ಋಷಿಗಳು ಕೇಳಿದರು:—ಎಲೈ ಮುನಿಯೇ ಅವರ ಜೀವನಪ್ರಮಾಣ, ವರ್ಣ, ಆಯುಷ್ಯ ಇವೇ ಮೊದಲಾದ ಸರ್ವವಿಷಯಗಳನ್ನು ಯಥಾಸ್ಥಿತವಾಗಿ ಹೇಳೋಣವಾಗಿದೆ, ಮತ್ತು ನಾಲ್ಕು ದ್ವೀಪಗಳನ್ನು ಸಂಕ್ಷೇಪವಾಗಿ ಹೇಳಿರುತ್ತೀರಿ ವಿಸ್ತಾರವಾಗಿ ವಿವರಿಸಬೇಕೆಂದು ಕೇಳಿಕೊಂಡರು.

೧೧. ಸೂತಮುನಿಯು ಹೇಳಿದನು:—ಎಲೈ ಜ್ಞಾನಿಗಳಾದ ಮುನಿಗಳೇ, ಭದ್ರಾಶ್ವದೇಶದ ಪ್ರಜೆಗಳ ವಿಷಯಕವಾಗಿ ನಾನು ಮೊದಲೇ ನಿಮಗೆ ತಿಳಿಸಿರುತ್ತೇನೆ. ಅದನ್ನೇ ವಿಸ್ತಾರವಾಗಿ ನಿಮಗಾಗಿ ನಾನು ಪೂರ್ವಿಕರಿಂದ ಕೇಳಿದ ರೀತಿಯಲ್ಲಿ ತಿಳಿಸುವೆನು ಸಾವಧಾನವಾಗಿ ಕೇಳಿ ಎಂದು ಹೇಳಿದನು.

೧೨. ದೇವಕೂಟಗಿರಿಯ ಸಮಸ್ತ ದಿಕ್ಕುಗಳಲ್ಲಿರುವ ಪ್ರಖ್ಯಾತವಾದ ದೇಶವಿಶೇಷಗಳನ್ನು ಯಥಾಸ್ಥಿತವಾಗಿ ವರ್ಣಿಸಿರುವುದು ನಿಮಗೆ ತಿಳಿದವಿಷಯವೇ ಆಗಿದೆ.

ಕುಲಾಚಲಾನಾಂ ಪಂಚಾನಾಂ ನದೀನಾಂಚ ವಿಶೇಷತಃ ।
ತಥಾ ಜನಪದಾನಾಂಚ ಯಥಾ ದೃಷ್ಟಂ ಯಥಾಶ್ರುತಂ ॥ ೧೩ ॥

ಶೈವಾಲೋ ವರ್ಣಮೂಲಾಗ್ರಃ ಕೋರಂಶ್ಚಾಚಲೋತ್ತಮಃ ।
ಶ್ವೇತವರ್ಣಶ್ಚ ನೀಲಶ್ಚ ಪಂಚೈತೇ ಕುಲಪರ್ವತಾಃ ॥ ೧೪ ॥

ತೇಷಾಂ ಪ್ರಸೂತಿರನ್ಯೇಪಿ ಪರ್ವತಾ ಬಹುವಿಸ್ತರಾಃ ।
ಕೋಟಿಕೋಟಿಃ ಕ್ಷಿತೌ ಜ್ಞೇಯಾಃ ಶತಶೋಥ ಸಹಸ್ರಶಃ ॥ ೧೫ ॥

ತೈರ್ವಿಮಿಶ್ರಾ ಜನಪದೈರ್ನಾನಾಸತ್ವಸಮಾಕುಲಾಃ ।
ನಾನಾಪ್ರಕಾರಜಾತೀಯಾಸ್ತ್ವನೇಕನೃಪಪಾಲಿತಾಃ ॥ ೧೬ ॥

ನಾಮಧೇಯೈಶ್ಚ ವಿಕಾಂತೈಃ ಶ್ರೀಮದ್ಭಿಃ ಪುರುಷರ್ಷಭೈಃ ।
ಅಧ್ಯಾಸಿತಾ ಜನಪದಾಃ ಕೀರ್ತನೀಯಾಶ್ಚ ಶೋಭಿತಾಃ ॥ ೧೭ ॥

---

೧೩–೧೪. ಪಂಚಕುಲಾಚಲಗಳು ನದಿಗಳು ಮತ್ತು ದೇಶಗಳು ಇವುಗಳ ವಿಚಾರವಾಗಿ ನಾನು ಕೇಳಿ ತಿಳಿದ ಸಂಗತಿಯನ್ನು ತಿಳಿಸುವೆನು ಕೇಳಿರಿ. ಶೈವಾಲ ವರ್ಣಮೂಲಾಗ್ರ ಶ್ರೇಷ್ಠವಾದ ಕೋರಂಜ, ಶ್ವೇತವರ್ಣ, ನೀಲ ಎಂಬ ಈ ಐದು ಪರ್ವತಗಳೂ ಕುಲಪರ್ವತಗಳಾಗಿವೆ.

೧೫. ಈ ಭೂಮಂಡಲದಲ್ಲಿ ಆ ಐದು ಕುಲಪರ್ವತಗಳಿಂದ ಹುಟ್ಟಿದ ಗಿರಿಗಳು ಕೋಟಿಕೋಟಿ ಸಂಖ್ಯಾಕಗಳಾಗಿಯೂ ಸಹಸ್ರಾರು ಸಂಖ್ಯಾಕಗಳಾಗಿಯೂ ಅತಿ ವಿಸ್ತಾರವಾಗಿಯೂ ಇವೆ. ಅವನ್ನು ತಿಳಿಸುವೆನು.

೧೬. ಅಂತಹ ದೇಶಗಳು ನಾನಾ ಪ್ರಾಣಿಗಳಿಂದ ವ್ಯಾಪ್ತವಾಗಿಯೂ ವಿವಿಧ ಜಾತೀಯ ಜನಗಳಿಂದ ಸಹಿತವಾಗಿಯೂ ಮಿಶ್ರವಾಗಿಯೂ ಅನೇಕ ರಾಜರ ಆಡಳಿತಕ್ಕೆ ಸಿಕ್ಕಿದ್ದಾಗಿಯೂ ಇವೆ.

೧೭. ಪ್ರಖ್ಯಾತಿ, ಶೌರ್ಯ, ಐಶ್ವರ್ಯ, ಶ್ರೇಷ್ಠತೆ ಇವುಗಳಿಂದ ಸಹಿತರಾದ ಪ್ರಜೆಗಳು ಆ ದೇಶಗಳಲ್ಲಿ ವಾಸಿಸುವುದರಿಂದ ಆ ದೇಶಗಳು ವರ್ಣನೀಯಗಳಾಗಿಯೂ ಶೋಭಿತಗಳಾಗಿಯೂ ಇವೆ.

ತೇಷಾಂತು ನಾಮಧೇಯಾನಿ ರಾಷ್ಟ್ರಾಣಿ ವಿವಿಧಾನಿಚ ।
ಗಿರ್ಯಂತರನಿವಿಷ್ಟಾನಿ ಸಮೇಷು ವಿಷಮೇಷು ಚ ॥ ೧೮ ॥

ತಥಾ ಸುಮಂಗಲಾಃ ಶುದ್ಧಾಶ್ಚಂದ್ರಕಾಂತಾಃ ಸುನಂದನಾಃ ।
ವ್ರಜಕಾ ನೀಲಶ್ಶೈಲೇಯಾಃ ಸೌವಿರಾ ವಿಜಯಸ್ಥಲಾಃ ॥ ೧೯ ॥

ಮಹಾಸ್ಥಲಾಃ ಸುಕಾಮಾಶ್ಚ ಮಹಾಕೇಶಾಃ ಸುಮೂರ್ಧಜಾಃ ।
ವಾತರಂಹಾಃ ಸೋಪಸಂಗಾಃ ಪರಿವಾಯಾಃ ಪರಾಚಕಾಃ ॥ ೨೦ ॥

ಸಂಭವಕ್ತ್ರಾ ಮಹಾನೇತ್ರಾಃ ಶೈವಾಲಾಸ್ತಸಪಾಸ್ತಥಾ ।
ಕುಮುದಾಃ ಶಾಕಮುಂಡಾಶ್ಚ ಉರಃಸಂಕೀರ್ಣಭೌಮಕಾಃ ॥ ೨೧ ॥

ಸೋದಕಾ ವತ್ಸಕಾಶ್ಚೈಕೇ ವಾರಾಹಾ ಹಾರವಾಮಕಾಃ ।
ಶಂಖಾಖ್ಯಾ ಭಾವಿಸಂದ್ರಾಶ್ಚ ಉತ್ತರಾ ಹ್ಯೈವಭೌಮಕಾಃ ॥ ೨೨ ॥

ಕೃಷ್ಣಭೌಮಾಃ ಸುಭೌಮಾಶ್ಚ ಮಹಾಭೌಮಾಶ್ಚ ಕೀರ್ತಿತಾಃ ।
ಏತೇ ಚಾನ್ಯೇ ಚ ವಿಖ್ಯಾತಾ ನಾನಾಜನಪದಾ ಮಯಾ ॥ ೨೩ ॥

---

೧೮. ಪ್ರಖ್ಯಾತಪ್ರರುಷರು ಮತ್ತು ದೇಶಗಳ ನಾಮಗಳು, ಸುತ್ತಳತೆ, ಉದ್ದ, ಅಗಲ, ಸಮ, ವಿಷಮಭಾಗಗಳು ಇವುಗಳನ್ನು ವಿಸ್ತಾರವಾಗಿ ನಿರೂಪಿಸುವೆನು ಕೇಳಿ ಎಂಬುದಾಗಿ ಹೇಳಿದನು.

೧೯-೨೩. ಸುಮಂಗಳ, ಶುದ್ಧ, ಚಂದ್ರಕಾಂತ, ಸುನಂದನ, ವ್ರಜಕ, ನೀಲ ಶ್ಶೈಲೇಯ, ಸೌವೀರ, ವಿಜಯಸ್ಥಲ, ಮಹಾಸ್ಥಲ, ಸುಕಾಮ, ಮಹಾಕೇಶ, ಸುಮೂರ್ಧಜ, ವಾತರಂಹ, ಸೋಪಸಂಗ, ಪರಿವಾಯ, ಪರಾಚಕ, ಸಂಭವಕ್ತ್ರ, ಮಹಾನೇತ್ರ, ಶೈವಾಲ, ತಸಪ, ಕುಮುದ, ಶಾಕ, ಮುಂಡ, ಉರಃಸಂಕೀರ್ಣ, ಭೌಮಕ, ಸೋದಕ, ವತ್ಸಕ, ವಾರಾಹ, ಹಾರವಾಮಕ, ಶಂಖ, ಭಾವಿಸಾಂದ್ರ, ಉತ್ತರ, ಹ್ಯೈಮ ಭೌಮಕ, ಕೃಷ್ಣಭೌಮ, ಸುಭೌಮ, ಮಹಾಭೌಮ ಇವೇ ಮೊದಲಾದ ನಾನಾ ದೇಶಗಳು ಬಹಳ ಪ್ರಖ್ಯಾತವಾಗಿಯೂ ರಮ್ಯವಾಗಿಯೂ ಇರುತ್ತವೆಯೆಂದು ತಿಳಿಸಿರುವೆನು.

ತೇ ಪಿಬಂತಿ ಮಹಾಪುಣ್ಯಾಂ ಮಹಾಗಂಗಾಂ ಮಹಾನದೀಂ ।
ಆದೌ ತ್ರೈಲೋಕ್ಯ ವಿಖ್ಯಾತಾ ಶೀತಾ ಶೀತಾಂಬುವಾಹಿನೀ ॥ ೨೪ ॥

ತಥಾ ಚ ಹಂಸವಸತಿರ್ಮಹಾಚಕ್ರಾ ಚ ನಿಮ್ನಗಾ ।
ಚಕ್ರಾ ವಕ್ರಾ ಚ ಕಂಚೀ ಚ ಸುರಸಾ ಚಾಪಗೋತ್ತಮಾ ॥ ೨೫ ॥

ಶಾಖಾವತೀ ಚೇಂದ್ರನದೀ ಮೇಘಾ ಮಂಗಾರವಾಹಿನೀ ।
ಕಾವೇರೀ ಹರಿತೋಯಾ ಚ ಸೋಮಾವರ್ತಾ ಶತಹ್ರದಾ ॥ ೨೬ ॥

ವನಮಾಲಾ ವಸುಮತೀ ಪಂಪಾ ಪಂಪಾವತೀ ಶುಭಾ ।
ಸುವರ್ಣಾ ಪಂಚವರ್ಣಾ ಚ ತಥಾ ಪುಣ್ಯಾನಪುಷ್ಕೃತೀ ॥ ೨೭ ॥

ಮಣಿವಪ್ರಾ ಸುವಪ್ರಾ ಚ ಬ್ರಹ್ಮಭಾಗಾ ಶಿಲಾಶಿನೀ ।
ಕೃಷ್ಣತೋಯಾ ಚ ಪುಣ್ಯೋದಾ ತಥಾ ನಾಗಪದೀ ಶುಭಾ ॥ ೨೮ ॥

ಶೈವಾಲಿನೀ ಮಣಿತಟಾ ಕ್ಷಾರೋದಾ ಚಾರುಣಾವತೀ ।
ತಥಾ ವಿಷ್ಣುಪದೀ ಚೈವ ಮಹಾಪುಣ್ಯಾ ಮಹಾನದೀ ॥ ೨೯ ॥

---

೨೪. ಆ ದೇಶದ ಜನಗಳು ಅತಿ ಪುಣ್ಯಪ್ರದವಾದ ಆ ಮಹಾಗಂಗೆಯ ಜಲದಲ್ಲಿ ಸ್ನಾನಪಾನಾದಿಗಳನ್ನು ಮಾಡಿ ಕೀರ್ತಿವಂತರಾಗಿರುವರು. ಶೀತವಾದ ಜಲದಿಂದ ಕೂಡಿದ ಆ ಮಹಾನದಿಯು ಮೊದಲು ಶೀತೆಯೆಂಬ ನಾಮದಿಂದ ಮೂರು ಲೋಕದಲ್ಲಿಯೂ ಪ್ರಸಿದ್ಧವಾಗಿತ್ತು.

೨೫–೩೧. ಆ ಗಂಗಾನದಿಯಂತೆಯೇ ಹಂಸವಸಿತಿ, ಮಹಾಚಕ್ರೆ, ನಿಮ್ನಗೆ, ಚಕ್ರೆ, ವಕ್ರೆ, ಕಾಂಚಿ, ಸುರಸೆ, ನಗೋತ್ತಮೆ, ಶಾಖಾವತಿ, ಇಂದ್ರನದಿ, ಮೇಘೆ, ಮಂಗಾರವಾಹಿನೀ, ಕಾವೇರಿ, ಹರಿತೋಯೆ, ಸೋಮಾವರ್ತೆ, ಶತಹ್ರದೆ, ವನಮಾಲೆ ವಸುಮತಿ, ಪಂಪಾ, ಪಂಪಾವತಿ, ಶುಭೆ, ಸುವರ್ಣೆ, ಪಂಚವರ್ಣೆ, ಪುಣ್ಯೆವಪುಸ್ಕೃತಿ, ಮಣಿವಪ್ರೆ, ಬ್ರಹ್ಮಭಾಗೆ, ಶಿಲಾಶಿನಿ, ಕೃಷ್ಣತೋಯೆ, ಪುಣ್ಯೋದೆ, ನಾಗಪದಿ, ಶೈವಾಲಿನಿ, ಮಣಿತಟೆ, ಕ್ಷಾರೋದೆ, ಅರುಣಾವತಿ, ವಿಷ್ಣುಪದಿ, ಮಹಾಪುಣ್ಯೆ, ಮಹಾ

ಹಿರಣ್ಯವಾಹಿನೀಲಾ ಚ ಸ್ಕಂದಮಾಲಾ ಸುರಾವತೀ ।
ವಾಮೋದಾ ಚ ಪತಾಕಾ ಚ ವೇತಲೀ ಚ ಮಹಾನದೀ ॥ ೩೦ ॥

ಏತಾ ಗಂಗಾ ಮಹಾನದ್ಯೋ ನಾಯಿಕಾ ಪರಿಕೀರ್ತಿತಾಃ ।
ಕ್ಷುದ್ರನದ್ಯಸ್ತ್ವಸಂಖ್ಯಾತಾಃ ಶತಶೋಽಥ ಸಹಸ್ರಶಃ ॥ ೩೧ ॥

ಪೂರ್ವದ್ವೀಪಸ್ಯ ವಾಹಿನ್ಯಃ ಪುಣ್ಯವತ್ಯಶ್ಚ ಕೀರ್ತಿತಾಃ ।
ಕೀರ್ತಿತೇನಾಪಿ ಚೈತಾಸಾಂ ಪೂತಃ ಸ್ಯಾದಿತಿ ಮೇ ಮತಿಃ ॥ ೩೨ ॥

ಸಮೃದ್ಧರಾಷ್ಟ್ರಂ ಸ್ಫೀತಂಚ ನಾನಾಜನಪದಾಕುಲಂ ।
ನಾನಾವೃಕ್ಷವನೋದ್ದೇಶಂ ನಾನಾನಗಸುವೇಷ್ಟಿತಂ ॥ ೩೩ ॥

ನರನಾರೀಗಣಾಕೀರ್ಣಂ ನಿತ್ಯಂ ಪ್ರಮುದಿತಂ ಶಿವಂ ।
ಬಹುಧಾನ್ಯವನೋಪೇತಂ ನಾನಾನೃಪತಿಪಾಲಿತಂ ।
ಉಪೇತಂ ಕೀರ್ತನಶತೈರ್ನಾನಾರತ್ನಾಕರಾ ಕರಂ ॥ ೩೪ ॥

---

ನದಿ, ಹಿರಣ್ಯವಾಹಿ, ನೀಲೆ, ಸ್ಕಂದಮಾಲೆ, ಸುರಾವತಿ, ವಾಮೋದೆ, ಪತಾಕೆ, ವೇತಾಲಿ ಎಂಬ ನಾಮಕಗಳಾದ ನದಿಗಳು ಗಂಗಾನದಿಯಿಂದಲೇ ಜನ್ಯಗಳಾಗಿವೆ. ಈ ನದಿಗಳಿಗೆಲ್ಲಾ ಗಂಗೆಯೇ ನಾಯಕಳಾಗಿರುವಳು. ಮೇಲೆ ಹೇಳಿರುವ ನದಿಗಳಲ್ಲದೆ ಉಳಿದ ಸಣ್ಣ ನದಿಗಳು ಅಸಂಖ್ಯಾಕಗಳಾಗಿಯೂ ಸಹಸ್ರಾರು ಸಂಖ್ಯೆಗಳಾಗಿಯೂ ಇರುತ್ತವೆ.

೩೨. ಯಾವ ನದಿಗಳು ಜಂಬೂದ್ವೀಪದಲ್ಲಿ ಹರಿಯುತ್ತವೆಯೋ ಅವು ಭಾಗ್ಯ ಶಾಲಿಗಳೆಂದು ಪ್ರಸಿದ್ಧವಾಗಿವೆ. ಯಾರು ಇವುಗಳ ನಾಮಸಂಕೀರ್ತನೆಯನ್ನು ಮಾಡುವರೋ ಅವರೂ ಕೂಡ ಪವಿತ್ರರಾಗುವರೆಂದು ನನ್ನ ಭಾವನೆಯಿರುತ್ತದೆ.

೩೩-೩೪. ಯಾವ ದೇಶದಲ್ಲಿ ಈ ನದಿಗಳು ಹರಿಯುತ್ತವೆಯೋ ಆ ದೇಶವು ಸಮೃದ್ಧವಾಗಿಯೂ ವಿಶಾಲವಾಗಿಯೂ ನಾನಾ ನಗರಗಳಿಂದ ಸಹಿತವಾಗಿಯೂ ವಿವಿಧ ವಾದ ಪರ್ವತಗಳಿಂದ ಯುಕ್ತವಾಗಿಯೂ ಇರುವುದು. ನಾನಾ ವೃಕ್ಷಗಳಿರುವ ವನ ಗಳಿಂದ ಭೂಷಿತವೂ ಸ್ತ್ರೀ ಮತ್ತು ಪುರುಷರ ಗಣಗಳಿಂದ ಭರಿತವೂ ನಿತ್ಯಸಂತೋಷ ಯುಕ್ತವೂ ಮಂಗಳಪ್ರದವೂ ಬಹುಧಾನ್ಯಜನಕವಾದ ವನಗಳಿಂದ ಮಂಡಿತವೂ ನಾನಾ ರಾಜರಿಂದ ಪರಿಪಾಲಿಸಲ್ಪಡುವುದೂ ಕೀರ್ತನಶತೋಪೇತವೂ ನಾನಾರತ್ನ ಗಳಿಗೆ ಗಣಿಯಂತೆಯೂ ಇರುವುದು.

ತಸ್ಮಿಂದೇಶೇ ಸಮಾಖ್ಯಾತಾ ಹೇಮಶಂಖದಲಪ್ರಭಾಃ ।
ಮಹಾಕಾಯಾ ಮಹಾವೀರ್ಯಾಃ ಪುರುಷಾಃ ಪುರುಷರ್ಷಭಾಃ ॥ ೩೫ ॥

ಸಂಭಾಷಣಂ ದರ್ಶನಂಚ ಸಮುಸ್ಥಾನೋಪಸೇವನಂ ।
ದೇವೈಃ ಸಹ ಮಹಾಭಾಗಾಃ ಕುರ್ವತೇ ತತ್ರ ವೈ ಪ್ರಜಾಃ ॥ ೩೬ ॥

ದಶವರ್ಷಸಹಸ್ರಾಣಿ ತೇಷಾಮಾಯುಃ ಪ್ರಕೀರ್ತಿತಂ ।
ಧರ್ಮಾಧರ್ಮವಿಶೇಷಶ್ಚ ನ ತೇಷ್ವಸ್ತಿ ಮಹಾತ್ಮಸು ।
ಅಹಿಂಸಾ ಸತ್ಯವಾಕ್ಯಂಚ ಪ್ರಕೃತ್ಯೈವ ಹಿ ವರ್ತತೇ ॥ ೩೭ ॥

ತೇ ಭಕ್ತ್ಯಾ ಶಂಕರಂ ದೇವಂ ಗೌರೀಂ ಪರಮವೈಷ್ಣವೀಂ ।
ಇಜ್ಯಾಪೂಜಾನಮಸ್ಕಾರಾಂಸ್ತಾಭ್ಯಾಂ ನಿತ್ಯಂ ಪ್ರಯುಂಜತೇ ॥ ೩೮ ॥

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಭುವನವಿನ್ಯಾಸೋ" ನಾಮ ತ್ರಿಚತ್ವಾರಿಂಶೋಽಧ್ಯಾಯಃ**

---

೩೫. ಅಂತಹ ದೇಶದಲ್ಲಿ ಪುರುಷರು ಸುವರ್ಣ ಶಂಖ ಇವುಗಳಂತೆ ಕಾಂತಿಯುತರೂ ಬೃಹತ್ಕಾಯರೂ ಮಹಾಶೂರರೂ ಪುರುಷಶ್ರೇಷ್ಠರೂ ಆಗಿರುವರು.

೩೬. ಆ ದೇಶದ ಪ್ರಜೆಗಳೆಲ್ಲರೂ ಪ್ರತ್ಯಕ್ಷವಾಗಿ ದೇವತೆಗಳ ಸಂಗಡ ಮಾತುಕಥೆ ದರ್ಶನ ಏಕತ್ರವಾಸ (ಸಹವಾಸ) ಸೇವನ ಇವುಗಳನ್ನು ಮಾಡುತ್ತಾರೆ.

೩೭. ಆ ಪುರುಷರ ಆಯುಷ್ಯವು ಹತ್ತುಸಾವಿರ ವರ್ಷಗಳಿವೆಯೆಂದು ಜನಗಳು ಹೇಳುವರು. ಮಹಾತ್ಮರಾದ ಆ ಪ್ರಜೆಗಳಲ್ಲಿ ಧರ್ಮಾಧರ್ಮವಿಶೇಷಗಳೇನೂ ಇರುವುದಿಲ್ಲ. ಅವರು ಸ್ವಭಾವವಾಗಿಯೂ ಅಹಿಂಸಾಯುತರೂ ಸತ್ಯವಂತರೂ ಆಗಿರುವರು.

೩೮. ಆ ದೇಶಗಳ ಪ್ರಜೆಗಳೆಲ್ಲರೂ ದೇವೇಶನಾದ ಶಂಕರನನ್ನು ಪರಮವೈಷ್ಣವಿಯಾದ ಗೌರೀದೇವಿಯನ್ನು ಸದಾಕಾಲದಲ್ಲಿಯೂ ಭಕ್ತಿಯಿಂದ ಯಾಗಪೂಜೆ ನಮಸ್ಕಾರ ಇವುಗಳನ್ನು ಮಾಡುವರು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಭುವನವಿನ್ಯಾಸನಿರೂಪಣೆ"ಯೆಂಬ ನಲವತ್ತಮೂರನೆಯ ಅಧ್ಯಾಯವು ಸಮಾಪ್ತವು.

# ನಲವತ್ತಮೂರನೆಯ ಅಧ್ಯಾಯದ ಸಾರಾಂಶವು

ಗಂಧಮಾದನ ಪರ್ವತದಲ್ಲಿ ಮಹಾಶಿಲೆಯು ಅತಿವಿಸ್ತಾರವಾಗಿರುವುದು. ಅದರಲ್ಲಿ ಅನೇಕ ಪುರುಷರು ವಾಸಿಸುವರು. ಅವರು ಅಲ್ಲಿರುವ ಹಲಸಿನ ಹಣ್ಣನ್ನು ತಿಂದು ಅತಿ ದೀರ್ಘಾಯುಷ್ಕರೂ ಸುಂದರರೂ ಶಕ್ತಿವಂತರೂ ಆಗಿರುವರು. ಮಾಲ್ಯವತ್ಪರ್ವತದಲ್ಲಿಯೂ ಅತಿವಿಶಾಲವಾದ ಶಿಲೆಯಿರುತ್ತದೆ. ಅದರಲ್ಲಿ ಆಮ್ರವನವಿರುತ್ತದೆ. ಆ ಪ್ರಜೆಗಳು ಆ ಮಾವಿನ ಹಣ್ಣಿನ ರಸವನ್ನು ಪಾನಮಾಡಿ ಹತ್ತುಸಾವಿರವರ್ಷದ ವರೆಗೂ ಆಯುಷ್ಯವುಳ್ಳವರೂ, ಸುಂದರರೂ, ಬಲಿಷ್ಠರೂ, ಕೀರ್ತಿವಂತರೂ ಆಗಿರುವರು. ಹಾಗೆಯೇ ಭದ್ರಾಶ್ವಾದಿಗಳಲ್ಲಿರುವ ಜನರೂ ಕೂಡ ಚಿರಂಜೀವಿಗಳೂ ಕೀರ್ತಿಯುತರೂ ಕಾಂತಿವತರೂ ಆಗಿರುವರು.

ಶೈವಾಲ ವರ್ಣಮಾನ ಕೋರಂಜ ಶ್ವೇತವರ್ಣ ನೀಲವೆಂಬ ಐದು ಕುಲ ಪರ್ವತಗಳಿವೆ. ಆ ಪರ್ವತಗಳಲ್ಲಿ ಶುದ್ಧವೇ ಮೊದಲಾದ ಅನೇಕ ದೇಶಗಳಿವೆ. ಈ ಜನಗಳು ಅಲ್ಲಿನ ಮಹಾನದಿಗಳಲ್ಲಿ ಸ್ನಾನಮಾಡಿ ಪ್ರಖ್ಯಾತರಾಗಿರುವರು. ಆ ಮಹಾನದಿಗಳು ವಕ್ರೆ, ಕಾಂಚಿ, ಸುರಸೆ, ಶಾಖಾವತಿ, ಕಾವೇರಿ ಮೊದಲಾದ ಮಹಾನದಿಗಳಿವೆ. ಆ ಮಹಾನದಿಗಳಲ್ಲಿ ಸ್ನಾನಪಾನಾದಿಗಳಿಂದ ಪೂರ್ಣವಾದ ಆಯುಷ್ಯವುಳ್ಳವರಾಗಿ ಜನರು ಭಕ್ತಿಯಿಂದ ಪಾರ್ವತೀ ಪರಮೇಶ್ವರರನ್ನು ಪೂಜಿಸುವರೆಂಬ ವಿಷಯಗಳು ಈ ಅಧ್ಯಾಯದಲ್ಲಿ ವರ್ಣಿತವಾಗಿವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ॥ ಚತುಶ್ಚತ್ವಾರಿಂಶೋಽಧ್ಯಾಯಃ ॥

॥ ಸೂತ ಉವಾಚ ॥

**ನಿಸರ್ಗ ಏಷ ವಿಖ್ಯಾತೋ ಭದ್ರಾಶ್ವಾನಂ ಯಥಾರ್ಥವತ್ ।**
**ಶೃಣುಧ್ವಂ ಕೇತುಮಾಲಾನಾಂ ವಿಸ್ತರೇಣ ಪ್ರಕೀರ್ತಿತಂ ॥ ೧ ॥**

**ನಿಷಧಸ್ಯಾಚಲೇಂದ್ರಸ್ಯ ಪಶ್ಚಿಮಸ್ಯ ಮಹಾತ್ಮನಃ ।**
**ಪಶ್ಚಿಮೇನ ಹಿ ಯತ್ತತ್ರ ದಿಕ್ಷು ಸರ್ವಾಸು ಕೀರ್ತಿತಂ ॥ ೨ ॥**

**ಕುಲಾಚಲಾನಾಂ ಸಪ್ತಾನಾಂ ನದೀನಾಂಚ ವಿಶೇಷತಃ ।**
**ತಥಾ ಜನಪದಾನಾಂಚ ವಿಸ್ತರಂ ಶ್ರೋತುಮರ್ಹಥ ॥ ೩ ॥**

---

## ನಲವತ್ತನಾಲ್ಕನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಎಲೈ ಮುನಿಗಳೇ ಭದ್ರಾಶ್ವಗಳ ವಿಷಯವಾಗಿ ನಿಜವಾದ ಸಂಗತಿಗಳನ್ನು ನಿಮಗಾಗಿ ತಿಳಿಸಿರುವೆನು ಈಗ ಕೇತುಮಾಲವೆಂಬ ಪರ್ವತದ ವಿಷಯಗಳನ್ನು ವಿಸ್ತಾರವಾಗಿ ಹೇಳುವೆನು ಕೇಳಿ ಎಂದನು.

೨. ಪಶ್ಚಿಮದಿಗ್ಭಾಗದಲ್ಲಿರುವುದೂ ಅಚಲೋತ್ತಮವೂ ಅತಿಮಹತ್ತೂ ಆದ ನಿಷಧವೆಂಬ ಗಿರಿಯ ಪಶ್ಚಿಮಭಾಗದಲ್ಲಿರುವ ಕುಲಾಚಲ ದೇಶ ನದಿ ಇವುಗಳನ್ನು ವಿಸ್ತಾರವಾಗಿ ತಿಳಿಸುವೆನು

೩. ಆ ನಿಷಧಗಿರಿಯ ಪಶ್ಚಿಮಭಾಗದಲ್ಲಿ ಏಳು ಕುಲಾಚಲಗಳು ಅಸಂಖ್ಯಾತವಾದ ನದಿಗಳು ಸುಪ್ರಸಿದ್ಧಗಳಾದ ದೇಶಗಳು ಇವುಗಳ ವಿಸ್ತಾರವನ್ನು ವರ್ಣಿಸುವೆನು ಕೇಳಿ ಎಂದನು.

ವಿಶಾಲಃ ಕಂಬಲಃ ಕೃಷ್ಣೋ ಜಯಂತೋ ಹರಿಪರ್ವತಃ ।
ಅಶೋಕೋ ವರ್ಧಮಾನಶ್ಚ ಸಪ್ತೈತೇ ಕುಲಪರ್ವತಾಃ ॥ ೪ ॥

ತೇಷಾಂ ಪ್ರಸೂತಿರನ್ಯೇಽಪಿ ಪರ್ವತಾ ಬಹುವಿಸ್ತರಾಃ ।
ಕೋಟಿಕೋಟಿಶತಾಜ್ಞೇಯಾಃ ಶತಶೋಽಥ ಸಹಸ್ರಶಃ ॥ ೫ ॥

ತೈರ್ವಿಮಿಶ್ರಾ ಜನಪದಾ ನಾನಾಜಾತಿಸಮಾಕುಲಾಃ ।
ನಾನಾಪ್ರಕಾರವಿಜ್ಞೇಯಾಸ್ತ್ವನೇಕನೃಪಪಾಲಿತಾಃ ॥ ೬ ॥

ತೇ ನಾಮಧೇಯೈರ್ವಿಕ್ರಾಂತಾ ವಿವಿಧಾಃ ಪ್ರಥಿತಾ ಭುವಿ ।
ಅಧ್ಯಾಸಿತಾ ಜನಪದೈಃ ಕೀರ್ತನೈಶ್ಚ ವಿಭೂಷಿತಾಃ ॥ ೭ ॥

ತೇಷಾಂ ಸನಾಮಧೇಯಾನಿ ರಾಷ್ಟ್ರಾಣಿ ವಿವಿಧಾನಿ ಚ ।
ಗಿರ್ಯಂತನನಿವಿಷ್ಟಾನಿ ಸಮೇಷು ವಿಷಮೇಷು ಚ ॥ ೮ ॥

---

೪-೫. ವಿಶಾಲ, ಕಂಬಲ, ಕೃಷ್ಣ, ಜಯಂತ, ಹರಿಪರ್ವತ, ಅಶೋಕ, ವರ್ಧಮಾನವೆಂಬ ಏಳು ಕುಲಪರ್ವತಗಳೂ, ಅವುಗಳಿಂದ ಜನ್ಯವಾದ ಇತರ ಪರ್ವತಗಳೂ ಬಹಳ ವಿಸ್ತಾರವಾಗಿಯೂ ಕೋಟಿ ಕೋಟಿ ಸಂಖ್ಯಾಕಗಳಾಗಿಯೂ, ಸಹಸ್ರ ಸಂಖ್ಯಾಕಗಳಾಗಿಯೂ ಇವೆ.

೬. ಮೇಲೆ ನಿರೂಪಿಸಿರುವ ಪರ್ವತಾದಿಗಳಿಂದ ನಾನಾ ಜಾತಿಯ ಜನರಿಂದ ಸಹಿತವಾಗಿಯೂ, ನಾನಾ ಪ್ರಕಾರವಾಗಿಯೂ, ವಿವಿಧರಾಜರಿಂದ ಪಾಲಿತವಾಗಿಯೂ ಇವೆ.

೭. ಆ ದೇಶಗಳು ತಂತಮ್ಮ ನಾಮಧೇಯಗಳಿಂದ ಪ್ರಖ್ಯಾತವಾಗಿ ವಿವಿಧಾಕಾರವಾಗಿವೆ. ಅನೇಕ ರಾಜರ ಆಳ್ವಿಕೆಗೆ ಒಳಪಟ್ಟಿವೆ ವಿವಿಧ ಭವನಗಳಿಂದ ಭೂಷಿತವೂ ವರ್ಣನೀಯವೂ ಆಗಿವೆ.

೮. ಆ ದೇಶಗಳು ವಿವಿಧ ನಾಮಗಳಿಂದ ಪ್ರಖ್ಯಾತವೂ ಅನೇಕ ರಾಷ್ಟ್ರಗಳಿಂದ ಮಿಳಿತವೂ, ಗಿರಿಗಳವರೆಗೆ ವ್ಯಾಪ್ತವೂ, ಹಳ್ಳತಿಟ್ಟುಗಳಿಂದ ಮಿಳಿತವೂ ಆಗಿವೆ.

ಯಥೇಹ ಕಥಿತಾಃ ಪೌರಾ ಗೋಮನುಷ್ಯಕಪೋತಕಾಃ ।
ತತ್ಸುಖಾ ಭ್ರಮರಾ ಯಾಥಾ ಮಾಹೇಯಾಚಲಕೂಟಕಾಃ ॥ ೯ ॥

ಸುಮೌಲಾಃ ಸ್ತ್ರಾವಕಾಃ ಕ್ರೌಂಚಾಃ ಕೃಷ್ಣಾಂಗಮಣಿಪುಂಜಕಾಃ ।
ಕೂಟಕಂಬಲಮೌಷೀಯಾಃ ಸಮುದ್ರಾಂತರಕಾಸ್ತಥಾ ॥ ೧೦ ॥

ಕರಂಭವಾಃ ಕುಚಾಃ ಶ್ವೇತಾಃ ಸುವರ್ಣಕಟಿಕಾ ಶುಭಾಃ ।
ಶ್ವೇತಾಂಗಾಃ ಕೃಷ್ಣಪಾದಾಶ್ಚ ವಿಹಾಃ ಕಪಿಲಕರ್ಣಿಕಾಃ ॥ ೧೧ ॥

ಅತ್ಯಾಕರಾಲಗೋಜ್ವಾಲಾ ಹೀನಾನಾ ವನಪಾತಕಾಃ ।
ಮಹಿಷಾಃ ಕುಮುದಾಭಾಶ್ಚ ಕರವಾಟಾಃ ಸಹೋತ್ಕಚಾಃ ॥ ೧೨ ॥

ಶುನಕಾಸಾ ಮಹಾನಾಸಾ ವನಾಸಗಜಭೂಮಿಕಾಃ ।
ಕರಂಜಮಂಜಮಾ ವಾಹಾಃ ಕಿಷ್ಕಿಂಡೀಪಾಂಡುಭೂಮಿಕಾಃ ॥ ೧೩ ॥

ಕುಬೇರಾ ಧೂಮಜಾ ಜಂಗಾ ವಂಗಾ ರಾಜೀವಕೋಕಿಲಾಃ ।
ವಾಚಾಂಗಾಶ್ಚ ಮಹಾಂಗಾಶ್ಚ ಮಧೌರೇಯಾಃ ಸುರೇಚಕಾಃ ॥ ೧೪ ॥

---

೯. ನಾಗರಿಕರ ವಿಚಾರವಾಗಿ ಅನೇಕ ವಿಷಯಗಳು ನಿರೂಪಿತವಾಗಿವೆ. ಹಾಗೆಯೇ ಗೋವು, ಮನುಷ್ಯರು ಪಾರಿವಾಳ, ಭ್ರಮರ ಇವೇ ಮೊದಲಾದ ಪ್ರಾಣಿಗಳ ವಿಷಯಗಳನ್ನು ತಿಳಿಯಬೇಕು.

೧೦-೧೫. ಆ ದೇಶಗಳು ಯಾವುವೆಂದರೆ ಸುಮೌಲ, ಸ್ತ್ರಾಬಕ, ಕ್ರೌಂಚ, ಕೃಷ್ಣಾಂಗ, ಮಣಿಪುಂಜಕ, ಕೂಟ, ಕಂಬಳ, ಮಾಷೇಯ, ಸಮುದ್ರಾಂತರಕ, ಕರಂಭವ, ಕುಚ, ಶ್ವೇತ, ಸುವರ್ಣಕಟಕ, ಶ್ವೇತಾಂಗ, ಕೃಷ್ಣಪಾದ, ವಿಹ, ಕಪಿಲ ಕರ್ಣಿಕ, ಅತ್ಯಾಕರಾಲ, ಗೋಜ್ವಾಲೆ, ಹೀನಾನೆ, ವನಪಾತಕೆ, ಮಹಿಷ, ಕುಮುದಾಭ, ಕರವಾಟ, ಸಹೋತ್ಕಚ, ಶುನಕಾಶೆ, ಮಹಾನಾಸೆ, ವನಾಸ, ಗಜಭೂಮಿಕ, ಕರಂಜ ಮಂಜಮಾ, ವಾಹಾ, ಕಿಷ್ಕಿಂಡೀ, ಪಾಂಡುಭೂಮಿಕ, ಕುಬೇರ, ಧೂಂಮಜ, ಜಂಗಾ, ವಂಗಾ, ರಾಜೀವಕೋಕಿಲಾ, ವಾಚಾಂಗ, ಮಹಾಂಗ, ಮಧೌರೆಯ, ಸುರೇಚಕಾ,

ಪಿತ್ತಲಾಃ ಕಾಚಲಾಶ್ಚೈವ ಶ್ರವಣಾ ಮತ್ತಕಾಸಿಕಾಃ ।
ಗೋದಾವಾ ಬಕುಲಾ ವಾಂಗಾ ವಂಗಕಾ ವೋದಕಾಃ ಕಲಾಃ ॥ ೧೫ ॥

ತೇ ಪಿಬಂತಿ ಮಹಾಭಾಗಾಃ ಪ್ರಥಮಾಂತು ಮಹಾನದೀಂ ।
ಸುಮಪ್ರಾಂ ಪುಣ್ಯಸಲಿಲಾಂ ಮಹಾನಾಗನಿಷೇವಿತಂ ॥ ೧೬ ॥

ಕಂಬಲಾಂ ತಾಮಸೀಂ ಶ್ಯಾಮಾಂ ಸುಮೇಧಾಂ ಬಕುಲಾಂ ನದೀಂ ।
ವಿಕೀರ್ಣಾಂ ಶಿಖಿಮಾಲಾಂಚ ತಥಾದರ್ಭಾವತೀಮಪಿ ॥ ೧೭ ॥

ಭದ್ರಾನದೀಂ ಶುಕನದೀಂ ಪಲಾಶಾಂಚ ಮಹಾನದೀಂ ।
ಭೀಮಾಂಪ್ರಭಂಜನಂ ಕಾಂಚೀಂ ಪುಣ್ಯಾಂಚೈವ ಕುಶಾವತೀಂ ॥ ೧೮ ॥

ದಕ್ಷಾಂ ಶಾಕವತೀಂಚೈವ ಪುಣ್ಯೋದಾಂಚ ಮಹಾನದೀಂ ।
ಚಂದ್ರಾವತೀಂ ಸುಮೂಲಾಂಚ ಋಷಭಾಂಚಾಪಗೋತ್ತಮಾಂ ॥ ೧೯ ॥

ನದೀಂ ಸಮುದ್ರಮಾಲಾಂಚ ತಥಾ ಚಂಪಾವತೀಮಪಿ ।
ಏಕಾಕ್ಷಾಂ ಪುಷ್ಕಲಾಂ ವಾಹಾಂ ಸುವರ್ಣಾಂ ನಂದಿನೀಮಪಿ ॥ ೨೦ ॥

ಕಾಲಿಂದೀಂಚೈವ ಪುಣ್ಯೋದಾಂ ಭಾರತೀಂಚ ಮಹಾನದೀಂ ।
ಸಿತೋದಾಂಪಾತಿಕಾಂ ಬ್ರಾಹ್ಮೀಂ ವಿಶಾಲಾಂಚ ಮಹಾನದೀಂ ॥ ೨೧ ॥

---

ಪಿತ್ತಲ, ಕಾಚಾಲ, ಶ್ರವಣ, ಮತ್ತಕಾಸಿಕ, ಗೋದಾವ, ಬಕುಲ, ವಾಂಗ, ವಂಗಕಾ, ಮೋದಕಾ. ಕಲಾ ಎಂಬ ದೇಶಗಳು ಪ್ರಖ್ಯಾತವಾಗಿವೆ.

೧೬. ಮೇಲೆ ಹೇಳಿದ ದೇಶದ ಜನಗಳು ಭಾಗ್ಯಶಾಲಿಗಳಾದ ಕಾರಣ ಉತ್ತಮವಾದ ದಡಗಳಿರುವ ಪವಿತ್ರವಾದ ಜಲವುಳ್ಳ ಮಹಾ ನಾಗಗಳಿಂದ ಸೇವಿಸಲ್ಪಟ್ಟ ಪ್ರಖ್ಯಾತವೂ ಮೊದಲನೆಯದೂ, ಆದ ಮಹಾನದಿಯ ಜಲವನ್ನು ಪಾನಮಾಡಿ ಅನೇಕ ವರ್ಷಗಳು ಆಯುಷ್ಮಂತರಾಗಿರುವರು.

೧೭-೨೩ ಕಂಬಲಾ, ತಾಮಸೀ, ಶ್ಯಾಮಾ, ಸುಮೇಧಾ, ಬಕುಳಾ, ವಿಕೀರ್ಣಾ, ಶಿಖಿಮಾಲಾ, ದರ್ಭಾವರೇ, ಭದ್ರಾ, ಶುಕನದೀ, ಭೀಮಾ, ಪ್ರಭಂಜನಾ, ಕಾಂಚೀ, ಪುಣ್ಯಾ, ಕುಶಾವತೀ, ದಕ್ಷಾ, ಶಾಕವತೀ, ಪುಣ್ಯೋದಾ, ಚಂದ್ರಾವತೀ, ಸುಮೂಲಾ, ಋಷಭಾ, ಸಮುದ್ರಮಾಲಾ, ಚಂಪಾವತೀ, ಏಕಾಕ್ಷಾ, ಪುಷ್ಕಲಾ, ಸುವರ್ಣಾ, ನಂದಿನೀ, ಕಾಲಿಂದೀ, ಪುಣ್ಯೋದಾ, ಭಾರತೀ, ಸೀತೋದಾ, ಪಾತಿಕಾ, ಬ್ರಾಹ್ಮೀ,

ಪೀವರೀಂ ಕುಂಭಕಾರೀಂಚ ರುಶಾಂಚೈವಾಪಗೋತ್ತಮಾಂ ।
ಮಹಿಷೀಂ ಮಾನುಷೀಂ ದಂಡಾಂ ತಥಾ ನದನದೀಂ ಶುಭಂ ॥ ೨೨ ॥

ಏತಾಂಚಾನ್ಯಾಂಚ ಪೀಯಂತೇ ಬಹ್ವ್ಯೋ ಹಿ ಸರಿತೋತ್ತಮಾಃ ।
ದೇವರ್ಷಿಸಿದ್ಧಚರಿತಾಃ ಪುಣ್ಯೋದಾಃ ಪಾಪಹಾಃ ಶುಭಾಃ ॥ ೨೩ ॥

ನಾನಾಜನಪದಾಸ್ಫೀತಂ ಮಹಾಪಾಗಾವಿಭೂಷಿತಂ ।
ನಾನಾರತ್ನೌಘಸಂಪೂರ್ಣ ನಿತ್ಯಂ ಪ್ರಮುದಿತಂ ಶಿವಂ ॥ ೨೪ ॥

ಉದೀರ್ಣಂ ಧನಧನ್ಯಾಢ್ಯೈರ್ನರವಾಸ್ಯೈಃ ಸಮಂತತಃ ।
ಸನ್ನಿವಿಷ್ಟಂ ಮಹಾದ್ವೀಪಂ ಪಶ್ಚಿಮಂ ಸುಕೃತಾತ್ಮನಾಃ ।
ನಿಸರ್ಗಃ ಕೇತುಮಾಲಾನಾಮೇಷ ವಃ ಪರಿಕೀರ್ತಿತಃ ॥ ೨೫ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಭುವನವಿನ್ಯಾಸೋ"
ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

ವಿಶಾಲಾ, ಪೀವರೀ, ಕುಂಭಕಾರೀ, ರುಷಾ, ಮಹಿಷೀ, ಮಾನುಷೀ, ದಂಡಾ, ನದನದೀ ಇವೇ ಮೊದಲಾದ ಪವಿತ್ರವಾದ ಮಹಾನದಿಗಳು ಮೇಲೆ ನಿರೂಪಿಸಿದ್ದ ದೇಶಗಳಲ್ಲಿ ಹರಿದು ಪ್ರಖ್ಯಾತಿಗೊಂಡಿವೆ. ಆ ಪ್ರಜೆಗಳು ಈ ನದಿಗಳ ಜಲವನ್ನುಪ ಯೋಗಿಸಿ ಸ್ನಾನಪಾನಾದಿಗಳನ್ನು ಮಾಡುವರು. ಈ ಮಹಾನದಿಗಳು ದೇವತೆಗಳು, ಋಷಿಗಳು, ಸಿದ್ಧರು ಇವರಿಂದ ಸೇವಿಸಲ್ಪಟ್ಟದ್ದಾಗಿಯೂ, ಪವಿತ್ರವಾಗಿಯೂ, ಪಾಪ ಹಾರಕವಾಗಿಯೂ, ಮಂಗಳಪ್ರದವಾಗಿಯೂ, ಪ್ರಸಿದ್ಧವಾಗಿಯೂ ಇವೆ.

೨೪-೨೫. ಕೇತುಮಾಲೆಗಳ ಸಾಲಿನಲ್ಲಿರುವ ಪಶ್ಚಿಮಮಹಾದ್ವೀಪವು ನಾನಾ ದೇಶಗಳಿಂದಲಂಕೃತವಾಗಿಯೂ ನಾನಾರತ್ನರಾಶಿಗಳಿಂದ ಭೂಷಿತವಾಗಿಯೂ ಸರ್ವದಾ ಸಂತುಷ್ಟವಾಗಿಯೂ ಮಂಗಳದಾಯಕವಾಗಿಯೂ ಉತ್ಕೃಷ್ಟವಾಗಿಯೂ ಧನಧಾನ್ಯ ಗಳಿಂದ ಪೂರ್ಣವಾಗಿಯೂ ನರನಾರಿಯರಿಂದ ಮಂಡಿತವಾಗಿಯೂ ಭಾಗ್ಯವಂತರಿಗೆ ಆಶ್ರಯವಾಗಿಯೂ ಪ್ರಕಾಶಮಾನವಾಗಿಯೂ ಇವೆ ಹೀಗೆ ಕೇತುಮಾಲೆಯ ಪರ್ವತ ಸ್ವರೂಪವನ್ನು ನಿಮಗಾಗಿ ವಿಸ್ತಾರವಾಗಿ ನಿರೂಪಿಸಿರುವೆನೆಂದು ಸೂತಮುನಿಯು ಮಹರ್ಷಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಭುವನವಿನ್ಯಾಸಕಥನ" ವೆಂಬ
ನಲವತ್ತನಾಲ್ಕನೆಯ ಅಧ್ಯಾಯವು ಸಂಪೂರ್ಣವಾದುದು.

# ನಲವತ್ತನಾಲ್ಕನೆಯ ಅಧ್ಯಾಯದ ಸಾರಾಂಶವು

ಕೇತುಮೂಲಪರ್ವತಗಳ ಪಶ್ಚಿಮಭಾಗದಲ್ಲಿ ವಿಶಾಲ, ಕಂಬಲ, ಕೃಷ್ಣ, ಜಯಂತ, ಹರಿಪರ್ವತ, ಅಶೋಕ, ವರ್ಧಮಾನಗಳೆಂಬ ಏಳು ಕುಲಪರ್ವತಗಳಿವೆ. ಇವುಗಳಿಂದ ಅಸಂಖ್ಯಾತವಾದ ಗಿರಿಗಳು ಹುಟ್ಟಿವೆ. ಇವುಗಳ ಮಧ್ಯದಲ್ಲಿ ಅನೇಕ ಜನಪದಗಳೂ ಆಯಾ ದೇಶದ ಹೆಸರಿನ ಪ್ರಜೆಗಳೂ ಪ್ರಖ್ಯಾತರಾಗಿರುವರು. ಆ ದೇಶಗಳಲ್ಲಿ ಸುವಪ್ರ, ಕಂಬಲೀ, ತಾಮಸೀ, ಶ್ಯಾಮಾ, ಸುಮೇಧಾ, ಬಕುಲಾ, ವಿಕೀರ್ಣ, ಶುಕಾ, ಭದ್ರ, ಪಲಾಶಾ, ಕಾಲಿಂದೀ ಇವೇ ಮೊದಲಾದ ಅನೇಕ ನದಿಗಳಿವೆ. ಕರಂಭವ ಕುಬೇರ ಇವೇ ಮೊದಲಾದ ಜನರು ಮೇಲೆ ಹೇಳಿದ ಅನೇಕ ನದಿಗಳಲ್ಲಿ ಸ್ನಾನ ಪಾನಾದಿಗಳನ್ನು ಮಾಡಿ ಚಿರಂಜೀವಿಗಳಾಗಿಯೂ ಸುಂದರರಾಗಿಯೂ ಶಕ್ತಿವಂತರಾಗಿಯೂ ಧಾರ್ಮಿಕರಾಗಿಯೂ ಇರುವರು. ಆ ದೇಶಗಳೂ ಕೂಡ ದೇವರ್ಷಿಗಳಿಂದ ಸೇವಿಸಲ್ಪಟ್ಟದ್ದಾಗಿಯೂ ಪಾಪನಾಶಕವಾಗಿಯೂ ಧನಧಾನ್ಯಸಮೃದ್ಧವಾಗಿಯೂ ನಿತ್ಯತುಷ್ಟರಾದ ಜನಭರಿತವಾಗಿಯೂ ದೇವಭೋಗ್ಯವಾಗಿಯೂ ಇವೆಯೆಂಬ ವಿಷಯವು ಈ ಅಧ್ಯಾಯದಲ್ಲಿ ನಿರೂಪಿತವಾಗಿದೆ.

—|| ಹರಿಃ ಓಮ್ ||—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ॥ ಪಂಚಚತ್ವಾರಿಂಶೋಽಧ್ಯಾಯಃ ॥

॥ ಶಾಂಶಪಾಯನ ಉವಾಚ ॥

**ಪೂರ್ವಾಪರೌ ಸಮಾಖ್ಯಾತೌ ದ್ವೌ ದೇಶೌ ನಸ್ತ್ವಯಾ ಪ್ರಭೋ ।**
**ಉತ್ತರಾಣಾಂಚ ವರ್ಷಾಣಾಂ ದಕ್ಷಿಣಾನಾಂಚ ಸರ್ವಶಃ ।**
**ಆಚಕ್ಷ್ವ ನೋ ಯಥಾತಥ್ಯಂ ಯೇ ಚ ಪರ್ವತವಾಸಿನಃ ॥ ೧ ॥**

॥ ಸೂತ ಉವಾಚ ॥

**ದಕ್ಷಿಣೇನ ತು ಶ್ವೇತಸ್ಯ ನೀಲಸ್ಯೈವೋತ್ತರೇಣ ತು ।**
**ವರ್ಷಂ ರಮಣಕಂ ನಾಮ ಜಾಯಂತೇ ತತ್ರಮಾನವಾಃ ॥ ೨ ॥**

---

## ನಲವತ್ತೈದನೆಯ ಅಧ್ಯಾಯವು

೧. ಶಾಂಶಪಾಯಮುನಿಯು ಹೇಳಿದನು :—ಎಲೈ ಸ್ವಾಮಿಯೇ, ಅತಿ ವಿಶಾಲವಾದ ಪೂರ್ವಪಶ್ಚಿಮ ಭಾಗದಲ್ಲಿರುವ ದೇಶಗಳ ವಿಷಯವನ್ನು ತಿಳಿಸಿರುತ್ತೀರಿ. ಈಗ ಉತ್ತರ ದಕ್ಷಿಣಭಾಗದಲ್ಲಿರುವ ದೇಶಗಳ ವಿಷಯಗಳನ್ನೂ ಪರ್ವತವನ್ನೂ ಅವುಗಳಲ್ಲಿ ವಾಸಿಸುವ ಜನರನ್ನೂ ಯಥಾಸ್ಥಿತವಾಗಿ ವರ್ಣಿಸಬೇಕೆಂದು ಕೇಳಿದರು.

೨. ಸೂತಮುನಿಯು ಹೇಳಿದನು :—ಶ್ವೇತನಾಮಕಪರ್ವತಕ್ಕೆ ದಕ್ಷಿಣಕ್ಕೂ ನೀಲಗಿರಿಯ ಉತ್ತರಕ್ಕೂ ಮಧ್ಯದಲ್ಲಿ ರಮಣಕವೆಂಬ ವರ್ಷವಿರುತ್ತದೆ. ಆ ವರ್ಷದಲ್ಲಿ ಅನೇಕ ಪ್ರಜೆಗಳು ಜನಿಸಿ ಪ್ರಖ್ಯಾತರಾಗಿರುವರು.

ಸರ್ವರ್ತುಕಾಮದಾಃ ಸತ್ವಾ ಜರಾದುರ್ಗಂಧವರ್ಜಿತಾಃ ।
ಶುಕ್ಲಾಭಿಜನಸಂಪನ್ನಾಃ ಸರ್ವೇ ಚ ಪ್ರಿಯದರ್ಶನಾಃ ॥ ೩ ॥

ತತ್ರಾಪಿ ಸುಮಹಾನ್ ದಿವ್ಯೋ ನ್ಯಗ್ರೋಧೋ ರೋಹಿಣೋ ಮಹಾನ್ ।
ತಸ್ಯ ಪೀತ್ವಾ ಫಲರಸಂ ಪಿಬಂತೋ ವರ್ತಯಂತ್ಯುತ ॥ ೪ ॥

ದಶವರ್ಷಸಹಸ್ರಾಣಿ ಶತಾನಿ ದಶಪಂಚ ಚ ।
ಜೀವಂತೀ ತೇ ಮಹಾಭಾಗಾಃ ಸದಾ ಹೃಷ್ಟಾ ನರೋತ್ತಮಾಃ ॥ ೫ ॥

ಉತ್ತರೇಣ ತು ಶ್ವೇತಸ್ಯ ಶೃಂಗಸಾಹ್ವಸ್ಯ ದಕ್ಷಿಣೇ ।
ವರ್ಷಂ ಹಿರಣ್ಯಕಂ ನಾಮ ಯತ್ರ ಹೈರಣ್ವತೀ ನದೀ ॥ ೬ ॥

ಮಹಾಬಲಾಃ ಸುತೇಜಸ್ಕಾಃ ಜಾಯಂತೇ ತತ್ರ ಮಾನವಾಃ ।
ಸರ್ವರ್ತುಕಾಮದಾಃ ಸತ್ವಾ ಧನಿನಃ ಪ್ರಿಯದರ್ಶನಾಃ ॥ ೭ ॥

---

೩. ಅಲ್ಲಿರುವ ಪ್ರಜೆಗಳು ಸರ್ವರ್ತುಫಲಸಮೃದ್ಧರೂ ಮುಪ್ಪಿನಲ್ಲುಂಟಾಗುವ ದುರ್ಗಂಧರಹಿತರೂ ಶುದ್ಧವಂಶಸಂಭೂತರೂ ಪ್ರಿಯದರ್ಶಿಗಳೂ ಆಗಿರುವರು.

೪. ಆ ದೇಶದಲ್ಲಿಯೂ ಕೂಡ ಅತ್ಯಂತ ದೊಡ್ಡದೂ ದಿವ್ಯವೂ ಮಹತ್ತೂ ಆದ ಆಲದಮರವು ಬೆಳದಿದೆ. ಅಲ್ಲಿನ ಪ್ರಜೆಗಳು ಆ ವೃಕ್ಷದ ಫಲರಸವನ್ನು ಪಾನ ಮಾಡಿ ಸುಖವಾಗಿ ವಾಸಿಸುವರು.

೫. ಹೀಗೆ ಆ ಫಲರಸವನ್ನು ಪಾನಮಾಡಿದ ಮಹಾಭಾಗ್ಯಶಾಲಿಗಳಾದ ಮನುಷ್ಯೋತ್ತಮರು ಹತ್ತುಸಹಸ್ರದ ನೂರಹದಿನೈದು ವರ್ಷಗಳವರೆಗೂ ಸುಖವಾಗಿ ಸಂತೋಷದಿಂದ ಜೀವಿಸುವರು

೬-೭. ಶ್ವೇತಪರ್ವತದ ಉತ್ತರಕ್ಕೂ ಶೃಂಗವಂತಗಿರಿಯ ದಕ್ಷಿಣಕ್ಕೂ ಮಧ್ಯ ದಲ್ಲಿ ಹಿರಣ್ಯಕವೆಂಬ ವರ್ಷವು ಪ್ರಸಿದ್ಧವಾಗಿದೆ. ಆ ವರ್ಷದಲ್ಲಿ ಸುವರ್ಣಮಯ ವಾದ ನದಿಯು ಹರಿಯುತ್ತಿದೆ. ಆ ವರ್ಷದ ಪ್ರಜೆಗಳು ಆ ಜಲವನ್ನು ಪಾನಮಾಡಿ ಮಹಾಬಲಿಷ್ಠರೂ ಮಹಾತೇಜಸ್ವಿಗಳೂ ಸಮಸ್ತ ಋತುಗಳಲ್ಲಿ ಉಂಟಾಗುವ ಫಲ ಭೋಕ್ತೃಗಳೂ ಧನಿಕರೂ ಪ್ರಿಯದರ್ಶನರೂ ಆಗಿರುವರು.

ಏಕಾದಶ ಸಹಸ್ರಾಣಿ ವರ್ಷಾಣಾಂ ತೇಮಿತೌಜಸಃ ।
ಆಯುಷ್ಪ್ರಮಾಣಂ ಜೀವಂತಿ ಶತಾನಿ ದಶಪಂಚ ಚ । ॥ ೮ ॥

ತಸ್ಮಿನ್ ವರ್ಷೇ ಮಹಾವೃಕ್ಷೋ ಲಕುಚಃ ಷಡ್ರಸಾಶ್ರಯಃ ।
ತಸ್ಯಪೀತ್ವಾ ಫಲರಸಂ ತತ್ರ ಜೀವಂತಿ ಮಾನವಾಃ ॥ ೯ ॥

ತ್ರೀಣಿ ಶೃಂಗವತಃ ಶೃಂಗಾಣ್ಯುಚ್ಛ್ರಿತಾನಿ ಮಹಾಂತಿ ಚ ।
ಏಕಂ ಮಣಿಮಯಂ ತೇಷಾಮೇಕಂಚೈವ ಹಿರಣ್ಮಯಂ ।
ಸರ್ವರತ್ನಮಯಂ ಚೈಕಂ ಭವನೈರುಪಶೋಭಿತಂ ॥ ೧೦ ॥

ಉತ್ತರಸ್ಯ ಸಮುದ್ರಸ್ಯ ಸಮುದ್ರಾಂತೇ ಚ ದಕ್ಷಿಣೇ ।
ಕುರುವಸ್ತತ್ರ ತದ್ವರ್ಷಂ ಪುಣ್ಯಂ ಸಿದ್ಧ ನಿಷೇವಿತಂ ॥ ೧೧ ॥

---

೮. ಆ ಹಿರಣ್ಯವರ್ಷದ ಪ್ರಜೆಗಳು ಮಹಾತೇಜಸ್ವಿಗಳಾಗಿ ಹನ್ನೊಂದು ಸಾವಿರದ ನೂರಹದಿನೈದುವರ್ಷಗಳು ಸುಖವಾಗಿ ಜೀವಿಸುವರು.

೯. ಆ ವರ್ಷದಲ್ಲಿ ಷಡ್ರಸೋಪೇತವೂ ಮಹತ್ತೂ ಆದ ನಿಂಬವೃಕ್ಷವು ಪ್ರಸಿದ್ಧವಾಗಿದೆ. ಅಲ್ಲಿನ ಪ್ರಜೆಗಳು ಆ ಫಲಗಳ ರಸವನ್ನು ಪಾನಮಾಡಿ ಸುಖವಾಗಿ ಜೀವಿಸಿಕೊಂಡಿರುವರು.

೧೦. ಆ ವರ್ಷದ ಪರ್ವತದಲ್ಲಿ ಮೂರು ಶಿಖರಗಳಿವೆ. ಅವುಗಳಲ್ಲೊಂದು ಸುವರ್ಣಮಯವೂ ಮತ್ತೊಂದು ರತ್ನಮಯವೂ ಇನ್ನೊಂದು ಸಕಲ ರತ್ನೋಪೇತವೂ ಆಗಿವೆ. ಆ ಶೃಂಗಗಳು ಮಹತ್ತಾಗಿಯೂ ಉನ್ನತವಾಗಿಯೂ ಇವೆ. ಮತ್ತು ಉನ್ನತವೂ ರತ್ನಮಯವೂ ಆದ ಅನೇಕ ಭವನಗಳೂ ಕೂಡ ಪ್ರಜ್ವಲಿಸುತ್ತವೆ.

೧೧. ಉತ್ತರಸಮುದ್ರದ ದಕ್ಷಿಣಭಾಗದ ಸಮುದ್ರದ ಕೊನೆಯಲ್ಲಿ ಕುರುದೇಶವಿದೆ. ಅದು ಪುಣ್ಯಕರವೂ ಸಿದ್ಧರಿಂದ ನಿಷೇವಿತವೂ ಆಗಿವೆ. ಅದರಲ್ಲಿ ಕುರುನಾಮಕ ಪ್ರಜೆಗಳು ವಾಸಿಸುವರು.

ತತ್ರ ವೃಕ್ಷಾ ಮಧುಫಲಾ ನಿತ್ಯಂ ಪುಷ್ಪಫಲೋಪಗಾಃ ।
ವಸ್ತ್ರಾಣಿ ಚ ಪ್ರಸೂಯಂತೇ ಫಲೇಷ್ವಾಭರಣಾನಿ ಚ ॥ ೧೨ ॥

ಸರ್ವಕಾಮಫಲಾಸ್ತತ್ರ ಕ್ವಚಿದ್ವೃಕ್ಷಾ ಮನೋರಮಾಃ ।
ಗಂಧವರ್ಣರಸೋಪೇತಂ ಪ್ರಕ್ಷರಂತಿ ಮಧೂತ್ತಮಂ ॥ ೧೩ ॥

ಅಪರೇ ಕ್ಷೀರಿಣೋ ನಾಮ ವೃಕ್ಷಾಸ್ತತ್ರ ಮನೋರಮಾಃ ।
ಯೇ ಕ್ಷರಂತಿ ಸದಾ ಕ್ಷೀರಂ ಷಡ್ರಸಂ ಹ್ಯಮೃತೋಪಮಂ । ॥ ೧೪ ॥

ಸರ್ವಾ ಮಣಿಮಯೀ ಭೂಮಿಃ ಸೂಕ್ಷ್ಮಕಾಂಚನವಾಲುಕಾ ।
ಸರ್ವತಃ ಸುಖಸಂಸ್ಪರ್ಶಾ ನಿಷ್ಪಂಕಾ ನಿರುಜಾ ಶುಭಾ ॥ ೧೫ ॥

---

೧೨. ಆ ದೇಶದಲ್ಲಿರುವ ಕೆಲವು ಫಲವೃಕ್ಷಗಳು ಸುಗಂಧಿಯೂ ಮಧುರವೂ ಆದ ಪುಷ್ಪಫಲಗಳಿಂದ ಪೂರ್ಣವಾಗಿವೆ ಆ ವೃಕ್ಷಗಳು ಫಲಪುಷ್ಪಗಳನ್ನು ಕೊಡುವುದಲ್ಲದೆ ಅಪೇಕ್ಷಿತವಾದ ವಸ್ತ್ರಗಳನ್ನೂ ಆಭರಣಗಳನ್ನೂ ಕೊಡುತ್ತವೆ.

೧೩. ಮತ್ತು ಮನೋಹರವಾದ ಕೆಲವು ವೃಕ್ಷಗಳು ಸಕಲೇಷ್ಟಾರ್ಥಗಳನ್ನೂ ಕೊಡುತ್ತವೆ. ಅಂತಹ ವೃಕ್ಷಗಳಿಂದ ಸುಗಂಧವೂ, ವರ್ಣರಸವೂ ಇವುಗಳಿಂದ ಯುಕ್ತವಾದ ಜೇನುತುಪ್ಪದ ಪ್ರವಾಹವು ಹರಿಯುತ್ತಿದೆ.

೧೪. ಕೆಲವು ಕ್ಷೀರವೃಕ್ಷಗಳು ಅತಿ ಸುಂದರಗಳಾಗಿರುತ್ತವೆ. ಅವು ಸಿಹಿ, ಹುಳಿ, ಉಪ್ಪು, ಕಾರ, ಕಹಿ, ಕಷಾಯವೆಂಬ ಷಡ್ರಸೋಪೇತವಾದ ಹಾಲನ್ನು ಯಥೇಚ್ಛವಾಗಿ ಕೊಡುತ್ತವೆ.

೧೫. ಆ ಭೂಮಿಯು ರತ್ನಮಯವಾಗಿಯೂ ಸೂಕ್ಷ್ಮವಾದ ಚಿನ್ನದ ಮರಳಿನಿಂದ ಸಹಿತವಾಗಿಯೂ ಎಲ್ಲೆಲ್ಲಿಯೂ ಸುಖಸ್ಪರ್ಶವುಳ್ಳದ್ದಾಗಿಯೂ ರೋಗಾದ್ಯುಪದ್ರವರಹಿತವಾಗಿಯೂ ಶುಭಕರವಾಗಿಯೂ ಇರುತ್ತದೆ.

ದೇವಲೋಕಾಚ್ಚ್ಯುತಾಸ್ತತ್ರ ಜಾಯಂತೇ ಮಾನವಾಃ ಶುಭಾಃ ।
ಶುಕ್ಲಾಭಿಜನಸಂಪನ್ನಾಃ ಸರ್ವೇ ಚ ಸ್ಥಿರ ಯೌವನಾಃ ॥ ೧೬ ॥

ಮಿಥುನಾನಿ ಪ್ರಸೂಯಂತೇ ಸ್ತ್ರಿಯಶ್ಚಾತಿಮನೋಹರಾಃ ।
ತೇ ಚ ತಂ ಕ್ಷೀರಿಣಂ ವೃಕ್ಷಂ ಪಿಬಂತಿ ಹ್ಯಮೃತೋಪಮಂ ॥ ೧೭ ॥

ಮಿಥುನಂ ಜಾಯತೇ ಸದ್ಯಃ ಸಮಂಚ್ಚೈವ ವಿವರ್ಧತೇ ।
ಸಮಂ ಶೀಲಂ ಚ ರೂಪಂ ಚ ಮ್ರಿಯಂತೇ ಚ್ಚೈವ ತೇ ಸಮಂ ॥ ೧೮ ॥

ಅನ್ಯೋನ್ಯಮನುರಕ್ತಾಶ್ಚ ಚಕ್ರವಾಕಸಧರ್ಮಿಣಃ ।
ಅನಾಮಯಾ ಹ್ಯಶೋಕಾಶ್ಚ ನಿತ್ಯಂ ಸುಖನಿಷೇವಿಣಃ ॥ ೧೯ ॥

ತ್ರಯೋದಶ ಸಹಸ್ರಾಣಿ ಶತಾನಿ ದಶಪಂಚ ಚ ।
ಜೀವಂತಿ ತೇ ಮಹಾವೀರ್ಯಾ ನ ಚಾನ್ಯಸ್ತ್ರೀನಿಷೇವಿಣಃ ॥ ೨೦ ॥

---

೧೬. ಪುಣ್ಯವು ಕ್ಷಯವಾಗಿ ದೇವಲೋಕದಿಂದ ಚ್ಯುತರಾದ ಪ್ರಜೆಗಳು ಹಿರಣ್ಯಕವರ್ಷದಲ್ಲಿ ಜನಿಸಿ ದಿವ್ಯಸೌಂದರ್ಯ, ಶುಭ್ರತೆ, ಸತ್ಕುಲಜನನ, ಸ್ಥಿರ ಯೌವನ ಇವೇ ಮೊದಲಾದ ಸಕಲ ಕಲ್ಯಾಣಗುಣೋಪೇತರಾಗಿಯೂ ನಿತ್ಯಸುಖಿ ಯಾಗಿಯೂ ಇರುವರು

೧೭. ಆ ದೇಶದ ಸ್ತ್ರೀಯರೂ ಸಹ ಅತಿ ಸುಂದರಿಯರಾಗಿಯೂ ಪತಿವ್ರತೆ ಯರಾಗಿಯೂ ಇದ್ದು ದಿವ್ಯಸಂತಾನವನ್ನು ಪಡೆಯುವರು. ಅವರೆಲ್ಲರೂ ಅಮೃತಕ್ಕೆ ಸಮಾನವಾದ ಕ್ಷೀರವೃಕ್ಷದ ಹಾಲನ್ನು ಕುಡಿದು ವಜ್ರಕಾಯರಾಗಿರುವರು.

೧೮. ಆ ದಂಪತಿಗಳು ಅವಳಿಮಕ್ಕಳಂತೆ ಜನಿಸಿ ಸಮವಾಗಿ ವೃದ್ಧಿಹೊಂದುವರು. ಆ ದಂಪತಿಗಳ ಸ್ವಭಾವ, ರೂಪ, ಸೌಂದರ್ಯ, ಮರಣ ಇವು ಸಮವಾಗಿಯೇ ಇರುವುವು.

೧೯-೨೦. ಆ ದಂಪತಿಗಳು ಪರಸ್ಪರಾನುರಕ್ತರಾಗಿಯೂ ಚಕ್ರವಾಕಗಳಂತೆ ಅವಿಯುಕ್ತರಾಗಿಯೂ, ರೋಗಶೋಕರಹಿತರಾಗಿಯೂ, ನಿತ್ಯಸುಖಿಯರಾಗಿಯೂ, ಹದಿಮೂರುಸಾವಿರದ ನೂರಹದಿನೈದುವರ್ಷಗಳು ಜೀವಿಸುವರಾಗಿಯೂ ಅತಿ ಶಕ್ತ ರಾಗಿಯೂ ಪರಸ್ತ್ರೀ ಪರಪುರುಷರಲ್ಲಿ ಅನಾಸಕ್ತರಾಗಿಯೂ ಇರುವರು

ಕುರೂಣಾಮಪಿ ಚೈತೇಷಾಂ ಶೃಣುಧ್ವಂ ವಿಸ್ತರೇಣತು ।
ಚಾರುಧೇಃ ಶೈಲರಾಜಸ್ಯಾಪ್ಯುತ್ತರೇಣೋತ್ತರಸ್ಯ ಹಿ ।
ದಿಕ್ಷು ಸರ್ವಾಸು ಯದ್ಯತ್ರ ಕೀರ್ತ್ಯಮಾನಂ ನಿಬೋಧತ ॥ ೨೧ ॥

ಅನೇಕಕಂದರದರೀಗುಹಾನಿರ್ಝರಮಂಡಿತೌ ।
ನೈಕಕುಂಜವನೋಪೇತೌ ಚಿತ್ರಧಾತುವಿಭೂಷಿತೌ ॥ ೨೨ ॥

ಅನೇಕಧಾತುಕಲಿಲೌ ಸರ್ವಧಾತುವಿಭೂಷಿತೌ ।
ಪುಷ್ಪಮೂಲಫಲೋಪೇತೌ ಸಿದ್ಧಚಾರಣಸೇವಿತೌ ॥ ೨೩ ॥

ದ್ವಾವಪ್ಯೇತೌ ಸುಮಹತಾವುಚ್ಛ್ರಿತೌ ಕುಲಪರ್ವತೌ ।
ತಾಭ್ಯಾಂ ಕೋಟಿಶತೈರ್ನೈಕೈಸ್ತದ್ವೀಪಮುಪಸೇವಿತಂ ॥ ೨೪ ॥

ಚಂದ್ರಕಾಂತಶ್ಚ ಶೈಲಶ್ಚ ಸೂರ್ಯಕಾಂತಶ್ಚ ಸಾನುಮಾನ್ ।
ಯಯೋರ್ಮಧ್ಯೇ ನ ಸಾ ಯಾತಾ ಭದ್ರಸೋಮಾ ಮಹಾನದೀ ॥ ೨೫ ॥

---

೨೧. ಹೀಗೆ ಹಿರಣ್ಯಕವೇಶವನ್ನು ವರ್ಣಿಸಿದ್ದಾಗಿದೆ. ಈಗ ಕುರುದೇಶವನ್ನು ವಿಸ್ತಾರವಾಗಿ ನಿರೂಪಿಸುವೆನು ಕೇಳಿರಿ:—ಚಾರುಧಿಯೆಂಬ ಪರ್ವತೋತ್ತಮದ ಉತ್ತರೋತ್ತರ ದಿಕ್ಕುಗಳೆಲ್ಲವನ್ನೂ ವಿಸ್ತಾರವಾಗಿ ನಿರೂಪಿಸುವೆನು. ಅವುಗಳಲ್ಲಿ ಯಾವಯಾವ ಶ್ರೇಷ್ಠವಾದ ವಿಷಯಗಳಿವೆಯೋ ಅವೆಲ್ಲವನ್ನೂ ತಿಳಿಸುವೆನು.

೨೨-೨೪. ಆ ಎರಡು ದ್ವೀಪಗಳೂ ಅನೇಕವಾದ ಗವಿ, ಗುಹೆ, ಪೊದೆ, ಸಣ್ಣ ನದಿ ಇವುಗಳಿಂದ ಮಂಡಿತವಾಗಿಯೂ ಅನೇಕ ಲತಾಗೃಹ, ಉಪವನ ಇವುಗಳಿಂದ ಯುಕ್ತವೂ ವಿಚಿತ್ರ ಧಾತುಗಳಿಂದಲಂಕೃತವೂ ಅನೇಕ ಧಾತುಮಿಶ್ರವೂ ಸರ್ವ ಧಾತುಗಳಿಂದ ಮಂಡಿತವೂ ಪಲ್ಲವ ಪುಷ್ಪಫಲಗಳಿಂದ ಭರಿತವೂ ಸಿದ್ಧಚಾರಣರಿಂದ ಸೇವಿತವೂ ಅತ್ಯುನ್ನತವಾದ ಕುಲಪರ್ವತಗಳಿಂದ ಸಹಿತವೂ ಆಗಿವೆ. ಮತ್ತು ಸಾವಿರಾರು ಸಣ್ಣಪುಟ್ಟ ಪರ್ವತಗಳೂ ಸಹ ಆ ದ್ವೀಪಗಳಲ್ಲಿ ಸಮೃದ್ಧವಾಗಿವೆ

೨೫. ಆ ದ್ವೀಪಗಳಲ್ಲಿ ಚಂದ್ರಕಾಂತ, ಸೂರ್ಯಕಾಂತಶಿಲೆಯ ಪರ್ವತಗಳು ಜ್ವಲಿಸುತ್ತಿರುವುವು ಆ ಎರಡು ಪರ್ವತದ ಮಧ್ಯದಲ್ಲಿ ಭದ್ರಸೋಮೆ ಎಂಬ ಮಹಾ ನದಿಯು ಪ್ರವಹಿಸುತ್ತದೆ

ಸಹಸ್ರಶಶ್ಚ ನದ್ಯೋಽನ್ಯಾಃ ಪ್ರಸನ್ನಸುರಸೋದಕಾಃ ।
ಪರ್ಯಾಪ್ತೋದಾಃ ಕುರೂಣಾಂ ಹಿ ಸ್ನಾನಪಾನಾವಗಾಹನೈಃ ॥ ೨೬ ॥

ತಥಾಽನ್ಯಾಃ ಕ್ಷೀರವಾಹಿನ್ಯೋ ಮಹಾನದ್ಯಃ ಸಹಸ್ರಶಃ ।
ಮಧುಮೈರೇಯವಾಹಿನ್ಯೋ ಘೃತವಾಹಿನ್ಯ ಏವ ಚ ॥ ೨೭ ॥

ದಧ್ನಃ ಶತಹ್ರದಾಶ್ಚಾನ್ಯಾಸ್ತತಃ ಸ್ವಾದ್ವನ್ನಪರ್ವತಾಃ ।
ಅಮೃತಸ್ವಾದುಕಲ್ಪಾನಿ ಫಲಾನಿ ವಿವಿಧಾನಿ ಚ ॥ ೨೮ ॥

ಗಂಧವರ್ಣರಸಾಢ್ಯಾನಿ ಮೂಲಾನಿ ಚ ಫಲಾನಿ ಚ ।
ಪಂಚಯೋಜನಮಾನಾನಿ ಮಹಾಗಂಧಾನಿ ಸರ್ವಶಃ ॥ ೨೯ ॥

ನಾನಾವರ್ಣಪ್ರಕಾರಾಣಿ ಪುಷ್ಪಾಣಿ ಚ ಸಹಸ್ರಶಃ ।
ಉಪಭೋಗಸಹಸ್ರಾಣಿ ಭದ್ರಾಣಿ ಚ ಮಹಾಂತಿ ಚ ॥ ೩೦ ॥

---

೨೬. ಆ ಕುರುದೇಶದಲ್ಲಿ ಸ್ವಚ್ಛವೂ ಅತಿ ರುಚಿಯೂ ಆದ ಜಲದಿಂದ ಪೂರ್ಣವಾದ ಸಾವಿರಾರು ನದಿಗಳು ಜಲಭರಿತವಾಗಿ ಸರ್ವಕಾಲದಲ್ಲಿಯೂ ಹರಿಯುತ್ತಿವೆ. ಆ ಪ್ರಜೆಗಳು ಆ ನದಿಗಳಲ್ಲಿ ಸ್ನಾನಪಾನಾದಿಗಳನ್ನು ಮಾಡುವುದರಿಂದ ನಿತ್ಯತೃಪ್ತರಾಗಿರುವರು.

೨೭–೨೮. ಇದರಂತೆಯೇ ಸಾವಿರಾರು ಮಹಾನದಿಗಳಲ್ಲಿ ಕ್ಷೀರಪ್ರವಾಹವು ಸದಾ ಹರಿಯುತ್ತಿವೆ. ಮತ್ತು ಕೆಲವು ನದಿಗಳಲ್ಲಿ ಜೇನುತುಪ್ಪ, ಮದ್ಯ, ಘೃತ, ಇವುಗಳ ಪ್ರವಾಹವು ಹರಿಯುತ್ತಿವೆ. ನೂರಾರು ಮೊಸರಿನ ಮಡುವುಗಳೂ ಅಮೃತ ಸಮಾನರಸಪೂರ್ಣವಾದ ಫಲಗಳಿಂದ ಭರಿತವಾದ ಉಪವನಗಳೂ ವಿಶೇಷವಾಗಿ ಹೊಳೆಯುತ್ತಿವೆ.

೨೯. ಫಲಪುಷ್ಪಗಳು ಗಂಧರಸ ವಿವಿಧವರ್ಣಗಳಿಂದ ಕೂಡಿರುತ್ತವೆ. ಆ ಸುವಾಸನೆಯು ಐದುಯೋಜನಗಳವರೆಗೂ ಹರಡಿರುವುದು. ಆ ವಾಸನೆಯಾದರೋ ಅತಿ ಮನೋಹರವಾಗಿಯೂ ಇಂಪಾಗಿಯೂ ಇರುವುದು.

೩೦. ಅನೇಕವಿಧ ಪುಷ್ಪಗಳು ವಿವಿಧವರ್ಣಗಳಿಂದ ಅತಿಸುಂದರವಾಗಿಯೂ, ಸಾವಿರಾರು ವಿಧವಾಗಿಯೂ, ಮಹತ್ತಾಗಿಯೂ, ಉಪಭೋಗಯೋಗ್ಯವಾಗಿಯೂ ಮಂಗಳಕರವಾಗಿಯೂ ಇವೆ.

ಗಂಧವರ್ಣರಸಾಢ್ಯಾನಿ ಸ್ಪರ್ಶೋಪೇತಾನಿ ಸರ್ವಶಃ ।
ತಮಾಲಾಗುರುಗಂಧಾನಾಂ ಚಂದನಾನಾಂ ವನಾನಿ ಚ ॥ ೩೧ ॥

ಭ್ರಮರೈರುಪಗೀತಾನಿ ಪ್ರಫುಲ್ಲಾನಿ ಸದೈವ ಚ ।
ವೃಕ್ಷಗುಲ್ಮಲತಾಢ್ಯಾನಿ ವನಾನಿ ಸುಸುಖಾನಿ ಚ ॥ ೩೨ ॥

ಷಟ್‌ಪದೈರುಪಗೀತಾನಿ ದ್ವಿಜೈಶ್ಚಾನ್ಯೈರ್ದ್ವಿಜೋತ್ತಮಾಃ ।
ಪದ್ಮೋತ್ಪಲವನಾಢ್ಯಾನಿ ಸರಾಂಸಿ ಚ ಸಹಸ್ರಶಃ ॥ ೩೩ ॥

ಭಕ್ಷ್ಯಮಾಲ್ಯಸಮೃದ್ಧಾಶ್ಚ ಬಹುಮಾಲ್ಯಾನುಲೇಪನಾಃ ।
ಮನೋಹರಮುಖೈಶ್ಚಿತ್ರೈಃ ಪಕ್ಷಿಸಂಘೈರ್ನಿಕೂಜಿತಾಃ ॥ ೩೪ ॥

ಶಯನಾಸನೋಪಭೋಗಾಶ್ಚ ಅನೇಕಗುಣವಿಸ್ತರಾಃ ।
ವಿಹಾರಭೂಮಯೋ ರಮ್ಯಾಃ ಸರ್ವರ್ತುಷು ಸುಖಪ್ರದಾಃ ॥ ೩೫ ॥

---

೩೧. ಸರ್ವಪುಷ್ಪಗಳೂ ನಿರ್ಗಂಧಕುಸುಮವಾಗದೇ ಸುಗಂಧಸುವರ್ಣೋಪೇತವಾಗಿಯೂ, ಮೃದುವಾಗಿಯೂ ಇದ್ದುವು. ಹೊಂಗೆ, ಅಗರು, ಶ್ರೀಗಂಧ ಇವುಗಳ ಉಪವನಗಳು ವಿಶೇಷವಾಗಿದ್ದುವು.

೩೨. ಆ ವನಗಳು ವಿಕಸಿತವಾದ ಪುಷ್ಪಗಳಿಂದಲೂ, ಭ್ರಮರಗಳ ಝೇಂಕಾರದಿಂದಲೂ, ವೃಕ್ಷಗಳು, ಲತೆಗಳು, ಕುಂಜಗಳು ಇವುಗಳಿಂದಲೂ ಪೂರ್ಣವಾಗಿ ಸುಖದಾಯಕಗಳಾಗಿದ್ದುವು.

೩೩. ಆ ಉಪವನಗಳು ಭ್ರಮರಗಳ ಝೇಂಕಾರದಿಂದಲೂ, ಪಕ್ಷಿಗಳ ಗಾನದಿಂದಲೂ, ಪದ್ಮಷಂಡಗಳಿಂದಲೂ, ನೈದಲೆಗಳ ಸಂಘದಿಂದಲೂ, ಸಾವಿರಾರು ಸರಸ್ಸುಗಳಿಂದಲೂ ಅತಿರಮ್ಯವಾಗಿವೆ.

೩೪-೩೫. ಆ ಕುರುದೇಶವು ಭಕ್ಷ್ಯಭೋಜ್ಯಗಳಿಂದಲೂ, ಗಂಧಪುಷ್ಪಮಾಲ್ಯಗಳಿಂದಲೂ, ಸುಂದರವಾದ ಪಕ್ಷಿಗಳ ಕೂಜಿನದಿಂದಲೂ, ಶಯನ ಆಸನ ಭೋಗಗಳಿಂದಲೂ ಅನೇಕ ರಮ್ಯವಸ್ತುಗಳಿಂದಲೂ, ವಿಹಾರಭೂಮಿಗಳಿಂದಲೂ, ಸರ್ವ ಋತುಫಲ ಪುಷ್ಪಪೂರ್ಣತೆಯಿಂದಲೂ ಪೂರ್ಣವಾಗಿಯೂ ಇರುತ್ತವೆ.

ಆಕ್ರೀಡಾಃ ಸರ್ವತಃ ಸ್ಫೀತಾಃ ಮಣಿಹೋಮಪರಿಷ್ಕೃತಾಃ ।
ಶಿಲಾಗೃಹಾ ವೃಕ್ಷಗೃಹಾ ವರೇಣ್ಯಾಃ ಕದಲೀ ಗೃಹಾಃ ॥ ೩೬ ॥

ಲತಾಗೃಹಸಹಸ್ರಾಣಿ ಸುಸುಖಾನಿ ಸಮಂತತಃ ।
ಶುದ್ಧಶಂಖದಲಾಭಾನಿ ಭೂಮಿವೇಶ್ಮಶತಾನಿ ಚ ॥ ೩೭ ॥

ತಪನೀಯಗವಾಕ್ಷಾಣಿ ಮಣಿಜಾಲಾಂತರಾಣಿ ಚ ।
ಸುವರ್ಣಮಣಿಚಿತ್ರಾಣಿ ಸರ್ವತ್ರ ವಿಪುಲಾನಿ ಚ ॥ ೩೮ ॥

ಮಹಾವೃಕ್ಷಸಹಸ್ರಾಣಿ ವರೇಣ್ಯಾನಿ ಚ ಸರ್ವಶಃ ।
ನಾನಾಕಾರಾಣಿ ವಾಸಾಂಸಿ ಸೂಕ್ಷ್ಮಾಣಿ ಸುಸುಖಾನಿ ಚ ॥ ೩೯ ॥

ಮೃದಂಗವೇಣುಪಣವವೀಣಾದ್ಯಾ ಬಹುವಿಸ್ತರಾಃ ।
ಫಲಂತಿ ಕಲ್ಪವೃಕ್ಷಾಣಾಂ ಸಹಸ್ರಾಣಿ ಶತಾನಿ ಚ ॥ ೪೦ ॥

---

೩೬. ಸುವರ್ಣರತ್ನಖಚಿತವಾದ ಕ್ರೀಡಾಪರ್ವತಗಳಿಂದಲೂ, ವಿಶಾಲವಾದ ಶಿಲಾಗೃಹಗಳಿಂದಲೂ, ಲತಾಗೃಹ, ಕದಲೀಗೃಹ, ಇವುಗಳಿಂದಲೂ ಆ ದೇಶವು ಅತಿ ಮನೋಹರವಾಗಿದ್ದಿತು.

೩೭-೩೮. ಸುತ್ತಲೂ ಸುಖದಾಯಕವಾದ ಸಾವಿರಾರು ಲತಾಗೃಹಗಳೂ, ಶುದ್ಧಶಂಖದಂತೆ ಕಾಂತಿಯುಳ್ಳ ನೂರಾರು ಭೂಪ್ರದೇಶಗಳೂ, ಚಿನ್ನದ ಕಿಟಿಕಿಗಳೂ, ಮಣಿಜಾಲಗಳಿಂದಲಂಕೃತವಾದ ದ್ವಾರಪ್ರದೇಶಗಳೂ, ಸುವರ್ಣಚಿತ್ರಗಳಿಂದ ಭೂಷಿತವಾದ ಅಂತರ್ಗೃಹಗಳೂ, ಕೂಡ ವಿಶೇಷಾಕಾರವಾಗಿ ಹೊಳೆಯುತ್ತಿದ್ದುವು.

೩೯. ಅನೇಕ ವನಗಳು ಸಾವಿರಾರು ಮಹಾವೃಕ್ಷಗಳಿಂದ ಭೂಷಿಸಲ್ಪಟ್ಟಿರುವುವು. ಮತ್ತು ವಿವಿಧರೂಪವಾದ ಸರಸ್ಸುಗಳಿಂದ ಸುಖಜನಕವಾಗಿಯೂ, ಸುಂದರಗಳಾಗಿಯೂ, ಇರುವುವು.

೪೦. ಕ್ರೀಡಾಮಂದಿರಗಳು ಮೃದಂಗ, ವೇಣು, ಕಂಜರಿ, ವೀಣಾ ಇವೇ ಮೊದಲಾದ ವಾದ್ಯಗಳಿಂದ ಪೂರ್ಣವಾಗಿವೆ. ಸಹಸ್ರಾರು ಕಲ್ಪವೃಕ್ಷಗಳು ವಿಶೇಷವಾದ ಮಹಾಫಲಗಳನ್ನು ಕೊಡುತ್ತವೆ

ಸರ್ವತ್ರೈವ ತಥೋದ್ಯಾನಂ ಸರ್ವತ್ರೈವ ಹಿ ತತ್ಪುರಂ ।
ಸರ್ವದ್ವೀಪಪ್ರಮುದಿತಂ ನರನಾರೀಸಮಾಕುಲಂ ।
ಪ್ರವಾತಿ ಚಾನಿಲಸ್ತತ್ರ ನಾನಾಪುಷ್ಪಾಧಿವಾಸಿತಃ ॥ ೪೧ ॥

ನಿತ್ಯಮಂಗಸುಖಾಹ್ಲಾದಸ್ತಸ್ಮಿನ್ ದ್ವೀಪೇ ಶ್ರಮಾಪಹೇ ।
ತತ್ರ ಸ್ವರ್ಗಪರಿಭ್ರಷ್ಟಾ ಜಾಯಂತೇ ಹಿ ನರಾಃ ಸದಾ ।
ಭೌಮಂ ತದಪಿ ಹಿ ಸ್ವರ್ಗಂ ತತ್ರಾಪಿ ಚ ಗುಣೋತ್ತಮಂ ॥ ೪೨ ॥

ಚಂದ್ರಕಾಂತಾ ನರವರಾಃ ಶ್ಯಾಮಾಂಕಾಃ ಪೂರ್ವಕೋಲಜಾಃ ।
ಶ್ಯಾಮಾವದಾತಾಃ ಸುಖಿನಃ ಸೂರ್ಯಕಾಂತಾ ವರಾಃ ಪ್ರಜಾಃ ॥ ೪೩ ॥

---

೪೧. ಆ ದ್ವೀಪದಲ್ಲಿ ಎಲ್ಲಿ ನೋಡಿದರೂ ರಮ್ಯವಾದ ಉದ್ಯಾನವನಗಳೂ, ಸರ್ವತ್ರದಲ್ಲಿಯೂ ಸುಂದರವಾದ ನಗರಗಳೂ ಸ್ತ್ರೀಪುರುಷರಿಂದ ವ್ಯಾಪ್ತವಾಗಿಯೂ, ಸುಖಸಂತೋಷಗಳಿಂದ ಸಹಿತವಾಗಿಯೂ ಇವೆ. ಮತ್ತು ನಾನಾ ಪುಷ್ಪಗಳ ಮೇಲೆ ಬೀಸುವ ತಂಗಾಳಿಯು ಸರ್ವತ್ರ ವ್ಯಾಪ್ತವಾಗಿವೆ.

೪೨. ಶ್ರಮಪರಿಹಾರಕವಾದ ಆ ದ್ವೀಪದಲ್ಲಿ ಯಾವಾಗಲೂ ಶರೀರಕ್ಕೆ ಆಹ್ಲಾದವನ್ನುಂಟುಮಾಡುವ ತಂಗಾಳಿಯು ಬೀಸುವುದು. ಸ್ವರ್ಗಬ್ರಷ್ಟರಾದ ಜನಗಳೆಲ್ಲರೂ ಆ ದ್ವೀಪದಲ್ಲೆ ಹುಟ್ಟುವರು. ಆ ದ್ವೀಪವು ಭೂಮಿಯಲ್ಲಿರುವ ಸ್ವರ್ಗವೆಂದು ಮಹಾತ್ಮರು ಹೇಳುವರು. ಸ್ವರ್ಗದಿಂದ ಚ್ಯುತರಾದ ಜನರಲ್ಲಿಯೂ ಮಹಾಪುಣ್ಯವಂತರೂ ಗುಣೋತ್ತಮರೂ ಆದ ಮಹಾತ್ಮರು ಮಾತ್ರ ಆ ದ್ವೀಪದಲ್ಲಿ ಹುಟ್ಟುವರು.

೪೩. ಆ ದ್ವೀಪದ ಜನರಲ್ಲಿ ಕೆಲವರು ಚಂದ್ರನಂತೆ ಕಾಂತಿವಂತರಾಗಿಯೂ ಕೆಲವರು ಕರೀಮಚ್ಚೆಯುಳ್ಳವರಾಗಿಯೂ, ಇನ್ನು ಕೆಲವರು ಕಪ್ಪಾಗಿಯೂ ಶುಭ್ರರಾಗಿಯೂ, ಮತ್ತೆ ಕೆಲವರು ಸೂರ್ಯನಂತೆ ಹೊಳೆಯತಕ್ಕವರಾಗಿಯೂ ಉತ್ತಮರಾಗಿಯೂ ಇರುವರು.

ತಸ್ಮಿನ್ ದೇಶೇ ನರಾಃ ಶ್ರೇಷ್ಠಾ ದೇವಸತ್ತ್ವಪರಾಕ್ರಮಾಃ ।
ಸದಾ ವಿಹಾರಿಣಃ ಸರ್ವೇ ಕಾಮವೃತ್ತ್ಯಾ ಸುವರ್ಚಸಃ ॥ ೪೪ ॥

ವಲಯಾಂಗದಕೇಯೂರಹಾರಕುಂಡಲಭೂಷಿತಾಃ ।
ಸ್ರಗ್ವಿಣಶ್ಚಿತ್ರಮುಕುಟಶ್ಚಿತ್ರಾಚ್ಛಾದನವಾಸಸಃ ॥ ೪೫ ॥

ಅಜೀರ್ಣಯೌವನಧರಾಃ ಸುಪ್ರಿಯಾಃ ಪ್ರಿಯದರ್ಶನಾಃ ।
ಪ್ರಜಾ ವರ್ಷಸಹಸ್ರಾಣಿ ಜೀವಂತಿ ಸುಬಹೂನ್ಯತ ॥ ೪೬ ॥

ನ ತಾಃ ಪ್ರಸವಧರ್ಮಿಣ್ಯೋ ನ ವಂಶಪ್ರಕ್ಷಯೋ ವಿಧಿಃ ।
ಮಿಥುನಂ ಜಾಯತೇ ವೃಕ್ಷಾದುಪಕ್ಷಮಮನೀದೃಶಂ ॥ ೪೭ ॥

ಸಾಮಾನ್ಯವಿಭವಾಃ ಸರ್ವೇ ಮಮತ್ವಪರಿವರ್ಜಿತಾಃ ।
ನ ತತ್ರ ವಿದ್ಯತೇ ಧರ್ಮೋ ನಾಧರ್ಮಃ ಸಂಪ್ರವರ್ತತೇ ॥ ೪೮ ॥

---

೪೪-೪೫. ಆ ದೇಶದ ಜನರು ಶ್ರೇಷ್ಠರೂ, ದೇವತೆಗಳಿಗೆ ಸಮಾನವಾದ ಪರಾಕ್ರಮವಂತರೂ ಆದ ಸ್ವೇಚ್ಛಾವಿಹಾರಿಗಳೂ, ಸುವರ್ಚಸ್ವಿಗಳೂ ಆಗಿರುವರು. ಮತ್ತು ಕಡಗ, ಬಾಹುಪುರಿ, ತೋಳುಬಂದಿ, ಹಾರ, ಕುಂಡಲ, ಸ್ರಕ್, ಚಂದನ, ವಸ್ತ್ರ, ಕಿರೀಟ. ಅಂಗವಸ್ತ್ರ ಇವುಗಳಿಂದ ಭೂಷಿತರಾಗಿಯೂ ನಿತ್ಯಸುಖಿಯಾಗಿಯೂ ಇರುವರು.

೪೬. ಆ ದ್ವೀಪದ ಜನರು ನಿತ್ಯಯೌವನರೂ, ಪ್ರಿಯರೂ, ಪ್ರಿಯದರ್ಶನವುಳ್ಳವರೂ ಆಗಿ ಒಂದು ಸಹಸ್ರವರ್ಷಗಳು ಅಥವಾ ಅದಕ್ಕಿಂತಲೂ ಹೆಚ್ಚಾಗಿಯೂ ಜೀವಿಸುವರು.

೪೭. ಆ ಪ್ರಜೆಗಳಿಗೆ ಗರ್ಭವಾಸದುಃಖವಿಲ್ಲ. ವಂಶನಾಶವೂ ಇಲ್ಲ ದಂಪತಿಗಳು ಕಲ್ಪವೃಕ್ಷಗಳಿಂದ ಮಿಥುನವಾಗಿಯೇ ಹುಟ್ಟಿ ಬೆಳೆದು, ಅನುಪಮವಾದ ಸುಖದಿಂದ ಜೀವಿಸುವರು

೪೮-೪೯. ಆ ದೇಶದ ಪ್ರಜೆಗಳು ನ್ಯೂನಾಧಿಕವಿಲ್ಲದೆ ಒಂದೇ ಸಮನಾದ ಐಶ್ವರ್ಯವುಳ್ಳವರೂ, ಅಹಂಕಾರ ಮಮಕಾರವರ್ಜಿತರೂ, ಆಗಿರುವರು. ಅಲ್ಲಿ ಭಿನ್ನ

ನ ವ್ಯಾಧಿರ್ನ ಜರಾ ತತ್ರ ನ ದುರ್ಮೇಧಾ ನ ಚ ಕ್ಲಮಃ ।
ಪೂರ್ಣೇ ಕಾಲೇ ವಿನಶ್ಯಂತಿ ಜಲಬುದ್ಬುದವಚ್ಚ ತೇ ॥ ೪೯ ॥

ಏವಮತ್ಯಂತಸುಖಿನಃ ಸರ್ವದುಃಖವಿವರ್ಜಿತಾಃ ।
ರಕ್ತಾ ಧರ್ಮಂ ನ ಪಶ್ಯಂತಿ ದುಃಖಾದ್ಧರ್ಮೋಽಭಿಜಾಯತೇ ॥ ೫೦ ॥

ಉತ್ತರಾಣಾಂ ಕುರೂಣಾಂತು ಜ್ಞೇಯಂತು ದಕ್ಷಿಣೇ ।
ಸಮುದ್ರಮೂರ್ಮಿಮಾಲಾಢ್ಯಂ ನಾನಾಸ್ವರವಿಭೂಷಿತಂ ॥ ೫೧ ॥

ಪಂಚಯೋಜನಸಾಹಸ್ರಮತಿಕ್ರಮ್ಯ ಸುರಾಲಯಂ ।
ಚಂದ್ರದ್ವೀಪಮಿತಿ ಖ್ಯಾತಂ ಚಂದ್ರಮಂಡಲಸಂಸ್ಥಿತಂ ॥ ೫೨ ॥
ಸಹಸ್ರಯೋಜನಾನಾಂತು ಸರ್ವತಃ ಪರಿಮಂಡಲಂ ।

ನಾನಾಪುಷ್ಪಫಲೋಪೇತಂ ಸಮೃದ್ಧ್ಯಾ ಪರಯಾಯುತಂ ।
ಶತಯೋಜನವಿಸ್ತೀರ್ಣಮುಚ್ಛ್ರಿತಂ ತಾವದೇವ ತು ॥ ೫೩ ॥

---

ಭಿನ್ನ ಧರ್ಮಗಳೂ ಇಲ್ಲ. ಅಧರ್ಮವಂತು ಮೊದಲೇ ಇಲ್ಲ. ಮತ್ತು ವ್ಯಾಧಿ, ಮುಪ್ಪು ದುರ್ಬುದ್ಧಿ, ಶ್ರಮ, ಆಯಾಸ ಇವು ಲೇಶಮಾತ್ರವೂ ಇಲ್ಲ. ತಂತಮ್ಮ ಜೀವಮಾನ ಕಾಲ ಮುಗಿದುಹೋದರೆ ನೀರಿನ ಗುಳ್ಳೆಗಳಂತೆ ಮೃತರಾಗುವರು.

೫೦. ಹೀಗೆ ಆ ಪ್ರಜೆಗಳು ನಿತ್ಯಸುಖಿಗಳಾಗಿಯೂ ಸರ್ವದುಃಖಮುಕ್ತ ರಾಗಿಯೂ, ಇರುವರು ಅವರು ಆಶೆಯಿಂದ ಯಾವ ಧರ್ಮಗಳನ್ನೂ ಮಾಡುವುದಿಲ್ಲ. ಆಶೆಯಿಂದಲೇ ಸುಖದುಃಖಸಾಧಕಗಳಾದ ಧರ್ಮಾಧರ್ಮಾದಿಗಳು ಉತ್ಪನ್ನ ವಾಗುವುವು.

೫೧-೫೨. ಉತ್ತರಕುರುದೇಶದ ಪಕ್ಕದಲ್ಲಿಯೇ ದಕ್ಷಿಣಕುರುದೇಶವಿರುವುದು. ಅದಕ್ಕೆ ಚಂದ್ರದ್ವೀಪವೆಂಬ ನಾಮವು ಪ್ರಖ್ಯಾತವಾಗಿದೆ. ಆ ಚಂದ್ರದ್ವೀಪವು ಸಮುದ್ರದ ಅಲೆಗಳಿಂದ ತಂಪಾಗಿಯೂ, ನಾನಾಧ್ವನಿಗಳಿಂದ ವ್ಯಾಪ್ತವೂ, ದೇವ ಲೋಕಕ್ಕೆ ಐದುಯೋಜನ ದೂರಗತವೂ, ಆಗಿ ಚಂದ್ರಮಂಡಲಕ್ಕೆ ಮುಖ್ಯಸ್ಥಾನ ವಾಗಿಯೂ, ಸುಪ್ರಸಿದ್ಧವಾಗಿಯೂ ಇರುತ್ತದೆ.

೫೩. ಆ ದ್ವೀಪವು ಸಹಸ್ರಯೋಜನ ವಿಸ್ತಾರವಾಗಿಯೂ, ನಾನಾವಿಧ ಪುಷ್ಪಫಲಗಳಿಂದ ಭರಿತವಾಗಿಯೂ, ಪರಮಸಮೃದ್ಧಿಯುತವಾಗಿಯೂ, ನೂರು ಯೋಜನ ಅಗಲವಾಗಿಯೂ ನೂರುಯೋಜನ ಎತ್ತರವಾಗಿಯೂ ಇದೆ.

ತಸ್ಯ ಮಧ್ಯೇ ಗಿರಿವರಃ ಸಿದ್ಧಚಾರಣಸೇವಿತಃ ।
ಚಂದ್ರತುಲ್ಯಪ್ರಭೈಃ ಕಾಂತ್ಯೈಶ್ಚಂದ್ರಾಕಾರೈಃ ಸುಲಕ್ಷಣೈಃ ॥ ೫೪ ॥

ಶ್ವೇತವೈದೂರ್ಯಕಮುದ್ರೈಶ್ಚಿತ್ರೋಽಸೌ ಕುಮುದಪ್ರಭಃ ।
ಅನೇಕಚಿತ್ರಕೋದ್ಯಾನೋ ನೈಕನಿರ್ಝರಕಂದರಃ ।
ಮಹಾಸಾನುದರೀಕುಂಜೈರ್ವಿವಿಧೈಃ ಸಮಲಂಕೃತಃ ॥ ೫೫ ॥

ತಸ್ಮಾಚ್ಛೈಲಾನ್ಮಹಾಪುಣ್ಯಾ ಚಂದ್ರಾಂಶುವಿಮಲೋದಕಾ ।
ಪ್ರವಹತ್ಯುತ್ತಮನದೀ ಚಂದ್ರಾವರ್ತಾ ತರಂಗಿಣೀ ॥ ೫೬ ॥

ತತ್ರ ಚಂದ್ರಮಸಃ ಸ್ಥಾನಂ ನಕ್ಷತ್ರಾಧಿಪತೇರ್ವರಂ ।
ಸದಾಽವತರತೇ ತತ್ರ ಚಂದ್ರಮಾ ಗ್ರಹನಾಯಕಃ ॥ ೫೭ ॥

ತತ್ರ ಚಂದ್ರಮಸೋ ನಾಮ್ನಾ ಶೈಲಃ ಸ ತು ಪರಿಶ್ರುತಃ ।
ಚಂದ್ರದ್ವೀಪಂ ಮಹಾದ್ವೀಪಂ ಪ್ರಕಾಶಂ ದಿವಿ ಚೇಹ ಚ ॥ ೫೮ ॥

---

೫೪-೫೫. ಆ ದ್ವೀಪದ ಮಧ್ಯದಲ್ಲಿ ಸಿದ್ಧಚಾರಣಸೇವಿತವೂ ಚಂದ್ರನಂತೆ ಕಾಂತಿಯುಳ್ಳದ್ದೂ, ಮನೋಹರವೂ, ಚಂದ್ರನಂತೆ ಸುಂದರವೂ, ಸುಲಕ್ಷಣವೂ ಆದ ಬಿಳೀಕಮಲಗಳಿಂದಲೂ, ವೈಡೂರ್ಯಕಮಲಗಳಿಂದಲೂ, ಮಂಡಿತವೂ, ಕುಮುದ ಪುಷ್ಪದಂತೆ ಕಾಂತಿಯುಳ್ಳದ್ದೂ ಅನೇಕ ವಿಚಿತ್ರವಾದ ಉದ್ಯಾನಗಳಿಂದ ಸಹಿತವೂ, ಅನೇಕ ನದಿಗವಿಗಳಿಂದ ಯುಕ್ತವೂ, ವಿವಿಧವಾದ ಕೋಡುಗಳು, ಗವಿಗಳು, ಲತಾ ಗೃಹಗಳು ಇವುಗಳಿಂದ ರಂಜಿತವೂ ಆದ ಚಂದ್ರಗಿರಿಯು ಹೊಳೆಯುತ್ತಿರುವುದು.

೫೬. ಆ ಚಂದ್ರಗಿರಿಯಿಂದ ಜನ್ಯವೂ ಮಹಾಪುಣ್ಯಪ್ರದವೂ ಚಂದ್ರಕಿರಣ ಗಳಂತೆ ಸ್ವಚ್ಛವಾದ ಜಲವುಳ್ಳದ್ದೂ ಅತ್ಯುತ್ತಮವೂ ಆದ ಚಂದ್ರಾವರ್ತವೆಂಬ ಮಹಾ ನದಿಯು ಆ ದ್ವೀಪದಲ್ಲಿ ಹರಿಯುವುದು.

೫೭. ಆ ಗಿರಿಯಲ್ಲಿ ನಕ್ಷತ್ರಾಧಿಪತಿಯೂ ಗ್ರಹನಾಯಕನೂ ಆದ ಚಂದ್ರನು ವಾಸಿಸುವ ಉತ್ತಮವಾದ ಸ್ಥಾನವು ಹೊಳೆಯುತ್ತಿರುವುದು. ಚಂದ್ರನು ಪ್ರತಿ ಮಾಸ ದಲ್ಲಿಯೂ ಅಲ್ಲಿಗೆ ಬರುವನು.

೫೮. ಹೀಗೆ ಚಂದ್ರನು ಅಲ್ಲಿಗೆ ಬರುವುದರಿಂದಲೇ ಆ ಪರ್ವತಕ್ಕೆ ಚಂದ್ರಗಿರಿ ಯೆಂಬ ನಾಮವು ಪ್ರಾಪ್ತವಾಗಿದೆ. ಮಹತ್ತಾದ ಆ ಚಂದ್ರದ್ವೀಪವು ಈ ಲೋಕದ ಲ್ಲಿಯೂ ಸ್ವರ್ಗಲೋಕದಲ್ಲಿಯೂ ಕೂಡ ಪ್ರಖ್ಯಾತವಾಗಿದೆ.

ತತ್ರ ಚಂದ್ರಪ್ರತೀಕಾಶಾಃ ಪೂರ್ಣಚಂದ್ರನಿಭಾನನಾಃ ।
ಚಂದ್ರಕಾಂತಾಃ ಪ್ರಜಾಃ ಸರ್ವಾ ವಿಮಲಾಶ್ಚಂದ್ರದೈವತಾಃ ॥ ೫೯ ॥

ಅತ್ಯಂತಧಾರ್ಮಿಕಾಃ ಸೌಮ್ಯಾಃ ಸತ್ಯಸಂಧಾಃ ಸುತೇಜಸಃ ।
ಪ್ರಜಾಸ್ತತ್ರ ಸದಾಚಾರಾ ದಶವರ್ಷಶತಾಯುಷಃ । ॥ ೬೦ ॥

ಪಶ್ಚಿಮೇನ ತು ದ್ವೀಪಸ್ಯ ಪಶ್ಚಿಮಸ್ಯ ಪ್ರಕೀರ್ತಿತಂ ।
ಚತುರ್ಯೋಜನಸಾಹಸ್ರಂ ಸಮತೀತ್ಯ ಮಹೋದಧಿಂ ॥ ೬೧ ॥

ದಶಯೋಜನಸಾಹಸ್ರಂ ಸಮಂತಾತ್ ಪರಿಮಂಡಲಂ ।
ದ್ವೀಪಂ ಭದ್ರಾಕರಂ ನಾನಾಪುಷ್ಪೋಪಶೋಭಿತಂ ॥ ೬೨ ॥

ಪ್ರಭೂತಧನಧಾನ್ಯಾಢ್ಯಮನೇಕನೃಪಪಾಲಿತಂ ।
ನಿತ್ಯಂ ಪ್ರಮುದಿತಂ ಸ್ಫೀತಂ ಮಹಾಶೈಲೈಶ್ಚ ಶೋಭಿತಂ ॥ ೬೩ ॥

---

೫೯-೬೦. ಅಲ್ಲಿನ ಪ್ರಜೆಗಳು ಚಂದ್ರನಂತೆ ಕಾಂತಿಯುಳ್ಳವರೂ, ಪೂರ್ಣ ಚಂದ್ರನಂತೆ ಮುಖವುಳ್ಳವರೂ, ಚಂದ್ರನಂತೆ ಆಹ್ಲಾದಕರರೂ, ವಿಮಲರೂ, ಚಂದ್ರ ದೇವತಾಕರೂ, ಅತ್ಯಂತ ಧಾರ್ಮಿಕರೂ ಸೌಮ್ಯರೂ, ಸತ್ಯಸಂಧರೂ, ಸುತೇಜಸ್ವಿಗಳೂ, ಸದಾಚಾರಿಗಳೂ, ಸಹಸ್ರವರ್ಷ ಆಯುಷ್ಯವುಳ್ಳವರೂ ಆಗಿರುವರು.

೬೧-೬೨. ಪಶ್ಚಿಮದ್ವೀಪದ ಪಶ್ಚಿಮಭಾಗದಲ್ಲಿ ನಾಲ್ಕುಸಹಸ್ರಯೋಜನ ವಿಸ್ತೀರ್ಣವಾದ ಸಮುದ್ರದ ದಡದಲ್ಲಿ ಹತ್ತುಸಾವಿರ ಯೋಜನ ವಿಸ್ತೀರ್ಣವೂ (ಸುತ್ತ ಳತೆಯುಳ್ಳದ್ದೂ) ವಿವಿಧ ಪುಷ್ಪಗಳಿಂದಲಂಕೃತವೂ ಆದ ಭದ್ರಾಕರವೆಂಬ ಮಹಾ ದ್ವೀಪವು ಬಹಳ ಪ್ರಸಿದ್ಧವಾಗಿದೆ.

೬೩. ಆ ದ್ವೀಪವು ವಾಯುದೇವನ ದ್ವೀಪವಾಗಿದೆ. ಅದರಲ್ಲಿ ಧನಧಾನ್ಯ ಗಳು ಸಮೃದ್ಧಿಯಾಗಿವೆ ಅನೇಕ ರಾಜರು ಆ ದ್ವೀಪವನ್ನು ರಕ್ಷಿಸುವರು. ಅಲ್ಲಿಯ ಜನರು ನಿತ್ಯತುಷ್ಟರಾಗಿರುವರು ದೇಶವು ವಿಶಾಲವಾಗಿಯೂ ಮಹಾಪರ್ವತಗಳಿಂದ ಲಂಕೃತವಾಗಿಯೂ ಇದೆ.

ತತ್ರ ಭದ್ರಾಸನಂ ವಾಯೋರ್ನಾನಾರತ್ನೈಶ್ಚ ಮಂಡಿತಂ ।
ತತ್ರ ವಿಗ್ರಹವಾನ್ ವಾಯುಃ ಸದಾ ಪರ್ವಸು ಪೂಜ್ಯತೇ ॥ ೬೪ ॥

ತಪನೀಯಸುವರ್ಣಾಭಾಸ್ತಪನೀಯ ವಿಭೂಷಿತಾಃ ।
ವಿರಾಜಂತೇಽಮರಪ್ರಖ್ಯಾಸ್ತತ್ರ ಚಿತ್ರಾಂಬರಸ್ರಜಃ ॥ ೬೫ ॥

ವೀರ್ಯವಂತೋ ಮಹಾಭಾಗಾಃ ಪಂಚವರ್ಷಶತಾಯುಷಃ ।
ಸತ್ಯಸಂಧಾ ಮುದಾ ಯುಕ್ತಾಃ ಪ್ರಜಾಸ್ತಾ ವಾಯುದೈವತಾಃ ॥ ೬೬ ॥

॥ ಸೂತ ಉವಾಚ ॥

ಏವಮೇವ ನಿಸರ್ಗೋಽಯಂ ವರ್ಷಾಣಾಂ ಭಾರತೇಯುಗೇ ।
ದೃಷ್ಟಃ ಪರಮತತ್ತ್ವಜ್ಞೈರ್ಭೂಯಃ ಕಿಂ ಕೀರ್ತಯಾಮಿ ತೇ ॥ ೬೭ ॥

---

೬೪. ಆ ವಾಯುದ್ವೀಪದಲ್ಲಿ ನಾನಾರತ್ನಗಳಿಂದಲಂಕೃತವಾದ ವಾಯುದೇವನ ಸಿಂಹಾಸನವು ಕಂಗೊಳಿಸುತ್ತಿರುವುದು. ಪ್ರತಿ ಪರ್ವಕಾಲದಲ್ಲಿಯೂ ವಾಯುದೇವನು ಸಾಕ್ಷಾತ್ತಾಗಿ ಅಲ್ಲಿಗೆ ಬಂದು ಆ ಪ್ರಜೆಗಳಿಂದ ಪೂಜಿತನಾಗುವನು.

೬೫. ಆ ವಾಯುದ್ವೀಪದ ಪ್ರಜೆಗಳು ತಪ್ತಕಾಂಚನಪ್ರಭೆಯುಳ್ಳವರೂ ಸುವರ್ಣಾಭರಣಭೂಷಿತರೂ ದೇವತೆಗಳಿಗೆ ಸಮರೂ ಚಿತ್ರವಾದ ವಸ್ತ್ರಮಾಲೆಗಳು ಇವುಗಳುಳ್ಳವರೂ ಆಗಿ ಹೊಳೆಯುತ್ತಿರುವರು.

೬೬. ಮತ್ತು ಅವರು ವೀರ್ಯವಂತರೂ ಮಹಾಭಾಗ್ಯವಂತರೂ ಐನೂರು ವರ್ಷ ಆಯುಷ್ಯವುಳ್ಳವರೂ ಸತ್ಯಸಂಧರೂ ಸಂತೋಷಯುಕ್ತರೂ ವಾಯುದೇವತಾಕರೂ ಆಗಿರುವರು.

೬೭. ಸೂತಮುನಿಯು ಹೇಳಿದನು :—ಎಲೈ ಮಹರ್ಷಿಗಳೇ, ಭಾರತಯುಗದಲ್ಲಿ ಇರತಕ್ಕ ವರ್ಷಗಳ ಸ್ವರೂಪವನ್ನು ನಿರೂಪಿಸಿರುತ್ತೇನೆ ಈ ವಿಷಯಗಳನ್ನು ಪರಮತತ್ವಜ್ಞರಾದ ಮಹರ್ಷಿಗಳು ತಿಳಿಸಿದ್ದರು. ಅದನ್ನೇ ನಾನು ನಿಮಗೆ ತಿಳಿಸಿರುವೆನು. ಪುನಃ ಮತ್ತಾವ ವಿಷಯಗಳು ತಿಳಿಯಬೇಕಾಗಿದೆ ಎಂದನು.

ಆಖ್ಯಾತೇ ತ್ವೇವಮೃಷಯಃ ಸೂತಪುತ್ರೇಣ ಧೀಮತಾ ।
ಉತ್ತರಶ್ರವಣೇ ಭೂಯಃ ಪಪ್ರಚ್ಛುಸ್ತದನಂತರಂ ॥ ೬೮ ॥

॥ ಋಷಯ ಊಚುಃ ॥

ಯದಿದಂ ಭಾರತಂ ವರ್ಷಂ ಯಸ್ಮಿನ್ ಸ್ವಾಯಂಭುವಾದಯಃ ।
ಚತುರ್ದಶೈತೇ ಮನವಃ ಪ್ರಜಾಸರ್ಗೇ ಭವಂತ್ಯುತ ॥ ೬೯ ॥

ಏತದ್ವೇದಿತುಮಿಚ್ಛಾಮಸ್ತನ್ನೋ ನಿಗದ ಸತ್ತಮ ।
ಏತತ್ ಶ್ರುತ್ವಾ ವಚಸ್ತೇಷಾಮಬ್ರವೀಲ್ಲೋಮಹರ್ಷಣಃ ॥ ೭೦ ॥

ಪೌರಣೀಕಸ್ತದಾ ಸೂತ ಋಷೀಣಾಂ ಭಾವಿತಾತ್ಮನಾಂ ।
ಏತದ್ವಿಸ್ತರತೋ ಭೂಯಸ್ತಾನುವಾಚ ಸಮಾಹಿತಃ ॥ ೭೧ ॥

॥ ಸೂತ ಉವಾಚ ॥

ನಿಸರ್ಗ ಏಷ ವಿಖ್ಯಾತಃ ಕುರೂಣಾಂತು ಯಥಾರ್ಥವತ್ ।
ಭಾರತಸ್ಯ ತು ವಕ್ಷ್ಯಾಮಿ ನಿಸರ್ಗಂ ತಂ ನಿಬೋಧತ ॥ ೭೨ ॥

---

೬೮. ಹೀಗೆ ಸೂತಮುನಿಯು ಹೇಳಲಾಗಿ ಜ್ಞಾನಿಗಳಾದ ಮಹರ್ಷಿಗಳು ಮುಂದಿನ ವಿಷಯ.ಗಳನ್ನು ಕೇಳಲಿಚ್ಛೆಯುಳ್ಳವರಾಗಿ ಇಂತೆಂದರು.

೬೯–೭೦. ಮಹರ್ಷಿಗಳು ಪುನಃ ಕೇಳಿದರು :—ಯಾವ ಭಾರತವರ್ಷದಲ್ಲಿ ಸ್ವಾಯಂಭುವಾದಿ ಚತುರ್ದಶಮನುಗಳೂ ಮತ್ತು ಅವರ ಪ್ರಜಾಸೃಷ್ಟಿಯೂ ಉಂಟಾಗು ವುವೋ ಅಂತಹ ಮನುಗಳ ಪ್ರಜಾಸೃಷ್ಟಿಯನ್ನು ಕೇಳಬೇಕೆಂದು ನಮಗೆ ಆಶೆಯಿರು ತ್ತದೆ. ಜ್ಞಾನಿಗಳಾದ ನೀವು ಅದನ್ನು ತಿಳಿಸಬೇಕು ಎಂದರು. ಈ ಮಾತನ್ನು ಕೇಳಿದ ಲೋಮಹರ್ಷಣನು ಇಂತೆಂದನು.

೭೧. ಆಗ ಪೌರಾಣಿಕೋತ್ತಮರಾದ ಸೂತರು ಮಹಾತ್ಮನಾದ ಮಹರ್ಷಿಗಳ ಮಾತನ್ನು ಸಾವಧಾನದಿಂದ ಕೇಳಿ ಸ್ಥಿರಮನಸ್ಕರಾಗಿ ಈ ವಿಷಯಗಳನ್ನು ಹೇಳಲುಪ ಕ್ರಮಿಸಿದರು.

೭೨. ಸೂತಪೌರಾಣೀಕನು ಹೇಳಿದನು :—ಉತ್ತರಕುರುದೇಶದ ವಿಚಾರ ವಾದ ವಿಷಯಗಳನ್ನು ಹೇಳಿ ಕೇಳಿದ್ದಾಗಿದೆ. ಈ ಭಾರತ ಸೃಷ್ಟಿಯ ವಿಷಯಕವಾದ ಸಂಗತಿಯನ್ನು ತಿಳಿಸುವೆನು ಕೇಳಿ ಎಂದನು.

ಪುಣ್ಯತೀರ್ಥೇ ಹಿಮವತೋ ದಕ್ಷಿಣಸ್ಯಾಚಲಸ್ಯ ಹಿ ।
ಪೂರ್ವಪಶ್ಚಾಯತಸ್ಯಾಸ್ಯ ದಕ್ಷಿಣೇನ ದ್ವಿಜೋತ್ತಮಾಃ ॥ ೭೩ ॥

ತಥಾ ಜನಪದಾನಾಂ ಚ ವಿಸ್ತರಂ ಶ್ರೋತುಮರ್ಹಥ ।
ಅತ್ರ ವೋ ವರ್ಣಯಿಷ್ಯಾಮಿ ವರ್ಷೇಽಸ್ಮಿನ್ ಭಾರತೇ ಪ್ರಜಾಃ ॥ ೭೪ ॥

ಇದಂ ತು ಮಧ್ಯಮಂ ಚಿತ್ರಂ ಶುಭಾಶುಭಫಲೋದಯಂ ।
ಉತ್ತರಂ ಯತ್ಸಮುದ್ರಸ್ಯ ಹಿಮವದ್ದಕ್ಷಿಣಂ ಚ ಯತ್ ॥ ೭೫ ॥

ವರ್ಷಂ ಯದ್ಭಾರತಂ ನಾಮ ಯತ್ರೇಯಂ ಭಾರತೀ ಪ್ರಜಾಃ ।
ಭರಣಾಚ್ಚ ಪ್ರಜಾನಾಂ ವೈ ಮನುರ್ಭರತ ಉಚ್ಯತೇ ।
ನಿರುಕ್ತವಚನಾಚ್ಚೈವ ವರ್ಷಂ ತದ್ಭಾರತಂ ಸ್ಮೃತಂ ॥ ೭೬ ॥

---

೭೩. ಎಲೈ ಋಷಿವರ್ಯರೇ, ಪವಿತ್ರವಾದ ಹಿಮಾಲಯದ ದಕ್ಷಿಣದಿಗ್ಭಾಗದಲ್ಲಿ ಪೂರ್ವಪಶ್ಚಿಮವಾಗಿ ಅತಿ ವಿಶಾಲವೂ ಉತ್ತರ ದಕ್ಷಿಣವಾಗಿ ಅತಿ ವಿಪುಲವೂ ಆದ ಭಾರತವಿಷಯವನ್ನು ನಿರೂಪಿಸುವೆನು ಕೇಳಿರೆಂದನು.

೭೪. ಹಿಮಾಲಯದಿಂದ ವಿಂಧ್ಯದವರೆಗೂ ಪೂರ್ವಪಶ್ಚಿಮಸಮುದ್ರಗಳ ಮಧ್ಯದಲ್ಲಿರುವ ಭಾರತದ ವಿಸ್ತಾರವನ್ನೂ ಅಲ್ಲಿರುವ ದೇಶಗಳ ವಿಶಾಲತೆಯನ್ನೂ ಭಾರತದ ಪ್ರಜೆಗಳ ನಡೆನುಡಿಯ ವಿಚಾರವನ್ನೂ ವರ್ಣಿಸುವೆನು.

೭೫-೭೬ ಈ ಭಾರತವರ್ಷವು ಮಧ್ಯಮವೂ ವಿಚಿತ್ರವೂ ಶುಭಾಶುಭಫಲಪ್ರದವೂ ಆಗಿದೆ. ದಕ್ಷಿಣಸಮುದ್ರಕ್ಕೆ ಉತ್ತರಭಾಗದಲ್ಲಿ ಹಿಮಾಲಯದವರೆಗೂ ಇರುವ ದೇಶಕ್ಕೆ ಭಾರತವರ್ಷವೆಂದು ನಾಮವು ಉಂಟಾಗಿದೆ ಅಲ್ಲಿರುವ ಜನರೇ ಭಾರತೀಯರಾಗಿರುವರು. ಪ್ರಜೆಗಳನ್ನು ಭರಣ (ರಕ್ಷಣೆ) ಮಾಡುವುದರಿಂದ ಆ ರಾಜನಿಗೆ ಭರತನೆಂಬ ನಾಮವು ಪ್ರಾಪ್ತವಾಗಿದೆ ಭರತನಾಮಕ ಮನುವಿನ ಆಳಿಕೆಯಿಂದಲೇ ಈ ದೇಶಕ್ಕೆ ಭಾರತದೇಶವೆಂಬ ನಾಮವು ಅನ್ವರ್ಥಕ ಪ್ರಾಪ್ತವಾಗಿದೆ.

ತತಃ ಸ್ವರ್ಗಶ್ಚ ಮೋಕ್ಷಶ್ಚ ಮಧ್ಯಶ್ಚಾಂತಶ್ಚ ಗಮ್ಯತೇ ।
ನ ಖಲ್ವನ್ಯತ್ರ ಮರ್ತ್ಯಾನಾಂ ಭೂಮೌ ಕರ್ಮ ವಿಧೀಯತೇ ॥ ೭೭ ॥

ಭಾರತಸ್ಯಾಸ್ಯ ವರ್ಷಸ್ಯ ನವ ಭೇದಾಃ ಪ್ರಕೀರ್ತಿತಾಃ ।
ಸಮುದ್ರಾಂತರಿತಾ ಜ್ಞೇಯಾಸ್ತೇ ತ್ವಗಮ್ಯಾಃ ಪರಸ್ಪರಂ ॥ ೭೮ ॥

ಇಂದ್ರದ್ವೀಪಃ ಕಸೇರುಶ್ಚ ತಾಮ್ರವರ್ಣೋ ಗಭಸ್ತಿಮಾನ್ ।
ನಾಗದ್ವೀಪಸ್ತಥಾ ಸೌಮ್ಯೋ ಗಂಧರ್ವಸ್ತ್ವಥ ವಾರುಣಃ ॥ ೭೯ ॥

ಅಯಂತು ನವಮಸ್ತೇಷಾಂ ದ್ವೀಪಃ ಸಾಗರಸಂವೃತಃ ।
ಯೋಜನಾನಾಂ ಸಹಸ್ರಂ ತು ದ್ವೀಪೋಽಯಂ ದಕ್ಷಿಣೋತ್ತರಂ ॥ ೮೦ ॥

ಆಯತೋ ಹ್ಯಾಕುಮಾರಿಕ್ಯಾದಾಗಂಗಾಪ್ರಭವಾಚ್ಚ ವೈ ।
ತಿರ್ಯಗುತ್ತರವಿಸ್ತೀರ್ಣಃ ಸಹಸ್ರಾಣಿ ನವೈವ ತು ॥ ೮೧ ॥

---

೭೭. ಆದುದರಿಂದ ಭಾರತವರ್ಷವು ಸ್ವರ್ಗಮೋಕ್ಷಗಳಿಗೆ ಮಧ್ಯಸ್ಥವಾಗಿದೆ. ಭಾರತದೇಶವನ್ನು ಬಿಟ್ಟರೆ ಮತ್ತಾವ ದೇಶಗಳಲ್ಲಿಯೂ ಪ್ರಜೆಗಳಿಗೆ ಕರ್ಮಗಳನ್ನು ವಿಧಿಸಿರುವುದಿಲ್ಲ. ಭಾರತೀಯರು ಮಾತ್ರವೇ ಕರ್ಮಬದ್ಧರಾಗಿರುವರು. ಇತರ ದೇಶೀಯರು ಕರ್ಮಬದ್ಧರಲ್ಲ.

೭೮. ಈ ಭಾರತವರ್ಷದಲ್ಲಿ ನವದ್ವೀಪಗಳಿವೆ. ಆ ಒಂಬತ್ತು ದ್ವೀಪಗಳು ಸಮುದ್ರಗಳಿಂದ ವಿಭಾಗಿಸಲ್ಪಟ್ಟಿರುವುದಾಗಿಯೂ ಪರಸ್ಪರ ಅಗಮ್ಯವಾಗಿಯೂ ಇವೆ.

೭೯–೮೦ ಅವು ಯಾವುವೆಂದರೆ:—ಇಂದ್ರದ್ವೀಪ, ಕಶೇರುದ್ವೀಪ, ತಾಮ್ರವರ್ಣದ್ವೀಪ, ಗಭಸ್ತಿಮಂತದ್ವೀಪ, ನಾಗದ್ವೀಪ, ಸೌಮ್ಯದ್ವೀಪ, ಗಂಧರ್ವದ್ವೀಪ, ಮತ್ತು ವಾರುಣದ್ವೀಪವೆಂಬುವು ಎಂಟು ದ್ವೀಪಗಳು. ಈ ಭಾರತವೇ ಒಂಬತ್ತನೆಯ ದ್ವೀಪವು. ಇದು ಸಮುದ್ರಗಳಿಂದ ಸುತ್ತಲ್ಪಟ್ಟಿದೆ. ಈ ದ್ವೀಪವು ದಕ್ಷಿಣೋತ್ತರವಾಗಿ ಒಂದುಸಾವಿರ ಯೋಜನ ವಿಸ್ತೀರ್ಣವಾಗಿದೆ.

೮೧. ಕನ್ಯಾಕುಮಾರಿಯಿಂದ ಗಂಗೆಯು ಉತ್ಪತ್ತಿಯಾಗುವ ಹಿಮಾಲಯದ ವರೆಗೂ ಅಡ್ಡವಾಗಿ ಉತ್ತರಭಾಗದ ವಿಸ್ತೀರ್ಣತೆಯು ಒಂಬತ್ತುಸಾವಿರ ಯೋಜನಗಳಾಗಿವೆ.

ದ್ವೀಪೋ ಹ್ಯುಪನಿವಿಷ್ಟೋಽಯಂ ಮ್ಲೇಚ್ಛೈರಂತೇಷು ನಿತ್ಯಶಃ ।
ಪೂರ್ವೇ ಕಿರಾತಾ ಹ್ಯಸ್ಯಾಂತೇ ಪಶ್ಚಿಮೇ ಯವನಾಃ ಸ್ಮೃತಾಃ ॥ ೮೨ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಮಧ್ಯೇ ಶೂದ್ರಾಶ್ಚ ಭಾಗಶಃ ।
ಇಜ್ಯಾಯುದ್ಧವಣಿಜ್ಯಾಭಿರ್ವರ್ತಯಂತೋ ವ್ಯವಸ್ಥಿತಾಃ ॥ ೮೩ ॥

ತೇಷಾಂ ಸಂವ್ಯಹಾರೋಽಯಂ ವರ್ತತೇ ತು ಪರಸ್ಪರಂ ।
ಧರ್ಮಾರ್ಥಕಾಮಸಂಯುಕ್ತೋ ವರ್ಣಾನಾಂ ತು ಸ್ವಕರ್ಮಸು ॥ ೮೪ ॥

ಸಂಕಲ್ಪಪಂಚಮಾನಾಂ ತು ಆಶ್ರಮಾಣಾಂ ಯಥಾವಿಧಿ ।
ಇಹ ಸ್ವರ್ಗಾಪವರ್ಗಾರ್ಥಂ ಪ್ರವೃತ್ತಿರ್ಯೇಷು ಮಾನುಷೀ ॥ ೮೫ ॥

ಯಸ್ತ್ವಯಂ ನವಮೋ ದ್ವೀಪಸ್ತಿರ್ಯಗಾಯತ ಉಚ್ಯತೇ ।
ಕೃತ್ಸ್ನಂ ಜಾಯತಿ ಯೋ ಹ್ಯೇನಂ ಸ ಸಮ್ರಾಡಿಹ ಕೀರ್ತ್ಯತೇ ॥ ೮೬ ॥

---

೮೨. ಈ ಭಾರತದ ಕೊನೆಯಲ್ಲಿ ಮ್ಲೇಂಛರೂ, ಪೂರ್ವದಲ್ಲಿ ಬೇಡರೂ ಪಶ್ಚಿಮದ ಅಂತ್ಯದಲ್ಲಿ ಯವನರೂ ವಾಸಿಸುವರು.

೮೩. ಈ ಭಾರತದೇಶದ ಮಧ್ಯಭಾಗದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರೆಂಬ ನಾಲ್ಕು ಜಾತಿಯ ಜನರೂ ಯಾಗ ಯುದ್ಧ ವ್ಯಾಪಾರ ಇವೇ ಮೊದಲಾದ ಕಾರ್ಯಗಳಿಂದ ಸುವ್ಯವಸ್ಥಿತರಾಗಿ ಜೀವಿಸುತ್ತಿದ್ದರು.

೮೪. ಬ್ರಾಹ್ಮಣಾದಿ ವರ್ಣಗಳು ಪರಸ್ಪರಸಹಾಯದಿಂದ ತಂತಮ್ಮ ಸಂವ್ಯವಹಾರಗಳನ್ನು ನಡೆಸುತ್ತಾ ಧರ್ಮಾರ್ಥಕಾಮಯುಕ್ತವಾದ ಸ್ವಕರ್ಮಗಳಲ್ಲಿ ನಿರತರಾಗಿರುವರು.

೮೫. ಆ ಪ್ರಜೆಗಳು ಸಂಕಲ್ಪವೇ ಐದನೆಯದಾಗಿರುವ ಬ್ರಹ್ಮಚರ್ಯಾದ್ಯಾಶ್ರಮಗಳಲ್ಲಿ ಆಸಕ್ತರಾಗಿ ಸ್ವರ್ಗಮೋಕ್ಷಗಳಿಗೋಸ್ಕರ ಸರ್ವಕಾಲದಲ್ಲಿಯೂ ಪ್ರವೃತ್ತರಾಗಿರುವರು.

೮೬. ಈ ಒಂಬತ್ತನೆಯ ಭಾರತದ್ವೀಪದ ಅಡ್ಡ ಉದ್ದವನ್ನು ಒಟ್ಟು ಸುತ್ತಳತೆಯಲ್ಲಿ ಅತಿ ವಿಸ್ತಾರವಾದ ಯಾವ ಭಾರತವಿದೆಯೋ ಅವೆಲ್ಲವನ್ನೂ ಯಾವನು ತನ್ನ ಭುಜಶಕ್ತಿಯಿಂದ ಜಯಿಸುವನೋ ಅವನೇ ಸಮ್ರಾಡಾಗುವನು. ಅಂದರೆ ಅವನೇ ಚಕ್ರವರ್ತಿ ಸಾರ್ವಭೌಮನಾಗುವನು.

ಅಯಂ ಲೋಕಸ್ತು ನೃ ಸಮ್ರಾಡಂತರಿಕ್ಷೋ ವಿರಾಟ್ ಸ್ಮೃತಃ ।
ಸ್ವರಾಡನ್ಯಃ ಸ್ಮೃತೋ ಲೋಕಃ ಪುನರ್ವಕ್ಷ್ಯಾಮಿ ವಿಸ್ತರಂ ॥ ೮೭ ॥

ಸಪ್ತ ಚಾಸ್ಮಿನ್ ಸುಪರ್ವಾಣೋ ವಿಶ್ರುತಾಃ ಕುಲಪರ್ವತಾಃ ।
ಮಹೇಂದ್ರೋ ಮಲಯಃ ಸಹ್ಯಃ ಶುಕ್ತಿಮಾನೃಕ್ಷಪರ್ವತಃ ।
ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತೈತೇ ಕುಲಪರ್ವತಾಃ ॥ ೮೮ ॥

ತೇಷಾಂ ಸಹಸ್ರಶಶ್ಚಾನ್ಯೇ ಪರ್ವತಾಸ್ತು ಸಮೀಪಗಾಃ ।
ಅಭಿಜಾತಾಃ ಸರ್ವಗುಣಾ ವಿಪುಲಾಶ್ಚಿತ್ರಸಾನವಃ ॥ ೮೯ ॥

ಮಂದರಃ ಪರ್ವತಶ್ರೇಷ್ಠೋ ವೈಹಾರೋ ದರ್ದುರಸ್ತಥಾ ।
ಕೋಲಾಹಲಃ ಸಸುರಸಃ ಮೈನಾಕೋ ವೈದ್ಯುತಸ್ತಥಾ ॥ ೯೦ ॥

ಪಾತಂಧಮೋ ನಾಮ ಗಿರಿಸ್ತಥಾ ಪಾಂಡುರಪರ್ವತಃ ।
ಗಂತುಪ್ರಸ್ಥಃ ಕೃಷ್ಣಗಿರಿಗೋರ್ಧನೋ ಗಿರಿರೇವಚ ॥ ೯೧ ॥

---

೮೭. ಈ ಲೋಕಗಳನ್ನು ಯಾವನು ಪಾಲಿಸುವನೋ ಅವನೇ ಸಾಮ್ರಾಟಾಗುವನು ಚಕ್ರವರ್ತಿಯಾಗುವನು. ಅಂತರಿಕ್ಷಕ್ಕೆ ಯಾವನು ಯಜಮಾನನೋ ಅವನು ವಿರಾಟ್ ಆಗುವನು. ಅನ್ಯದೇಶಗಳಿಗೆ ಯಾವನು ಯಜಮಾನನಾಗುವನೋ ಅವನೇ ಸ್ವರಾಟ್ ಆಗುವನು. ಈಗ ಅದರ ವಿಸ್ತಾರವನ್ನು ಹೇಳುವೆನು.

೮೮. ಈ ಭರತಖಂಡಕ್ಕೆ ಏಳು ದೇವತೆಗಳಂತೆ ಸಪ್ತಕುಲಪರ್ವತಗಳು ಪ್ರಖ್ಯಾತವಾಗಿವೆ. ಅವು ಮಹೇಂದ್ರ, ಮಲಯ, ಸಹ್ಯ. ಶುಕ್ತಿಮಂತ, ಋಕ್ಷ, ವಿಂಧ್ಯ, ಪಾರಿಯಾತ್ರಕವೆಂಬ ಸಪ್ತಕುಲಪರ್ವತಗಳಾಗಿವೆ

೮೯. ಅವುಗಳಲ್ಲದೆಯೋ ಅವುಗಳ ಸಮೀಪದಲ್ಲಿಯೋ ಸಾವಿರಾರು ಪರ್ವತಗಳಿವೆ. ಅವು ಸುಪ್ರಸಿದ್ಧವಾಗಿಯೂ ಸರ್ವಗುಣಯುಕ್ತವಾಗಿಯೂ ವಿಸ್ತಾರವಾಗಿಯೂ ಸುಂದರವಾದ ಸಾನುಗಳುಳ್ಳದ್ದಾಗಿಯೂ ಇವೆ.

೯೦-೯೩. ಅವು ಯಾವುವೆಂದರೆ ಮಂದರ, ವೈಹಾರ, ದರ್ದುರ, ಕೋಲಾಹಲ, ಸಸುರಸ, ಮೈನಾಕ, ವೈದ್ಯುತ, ಪಾತಂಧಮ, ಪಾಂಡುರ, ಗಂತುಪ್ರಸ್ಥ,

ಪುಷ್ಪಗಿರ್ಯುರ್ಜ್ಜಯಂತೌ ಚ ಶೈಲೋ ರೈವತಕಸ್ತಥಾ ।
ಶ್ರೀಪರ್ವತಶ್ಚ ಕಾರುಶ್ಚ ಕೊಟಶೈಲೋ ಗಿರಿಸ್ತಥಾ ॥ ೯೨ ॥

ಅನ್ಯೇ ತೇಭ್ಯಃ ಪರಿಜ್ಞಾತಾ ಹ್ರಸ್ವಾಃ ಸ್ವಲ್ಪೋಪಜೀವಿನಃ ।
ತೈರ್ವಿಮಿಶ್ರಾ ಜನಪದಾ ಆರ್ಯಾಮ್ಲೇಚ್ಛಾಶ್ಚ ನಿತ್ಯಶಃ ॥ ೯೩ ॥

ಪೀಯಂತೇ ಯೈರಿಮಾ ನದ್ಯೋ ಗಂಗಾ ಸಿಂಧುಃ ಸರಸ್ವತೀ ।
ಶತದ್ರುಶ್ಚಂದ್ರಭಾಗಾ ಚ ಯಮುನಾ ಸರಯೂಸ್ತಥಾ ॥ ೯೪ ॥

ಇರಾವತೀ ವಿತಸ್ತಾ ಚ ವಿಪಾಶಾ ದೇವಿಕಾ ಕುಹೂಃ ।
ಗೋಮತೀ ಧೂತಪಾಪಾ ಚ ಬಾಹುದಾ ಚ ದೃಷದ್ವತೀ ॥ ೯೫ ॥

ಕೌಶಿಕೀ ಚ ತೃತಿಯಾ ತು ನಿಶ್ಚೀರಾ ಗಂಡಕೀ ತಥಾ ।
ಇಕ್ಷುರ್ಲೋಹಿತಾ ಇತ್ಯೇತಾ ಹಿಮವತ್ಪಾದನಿಃಸೃತಾಃ ॥ ೯೬ ॥

ವೇದಸ್ಮೃತಿರ್ವೇದವತೀ ವೃತ್ರಘ್ನೀ ಸಿಂಧುರೇವ ಚ ।
ವರ್ಣಾಶಾ ಚಂದನಾ ಚೈವ ಸತೀರಾ ಮಹತೀ ತಥಾ ॥ ೯೭ ॥

---

ಕೃಷ್ಣಗಿರಿ, ಗೋಧನ, ಪುಷ್ಪಗಿರಿ, ಉಜ್ಜಯಂತ, ರೈವತಕ, ಶ್ರೀಪರ್ವತಕ, ಕಾರು ಕೊಟಶೈಲ ಇವೇ ಮೊದಲಾದ ಅನೇಕ ಶೈಲಗಳಿವೆ. ಅವುಗಳಲ್ಲಿ ನಾನಾಜಾತಿಯ ಜನರು ವಾಸಿಸಿ ಜೀವಿಸುತ್ತಾರೆ. ಆ ಗಿರಿಗಳಿಂದ ಮಿಶ್ರವಾದ ಭಾರತದಲ್ಲಿ ಆರ್ಯರೂ ಮ್ಲೇಂಛರೂ ಸಹ ಬಹುಕಾಲದಿಂದಲೂ ನಿತ್ಯವಾಗಿ ವಾಸಮಾಡುತ್ತಿರುವರು.

೯೪-೯೬. ಭಾರತೀಯರು ಗಂಗಾ, ಸಿಂಧು, ಸರಸ್ವತೀ, ಶತದ್ರು, ಚಂದ್ರ ಭಾಗಾ, ಯಮುನಾ, ಸರಯು, ಇರಾವತೀ, ವಿತಸ್ತಾ, ವಿಪಾಶಾ, ದೇವಿಕಾ, ಕುಹು, ಗೋಮತೀ, ಧೂತಪಾಪಾ, ಬಾಹುದಾ, ದೃಷದ್ವತೀ, ಕೌಶಿಕೀ, ನಿಶ್ಚಿರಾ, ಗಂಡಕೀ, ಇಕ್ಷು, ಲೋಹಿತಾ ಇವೇ ಮೊದಲಾಧ ಹಿಮಾಲಯದಲ್ಲಿ ಜನಿಸಿದ ನದಿಗಳಲ್ಲಿ ಸ್ನಾನ ಪಾನಾದಿಗಳನ್ನು ಮಾಡಿ ಪರಿಶುದ್ಧರಾಗಿರುವರು.

೯೭-೧೦೦. ಮತ್ತು ವೇದಸ್ಮೃತಿ, ವೇದವತೀ, ವೃತ್ರಘ್ನೀ, ಸಿಂಧು, ವರ್ಣಾಶಾ, ಚಂದನಾ, ಸತೀರಾ, ಮಹತೀ, ಚರ್ಮಣ್ವತೀ, ವಿದಿಶಾ, ವೇತ್ರವತೀ,

ಪರಾ ಚರ್ಮಣ್ವತೀ ಚೈವ ವಿದಿಶಾ ವೇತ್ರವತ್ಯಪಿ ।
ಶಿಪ್ರಾ ಹ್ಯವಂತೀ ಚ ತಥಾ ಪಾರಿಯಾತ್ರಾಶ್ರಯಾಃ ಸ್ಮೃತಾಃ ॥ ೯೮ ॥

ಶೋಣೋ ಮಹಾನದಶ್ಚೈವ ನರ್ಮದಾ ಸುಮಹಾದ್ರುಮಾ ।
ಮಂದಾಕಿನೀ ದಶಾರ್ಣಾ ಚ ಚಿತ್ರಕೂಟಾ ತಥೈವ ಚ ॥ ೯೯ ॥

ತಮಸಾ ಪಿಪ್ಪಲಾ ಶ್ರೋಣೀ ಕರತೋಯಾ ಪಿಶಾಚಿಕಾ ।
ನೀಲೋತ್ಪಲಾ ವಿಪಾಶಾ ಚ ಜಂಬುಲಾ ವಾಲುವಾಹಿನೀ ॥ ೧೦೦ ॥

ಸಿತೇರಜಾ ಶುಕ್ತಿಮತೀ ಮಕ್ರುಣಾ ತ್ರಿದಿವಾ ಕ್ರಮಾತ್ ।
ಋಕ್ಷಪಾದಾತ್ ಪ್ರಸೂತಾಸ್ತಾ ನದ್ಯೋ ಮಣಿನಿಭೋದಕಾಃ ॥ ೧೦೧ ॥

ತಾಪೀ ಪಯೋಷ್ಣೀ ನಿರ್ವಿಂಧ್ಯಾ ಮಂದ್ರಾ ಚ ನಿಷಧಾ ನದೀ ।
ವೇಣ್ವಾವೈತರಣೀ ಚೈವ ಶಿತಿಬಾಹುಃ ಕುಮುದ್ವತೀ ॥ ೧೦೨ ॥

ತೋಯಾ ಚೈವ ಮಹಾಗೌರೀ ದುರ್ಗಾ ಚಾಂತಶಿಲಾ ತಥಾ ।
ವಿಂಧ್ಯಪಾದಪ್ರಸೂತಾಶ್ಚ ನದ್ಯಃ ಪುಣ್ಯಜಲಾಃ ಶುಭಾಃ ॥ ೧೦೩ ॥

---

ಶಿಪ್ರಾ, ಅವಂತೀ ಪಾರಿಯಾತ್ರಾ ಶೋಣ, ನರ್ಮದಾ, ಸುಮಹಾದ್ರುಮಾ, ಮಂದಾಕಿನೀ, ದಶಾರ್ಣಾ, ಚಿತ್ರಕೂಟಾ, ತಮಸಾ, ಪಿಪ್ಪಲಾ, ಶ್ರೋಣೀ, ಕರತೋಯಾ, ಪಿಶಾಚಿಕಾ, ನೀಲೋತ್ಪಲಾ, ವಿಪಾಶಾ, ಜಂಬಾಲಾ, ವಾಲುವಾಹಿನೀ, ಇವೇ ಮೊದಲಾದ ದಿವ್ಯನದಿಗಳು ಭರತವರ್ಷದಲ್ಲಿ ಹರಿದು ಜನರನ್ನು ಪವಿತ್ರರನ್ನಾಗಿ ಮಾಡುವುದು.

೧೦೧. ಮತ್ತು ಸಿತೇರಜಾ ಶುಕ್ತಿಮತೀ, ಮಕ್ರುಣಾ, ತ್ರಿದಿವಾ ಈ ನದಿಗಳ ಋಕ್ಷಪಾದವೆಂಬ ಗಿರಿಯಿಂದ ಹುಟ್ಟಿ ಭರತಖಂಡದಲ್ಲಿ ಹರಿಯುವುವು. ಈ ನದಿಗಳು ಜಲವು ಸ್ಫಟಿಕಮಣಿಯಂತೆ ಅತಿ ಸ್ವಚ್ಛವಾಗಿರುವುದು

೧೦೨-೧೦೩. ತಾಪೀ, ಪಯೋಷ್ಣೀ, ನಿರ್ವಿಂಧ್ಯಾ, ಮಂದ್ರಾ, ನಿಷಧಾ, ವೇಣ್ವಾ, ವೈತರಣೀ, ಶಿತಿಬಾಹು, ಕುಮುದ್ವತೀ, ತೋಯಾ, ಮಹಾಗೌರೀ, ದುರ್ಗಾ ಅಂತಶಿಲಾ, ಈ ದಿವ್ಯನದಿಗಳು ವಿಂಧ್ಯಗಿರಿಯಲ್ಲಿ ಹುಟ್ಟಿ ಭಾರತಭೂಮಿಯನ್ನು ಪವಿತ್ರವನ್ನಾಗಿ ಮಾಡುತ್ತವೆ.

ಗೋದಾವರೀ ಭೀಮರಥೀ ಕೃಷ್ಣಾ ವೈಣ್ಯಥ ವಂಜುಲಾ ।
ತುಂಗಾಭದ್ರಾ ಸುಪ್ರಯೋಗಾ ಕಾವೇರೀ ಚ ತಥಾಪಗಾ ।
ದಕ್ಷಿಣಾಪಥನದ್ಯಸ್ತು ಸಹ್ಯಪಾದಾದ್ವಿನಿಃಸೃತಾಃ ॥ ೧೦೪ ॥

ಕೃತಮಾಲಾ ತಾಮ್ರವರ್ಣಾ ಪುಷ್ಪಜಾತ್ಯುತ್ಪಲಾವತೀ ।
ಮಲಯಾಭಿಜಾತಾಸ್ತಾ ನದ್ಯಃ ಸರ್ವಾಃ ಶೀತಜಲಾಃ ಶುಭಾಃ ॥ ೧೦೫ ॥

ತ್ರಿಸಾಮಾ ಋತುಕುಲ್ಯಾ ಚ ಇಕ್ಷುಲಾ ತ್ರಿದಿವಾ ಚ ಯಾ ।
ಲಾಂಗುಲಿನೀ ವಂಶಧರಾ ಮಹೇಂದ್ರತನಯಾಃ ಸ್ಮೃತಾಃ ॥ ೧೦೬ ॥

ಋಷೀಕಾ ಸುಕುಮಾರೀ ಚ ಮಂದಗಾ ಮಂದವಾಹಿನೀ ।
ಕೂಪಾ ಪಲಾಶಿನೀ ಚೈವ ಶುಕ್ತಿಮತ್ಪ್ರಭವಾಃ ಸ್ಮೃತಾಃ ॥ ೧೦೭ ॥

ಸರ್ವಾಃ ಪುಣ್ಯಾಃ ಸರಸ್ವತ್ಯಃ ಸರ್ವಾ ಗಂಗಾಃ ಸಮುದ್ರಗಾಃ ।
ವಿಶ್ವಸ್ಯ ಮಾತರಃ ಸರ್ವಾ ಜಗತ್ಪಾಪಹರಾಃ ಸ್ಮೃತಾಃ ॥ ೧೦೮ ॥

---

೧೦೪. ಗೋದಾವರೀ, ಭೀಮರಥೀ, ಕೃಷ್ಣಾ, ವೇಣೀ ವಂಜುಲಾ, ತುಂಗ, ಭದ್ರಾ, ಸುಪ್ರಯೋಗಾ, ಕಾವೇರೀ ಇವೇ ಮೊದಲಾದ ನದಿಗಳು ಸಹ್ಯಾದ್ರಿಯಲ್ಲಿ ದಕ್ಷಿಣಭಾರತದಲ್ಲಿ ಹರಿದು ಭುಕ್ತಿ ಮುಕ್ತಿಪ್ರದಗಳಾಗಿವೆ.

೧೦೫. ಕೃತಮಾಲಾ, ತಾಮ್ರವರ್ಣಾ, ಪುಷ್ಪಜಾತೀ, ಉತ್ಪಲಾವತೀ ಮೊದಲಾದ ಮಹಾನದಿಗಳು ಶೀತಲೋದಕಗಳಾಗಿಯೂ ಮಂಗಳಕರಗಳಾಗಿಯೂ ಇರುತ್ತವೆ. ಇವು ಮಲಯಗಿರಿಯಲ್ಲಿ ಹುಟ್ಟಿ ಭಾರತಭೂಮಿಯಲ್ಲಿ ಸಂಚರಿಸ ತ್ತವೆ.

೧೦೬. ತ್ರಿಸಾಮಾ, ಋತುಕುಲ್ಯಾ, ಇಕ್ಷುಲಾ, ತಿದಿವಾ, ಲಾಂಗುಲಿನೀ, ವಂಶಧರಾ ಇವೇ ಮೊದಲಾದ ನದಿಗಳು ಮಹೇಂದ್ರಪರ್ವತದಿಂದ ಹುಟ್ಟಿ ಹರಿಯುತ್ತವೆ

೧೦೭. ಋಷೀಕಾ, ಸುಕುಮಾರೀ, ಮಂದಗಾ, ಮಂದವಾಹಿನೀ, ಕೂಪಾ, ಪಲಾಶಿನೀ ಈ ದಿವ್ಯನದಿಗಳು ಶುಕ್ತಿಮಂತ ಪರ್ವತದಲ್ಲಿ ಹುಟ್ಟಿ ಭಾರತದಲ್ಲಿ ಸಂಚರಿಸುತ್ತವೆ.

೧೦೮. ಈ ಸಮಸ್ತವಾದ ದಿವ್ಯನದಿಗಳು ಅತಿಪವಿತ್ರವಾಗಿಯೂ ಗಂಗೆಯಂತೆ ಸಮುದ್ರಗಾಮಿಗಳಾಗಿಯೂ, ಲೋಕಮಾತೃಗಳಾಗಿಯೂ, ಲೋಕಪಾವನಗಳಾಗಿಯೂ, ಭುಕ್ತಿ ಮುಕ್ತಿದಾಯಕಗಳಾಗಿಯೂ ಇವೆ.

ತಾಸಾಂ ನದ್ಯುಪನದ್ಯೋಽಪಿ ಶತಶೋಽಥ ಸಹಸ್ರಶಃ ।
ತಾಸ್ವಿಮೇ ಕುರುಪಾಂಚಾಲಾಃ ಶಾಲ್ವಾಶ್ಚೈವ ಸಜಾಂಗಲಾಃ ॥ ೧೦೯ ॥

ಶೂರಸೇನಾ ಭದ್ರಕಾರಾ ಭೋಧಾಃ ಶತಪಥೇಶ್ವರೈಃ ।
ವತ್ಸಾಃ ಕಿಸಷ್ಣಾಃ ಕುಲ್ಯಾಶ್ಚ ಕುಂತಲಾಃ ಕಾಶಿಕೋಶಲಾಃ ॥ ೧೧೦ ॥

ಅಥ ಪಾರ್ಶ್ವೇ ತಿಲಂಗಾಶ್ಚ ಮಗಧಾಶ್ಚ ವೃಕೈಸಹ ।
ಮಧ್ಯದೇಶಾ ಜನಪದಾಃ ಪ್ರಾಯಶೋಽಮೀ ಪ್ರಕೀರ್ತಿತಾಃ ॥ ೧೧೧ ॥

ಸಹ್ಯಸ್ಯ ಚೋತ್ತರಾರ್ಧೇ ತು ಯತ್ರ ಗೋದಾವರೀ ನದೀ ।
ಪೃಥಿವ್ಯಾಮಿಹ ಕೃತ್ಸ್ನಾಯಾಂ ಸ ಪ್ರದೇಶಾ ಮನೋರಮಾಃ ॥ ೧೧೨ ॥

ತತ್ರ ಗೋವರ್ಧನೋ ನಾಮ ಸುರರಾಜೇನ ನಿರ್ಮಿತಃ ।
ರಾಮಪ್ರಿಯಾರ್ಥಂ ಸ್ವರ್ಗೋಽಯಂ ವೃಕ್ಷಾ ಓಷಧಯಸ್ತಥಾ ॥ ೧೧೩ ॥

---

೧೦೯-೧೧೧. ಈ ನದಿಗಳಿಂದ ಜನ್ಯವಾದ ಉಪನದಿಗಳು ಸಹಸ್ರಸಂಖ್ಯಾಕಗಳಾಗಿ ಪ್ರಸಿದ್ಧವಾಗಿವೆ. ಈ ಭರತ ಖಂಡದಲ್ಲಿ ಕುರು, ಪಾಂಚಾಲಾ, ಶಾಲ್ವಾ, ಜಾಂಗಲಾ, ಶೂರಸೇನಾ, ಭದ್ರಕಾರಾ, ಬೋಧಾ, ಶಪಥೇಶ್ವರ, ವತ್ಸ, ಕಿಸಷ್ಣಾ, ಕುಲ್ಯಾ, ಕುಂತಲಾ, ಕಾಶಿಕಾ, ಉಶಲಾ ಎಂಬ ದೇಶಗಳಿವೆ. ಇವುಗಳ ಪಕ್ಕದಲ್ಲಿ ಕಲಿಂಗ, ಮಗಧ, ವೃಕ ದೇಶಗಳು ಪ್ರಾಯಃಕವಾಗಿ ಭರತಖಂಡದಲ್ಲಿ ಮಧ್ಯದೇಶಗಳಾಗಿವೆಯೆಂದು ಲೋಕವಿಖ್ಯಾತವಾಗಿವೆ.

೧೧೨. ಸಹ್ಯಾದ್ರಿಯ ಉತ್ತರಭಾಗದಲ್ಲಿ ಯಾವ ಪ್ರದೇಶದಲ್ಲಿ ಗೋದಾವರೀ ನದಿಯು ಹರಿಯುತ್ತಿರುವುದೋ ಆ ಸ್ಥಳವು ಪೃಥಿವಿಯಲ್ಲಿರುವ ಪ್ರದೇಶಗಳೆಲ್ಲಕ್ಕಿಂತಲೂ ಮನೋಹರವೂ ಉತ್ತಮವೂ ಆಗಿದೆ.

೧೧೩. ಆ ಭಾಗದಲ್ಲಿ ದೇವತೆಗಳಿಗೆ ಒಡೆಯನಾದ ಇಂದ್ರನು ಗೋವರ್ಧನ ಗಿರಿಯನ್ನು ನಿರ್ಮಿಸಿರುವನು. ಶ್ರೀರಾಮನಿಗೆ ಪ್ರಿಯವನ್ನು ಮಾಡಲೋಸ್ಕರ ಸ್ವರ್ಗಲೋಕವನ್ನೇ ಸೃಷ್ಟಿಸಿರುವನು. ಸ್ವರ್ಗಲೋಕದ ವೃಕ್ಷಗಳೂ ಲತೆಗಳೂ ಸಹ ಅದರಲ್ಲಿ ಹೊಳೆಯುತ್ತಿವೆ.

ಭರದ್ವಾಜೇನ ಮುನಿನಾ ತತ್ಪ್ರಿಯಾರ್ಥೇsವಶೀರಿತಾಃ ।
ಅಂತಃಪುರವನೋದ್ದೇಶಸ್ತೇನ ಜಜ್ಞೇ ಮನೋರಮಾಃ ॥ ೧೧೪ ॥

ಬಾಹ್ಲೀಕಾ ಬಾಢಧನಾಶ್ಚ ಆಭೀರಾಃ ಕಾಲತೋಯಕಾಃ ।
ಅಪರೀತಾಶ್ಚ ಶೂದ್ರಾಶ್ಚ ಪಹ್ನವಾಶ್ಚರ್ಮಖಂಡಿಕಾಃ ॥ ೧೧೫ ॥

ಗಾಂಧಾರಾ ಯವನಾಶ್ಚೈವ ಸಿಂಧುಸೌವೀರಭದ್ರಕಾಃ ।
ಶಕಾ ಹ್ರದಾಃ ಕುಲಿಂದಾಶ್ಚ ಪರಿತಾ ಹಾರಪೂರಿಕಾಃ ॥ ೧೧೬ ॥

ರಮಟಾ ರದ್ಧಕಟಕಾಃ ಕೇಕಯಾ ದಶಮಾನಿಕಾಃ ।
ಕ್ಷತ್ರಿಯೋಪನಿವೇಶಾಶ್ಚ ವೈಶ್ಯಶೂದ್ರಾಕುಲಾನಿ ಚ ॥ ೧೧೭ ॥

ಕಾಂಭೋಜಾ ದರದಾಶ್ಚೈವ ಬರ್ಬರಾಃ ಪ್ರಿಯಲೌಕಿಕಾಃ ।
ಪೀನಾಶ್ಚೈವ ತುಷಾರಾಶ್ಚ ಪಹ್ಲವಾ ಬಾಹ್ಯತೋದರಾಃ ॥ ೧೧೮ ॥

ಆತ್ರೇಯಾಶ್ಚ ಭರದ್ವಾಜಾಃ ಪ್ರಸ್ಥಲಾಶ್ಚ ಕಸೇರುಕಾಃ ।
ಲಂಪಾಕಾ ಸ್ತನಪಾಶ್ಚೈವ ಪೀಡಿಕಾ ಜುಹುಡೈಃ ಸಹ ॥ ೧೧೯ ॥

---

೧೧೪. ಭರದ್ವಾಜಮುನಿಗಳೂ ಕೂಡ ಶ್ರೀರಾಮಚಂದ್ರನಿಗೆ ಪ್ರಿಯವನ್ನು ಮಾಡುವುದಕ್ಕಾಗಿ ಅಂತಃಪುರಕ್ಕೆ ಸಮಾನವೂ ಅತಿ ಮನೋಹರವೂ ಆದ ದಿವ್ಯವನ ಪ್ರದೇಶಗಳನ್ನು ಸೃಷ್ಟಿಸಿರುವರು.

೧೧೫-೧೨೧. ಬಾಹ್ಲೀಕ, ಬಾಢಧಾನ, ಆಭೀರ, ಕಾಲತೋಯಕ, ಅಪರೀತ, ಶೂದ್ರ, ಪಹ್ನಾವ, ಚರ್ಮಖಂಡಿಕ, ಗಾಂಧಾರ, ಯವನ, ಸಿಂಧು ಸೌವೀರ, ಭದ್ರಕ, ಶಕ, ಹ್ರದ, ಕುಲಿಂದ, ಪರಿತಾ, ಹಾರಪೂರಿಕ, ರಮಟ, ರದ್ಧಕಟಕ, ಕೇಕಯ, ದಶಮಾನಿಕ, ಕ್ಷತ್ರಿಯ, ವೈಶ್ಯ, ಶೂದ್ರರಿರುವ ಕಾಂಭೋಜ, ದರದ, ಬರ್ಬರ, ಪ್ರಿಯ ಲೌಕಿಕ, ಪೀನ, ತುಷಾರ, ಪಹ್ಲವ, ಬಾಹ್ಯತೋದರ, ಆತ್ರೇಯ, ಭರದ್ವಾಜ, ಪ್ರಸ್ಥಲ ಕಸೇರುಕ, ಲಂಪಾಕ, ಸ್ತನಪ, ಪೀಡಿಕ, ಜುಹುಡ, ಅಪಗ, ಅಲಿಮಂದ್ರ, ತೋಮರ,

ಅಪಗಾಶ್ಚಾಲಿಮದ್ರಾಶ್ಚ ಕಿರಾತಾನಾಂಚ ಜಾತಯಃ ।
ತೋಮರಾ ಹಂಸಮಾರ್ಗಾಶ್ಚ ಕಾಶ್ಮೀರಾಸ್ತಂಗಣಾಸ್ತಥಾ ॥ ೧೨೦ ॥

ಚೂಲಿಕಾಶ್ಚಾಹುಕಾಶ್ಚೈವ ಪೂರ್ಣದರ್ವಾಸ್ತಥೈವ ಚ ।
ಏತೇ ದೇಶಾ ಹ್ಯುದೀಚ್ಯಾಶ್ಚ ಪ್ರಾಚ್ಯಾನ್ ದೇಶಾನ್ನಿಬೋಧತ ॥ ೧೨೧ ॥

ಅಂಧ್ರವಾಕಾಃ ಸುಜರಕಾ ಅಂತರ್ಗಿರಿಬಹಿರ್ಗಿರಾಃ ।
ತಥಾ ಪ್ರವಂಗವಂಗೇಯಾ ಮಾಲದಾ ಮಾಲವರ್ತಿನಃ ॥ ೧೨೨ ॥

ಬ್ರಹ್ಮೋತ್ತರಾಃ ಪ್ರವಿಜಯಾ ಭಾರ್ಗವಾಗೇಯಮರ್ಥಕಾಃ ।
ಪ್ರಾಗ್ಜ್ಯೋತಿಷಾಶ್ಚ ಮುಂಡಾಶ್ಚ ವಿದೇಹಾಸ್ತಾಮಲಿಪ್ತಕಾಃ ।
ಮಾಲಾ ಮಗಧಗೋವಿಂದಾಃ ಪ್ರಾಚ್ಯಾಂ ಜನಪದಾಃ ಸ್ಮೃತಾಃ ॥ ೧೨೩ ॥

ಅಥಾಪರೇ ಜನಪದಾಃ ದಕ್ಷಿಣಾಪಥವಾಸಿನಃ ।
ಪಾಂಡ್ಯಾಶ್ಚ ಕೇರಲಾಶ್ಚೈವ ಚೌಲ್ಯಾಃ ಕುಲ್ಯಾಸ್ತಥೈವ ಚ ॥ ೧೨೪ ॥

ಸೇತುಕಾ ಮೂಷಿಕಾಶ್ಚೈವ ಕುಮನಾ ವನವಾಸಿಕಾಃ ।
ಮಹಾರಾಷ್ಟ್ರಾ ಮಾಹಿಷಕಾಃ ಕಲಿಂಗಾಶ್ಚೈವ ಸರ್ವಶಃ ॥ ೧೨೫ ॥

---

ಹಂಸಮಾರ್ಗ, ಕಾಶ್ಮೀರ, ತಂಗಣ, ಚೂಲಿಕ, ಆಹುಕ, ಪೂರ್ಣದರ್ವ ಇವೇ ಮೊದಲಾದ ದೇಶಗಳು ಉತ್ತರದಲ್ಲಿವೆ. ಈಗ ಪೂರ್ವದಿಗ್ಭಾದಲ್ಲಿರುವ ದೇಶಗಳನ್ನು ಹೇಳುವೆನು ಕೇಳಿರೆಂದು ಸೂತಮುನಿಯು ಹೇಳಿದನು.

೧೨೨-೧೨೩. ಅಂಧ್ರವಾಕ, ಸುಜರಕ, ಅಂತರ್ಗಿರಿ, ಬಹಿರ್ಗಿರಿ, ಪ್ರವಂಗ, ವಂಗ, ಮಾಲದ, ಮಾಲವರ್ತಿ, ಬ್ರಹ್ಮೋತ್ತರ, ಪ್ರವಿಜಯ, ಭಾರ್ಗವ, ಗೇಯಮರ್ಥಕ, ಪ್ರಾಗ್ಜ್ಯೋತಿಷ, ಮುಂಡ, ವಿದೇಹ, ತಾಮಲಿಪ್ತಕ, ಮಾಲ, ಮಗಧ, ಗೋವಿಂದ, ಈ ದೇಶಗಳು ಪೂರ್ವದಿಕ್ಕುಗಳಲ್ಲಿರುವುವು.

೧೨೪-೧೨೭. ಇತರ ದೇಶಗಳೆಲ್ಲವೂ ದಕ್ಷಿಣದಲ್ಲಿರುವ ದೇಶಗಳಾಗಿವೆ. ಪಾಂಡ್ಯ, ಕೇರಲ, ಚೌಲ್ಯ, ಕುಲ್ಯಾ, ಸೇತುಕ, ಮೂಷಿಕ, ಕುಮನ, ವನವಾಸಕ, ಮಹಾರಾಷ್ಟ್ರ,

ಅಭೀರಾಃ ಸಹಚೈಷೀಕಾಃ ಆಟವ್ಯಾಶ್ಚ ವರಾಶ್ಚಯೇ ।
ಪುಲಿಂದಾ ವಿಂಧ್ಯಮೂಲಿಕಾ ವೈದರ್ಭಾ ದಂಡಕೈಃ ಸಹ ॥ ೧೨೬ ॥

ಪೌನಿಕಾ ಮೌನಿಕಾಶ್ಚೈವ ಅಸ್ಮಕಾ ಭೋಗವರ್ಧನಾಃ ।
ನೈರ್ಣಿಕಾಃ ಕುಂತಲಾ ಆಂಧ್ರಾ ಉದ್ಭಿದಾ ನಲಕಾಲಿಕಾಃ ॥ ೧೨೭ ॥

ದಾಕ್ಷಿಣಾತ್ಯಾಶ್ಚ ವೈ ದೇಶಾ ಅಪರಾಂಸ್ತಾನ್ನಿಬೋಧತ ।
ಶೂರ್ಪಾರಕಾರಾಃ ಕೋಲವನಾ ದುರ್ಗಾಃ ಕಾಲೀತಕೈಃ ಸಹ ॥ ೧೨೮ ॥

ಪುಲೇಯಾಶ್ಚ ಸುರಾಲಾಶ್ಚ ರೂಪಸಾಸ್ತಾಪಸೈಃ ಸಹ ।
ತಥಾ ತುರಸಿತಾಶ್ಚೈವ ಸರ್ವೇ ಚೈವ ಪರಕ್ಷರಾಃ ॥ ೧೨೯ ॥

ನಾಸಿಕಾದ್ಯಾಶ್ಚ ಯೇ ಚಾನ್ಯೇ ಯೇ ಚೈವಾಂತರನರ್ಮದಾಃ ।
ಭಾನುಕಚ್ಛಾಃ ಸಮಾ ಹೇಯಾಃ ಸಹಸಾ ಶಾಶ್ವತೈರಪಿ ॥ ೧೩೦ ॥

ಕಚ್ಛೀಯಾಶ್ಚ ಸುರಾಷ್ಟ್ರಾಶ್ಚ ಅನರ್ತಾಶ್ಚಾರ್ಬುದೈಃ ಸಹ ।
ಇತ್ಯೇತೇ ಸಂಪರೀತಾಶ್ಚ ಶೃಣುಧ್ವಂ ವಿಂಧ್ಯವಾಸಿನಃ ॥ ೧೩೧ ॥

---

ಮಾಹಿಷಕ, ಕಲಿಂಗ, ಅಭೀರ, ಚೈಷೀಕ, ಆಟವ್ಯ, ವರ, ಪುಲಿಂದ, ವಿಂಧ್ಯಮೂಲಿಕ, ವೈದರ್ಭ, ದಂಡಕ, ಪೌನಿಕ, ಮೌನಿಕ, ಅಸ್ಮಾಕ, ಭೋಗವರ್ಧನ, ನೈರ್ಣಿಕ, ಕುಂತಲ, ಆಂಧ್ರ, ಉದ್ಭಿದ, ನಲಕಾಲಿಕ ಇವೇ ಮೊದಲಾದ ದೇಶಗಳು ದಕ್ಷಿಣ ದಿಗ್ಭಾಗದಲ್ಲಿವೆ.

೧೨೮-೧೩೧. ಇತರ ದೇಶಗಳನ್ನು ಈಗ ತಿಳಿಸುವೆನು ಕೇಳಿರಿ:—ಶೂರ್ಪಾರಕಾರ, ಕೋಲವನ, ದುರ್ಗಕಾಲೀಶಕ, ಪುಟೇಯ, ಸುರಾಲ, ರೂಪಸ, ತಾಪಸ, ತಾರಸಿತ, ಪರಕ್ಷರ, ಈ ದೇಶಗಳು ನಾಸಿಕಾದಿಯಾಗಿ ನರ್ಮದೆಯವರೆಗೂ ಇರುವ ದೇಶಗಳಾಗಿವೆ. ಭಾನುಕಚ್ಛ, ಹೇಯ, ಶಾಶ್ವತ, ಕಚ್ಛೀಯ. ಸುರಾಷ್ಟ್ರ, ಆಗುರ್ತ, ಆರ್ಬುದ ಈ ದೇಶಗಳು ಸುತ್ತಲೂ ಇರುವ ದೇಶಗಳಾಗಿವೆ.

ಮಾಲವಾಶ್ಚ ಕರೂಷಾಶ್ಚ ಮೇಕಲಾಶ್ಚೋತ್ಕಲೈಃ ಸಹ ।
ಉತ್ತಮರ್ಣಾ ದಶಾರ್ಣಾಶ್ಚ ಭೋಜಾಃ ಕಿಷ್ಕಿಂಧಕೈಃ ಸಹ ॥ ೧೩೨ ॥

ತೋಸಲಾಃ ಕೋಸಲಾಶ್ಚೈವ ತ್ರೈಪುರಾ ವೈದಿಕಸ್ತಥಾ ।
ತುಮುರಾಸ್ತುಂಬರಾಶ್ಚೈವ ಷಟ್ಸುರಾ ನಿಷಧೈ ಸಹ ॥ ೧೩೩ ॥

ಅನುಪಾಸ್ತುಂಡಿಕೇರಾಶ್ಚ ವೀತಿಹೋತ್ರಾ ಹ್ಯವಂತಯಃ ।
ಏತೇ ಜನಪದಾಃ ಸರ್ವೇ ವಿಂಧ್ಯಪೃಷ್ಠನಿವಾಸಿನಃ ॥ ೧೩೪ ॥

ಅತೋ ದೇಶಾನ್ ಪ್ರವಕ್ಷ್ಯಾಮಿ ಪರ್ವತಾಶ್ರಯಿಣಶ್ಚ ಯೇ ।
ನಿಗರ್ಹರಾ ಹಂಸಮಾರ್ಗಾಃ ಕ್ಷುಪಣಾಸ್ತಂಗಣಾಃ ಖಸಾಃ ॥ ೧೩೫ ॥

ಕುಶಪ್ರಾವರಾಶ್ಚೈವ ಹೂಣಾ ದರ್ವಾಃ ಸಹೂದಕಾಃ ।
ತ್ರಿಗರ್ತಾ ಮಾಲವಾಶ್ಚೈವ ಕಿರಾತಾಸ್ತಾಮಸೈಃ ಸಹ ॥ ೧೩೬ ॥

---

೧೩೨-೧೩೪. ಈಗ ವಿಂಧ್ಯಪರ್ವತದಲ್ಲಿ ಇರುವ ದೇಶಗಳನ್ನು ತಿಳಿಸುವೆನು ಕೇಳಿರಿ:—ಮಾಲವ, ಕರೂಷ, ಮೇಕಲ, ಉತ್ಕಲ, ಉತ್ತಮರ್ಣ, ದಶಾರ್ಣ, ಭೋಜ, ಕಿಷ್ಕಿಂಧ, ತೋಸಲ, ಕೋಸಲ, ತ್ರೈಪುರ, ವೈದಿಕ. ತುಮುರ, ತುಂಬುರ, ಷಟ್ಸುರ, ನಿಷಧ, ಅನೂಪ, ತುಂಡಿಕೇರ, ವೀತಿಹೊತ್ರ, ಅವಂತಿ ಈ ದೇಶಗಳು ವಿಂಧ್ಯಗಿರಿಯ ಸಮೀಪದಲ್ಲಿ ಪ್ರಖ್ಯಾತವಾಗಿವೆ.

೧೩೫-೧೩೬. ಈಗ ಪರ್ವತದ ತಪ್ಪಲಲ್ಲಿರುವ ದೇಶಗಳನ್ನು ನಿಗರ್ಹರ, ಹಂಸಮಾರ್ಗ, ಕ್ಷುಪಣ, ತಂಗಣ, ಖಸ, ಕುಶಪ್ರಾವರಣ, ಹೂಣ, ದರ್ವ, ಸಹೂದಕ, ತ್ರಿಗರ್ತ, ಮಾಲವ, ಕಿರಾತ, ತಾಮಸ ಈ ದೇಶಗಳು ಪರ್ವತದ ಸಮೀಪ ದಲ್ಲಿ ಪ್ರಸಿದ್ಧವಾಗಿವೆ.

**ಚತ್ವಾರಿ ಭಾರತೇ ವರ್ಷೇ ಯುಗಾನಿ ಕವಯೋ ವಿದುಃ ।**
**ಕೃತಂ ತ್ರೇತಾದ್ವಾಪರಂಚ ಕಲಿಶ್ಚೇತಿ ಚತುಷ್ಟಯಂ ।**
**ತೇಷಾಂ ನಿಸರ್ಗಂ ವಕ್ಷ್ಯಾಮಿ ಉಪರಿಷ್ಟಾನ್ನಿಬೋಧತ ॥ ೧೩೭ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ಭುವನವಿನ್ಯಾಸೋ ನಾಮ ಪಂಚಚತ್ವಾರಿಂಶೋಽಧ್ಯಾಯಃ**

---

೧೩೭. ಭಾರತವರ್ಷದಲ್ಲಿ ಕೃತ, ತ್ರೇತ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳಿವೆಯೆಂದು ಕವಿಗಳು ಹೇಳುವರು. ಈ ನಾಲ್ಕು ಯುಗಗಳ ಲಕ್ಷಣವನ್ನು ಕ್ರಮವಾಗಿ ನಿರೂಪಿಸುವೆನು ಕೇಳಿರೆಂದು ಸೂತಪುರಾಣೀಕರು ಮಹರ್ಷಿಗಳಿಗೆ ಹೇಳಿದರು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಭಾರತವರ್ಷಕಥನ "ವೆಂಬ ನಲವತ್ತೈದನೆಯ ಅಧ್ಯಾಯವು ಮುಗಿದುದು.

# ನಲವತ್ತೈದನೆಯ ಅಧ್ಯಾಯದ ಸಾರಾಂಶವು

ಶ್ವೇತಗಿರಿಯ ದಕ್ಷಿಣದಲ್ಲಿ ರಮಣಕವೆಂಬ ವರ್ಷವಿರುತ್ತದೆ. ಅಲ್ಲಿನ ಜನಗಳು ಆಲದಹಣ್ಣಿನ ರಸವನ್ನು ಪಾನಮಾಡಿ ಆರೋಗ್ಯದೃಢಕಾಯರೂ ಚಿರಜೀವಿಗಳೂ ಆಗಿರುವರು. ಅದರ ಉತ್ತರದಲ್ಲಿರುವ ಹಿರಣ್ಯಕವರ್ಷದಲ್ಲಿ ಹೈರಣ್ಯವತೀನದಿಯು ಹರಿಯುವುದು. ಆ ಗಿರಿಗೆ ಮೂರು ಶಿಖರಗಳಿವೆ. ಒಂದು ಸುವರ್ಣಮಯವೂ ಮತ್ತೊಂದು ಮಣಿಮಯವೂ ಇನ್ನೊಂದು ನವರತ್ನಮಯವೂ ಆಗಿವೆ. ಉತ್ತರಸಮುದ್ರದ ದಕ್ಷಿಣಭಾಗದಲ್ಲಿ ಕುರುದೇಶವಿರುತ್ತದೆ. ಅಲ್ಲಿ ವೃಕ್ಷಗಳು ಕಲ್ಪವೃಕ್ಷಗಳಂತೆ ಪುಷ್ಪ ಫಲಗಂಧಮಾಲ್ಯವಸ್ತ್ರಾಭರಣಾದಿ ಸಕಲಾಭೀಷ್ಟಗಳನ್ನೂ ಕೊಡುತ್ತವೆ. ಅಲ್ಲಿಯ ಜನರು ದೇವತೆಗಳಂತೆ ಜರಾಮರಣರಹಿತರಾಗಿರುವರು. ಮಹಾನದಿಗಳೂ ಕ್ರೀಡಾ ಪರ್ವತಗಳೂ ವಿಹಾರಗೃಹಗಳೂ ಉಪವನಗಳೂ ವಿಶೇಷವಾಗಿವೆ. ಅದರಲ್ಲಿ ಚಂದ್ರ ದ್ವೀಪವೂ ಚಂದ್ರಗಿರಿಯೂ ವಿಶೇಷವಾಗಿ ಹೊಳೆಯುತ್ತಿರುವುವು. ಅದರ ಸಮೀಪ ದಲ್ಲಿ ಭದ್ರಾಕರದ್ವೀಪವು ಹೊಳೆಯುವುದು. ಅಲ್ಲಿಯ ಜನರು ಸುಖಿಯಾಗಿರುವರು. ಅದರ ಪಕ್ಕದಲ್ಲಿ ಭಾರತವರ್ಷವಿರುವುದು. ಹಿಮಾಲಯದಿಂದ ಕನ್ಯಾಕುಮಾರಿಯ ವರೆಗೂ ಪೂರ್ವಪಶ್ಚಿಮಸಮುದ್ರಗಳ ಮಧ್ಯದಲ್ಲಿಯೂ ಇರುವ ದೇಶವೇ ಭಾರತವರ್ಷ ವಾಗಿದೆ. ಇಂದ್ರದ್ವೀಪ, ಕಸೇರುದ್ವೀಪ, ತಾಮ್ರವರ್ಣದ್ವೀಪ, ಗಭಸ್ತಿವಂತದ್ವೀಪ ನಾಗದ್ವೀಪ, ಸೌಮ್ಯದ್ವೀಪ, ಗಂಧರ್ವದ್ವೀಪ, ವಾರಣದ್ವೀಪ, ಭಾರತದ್ವೀಪವೆಂಬ ನವದ್ವೀಪಗಳೂ ಪ್ರಸಿದ್ಧವಾಗಿವೆ. ಭಾರತದಲ್ಲಿ ಮ್ಲೇಂಛರೂ ಕಿರಾತರೂ ಯವನರೂ ಬ್ರಾಹ್ಮಣಕ್ಷತ್ರಿಯವೈಶ್ಯಶೂದ್ರರೂ ವಾಸಿಸುತ್ತಾರೆ ಈ ಭಾರತದಲ್ಲಿ ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಂತ, ಋಕ್ಷ, ವಿಂಧ್ಯ, ಪಾರಿಯಾತ್ರವೆಂಬ ಸಪ್ತಕುಲಪರ್ವತ ಗಳೂ ಇವೆ. ಇದರ ಸುತ್ತಲೂ ಮೈನಾಕವೇ ಮೊದಲಾದ ಉಪಪರ್ವತಗಳೂ ಗಂಗ, ಸಿಂಧು, ಸರಸ್ವತಿ, ಯಮುನಾ, ಸರಿಯೂ ಮೊದಲಾದ ಸುಪ್ರಸಿದ್ಧ ನದಿಗಳೂ ಅನೇಕ ಉಪನದಿಗಳೂ ಕಾಂಭೋಜ ಕೋಸಲ ಮೊದಲಾದ ಅನೇಕ ದೇಶಗಳೂ ಇವೆ. ಕೃತ, ತ್ರೇತ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳೂ ಉಂಟಾಗುವುವು. ಇವೇ ಮೊದ ಲಾದ ವಿಷಯಗಳು ಈ ಅಧ್ಯಾಯದಲ್ಲಿ ನಿರೂಪಿತವಾಗಿವೆ.

—|| ಹರಿಃ ಓಮ್ ||—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ॥ ಷಟ್‌ಚತ್ವಾರಿಂಶೋಽಧ್ಯಾಯಃ ॥

॥ ಸೂತ ಉವಾಚ ॥

ಏತಚ್ಛ್ರುತ್ವಾ ತು ಋಷಯಃ ಉತ್ತರಂ ಪುನರೇವ ತೇ ।
ಶುಶ್ರೂಷವೋ ಮುದಾ ಯುಕ್ತಾಃ ಪ್ರಪಚ್ಛ ಲೋಮಹರ್ಷಣಂ ॥ ೧ ॥

॥ ಋಷಯ ಊಚುಃ ॥

ಯಚ್ಚ ಕಿಂಪುರುಷಂ ವರ್ಷಂ ಹರಿವರ್ಷಂ ತಥೈವ ಚ ।
ಆಚಕ್ಷ್ವ ನೋ ಯಥಾತತ್ವಂ ಕೀರ್ತಿತಂ ಭಾರತಂ ತ್ವಯಾ ॥ ೨ ॥

ಪೃಷ್ಟಸ್ತ್ವಿದಂ ಯಥಾ ವಿಪ್ರೈರ್ಯಥಾ ಪ್ರಶ್ನಂ ವಿಶೇಷತಃ ।
ಉವಾಚ ಮುನಿನಿರ್ದಿಷ್ಟಂ ಪುರಾಣಂ ವಿಹಿತಂ ಯಥಾ ॥ ೩ ॥

---

### ನಲವತ್ತಾರನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ನೈಮಿಶಾರಣ್ಯವಾಸಿಗಳಾದ ಮುನಿಗಳು ಈ ಮಾತುಗಳನ್ನು ಕೇಳಿ ಸಂತುಷ್ಟರಾಗಿ ಭಕ್ತಿಯಿಂದ ಸೂತನನ್ನು ಕುರಿತು ಇಂತೆಂದರು.

೨. ಋಷಿಗಳು ಹೇಳಿದರು :—ಎಲೈ ಸೂತಮುನಿಯೇ, ಭಾರತವರ್ಷವನ್ನು ನಿರೂಪಿಸಿರುವಂತೆ ಕಿಂಪುರುಷವರ್ಷ, ಹರಿವರ್ಷ ಇವುಗಳನ್ನೂ ಯಥಾಸ್ಥಿತವಾಗಿ ನಿರೂಪಿಸಬೇಕೆಂದು ಬೇಡಿದರು.

೩. ಹೀಗೆ ಆ ಬ್ರಾಹ್ಮಣರು ವಿಶ್ವಾಸದಿಂದ ಸೂತರನ್ನು ಕೇಳಲಾಗಿ ಆ ಸೂತನು ಪೂರ್ವದಲ್ಲಿ ಪುರಾಣಜ್ಞನಾದ ವಾಯುದೇವನು ಹೇಳಿದ ರೀತಿಯಲ್ಲಿ ತಿಳಿಸುವೆನು ಕೇಳಿ ಎಂದನು.

॥ ಸೂತ ಉವಾಚ ॥

ಶುಶ್ರೂಷಾ ಯತ್ರ ವೋ ವಿಪ್ರಾಸ್ತಚ್ಛೃಣುಧ್ವಂ ಮುದಾ ಯುತಾಃ ।
ಪ್ಲಕ್ಷಖಂಡಃ ಕಿಂಪುರುಷೇ ಸುಮಹಾನ್ನಂದನೋಪಮಃ ॥ ೪ ॥

ದಶವರ್ಷಸಹಸ್ರಾಣಿ ಸ್ಥಿತಿಃ ಕಿಂಪುರುಷೇ ಸ್ಮೃತಾ ।
ಸುವರ್ಣವರ್ಣಾಶ್ಚ ನರಾ ಸ್ತ್ರಿಯಶ್ಚಾಪ್ಸರಸೋಪಮಾಃ ॥ ೫ ॥

ಅನಾಮಯಾ ಹ್ಯಶೋಕಾಶ್ಚ ಸರ್ವೇ ತೇ ಶುದ್ಧಮಾನಸಾಃ ।
ಜಾಯಂತೇ ಮಾನವಾಸ್ತತ್ರ ನಿಸ್ತಪ್ತಕನಕಪ್ರಭಾಃ ॥ ೬ ॥

ವರ್ಷೇ ಕಿಂಪುರುಷೇ ಪುಣ್ಯೇ ಪ್ಲಕ್ಷೋ ಮಧುವಹಃ ಶುಭಃ ।
ತಸ್ಯ ಕಿಂಪುರುಷಾಃ ಸರ್ವೇ ಪಿಬಂತಿ ರಸಮುತ್ತಮಂ ॥ ೭ ॥

---

೪. ಸೂತಮುನಿಯು ಹೇಳಿದನು:—ಎಲೈ ಮುನಿಗಳೇ, ನೀವು ಯಾವ ವಿಷಯಗಳನ್ನು ಕೇಳಬೇಕೆಂದು ಇಚ್ಛಿಸಿದಿರೋ ಆ ವಿಷಯಗಳನ್ನು ಹೇಳುವೆನು ಸಾವಧಾನವಾಗಿ ಕೇಳಿರಿ. ಕಿಂಪುರುಷಖಂಡದಲ್ಲಿ ಪ್ಲಕ್ಷಖಂಡವು ಅತಿ ವಿಶಾಲವಾಗಿಯೂ ನಂದನವನಕ್ಕೆ ಸಮಾನವಾಗಿಯೂ ಇದೆ.

೫. ಕಿಂಪುರುಷಖಂಡದಲ್ಲಿ ಪ್ರಜೆಗಳು ಹತ್ತುಸಹಸ್ರವರ್ಷಗಳವರೆಗೂ ಜೀವಂತರಾಗಿರುವರು. ಪುರುಷರು ಸುವರ್ಣದಂತೆ ಕಾಂತಿವಂತರಾಗಿಯೂ ಸ್ತ್ರೀಯರು ಅಪ್ಸರಸ್ತ್ರೀಯರಂತೆ ಸುಂದರಿಯರಾಗಿಯೂ ಇರುವರು.

೬. ಕಿಂಪುರುಷಖಂಡದ ಜನರು ನಿರೋಗಿಗಳೂ, ಶೋಕವರ್ಜಿತರೂ, ಶುದ್ಧ ಮನಸ್ಕರೂ ಸುವರ್ಣದಂತೆ ಛಾಯೆಯುಳ್ಳವರೂ ದೃಢಕಾಯರೂ ಆಗಿರುವರು.

೭. ಇಂತಹ ಕಿಂಪುರುಷವರ್ಷದಲ್ಲಿ ಜೇನುವಿನ ಪ್ರವಾಹವನ್ನು ಸುರಿಸುವುದೂ ಮಂಗಳಪ್ರದವೂ ಆದ ಆಲದಮರವಿರುತ್ತದೆ. ಆ ವರ್ಷವಾಸಿಗಳಾದ ಸರ್ವರೂ ಆ ಫಲರಸವನ್ನು ಪಾನಮಾಡಿ ನಿಷ್ಕಾಮರೂ ನಿತ್ಯಸುಖಿಗಳೂ ಅಮರರೂ ಆಗಿರುವರು

ಅತಃಪರಂ ಕಿಂಪುರುಷಾದ್ಧರಿವರ್ಷಃ ಪ್ರಚಕ್ಷ್ಯತೇ ।
ಮಹಾರಜತಸಂಕಾಶಾ ಜಾಯಂತೇ ತತ್ರ ಮಾನವಾಃ ॥ ೮ ॥

ದೇವಲೋಕಚ್ಯುತಾಃ ಸರ್ವೇ ದೇವರೂಪಾಶ್ಚ ಸರ್ವಶಃ ।
ಹರಿವರ್ಷೇ ನರಾಃ ಸರ್ವೇ ಪಿಬಂತೀಕ್ಷುರಸಂ ಶುಭಂ ॥ ೯ ॥

ಏಕಾದಶಸಹಸ್ರಾಣಿ ವರ್ಷಾಣಾಂ ತು ಮುದಾ ಯುತಾಃ ।
ಹರಿವರ್ಷೇ ತು ಜೀವಂತಿ ಸರ್ವೇ ಮುದಿತಮಾನಸಾಃ ।
ನ ಜರಾ ಬಾಧತೇ ತತ್ರ ಜೀರ್ಯಂತಿ ನ ಚ ತೇ ನರಾಃ ॥ ೧೦ ॥

ಮಧ್ಯಮಂ ಯನ್ಮಯಾ ಪ್ರೋಕ್ತಂ ನಾಮ್ನಾ ವರ್ಷಮಿಲಾವೃತಂ ।
ನ ತತ್ರ ಸೂರ್ಯಸ್ತಪತಿ ನ ಚ ಜೀರ್ಯಂತಿ ಮಾನವಾಃ ॥ ೧೧ ॥

---

೮. ಅನಂತರ ಕಿಂಪುರುಷವರ್ಷವನ್ನು ಹೇಳಿದ ತರುವಾಯ ಹರಿವರ್ಷದ ವಿಷಯವನ್ನು ವಿಶದವಾಗಿ ತಿಳಿಸುವೆನು ಆ ಹರಿವರ್ಷದಲ್ಲಿ ಪ್ರಜೆಗಳು ಹುಟ್ಟು ವಾಗಲೇ ಬೆಳ್ಳಿಯಂತೆ ಅತಿ ಶುಭ್ರವಾದ ತೇಜಸ್ವಿಗಳಾಗಿಯೇ ಇರುವರು.

೯. ಸ್ವರ್ಗಲೋಕದಲ್ಲಿ ಸುಖವನ್ನನುಭವಿಸಿ ಆ ಪುಣ್ಯವು ನಷ್ಟವಾಗಲು ಅಲ್ಲಿಂದ ಚ್ಯುತರೂ ದೇವತೆಗಳಿಗೆ ಸಮರೂ ಆದ ಸತ್ಪುರುಷರು ಈ ಹರಿವರ್ಷದಲ್ಲಿ ಜನಿಸಿ ಮಂಗಳಕರವಾದ ಕಬ್ಬಿನರಸವನ್ನು ಪಾನಮಾಡುವರು.

೧೦. ಹರಿವರ್ಷದಲ್ಲಿ ಜನಿಸಿದ ಪ್ರಜೆಗಳು ಇಕ್ಷುರಸಪಾನದಿಂದ ಸಂತುಷ್ಟವಾದ ಮನಸ್ಕರಾಗಿ ಹನ್ನೊಂದುಸಾವಿರವರ್ಷಗಳ ವರೆಗೂ ಸುಖವಾಗಿ ಜೀವಿಸುವರು. ಆ ಹರಿವರ್ಷದ ಪ್ರಜೆಗಳಿಗೆ ಮುಪ್ಪಿನಬಾಧೆಯೇ ಇಲ್ಲ. ಸರ್ವದಾ ತರುಣರಾಗಿಯೇ ಇರುವರು. ಮುದುಕರಾಗುವುದೇ ಇಲ್ಲ.

೧೧. ಮೇಲೆ ಹೇಳಿದ ವರ್ಷಗಳ ಮಧ್ಯದಲ್ಲಿ ಇಲಾವರ್ಷವಿರುವುದು. ಆ ಇಲಾವರ್ಷದಲ್ಲಿ ಸೂರ್ಯನ ತಾಪವೇ ಇಲ್ಲ. ಸದಾ ಶಾಂತನಾಗಿರುವನು ಮನುಷ್ಯರಿಗೆ ಮುಪ್ಪೇ ಇಲ್ಲ ಸದಾ ಯುವಕರಾಗಿಯೇ ಇರುವರು.

ಚಂದ್ರಸೂರ್ಯೌ ಸನಕ್ಷತ್ರಾವಪ್ರಕಾಶಾವಿಲಾವೃತೇ ।
ಪದ್ಮವರ್ಣಾಃ ಪದ್ಮಪ್ರಭಾಃ ಪದ್ಮಪತ್ರನಿಭೇಕ್ಷಣಾಃ ।
ಪದ್ಮಪತ್ರಸುಗಂಧಾಶ್ಚ ಜಾಯಂತೇ ತತ್ರ ಮಾನವಾಃ ॥ ೧೨ ॥

ಜಂಬೂರಸಫಲಾಹಾರಾ ಹ್ಯನಿಷ್ಪಂದಾಃ ಸುಗಂಧಿನಃ ।
ಮನಸ್ವಿನೋ ಭುಕ್ತಭೋಗಾಃ ಸತ್ಕರ್ಮಫಲಭೋಗಿನಃ ॥ ೧೩ ॥

ದೇವಲೋಕಾಚ್ಚ್ಯುತಾಃ ಸರ್ವೇ ಜಾಯಂತೇ ಹ್ಯಜರಾಮರಾಃ ।
ತ್ರಯೋದಶ ಸಹಸ್ರಾಣಿ ವರ್ಷಾಣಾಂ ತೇ ನರೋತ್ತಮಾಃ ॥ ೧೪ ॥

ಆಯುಷ್ಯಪ್ರಮಾಣಂ ಜೀವಂತಿ ತೇ ತು ವರ್ಷ ತ್ವಿಲಾವೃತೇ ।
ಮೇರೋ ಪ್ರತಿದಿಶಂ ತೇ ತು ನವಸಾಹಸ್ರವಿಸ್ತೃತೇ ॥ ೧೫ ॥

---

೧೨. ಇಲಾವೃತದಲ್ಲಿ ಸೂರ್ಯಚಂದ್ರರು, ಗ್ರಹನಕ್ಷತ್ರಗಳು ಇವುಗಳ ಪ್ರಕಾಶವೇ ಇಲ್ಲ. ಸರ್ವಜನಗಳೂ ಪದ್ಮವರ್ಣಿಗಳೂ ಪದ್ಮದಂತೆ ಸುಂದರರೂ ಪದ್ಮದಳದಂತೆ ನೇತ್ರವುಳ್ಳವರೂ ಪದ್ಮಗಂಧಿಗಳೂ ಆಗಿರುವರು.

೧೩. ಆ ಪ್ರಜೆಗಳು ನೇರಿಳೆಫಲಗಳ ರಸದಿಂದಲೇ ಜೀವಿಸುವರು. ಕಂಪ ರಹಿತರೂ ಸುಗಂಧವುಳ್ಳವರೂ, ಪ್ರಶಸ್ತವಾದ ಮನಸ್ಸುಳ್ಳವರೂ ಭುಕ್ತಭೋಗರೂ ಸತ್ಕರ್ಮಗಳ ಫಲವನ್ನು ಅನುಭವಿಸುವವರೂ ಆಗಿರುವರು.

೧೪. ಆ ಪ್ರಜೆಗಳೆಲ್ಲರೂ ದೇವಲೋಕದಿಂದ ಬಂದ ದೇವತೆಗಳಾಗಿ ಜರಾ ಮರಣಶೂನ್ಯರಾಗಿರುವರು. ಅವರು ಹದಿಮೂರುಸಾವಿರವರ್ಷಗಳು ಬದುಕುವರು. ಮನುಷ್ಯೋತ್ತಮರೂ ಆಗಿರುವರು.

೧೫. ಆ ಇಲಾವೃತ ಪ್ರಜೆಗಳು ಹದಿಮೂರುಸಾವಿರವರ್ಷಗಳವರೆಗೂ ಅಜ ರಾಮರಣರಾಗಿರುವರು. ಮಹಾಮೇರುವಿನ ಪ್ರತಿ ದಿಕ್ಕುಗಳಲ್ಲಿಯೂ ಒಂಭತ್ತು ಸಾವಿರಯೋಜನ ವಿಸ್ತಾರವಾದ ಪ್ರದೇಶಗಳಿರುವುವು.

ಯೋಜನಾನಾಂ ಸಹಸ್ರಾಣಿ ಷಟ್ತ್ರಿಂಶಸ್ತಸ್ಯ ವಿಸ್ತರಃ ।
ಚತುರಸ್ರಃ ಸಮಂತಾಚ್ಚ ಶರಾವಾಕಾರಸಂಸ್ಥಿತಃ ॥ ೧೬ ॥

ಮೇರೋಸ್ತು ಪಶ್ಚಿಮೇ ಭಾಗೇ ನವಸಾಹಸ್ರಸಮ್ಮಿತೇ ।
ಚತುಸ್ತ್ರಿಂಶತ್ಸಹಸ್ರಾಣಿ ಗಂಧಮಾದನಪರ್ವತಃ ॥ ೧೭ ॥

ಉದಗ್ದಕ್ಷಿಣತಶ್ಚೈವ ಆನೀಲನಿಷಧಾಯತಃ ।
ಚತ್ವಾರಿಂಶತ್ಸಹಸ್ರಾಣಿ ಪರಿವೃದ್ಧೋ ಮಹೀತಲಾತ್ ।
ಸಹಸ್ರಮವಗಾಢಸ್ತು ತಾವದೇವ ತು ಧಿಷ್ಠಿತಃ ॥ ೧೮ ॥

ಪೂರ್ವೇಣ ಮಾಲ್ಯವಾನ್ ಶೈಲಃ ತತ್ಪ್ರಮಾಣಃ ಪ್ರಕೀರ್ತಿತಃ ।
ದಕ್ಷಿಣೇನ ತು ನೀಲಸ್ಯ ನಿಷಧಸ್ಯೋತ್ತರೇಣ ತು ॥ ೧೯ ॥

---

೧೬. ಇಲಾವೃತಖಂಡದ ಚಚ್ಚೌಕದ ಸುತ್ತಳತೆಯು ಇಪ್ಪತ್ತಾರುಸಾವಿರ ಯೋಜನದಷ್ಟು ವಿಸ್ತಾರವಾಗಿದೆ. ಅದು ಮಣ್ಣಿನ ಹಣತೆಯಂತೆ ಚಪ್ಪಟೆಯಾಗಿರುತ್ತದೆ

೧೭. ಮೇರುಪರ್ವತದ ಪಶ್ಚಿಮಭಾಗದಲ್ಲಿ ಒಂಭತ್ತುಸಾವಿರ ಯೋಜನಗಳಷ್ಟು ದೂರವಾಗಿ ಗಂಧಮಾದನ ಪರ್ವತವಿರುತ್ತದೆ ಅದು ಮೂವತ್ತನಾಲ್ಕುಸಾವಿರ ಯೋಜನ ವಿಸ್ತಾರವಾಗಿರುತ್ತದೆ.

೧೮. ಆ ಮೇರುಗಿರಿಯ ಉತ್ತರ ದಕ್ಷಿಣ ದಿಗ್ಭಾಗಗಳಲ್ಲಿ ಕ್ರಮವಾಗಿ ನೀಲ ನಿಷಧಗಳೆಂಬ ಎರಡು ಪರ್ವತಗಳು ಭೂಮಟ್ಟಕ್ಕಿಂತಲೂ ನಲವತ್ತುಸಾವಿರ ಯೋಜನಗಳಷ್ಟು ಎತ್ತರವಾಗಿವೆ. ಭೂಮಿಯ ಕೆಳಗಡೆ ಒಂದುಸಾವಿರ ಯೋಜನಗಳಷ್ಟು ಆಳವಾಗಿ ವ್ಯಾಪಿಸಿವೆ.

೧೯. ಆ ಮಹಾಮೇರುವಿನ ಪೂರ್ವಭಾಗದಲ್ಲಿ ಮಾಲ್ಯವತ್ಪರ್ವತವು ಪೂರ್ವದಲ್ಲಿ ಹೇಳಿದ ಪರ್ವತಗಳ ಹಾಗೆಯೇ ಅತಿ ವಿಸ್ತಾರವಾಗಿದೆ. ಈ ಮಾಲ್ಯವತ್ಪರ್ವತವು ನೀಲಗಿರಿಗೆ ದಕ್ಷಿಣದಿಕ್ಕಿನಲ್ಲಿಯೂ, ನಿಷಧಗಿರಿಗೆ ಉತ್ತರಭಾಗದಲ್ಲಿಯೂ, ಇರುತ್ತದೆ.

ತೇಷಾಂ ಮಧ್ಯೇ ಮಹಾಮೇರುಃ ಸುಪ್ರಮಾಣಃ ಪ್ರಕೀರ್ತಿತಃ ।
ಸರ್ವೇಷಾಮೇವ ಶೈಲಾನಾಮುನಗಾಧೋ ಯಥಾ ಭವೇತ್ ॥ ೨೦ ॥

ವಿಸ್ತರಸ್ತತ್ಪ್ರಮಾಣಃ ಸ್ಯಾದಾಯಾಮೋ ನಿಯುತಃ ಸ್ಮೃತಃ ।
ವೃತ್ತಭಾವಾತ್ ಸಮುದ್ರಸ್ಯ ಮಹೀಮಂಡಲಭಾವನಃ ॥ ೨೧ ॥

ಆಯಾಮಾಃ ಪರಿಹೀಯಂತೇ ಚತುರಸ್ರಾಃ ಸಮಸ್ತತಃ ।
ಅನಾವೃತ್ತಾಶ್ಚತುಷ್ಕೇಣ ಭಿದ್ಯಂತೇ ಮಧ್ಯಮಾಗತಾಃ ॥ ೨೨ ॥

ಪ್ರಭಿನ್ನಾಂಜನಸಂಕಾಶಾ ಜಂಬೂರಸವತೀ ನದೀ ।
ಮೇರೋಸ್ತು ದಕ್ಷಿಣೇ ಪಾರ್ಶ್ವೇ ನಿಷಧಸ್ಯೋತ್ತರೇಣ ತು ॥ ೨೩ ॥

ಸುದರ್ಶನೋ ನಾಮ ಮಹಾಜಂಬೂವೃಕ್ಷಃ ಸನಾತನಃ ।
ನಿತ್ಯಪುಷ್ಪಫಲೋಪೇತಃ ಸಿದ್ಧಚಾರಣಸೇವಿತಃ ॥ ೨೪ ॥

---

೨೦. ಆ ಮೇರುಪರ್ವತವು ಗಂಧಮಾದನ ನೀಲ, ನಿಷಧ, ಮಾಲ್ಯವಂತವೆಂಬ ಈ ನಾಲ್ಕು ಪರ್ವತಗಳ ಮಧ್ಯದಲ್ಲಿ ಎಲ್ಲಾ ಪರ್ವತಗಳಿಗಿಂತಲೂ ಎತ್ತರವಾಗಿಯೂ, ವಿಸ್ತಾರವಾಗಿಯೂ, ಆಳವಾಗಿಯೂ ಇರುತ್ತದೆ.

೨೧-೨೨. ಮಹಾಮೇರುವಿನ ವಿಸ್ತಾರವು ಇತರ ಪರ್ವತಗಳಂತೆಯೇ ಇರುತ್ತದೆ. ಉದ್ದವಾದರೋ ಒಂದುಲಕ್ಷ ಯೋಜನಗಳಷ್ಟಿದೆ. ಸಮುದ್ರಮಟ್ಟಕ್ಕಿಂತಲೂ ಇಪ್ಪತ್ತುಸಾವಿರ ಯೋಜನದಷ್ಟು ಎತ್ತರವಾಗಿದೆ. ಉದ್ದಕ್ಕಿಂತಲೂ ಚೌಕದ ವಿಶಾಲತೆಯು (ಆಳತೆಯು) ಕಡಮೆಯಾಗಿರುತ್ತದೆ. ಮಧ್ಯಭಾಗ ದುಂಡಾಗಿಲ್ಲದೇ ಚೌಕವಾಗಿದೆ.

೨೩. ಮೇರುಗಿರಿಯ ದಕ್ಷಿಣಭಾಗದಲ್ಲಿಯೂ ನಿಷಧಪರ್ವತದ ಉತ್ತರದಲ್ಲಿಯೂ ಭೇದಿಸಲ್ಪಟ್ಟ ಅಂಜನಗಿರಿಯಂತೆ ಕಾಂತಿಯುಳ್ಳ ಜಂಬೂರಸದ ನದಿಯು ಹರಿಯುತ್ತಿದೆ.

೨೪-೨೫. ಆ ಪರ್ವತದಲ್ಲಿ ಸಿದ್ಧರು, ಚಾರಣರು, ಇವರಿಂದ ಸೇವಿತವೂ, ಪುಷ್ಪಫಲಗಳಿಂದ ನಿತ್ಯಯುಕ್ತವೂ, ಅತಿಪುರಾತನವೂ ಆದ ಸುದರ್ಶನವೆಂಬ ನೇರಿಳೆ

ತಸ್ಯ ನಾಮ್ನಾ ಸಮಾಖ್ಯಾತೋ ಜಂಬೂದ್ವೀಪೇ ವನಸ್ಪತಿಃ ।
ಯೋಜನಾನಾಂ ಸಹಸ್ರಂ ತು ಶತಂಚಾನ್ಯಮಹಾದ್ರುಮಃ ।
ಉತ್ಸೇಧೋ ವೃಕ್ಷರಾಜಸ್ಯ ದಿವಂ ಸ್ಪೃಶತಿ ಸರ್ವಶಃ ॥ ೨೫ ॥

ಅರತ್ನೀನಾಂ ಶತಾನ್ಯಷ್ಟೌ ಏಕಷಷ್ಟ್ಯಧಿಕಾನಿ ತು ।
ಫಲಪ್ರಮಾಣಂ ಸಂಖ್ಯಾತಮೃಷಿಭಿಸ್ತತ್ತ್ವದರ್ಶಿಭಿಃ ॥ ೨೬ ॥

ಪತಮಾನಾನಿ ತಾನ್ಯುರ್ವ್ಯಾಂ ಕುರ್ವಂತಿ ವಿಪುಲಂ ಸ್ವನಂ ।
ತಸ್ಯಾ ಜಂಬಾಃ ಫಲರಸೋ ನದೀಭೂಯಪ್ರಸರ್ಪತಿ ॥ ೨೭ ॥

ಮೇರುಂ ಪ್ರದಕ್ಷಿಣೀಕೃತ್ಯ ಜಂಬೂವೃಕ್ಷಂ ವಿಶತ್ಯಧಃ ।
ತೇ ಪಿಬಂತಿ ಸದಾ ಹೃಷ್ಟಾ ಜಂಬೂರಸಫಲಾವೃತಾಃ ॥ ೨೮ ॥

---

ವೃಕ್ಷವು ಹೊಳೆಯುತ್ತಿದೆ. ಆ ಜಂಬೂವೃಕ್ಷವಿರುವುದರಿಂದಲೇ ಈ ದ್ವೀಪಕ್ಕೆ ಜಂಬೂದ್ವೀಪವೆಂಬ ನಾಮವು ಪ್ರಾಪ್ತವಾಗಿದೆ. ಆ ಜಂಬೂವೃಕ್ಷವು ಸಾವಿರದ ನೂರು ಯೋಜನಗಳ ವಿಸ್ತಾರವಾಗಿಯೂ ಅಷ್ಟೇ ಎತ್ತರವಾಗಿಯೂ ಇದೆ. ಆ ವೃಕ್ಷದ ತುದಿಗಳು ಸರ್ವಭಾಗದಿಂದಲೂ, ಸ್ವರ್ಗವನ್ನು ಮುಟ್ಟುತ್ತಿವೆ.

೨೬. ತತ್ವಜ್ಞಾನಿಗಳಾದ ಮಹರ್ಷಿಗಳು ಆ ಜಂಬೂಫಲದ ದಪ್ಪವು(ಗಾತ್ರವು) ಎಂಟುನೂರ ಅರವತ್ತೊಂದು ಮೊಳದಷ್ಟು ಇದೆ ಎಂದು ಹೇಳುವರು. ಆ ಮಹಾ ವೃಕ್ಷದ ಪ್ರತಿಯೊಂದು ಫಲವೂ ಬಹಳ ದೊಡ್ಡದಾಗಿವೆ.

೨೭. ಆ ವೃಕ್ಷದ ಫಲಗಳು ಭೂಮಿಯಲ್ಲಿ ಬೀಳುವಾಗ ಸಿಡಿಲು ಹೊಡದಂತೆ ಭಯಂಕರವಾದ ಧ್ವನಿಯಾಗುವುದು. ಆ ಹಣ್ಣುಗಳ ರಸಗಳೇ ನದಿಯಾಗಿ ಹರಿಯುತ್ತದೆ.

೨೮. ಆ ಜಂಬೂನದಿಯು ಮೇರುವನ್ನು ಆ ವೃಕ್ಷವನ್ನು ಪ್ರದಕ್ಷಿಣಾಕಾರವಾಗಿ ಸುತ್ತಲೂ ಸಂಚರಿಸಿ, ಕೆಳಗೆ ಬೀಳುವುದು. ಅಲ್ಲಿಯ ಜನರು ಆ ಫಲಗಳ ರಸವನ್ನು ಪಾನಮಾಡಿ ನಿತ್ಯತೃಪ್ತರಾಗಿರುವರು.

ಜಂಬೂರಸಫಲಂ ಪೀತ್ವಾ ನ ಜರಾಂ ಪ್ರಾಪ್ನುವಂತಿ ತೇ ।
ನ ಚ ಧ್ರುವಂ ನ ರೋಗಂ ತು ನ ಚ ಮೃತ್ಯುಂ ತಥಾವಿಧಂ ॥ ೨೯ ॥

ತತ್ರ ಜಾಂಬೂನದಂ ನಾಮ ಕನಕಂ ದೇವಭೂಷಣಂ ।
ಇಂದ್ರಗೋಪಕಸಂಕಾಶಂ ಜಾಯತೇ ಭಾಸ್ವರಂ ತು ತತ್ ॥ ೩೦ ॥

ಸರ್ವೇಷಾಂ ವರ್ಷವೃಕ್ಷಾಣಾಂ ಶುಭಃ ಫಲರಸಾಸ್ತು ಸಃ ।
ಸ್ಕನ್ನಂ ಭವತಿ ತಚ್ಛುಕ್ರಂ ಕನಕಂ ದೇವಭೂಷಣಂ ॥ ೩೧ ॥

ತೇಷಾಂ ಮೂತ್ರಂ ಪುರೀಷಂ ಚ ದಿಕ್ಷು ಸರ್ವಾಸು ಭಾಗಶಃ ।
ಈಶ್ವರಾನುಗ್ರಹಾದ್ಭೂಮಿರ್ಮೃತಾಶ್ಚ ಗ್ರಸತೇ ತು ತಾನ್ ॥ ೩೨ ॥

ರಕ್ಷಃಪಿಶಾಚಾ ಯಕ್ಷಾಶ್ಚ ಸರ್ವೇ ಹೈಮವತಾಃ ಸ್ಮೃತಾಃ ।
ಹೇಮಕೂಟೇ ತು ಗಂಧರ್ವಾ ವಿಜ್ಞೇಯಾಃ ಸಾಪ್ಸರೋಗಣಾಃ ॥ ೩೩ ॥

---

೨೯ ಆ ಪ್ರಜೆಗಳು ಜಂಬೂಫಲರಸವನ್ನು ಪಾನಮಾಡಿ ಮುಪ್ಪನ್ನು ಹೊಂದುವುದೇ ಇಲ್ಲ. ರೋಗ, ವ್ಯಾಧಿ, ಮರಣ, ಶೋಕ ಇವೇ ಮೊದಲಾದವನ್ನು ಎಂದಿಗೂ ಹೊಂದುವುದಿಲ್ಲ.

೩೦. ಆ ದ್ವೀಪದಲ್ಲಿ ದೇವತೆಗಳಿಗೆ ಅಲಂಕಾರಭೂತವೂ, ಮಿಂಚಿನಹುಳು ವಂತೆ ಪ್ರಕಾಶಕವೂ ಆದ ಜಾಂಬೂನದವೆಂಬ ಚಿನ್ನವು ಅತ್ಯಂತ ಪ್ರಕಾಶವಾಗಿ ಹೊಳೆಯುತ್ತಿದೆ.

೩೧. ಆ ದ್ವೀಪದಲ್ಲಿರುವ ಸರ್ವವೃಕ್ಷಗಳ ರಸವೂ ಮಂಗಳದಾಯಕವಾಗಿದೆ. ಆ ಫಲರಸವು ಒಣಗಿ ಘಟ್ಟಿಯಾದರೆ ಕನಕರೂಪವಾಗಿ ದೇವಾಭರಣವಾಗುವುದು.

೩೨. ಆ ದೇವತೆಗಳ ಮೂತ್ರಪುರೀಷಗಳು ಸಮಸ್ತ ದಿಕ್ಕುಗಳಲ್ಲಿಯೂ ಸ್ವಲ್ಪ ಸ್ವಲ್ಪವಾಗಿ ಬಿದ್ದಿದ್ದರೆ ಅವನ್ನೂ ಮೃತರಾದ ಅವರನ್ನೂ ಈಶ್ವರಾನುಗ್ರಹವೆಂದು ತಿಳಿದು ಭೂಮಿಯು ಗ್ರಾಸಮಾಡುವುದು (ನುಂಗುವುದು).

೩೩. ಹಿಮಾಲಯದಲ್ಲಿ ರಾಕ್ಷಸರು, ಪಿಶಾಚಗಳು, ಯಕ್ಷರೇ ಮೊದಲಾದವರು ವಾಸಮಾಡುತ್ತಾರೆ. ಹೇಮಕೂಟದಲ್ಲಿಯಾದರೋ ಗಂಧರ್ವರೂ, ಅಪ್ಸರಸಿಯರೂ, ವಾಸಿಸುವರು.

ಸರ್ವೇ ನಾಗಾಸ್ತು ನಿಷಧೇ ಶೇಷವಾಸುಕಿತಕ್ಷಕಾಃ ।
ಮಹಾಮೇರೌ ತ್ರಯಸ್ತ್ರಿಂಶದ್ಭ್ರಮಂತೇ ಯಜ್ಞಿಕಾಃ ಸುರಾಃ ।
ನೀಲೇ ತು ವೈಡೂರ್ಯಮಯೇ ಸಿದ್ಧಬ್ರಹ್ಮರ್ಷಯೋ ಮತಾಃ ॥ ೩೪ ॥

ದೈತ್ಯಾನಾಂ ದಾನವಾನಾಂ ಚ ಶ್ವೇತಪರ್ವತ ಉಚ್ಯತೇ ।
ಶೃಂಗವಾನ್ ಪರ್ವತಃ ಶ್ರೇಷ್ಠಃ ಪಿತೄಣಾಂ ಪ್ರತಿಸಂಚರಃ ॥ ೩೫ ॥

ನವಸ್ವೇತೇಷು ವರ್ಷೇಷು ಯಥಾಭಾಗಸ್ಥಿತೇಷು ವೈ ।
ಭೂತಾನ್ಯುಪನಿವಿಷ್ಟಾನಿ ಗತಿಮಂತಿ ಧ್ರುವಾಣಿ ಚ ॥ ೩೬ ॥

ತೇಷಾಂ ವಿವೃದ್ಧಿರ್ಬಹುಲಾ ದೃಶ್ಯತೇ ದೇವಮಾನುಷೇಃ ।
ನ ಶಕ್ತಾ ಪರಿಸಂಖ್ಯಾತುಂ ಶ್ರದ್ಧೇಯಾನುಬುಭೂಷತಾ ॥ ೩೭ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಭುವನವಿನ್ಯಾಸೋ"
ನಾಮ ಷಟ್ಚತ್ವಾರಿಂಶೋಽಧ್ಯಾಯಃ

---

೩೪ ನಿಷಧಪರ್ವತದಲ್ಲಿ ಶೇಷ, ವಾಸುಕಿ, ತಕ್ಷಕರೇ ಮೊದಲಾದ ಸಮಸ್ತ ಸರ್ಪಗಳೂ ವಾಸಿಸುತ್ತವೆ. ಮಹಾಮೇರುಗಿರಿಯಲ್ಲಿಯಾದರೋ ಮೂವತ್ತು ಮೂರುಕೋಟಿ ದೇವತೆಗಳೂ, ಯಾಜ್ಞಿಕರೂ, ವಾಸಮಾಡುವರು. ವೈಡೂರ್ಯ ಮಯವಾದ ನೀಲಗಿರಿಯಲ್ಲಿ ಸಿದ್ಧರೂ, ಬ್ರಹ್ಮರ್ಷಿಗಳೂ ವಾಸಮಾಡುವರು.

೩೫. ದೈತ್ಯದಾನವರು ಶ್ವೇತಗಿರಿಯಲ್ಲಿ ವಾಸಮಾಡುವರು. ಅತ್ಯುತ್ತಮ ವಾದ ಶೃಂಗವತ್ಪರ್ವತವು ಪಿತೃದೇವತೆಗಳ ಸಂಚಾರಕ್ಕೂ ವಾಸಕ್ಕೂ ಅರ್ಹವಾಗಿದೆ.

೩೬. ಮೇಲೆ ಹೇಳಿದ ಒಂಭತ್ತು ವರ್ಷಗಳಲ್ಲಿಯೂ ಆಯಾ ಪ್ರದೇಶಗಳಲ್ಲಿ ಸ್ಥಾವರಜಂಗಮರೂಪವಾದ ಚರಾಚರಾತ್ಮಕವಾದ ಭೂತಗಳೆಲ್ಲವೂ ವಾಸಿಸುತ್ತವೆ.

೩೭. ಆ ನವವರ್ಷಗಳಲ್ಲಿಯೂ ವಾಸಿಸುವ ದೇವಮನುಷ್ಯಾದಿಗಳ ವೃದ್ಧ್ಯತಿ ಶಯಗಳನ್ನು ವರ್ಣಿಸಲು ಸಾಧ್ಯವಿಲ್ಲ. ತಿಳಿಯಬೇಕೆಂದಿಚ್ಛೆಯುಳ್ಳ ಪುರುಷರು ಜ್ಞಾನಿಗಳು ಹೇಳುವುದನ್ನು ನಂಬಬೇಕು ಎಂದು ಸೂತಮುನಿಯು ಮಹರ್ಷಿಗಳಿಗೆ ತಿಳಿಸಿದರು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಭುವನವಿನ್ಯಾಸನಿರೂಪಣ"ವೆಂಬ ನಲವತ್ತಾರನೆಯ ಅಧ್ಯಾಯವು ಮುಗಿದುದು.

## ನಲವತ್ತಾರನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಕಿಂಪುರುಷಖಂಡ, ಪ್ಲಕ್ಷಖಂಡ, ಇಲಾವರ್ಷ, ಜಂಬೂದ್ವೀಪ ಇವುಗಳು ವರ್ಣಿತವಾಗಿವೆ. ಈ ಖಂಡಗಳ ಜನರು ಸಾವಿರಾರು ವರ್ಷಗಳು ಜೀವಿಸುವವರಾಗಿಯೂ ಸ್ವರ್ಣಚ್ಛಾಯರಾಗಿಯೂ ಸ್ತ್ರೀಯರು ಅಪ್ಸರಸ್ತ್ರೀಯರಾಗಿಯೂ ಇರುವರು. ಹರಿವರ್ಷದ ಪ್ರಜೆಗಳು ಇಕ್ಷುರಸವನ್ನು ಪಾನಮಾಡಿ ಹದಿಮೂರು ಸಾವಿರವರ್ಷಗಳು ಜೀವಿಸುವರು. ಮಹಾಮೇರುವಿನ ಪಶ್ಚಿಮದಲ್ಲಿ ಗಂಧಮಾದನ ಪರ್ವತವೂ ಉತ್ತರದಲ್ಲಿ ನೀಲಗಿರಿಯೂ ಪೂರ್ವದಿಕ್ಕಿನಲ್ಲಿ ಮಾಲ್ಯವತ್ಪರ್ವತವೂ ದಕ್ಷಿಣದಲ್ಲಿ ನಿಷಧಗಿರಿಯೂ ಪ್ರಕಾಶಿಸುತ್ತವೆ. ಇವುಗಳ ಮಧ್ಯದಲ್ಲಿ ಮಹಾಮೇರುವಿರುವುದು. ಮೇರುವಿನ ದಕ್ಷಿಣದಲ್ಲಿಯೂ ನಿಷಧಗಿರಿಯ ಉತ್ತರಕ್ಕೂ ಜಂಬೂವೃಕ್ಷವಿರುವುದು. ಅದು ಅತಿವಿಸ್ತಾರವಾಗಿಯೂ ಮಹಾಫಲದಾಯಕವಾಗಿಯೂ ಇದೆ. ಆ ವೃಕ್ಷಗಳ ಹೆಸರೇ ಆ ದ್ವೀಪಕ್ಕೂ ಪ್ರಾಪ್ತವಾಗಿದೆ. ಜಂಬೂನದಿಯೇ ಮೇರುವನ್ನು ಪ್ರದಕ್ಷಿಣಾಕಾರವಾಗಿ ಸುತ್ತಿ ಹರಿಯುತ್ತದೆ. ಹೇಮಗಿರಿಯಲ್ಲಿ ರಾಕ್ಷಸ ಪಿಶಾಚಗಳೂ ಹೇಮಕೂಟದಲ್ಲಿ ಗಂಧರ್ವಾದಿಗಳೂ ನಿಷಧದಲ್ಲಿ ಶೇಷವಾಸುಕಿ ಮೊದಲಾದವರೂ ನೀಲಗಿರಿಯಲ್ಲಿ ಬ್ರಹ್ಮರ್ಷಿಗಳೂ ಮೇರುಗಿರಿಯಲ್ಲಿ ಸಮಸ್ತ ದೇವತೆಗಳೂ ಶ್ವೇತಗಿರಿಯಲ್ಲಿ ದೈತ್ಯದಾನವರೂ ಶೃಂಗವಂತಗಿರಿಯಲ್ಲಿ ಪಿತೃಗಳೂ ವಾಸಿಸುವರು. ಹೀಗೆ ನವವರ್ಷಗಳಲ್ಲಿಯೂ ಚರಚರಾತ್ಮಕವಾದ ಸಮಸ್ತ ಪ್ರಾಣಿಗಳು ಮನುಷ್ಯರು ಇವರೇ ಮೊದಲಾದವರು ವಾಸಮಾಡುವರೆಂಬ ವಿಷಯವು ನಿರೂಪಿತವಾಗಿದೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ॥ ಸಪ್ತ ಚತ್ವಾರಿಂಶೋಽಧ್ಯಾಯಃ ॥

### ॥ ಸೂತ ಉವಾಚ ॥

ಸವ್ಯೇ ಹಿಮವತಃ ಪಾರ್ಶ್ವೇ ಕೈಲಾಸೋ ನಾಮ ಪರ್ವತಃ ।
ತಸ್ಮಿನ್ನಿವಸತಿ ಶ್ರೀಮಾನ್ ಕುಬೇರಃ ಸಹ ರಾಕ್ಷಸೈಃ ।
ಅಪ್ಸರೋಗಣಸಂಯುಕ್ತೋ ಮೋದತೇ ಹ್ಯಲಕಾಧಿಪಃ ॥ ೧ ॥

ಕೈಲಾಸಪಾದಾತ್ ಸಂಭೂತಂ ಪುಣ್ಯಂ ಶೀತಜಲಂ ಶುಭಂ ।
ಮಂದಂ ನಾಮ್ನಾ ಕುಮುದ್ವಂತಂ ಶರದಂಬುದಸನ್ನಿಭಂ ॥ ೨ ॥

---

## ನಲವತ್ತೇಳನೆಯ ಅಧ್ಯಾಯವು

೧. ಸೂತಪುರಾಣಿಕನು ಹೇಳಿದನು :— ಹಿಮವತ್ಪರ್ವತದ ಎಡಭಾಗದಲ್ಲಿ ಕೈಲಾಸವೆಂಬ ಮಹಾಗಿರಿಯು ಇರುತ್ತದೆ. ಆ ಕೈಲಾಸಗಿರಿಯಲ್ಲಿ ಶ್ರೀಮಂತನೂ ಅಲಕಾಧಿಪತಿಯೂ ಆದ ಕುಬೇರನು ಯಕ್ಷರಾಕ್ಷಸರಿಂದಲೂ ಅಪ್ಸರೋಗಣದಿಂದಲೂ ಕೂಡಿ ಸಂತೋಷವಾಗಿ ವಾಸಿಸುತ್ತಿರುವನು.

೨. ಅದರಲ್ಲಿ ಕೈಲಾಸಪಾದೋದ್ಭೂತವೂ ಪುಣ್ಯಕರವೂ ತಂಪಾದ ಜಲವುಳ್ಳದ್ದೂ ಮಂಗಳಪ್ರದವೂ ಶರತ್ಕಾಲದ ಕಮಲದಂತಿರುವ ಕಮಲಗಳಿಂದಲಂಕೃತವೂ ಕುಮುದ್ವಂತನಾಮಕವೂ ಆದ ಸರೋವರವಿರುತ್ತದೆ.

ತಸ್ಮಾದ್ದಿವ್ಯಾ ಪ್ರಭವತಿ ನದೀ ಮಂದಾಕಿನೀ ಶುಭಾ ।
ದಿವ್ಯಂ ಚ ನಂದನಂ ತತ್ರ ತಸ್ಯಾಸ್ತೀರೇ ಮಹದ್ವನಂ ॥ ೩ ॥

ಪ್ರಾಗುತ್ತರೇಣ ಕೈಲಾಸಾದ್ದಿವ್ಯಸತ್ತ್ವೌಷಧಂ ಗಿರಿಂ ।
ಸುರಧಾತುಮಯಂ ಚಿತ್ರಂ ಸುವರ್ಣಂ ಪರ್ವತಂ ಪ್ರತಿ ॥ ೪ ॥

ಚಂದ್ರಪ್ರಭೋ ನಾಮ ಗಿರಿಃ ಸ ಶುದ್ಧೋ ರತ್ನಸನ್ನಿಭಃ ।
ತಸ್ಯ ಪಾದೇ ಮಹದ್ದಿವ್ಯಮಚ್ಛೋದಂ ನಾಮ ತತ್ಸರಃ ॥ ೫ ॥

ತಸ್ಮಾದ್ದಿವ್ಯಾ ಪ್ರಭವತಿ ಹ್ಯಚ್ಛೋದಾ ನಾಮ ನಿಮ್ನಗಾ ।
ತಸ್ಯಾಸ್ತೀರೇ ಮಹಾದಿವ್ಯಂ ವನಂ ಚೈತ್ರರಥಂ ಸ್ಮೃತಂ ॥ ೬ ॥

ತಸ್ಮಿನ್ ಗಿರೌ ನಿವಸತಿ ಮಣಿಭದ್ರಃ ಸಹಾನುಗಃ ।
ಯಕ್ಷಸೇನಾಪತಿಃ ಕ್ರೂರಗುಹ್ಯಕೈಃ ಪರಿವಾರಿತಃ ॥ ೭ ॥

---

೩. ಆ ಸರೋವರದಿಂದ ದಿವ್ಯವೂ ಮಂಗಳಕರವೂ ಆದ ಮಂದಾಕಿನೀಯೆಂಬ ನದಿಯು ಉತ್ಪನ್ನವಾಗುವುದು. ಆ ಮಂದಾಕಿನಿಯ ದಡದಲ್ಲಿ ಅತ್ಯುತ್ತಮವೂ ಅತಿಮಹತ್ತೂ ಆದ ನಂದನವೆಂಬ ಮಹಾವನವು ಶೋಭಿಸುತ್ತದೆ

೪-೫. ಕೈಲಾಸಪರ್ವತದ ಉತ್ತರದಿಗ್ಭಾಗದಲ್ಲಿ ದಿವ್ಯಪ್ರಾಣಿಗಳಿಂದ ಸೇವಿತವೂ ದೇವತೆಗಳಿಂದಲೂ ಧಾತುಗಳಿಂದಲೂ ಮಂಡಿತವೂ ವಿಚಿತ್ರಕರವೂ ಸುವರ್ಣಮಯವೂ ಅತಿಪರಿಶುದ್ಧವೂ ರತ್ನದಂತೆ ಕಾಂತಿಯುಕ್ತವೂ ಆದ ಚಂದ್ರಪ್ರಭಪರ್ವತವು ಶೋಭಿಸುತ್ತದೆ. ಅದರ ಬುಡದಲ್ಲಿ ಅತಿ ಮಹತ್ತೂ ದಿವ್ಯವೂ ಆದ ಅಚ್ಛೋದವೆಂಬ ಸರೋವರವು ಪ್ರಕಾಶಿಸುತ್ತಿದೆ.

೬. ಆ ಅಚ್ಛೋದಸರೋವರದಿಂದ ದಿವ್ಯವೂ ಅಚ್ಛೋದನಾಮಕವೂ ಆದ ಮಹಾನದಿಯು ಹುಟ್ಟಿ ಹರಿಯುವುದು. ಅದರ ತೀರದಲ್ಲಿ ಅತಿವಿಶಾಲವೂ ಶ್ರೇಷ್ಠವೂ ಆದ ಚೈತ್ರರಥವೆಂಬ ದಿವ್ಯವನವು ಶೋಭಿಸುತ್ತಿರುವುದು.

೭. ಆ ಚಂದ್ರಪ್ರಭಗಿರಿಯಲ್ಲಿ ಭೃತ್ಯರಿಂದಲೂ ಪರಿವಾರದಿಂದಲೂ ಕ್ರೂರಗುಹ್ಯಕರಿಂದಲೂ ಸೇವಿಸಲ್ಪಟ್ಟ ಮಣಿಭದ್ರನೆಂಬ ಯಕ್ಷಸೇನಾಪತಿಯು ವಾಸಿಸುತ್ತಾನೆ.

ಪುಣ್ಯಾ ಮಂದಾಕಿನೀ ಚೈವ ನಿಮ್ನಗಾಚ್ಛೋದಿಕಾ ತಥಾ ।
ಮಹೀಮಂಡಲಮಧ್ಯೇನ ಪ್ರವಿಷ್ಟೇ ತೇ ಮಹೋದಧಿಂ ॥ ೮ ॥

ಕೈಲಾಸಾದ್ದಕ್ಷಿಣಪ್ರಾಚ್ಯಾಂ ಶಿವಸತ್ವೌಷಧಿಂ ಗುರುಂ ।
ಮನಃಶಿಲಾಮಯಂ ದಿವ್ಯಂ ಪಿಶಂಗಂ ಪರ್ವತಂ ಪ್ರತಿ ॥ ೯ ॥

ಲೋಹಿತೋ ಹೇಮಶೃಂಗಸ್ತು ಗಿರಿಃ ಸೂರ್ಯಪ್ರಭೋ ಮಹಾನ್ ।
ತಸ್ಯ ಪಾದೇ ಮಹದ್ದಿವ್ಯಂ ಲೋಹಿತಂ ನಾಮ ತತ್ಸರಃ ॥ ೧೦ ॥

ತಸ್ಮಾತ್ ಪುಣ್ಯಃ ಪ್ರಭವತಿ ಲೌಹಿತ್ಯಃ ಸದನೋಮಹಾನ್ ।
ದೇವಾರಣ್ಯಂ ವಿಶೋಕಂಚ ತಸ್ಯ ತೀರೇ ಮಹಾವನಂ ॥ ೧೧ ॥

ತಸ್ಮಿನ್ ಗಿರೌ ನಿವಸತಿ ಯಕ್ಷೋ ಮಣಿವರೋವಶೀ ।
ಸೌಮ್ಯೈಃ ಸುಧಾರ್ಮಿಕೈಶ್ಚೈವ ಗುಹ್ಯಕೈಃ ಪರಿವಾರಿತಃ ॥ ೧೨ ॥

---

೮. ಪುಣ್ಯಕರವಾದ ಮಂದಾಕಿನೀನದಿಯೂ ಅಚ್ಛೋದವೆಂಬ ಮಹಾನದಿಯೂ ಕೂಡ ಭೂಮಧ್ಯದಲ್ಲಿ ಹರಿದು ಮಹಾಸಮುದ್ರವನ್ನು ಪ್ರವೇಶಿಸುವುವು.

೯-೧೦. ಕೈಲಾಸಪರ್ವತಕ್ಕೆ ಆಗ್ನೇಯಭಾಗದಲ್ಲಿ ಸಾಧುಪ್ರಾಣಿಗಳು, ಔಷಧಿಗಳು ಇವುಗಳಿಂದ ಸಹಿತವೂ ಮಹತ್ತೂ ಮನಶ್ಶಿಲಾಮಯವೂ ದಿವ್ಯವೂ ಆದ ಪಿಶಂಗನಾಮಕಗಿರಿಯೂ ಇದೆ. ಅದಕ್ಕೆ ಎದುರಾಗಿ ಕೆಂಪುಬಣ್ಣವುಳ್ಳದ್ದೂ ಅತಿ ಮಹತ್ತೂ ಸೂರ್ಯನಂತೆ ಕಾಂತಿಯುಳ್ಳದ್ದೂ ಆದ ಹೇಮ-ಶೃಂಗವೆಂಬ ಪರ್ವತವಿರುತ್ತದೆ. ಅದರ ಬುಡದಲ್ಲಿ ಅತಿವಿಶಾಲವೂ ದಿವ್ಯವೂ ಆದ ಲೋಹಿತವೆಂಬ ಸರಸ್ಸು ಇರುತ್ತದೆ.

೧೧. ಆ ಸರೋವರದಿಂದ ಪವಿತ್ರವೂ ಮಹತ್ತೂ ಆದ ಲೋಹಿತ್ಯನಾಮಕವಾದ ನದಿಯು ಜನಿಸಿ ಪ್ರವಹಿಸುತ್ತದೆ. ಅದರ ದಡದಲ್ಲಿ ದೇವಾರಣ್ಯ ವಿಶೋಕವೆಂಬ ಎರಡು ಮಹಾವನಗಳು ಇರುತ್ತವೆ.

೧೨. ಆ ಪರ್ವದಲ್ಲಿ ಸ್ವತಂತ್ರನೂ ಸೌಮ್ಯನೂ ಸುಧಾರ್ಮಿಕರಾದ ಗುಹ್ಯಕರಿಂದ ಸಹಿತನೂ ಆದ ಮಣಿವರನೆಂಬ ಯಕ್ಷನು ವಾಸಿಸುತ್ತಿರುವನು.

ಕೈಲಾಸಾದ್ದಕಿಣೇ ಪಾರ್ಶ್ವೇ ಕ್ರೂರಸತ್ವೌಷಧಂ ಗಿರಿಂ ।
ವೃತ್ರ ಕಾಯಾತ್ ಕಿಲೋತ್ಪನ್ನಮಂಜನಂ ತ್ರಿಕಕುತ್ಪ್ರತಿ ॥ ೧೩ ॥

ಸರ್ವಧಾತುಮಯಸ್ತತ್ರ ಸುಮಹಾ‌ನ್ ವೈದ್ಯುತೋಗಿರಿಃ ।
ತಸ್ಯ ಪಾದೇ ಸರಃ ಪುಣ್ಯಂ ಮಾನಸಂ ಸಿದ್ಧಸೇವಿತಂ ॥ ೧೪ ॥

ತಸ್ಮಾತ್ ಪ್ರಭವತೇ ಪುಣ್ಯಾ ಸರಯೂರ್ಲೋಕಭಾವನೀ ।
ತಸ್ಯಾಸ್ತೀರೇ ವನಂ ದಿವ್ಯಂ ವೈಭ್ರಾಜಂ ನಾಮ ವಿಶ್ರುತಂ ॥ ೧೫ ॥

ಕುಬೇರಾನುಚರಸ್ತತ್ರ ಪ್ರಹೇತ್ರೃತನಯೋ ವಶೀ ।
ಬ್ರಹ್ಮಪಾತೋ ನಿವಸತಿ ರಾಕ್ಷಸೋನಂತವಿಕ್ರಮಃ ॥
ಅಂತರಿಕ್ಷಚರೈ ಘೋರೈರ್ಯಾತುಧಾನಶತೈರ್ವೃತಃ ॥ ೧೬ ॥

---

೧೩. ಕೈಲಾಸದ ದಕ್ಷಿಣಭಾಗದಲ್ಲಿ ಕ್ರೂರಪ್ರಾಣಿಗಳು, ಔಷಧಿಗಳು ಇವುಗಳಿಂದ ಸಹಿತವೂ ವೃತ್ರಾಸುರ ವ್ಯಾಪಾರದಿಂದ ಪ್ರಖ್ಯಾತವೂ ಮರುಶಿಖರಗಳಿಂದ ಯುಕ್ತವೂ ಆದ ಅಂಜನಗಿರಿಯು ಶೋಭಿಸುತ್ತದೆ.

೧೪. ಆ ಗಿರಿಗೆ ಎದುರಾಗಿ ಸರ್ವಧಾತುಮಯವೂ ಅತ್ಯಂತ ದೊಡ್ಡದೂ ಆದ ವೈದ್ಯುತನಾಮಕಪರ್ವತವು ಹೊಳೆಯುತ್ತಿರುವುದು. ಆದರ ತಪ್ಪಲಲ್ಲಿ ಸಿದ್ಧರಿಂದ ಸೇವಿತವಾದ ಮಾನಸ ಸರೋವಿರುತ್ತದೆ.

೧೫. ಆ ಮಾನಸಸರೋವರದಿಂದ ಅತಿಪವಿತ್ರವೂ ಲೋಕಪಾವನಿಯೂ ಆದ ಸರಯೂನದಿಯು ಉತ್ಪನ್ನವಾಗುವುದು. ಆ ನದಿಯ ದಡದಲ್ಲಿ ದಿವ್ಯವೂ ಲೋಕಪ್ರಖ್ಯಾತವೂ ಆದ ವೈಭ್ರಾಜನಾಮಕವನವು ಪ್ರಜ್ವಲಿಸುತ್ತಿರುವುದು.

೧೬ ಆ ವನದಲ್ಲಿ ಕುಬೇರನ ಭೃತ್ಯನೂ ಪ್ರಹೋತನ ಪುತ್ರನೂ ಅನಂತ ವಿಕ್ರಮಿಯೂ ಸ್ವತಂತ್ರನೂ ಬ್ರಹ್ಮಪಾತನಾಮಕನೂ ಆದ ರಾಕ್ಷಸನು ಗಗನಚಾರಿಗಳೂ ಘೋರರೂಪಿಗಳೂ ಆದ ನೂರಾರು ರಾಕ್ಷಸರ ಸಂಗಡ ವಾಸಮಾಡುತ್ತಾನೆ.

ಅಪರೇಣ ತು ಕೈಲಾಸಾನ್ಮುಖ್ಯಸತ್ವೌಷಧಿಂ ಗಿರಿಂ ।
ಅರುಣಂ ಪರ್ವತಶ್ರೇಷ್ಠಂ ರುಕ್ಮಧಾತುಮಯಂ ಪ್ರತಿ ॥ ೧೭ ॥

ಭವಸ್ಯ ದಯಿತಃ ಶ್ರೀಮಾನ್ ಪರ್ವತೋ ಮೇಘಸನ್ನಿಭಃ ।
ಶಾತಕುಂಭಮಯೈಃ ಶುಭ್ರೈಃ ಶಿಲಾಜಾಲೈಃ ಸಮಾವೃತಃ ॥ ೧೮ ॥

ಶತಸಂಖ್ಯೈಸ್ತಾಪನೀಯೈಃ ಶೃಂಗೈರ್ದಿವಮಿವೋಲ್ಲಿಖನ್ ।
ಮುಂಜವಾನ್ ಸ ಮಹಾದಿವ್ಯೋ ದುರ್ಗಶೈಲೋ ಹಿಮಾಚಿತಃ ॥ ೧೯ ॥

ತಸ್ಮಿನ್ ಗಿರೌ ನಿವಸತಿ ಗಿರಿಶೋ ಧೂಮ್ರಲೋಹಿತಃ ।
ತಸ್ಯ ಪಾದಾತ್ ಪ್ರಭವತಿ ಶೈಲೋದಂ ನಾಮತಸ್ಸರಃ ॥ ೨೦ ॥

ತಸ್ಮಾತ್ ಪ್ರಭವತೇ ದಿವ್ಯಾ ಶೈಲೋದಾ ನಾಮ ನಿಮ್ನಗಾ ।
ಸಾ ಚಕ್ಷುಃ ಶೀತಯೋರ್ಮಧ್ಯೇ ಪ್ರವಿಷ್ಟಾ ಲವಣೋದಧಿಂ ॥ ೨೧ ॥

---

೧೭. ಕೈಲಾಸಗಿರಿಯ ಹಿಂಭಾಗದಲ್ಲಿ ಮುಖ್ಯಪ್ರಾಣಿಗಳು ಔಷಧಿಗಳು ಇವುಗಳಿಗೆ ಆಶ್ರಯವೂ ಸುವರ್ಣಧಾತುವಿಕಾರವೂ ಪರ್ವತೋತ್ತಮವೂ ಆದ ಅರುಣಾಚಲವು ಶೋಭಿಸುತ್ತಿದೆ.

೧೮-೨೦. ಆ ಪರ್ವತ ಮುಂಭಾಗದಲ್ಲಿ ಈಶ್ವರನಿಗೆ ಪ್ರಿಯವೂ ಕಾಂತಿಯುತವೂ ಮೇಘಸಮಾನಕಾಂತಿಯುಳ್ಳದ್ದೂ ಸುವರ್ಣಮಯವೂ ಶುಭ್ರವೂ ಆದ ಶಿಲಾಸಂಘಗಳಿಂದ ಯುಕ್ತವೂ ಚಿನ್ನದಮಯವಾದ ನೂರಾರು ಶಿಖರಗಳಿಂದ ಸ್ವರ್ಗವನ್ನು ಮುಟ್ಟುವಂತಿರುವುದೂ ಅತ್ಯಂತ ಸುಂದರವೂ ಹಿಮಮಯವೂ ಆದ ಮುಂಜನಾಮಕಮಹಾಗಿರಿಯು ದುರ್ಗಗಳಿಂದ ಹೊಳೆಯುತ್ತಿದೆ. ಆ ಗಿರಿವರದಲ್ಲಿ ಧೂಮ್ರಲೋಹಿತನಾಮಕನಾದ ಈಶ್ವರನು ವಾಸಮಾಡುತ್ತಾನೆ. ಆ ಗಿರಿಯ ಬುಡದಲ್ಲಿ ಶೈಲೋದವೆಂಬ ಸರೋವಿರುತ್ತದೆ

೨೧. ಆ ಸರೋವರದಿಂದ ಶೈಲೋದನಾಮಕನದಿಯು ಹುಟ್ಟಿ ಚಕ್ಷುಃಶೀತಗಿರಿಗಳ ಮಧ್ಯಭಾಗದಲ್ಲಿ ಹರಿದು ಲವಣಸಮುದ್ರವನ್ನು ಪ್ರವೇಶಿಸುತ್ತದೆ.

ತಸ್ಯಾಸ್ತೀರೆ ವನಂ ದಿವ್ಯಂ ವಿಶ್ರುತಂ ಸುರಭೀತಿ ವೈ ।
ಅಸ್ತ್ಯುತ್ತರೇಣ ಕೈಲಾಸಾಚ್ಚಿವಸತ್ವೌಷಧೋ ಗಿರಿಃ ॥ ೨೨ ॥

ಗೌರೋ ನಾಮ ಗಿರಿಸ್ತತ್ರ ಹರಿತಾಲಮಯಃ ಶುಭಃ ।
ಹಿರಣ್ಯಶೃಂಗಃ ಸುಮಹಾರ್ನ್ ದಿವ್ಯೋ ಮಣಿಮಯೋ ಗಿರಿಃ ॥ ೨೩ ॥

ತಸ್ಯ ಪಾದೇ ಮಹದ್ದಿವ್ಯಂ ಶುಭಂ ಕಾಂಚನವಾಲುಕಂ ।
ರಮ್ಯಂ ಬಿಂದುಸರೋ ನಾಮ ಯತ್ರಯಾತೋ ಭಗೀರಥಃ ॥ ೨೪ ॥

ಗಂಗಾನಿಮಿತ್ತಂ ರಾಜರ್ಷಿರುವಾಸ ಬಹುಲಾಃ ಸಮಾಃ ।
ದಿವಂ ಯಾಸ್ಯಂತಿ ಮೇ ಪೂರ್ವೇ ಗಂಗಾತೋಯ ಪರಿಪ್ಲುತಾಃ ॥ ೨೫ ॥

ತತ್ರ ತ್ರಿಪಥಗಾ ದೇವೀ ಪ್ರಥಮಂತು ಪ್ರತಿಷ್ಠಿತಾ ।
ಸೋಮಪಾದಪ್ರಸೂತಾ ಸಾ ಸಪ್ತಧಾ ಪ್ರತಿಪದ್ಯತೇ ॥ ೨೬ ॥

---

೨೨-೨೩ ಆ ನದಿಯ ದಡದಲ್ಲಿ ದಿವ್ಯವೂ ಸುರಭಿನಾಮಕವೂ ಆದ ವನವಿದೆ. ಕೈಲಾಸಗಿರಿಯ ಉತ್ತರಭಾಗದಲ್ಲಿ ಉತ್ತಮವಾದ ಪ್ರಾಣಿಗಳಿಗೂ ಔಷಧಿಗಳಿಗೂ ಆಶ್ರಯವೂ ಹರಿತಾಳಮಯವೂ ಶುಭಕರವೂ ಆದ ಗೌರವೆಂಬ ಪರ್ವತವು ಹೊಳೆಯುತ್ತಿದೆ. ಅದು ಸುವರ್ಣಶಿಖರಗಳಿಂದ ಯುಕ್ತವೂ ಅತ್ಯಂತ ಮಹತ್ತು ದಿವ್ಯವೂ ಮಣಿಮಯವೂ ಆಗಿದೆ.

೨೪. ಆ ಮಣಿಪರ್ವತದ ತಪ್ಪಲಲ್ಲಿ ಅತಿ ವಿಶಾಲವೂ ದಿವ್ಯವೂ ಶುಭಕರವೂ ಚಿನ್ನದಮರಳುಳ್ಳದ್ದೂ ರಮ್ಯವೂ ಆದ ಬಿಂದುಸರೋವರವಿರುತ್ತದೆ. ಭಗೀರಥ ಮಹಾರಾಜನು ಅಲ್ಲಿಗೆ ಹೋಗಿ ಗಂಗಾದೇವಿಗೋಸ್ಕರ ತಪಸ್ಸನ್ನು ಮಾಡಿದನು.

೨೫. ಭಗೀರಥಮಹಾರಾಜನು ಆ ಬಿಂದುಸರೋವರದಲ್ಲಿ ಗಂಗಾನಿಮಿತ್ತವಾಗಿ ಬಹುಕಾಲ ತಪಸ್ಸುಮಾಡಿದನು. ನನ್ನ ತಾತಂದಿರು ಗಂಗಾಜಲದ ಸಂಪರ್ಕದಿಂದ ಪರಿಶುದ್ಧರಾಗಿ ಸ್ವರ್ಗಕ್ಕೆ ಹೋಗುವರೆಂದು ತಿಳಿದು ಗಂಗಾದೇವಿಯನ್ನು ಪ್ರಾರ್ಥಿಸಿದನು.

೨೬. ಚಂದ್ರನ ಕಿರಣಗಳಿಂದ ಉತ್ಪನ್ನಳಾದ ಗಂಗಾದೇವಿಯು ಮೊದಲು ಮೂರು ಮಾರ್ಗಗಳಿಂದ ಹೊರಟು ಅನಂತರ ಸಪ್ತಮಾರ್ಗಗಳಿಂದ ಪ್ರವಹಿಸುವಳು.

ಯೂಪಾ ಮಣಿಮಯಾಸ್ತತ್ರ ಚಿತಯಶ್ಚ ಹಿರಣ್ಮಯಾಃ ।
ತತ್ರೇಷ್ಟ್ವಾ ತು ಗತಃ ಶರ್ವಂ ಶಕ್ರಃ ಸರ್ವೈಃ ಸುರೈಃ ಸಹ ॥ ೨೭ ॥

ದಿವಿಚ್ಛಾಯಾಪಥೋ ಯಸ್ತು ಅನುನಕ್ಷತ್ರಮಂಡಲಂ ।
ದೃಶ್ಯತೇ ಭಾಸ್ವರೋ ರಾತ್ರೌ ದೇವೀ ತ್ರಿಪಥಗಾ ತು ಸಾ ॥ ೨೮ ॥

ಅಂತರಿಕ್ಷಂ ದಿವಂಚೈವ ಭಾವಯಂತೀ ಭುವಂಗತಾ ।
ಭವೋತ್ತಮಾಂಗೇ ಪತಿತಾ ಸಂರುದ್ಧಾ ಯೋಗಮಾಯಯಾ ॥ ೨೯ ॥

ತಸ್ಯಾ ಯೇ ಬಿಂದವಃ ಕೇಚಿತ್ ಕ್ರುದ್ಧಾಯಾಃ ಪತಿತಾಃ ಕ್ಷಿತೌ ।
ಕೃತಂ ಬಿಂದುಸರಸ್ತತ್ರ ತತೋಬಿಂದುಸರಃ ಸ್ಮೃತಂ ॥ ೩೦ ॥

ತತೋ ನಿರುದ್ಧಾ ದೇವೀ ಸಾ ಭವೇನ ಸ್ಮಯತಾಕಿಲ ।
ಚಿಂತಯಾಮಾಸ ಮನಸಾ ಶಂಕರಕ್ಷೇಪಣಂ ಪ್ರತಿ ॥ ೩೧ ॥

---

೨೭. ಅಲ್ಲಿಯ ಯೂಪಸ್ತಂಭಗಳು ರತ್ನಮಯಗಳಾಗಿಯೂ ವೇದಿಕೆಗಳು ಸುವರ್ಣಮಯವಾಗಿಯೂ ಇದ್ದವು. ಆ ಮಣಿಪರ್ವತದಲ್ಲಿಯೇ ದೇವೇಂದ್ರನು ದೇವತೆಗಳ ಸಂಗಡ ಈಶ್ವರೋದ್ದೇಶ್ಯಕವಾಗಿ ಯಾಗವನ್ನು ಮಾಡಿದನು.

೨೮. ಆಕಾಶದಲ್ಲಿರುವ ನಕ್ಷತ್ರಮಂಡಲದ ಸಮೀಪದಲ್ಲಿ ಶುಭ್ರವಾದ ಗಂಗಾ ದೇವಿಯು ಸಂಚರಿಸಿದ ಮೂರು ಮಾರ್ಗಗಳು ಸ್ಪಷ್ಟವಾಗಿ ರಾತ್ರಿಯ ವೇಳೆಯಲ್ಲಿ ಕಾಣುತ್ತಿವೆ

೨೯. ಗಂಗೆಯು ಮೊದಲು ಸ್ವರ್ಗದಲ್ಲಿಯೂ ಅಂತರಿಕ್ಷದಲ್ಲಿಯೂ ಪ್ರಕಾಶಿಸುತ್ತಾ ತರುವಾಯ ಭೂಮಿಗೆ ಬಂದಳು. ಭೂಮಿಗೆ ಬರುವಾಗ ಮೊದಲು ಈಶ್ವರನ ಶಿರಸ್ಸಿನಲ್ಲಿ ಧುಮುಕಿದಳು. ಬಳಿಕ ಪರಮೇಶ್ವರನ ಯೋಗಮಹಿಮೆಯಿಂದ ಅವನ ಜಟೆಯಲ್ಲಿಯೇ ಮಾಯವಾದಳು.

೩೦. ಗಂಗೆಯು ರೋಷಾವೇಶದಿಂದ ಈಶ್ವರನ ತಲೆಯ ಮೇಲೆ ಬೀಳುವಾಗ ಕೆಲವು ಜಲಬಿಂದುಗಳು ಎಲ್ಲಿ ಬಿದ್ದವೋ ಅಲ್ಲಿಯೇ ಅವು ಸರೋವರವಾಗಿ ಬಿಂದು ಸರೋವರವೆಂದು ಲೋಕದಲ್ಲಿ ಪ್ರಖ್ಯಾತವಾಗಿವೆ.

೩೧. ಈಶ್ವರನು ಮಂದಹಾಸಯುಕ್ತನಾಗಿ ಆ ಗಂಗಾದೇವಿಯನ್ನು ತನ್ನ ಜಟಾಜೂಟದಲ್ಲಿಯೇ ಧರಿಸಿದನು. ಆಗ ಗಂಗೆಯು ತನ್ನ ಪ್ರವಾಹದಲ್ಲಿಯೇ ಈಶ್ವರನನ್ನು ಸೆಳೆದುಕೊಂಡು ಹೋಗಬೇಕೆಂದು ಮನಸ್ಸಿನಲ್ಲಿ ಯೋಚಿಸಿದಳು.

ಭಿತ್ವಾ ವಿಶಾಮಿ ಪಾತಾಲಂ ಸ್ರೋತಸಾ ಗೃಹ್ಯ ಶಂಕರಂ ।
ಜ್ಞಾತ್ವಾ ತಸ್ಯಾ ಅಭಿಪ್ರಾಯಂ ಕ್ರೂರಂ ದೇವ್ಯಾ ಚಿಕೀರ್ಷಿತಂ ॥ ೩೨ ॥

ತಿರೋಭಾವಯಿತುಂ ಬುದ್ಧಿರಾಸೀದಂಗೇಷು ತಾಂ ನದೀಂ ।
ತಸ್ಯಾವಲೇಪಂ ತಂ ಬುದ್ಧ್ವಾ ನದ್ಯಾಃ ಕ್ರುದ್ಧಸ್ತು ಶಂಕರಃ ॥
ನಿರುಧ್ಯತು ಶಿರಸ್ಯೇನಾಂ ವೇಗೇನ ಪತಿತಾಂ ಭುವಿ ॥ ೩೩ ॥

ಏತಸ್ಮಿನ್ನೇವ ಕಾಲೇ ತು ದೃಷ್ಟ್ವಾ ರಾಜಾನಮಗ್ರತಃ ।
ಧಮನೀಸಂತತಂ ಕ್ಷೀಣಂ ಕ್ಷುಧಾಪರಿಗತೇಂದ್ರಿಯಂ ॥ ೩೪ ॥

ಅನೇನ ತೋಷಿತಶ್ಚಾಹಂ ನದ್ಯರ್ಥಂ ಪೂರ್ವಮೇವ ಹಿ ।
ಬುದ್ಧ್ವಾಸ್ಯ ವರದಾನಂ ತು ಕೋಪಂ ನಿಯತವಾಂಸ್ತು ಸಃ ॥ ೩೫ ॥

---

೩೨-೩೩ ಆಗ ಗಂಗೆಯು ಭೂಮಿಯನ್ನು ಭೇದಿಸಿಕೊಂಡು ಪ್ರವಾಹಸಮೇತವಾಗಿ ಈಶ್ವರನನ್ನು ಕೊಚ್ಚಿಕೊಂಡು ಪಾತಾಳಲೋಕಕ್ಕೆ ಹೋಗಬೇಕೆಂದು ಯೋಚಿಸಿದಳು. ಆಗ ಈಶ್ವರನು ಗಂಗಾದೇವಿಯ ದುರಭಿಪ್ರಾಯವನ್ನು ತಿಳಿದು ತನ್ನ ದೇಹದಲ್ಲಿಯೇ ಆ ಗಂಗೆಯನ್ನು ಮಾಯವನ್ನಾಗಿ ಮಾಡಲು ಯೋಚಿಸಿದನು. ಹೀಗೆ ಪರಸ್ಪರಾಭಿಪ್ರಾಯಗಳು ಇಬ್ಬರಿಗೂ ತಿಳಿಯಿತು. ಈಶ್ವರನು ಸಿಟ್ಟಾಗಿ ಅತಿ ವೇಗವಾಗಿ ಭೂಮಿಯಲ್ಲಿ ಧುಮುಕುವ ಗಂಗೆಯನ್ನು ತಲೆಯಲ್ಲಿಯೇ ಅಡಗಿಸಿದನು.

೩೪. ಅಷ್ಟರಲ್ಲಿ ಈಶ್ವರನು ಎದುರಿಗೆ ಬಂದುನಿಂತಿರುವ ಭಗೀರಥನನ್ನು ನೋಡಿ ಇವನು ತಪಃಕ್ಲೇಶಗಳಿಂದ ಕ್ಷೀಣನೂ ಖಿನ್ನನೂ ಕ್ಷುತ್ಪಿಪಾಸಾಪೀಡಿತನೂ ಆಗಿರುವನೆಂದು ತಿಳಿದನು.

೩೫. ಈ ಭಗೀರಥನು ಈ ಗಂಗಾನದಿಯ ನಿಮಿತ್ತವಾಗಿಯೇ ಮೊದಲೇ ನನ್ನನ್ನು ಕುರಿತು ಘೋರತಪಸ್ಸನ್ನು ಮಾಡಿ ಸಂತೋಷಗೊಳಿಸಿರುವನು. ಆಗ ನಾನೂ ಬ್ರಹ್ಮನೂ ವರಗಳನ್ನು ಕೊಟ್ಟಿರುತ್ತೇವೆ ಎಂದು ತಿಳಿದು ಕೋಪವನ್ನು ಶಮನ ಮಾಡಿಕೊಂಡನು.

ಬ್ರಹ್ಮಣೋ ಹಿ ವಚಃ ಶ್ರುತ್ವಾ ಪ್ರತಿಜ್ಞಾಧಾರಣಂ ಪ್ರತಿ ।
ತತೋ ವಿಸರ್ಜಯಾಮಾಸ ಸಂರುದ್ಧಾಂ ಸ್ವೇನ ತೇಜಸಾ ।
ನದೀಂ ಭಗೀರಥಸ್ಯಾರ್ಥೇ ತಪಸೋಗ್ರೇಣ ತೋಷಿತಃ ॥ ೩೬ ॥

ತತೋ ವಿಸೃಜ್ಯಮಾನಾಯಾಃ ಸ್ರೋತಸ್ತತ್ಸಪ್ತತಾಂ ಗತಂ ।
ತ್ರಯಃ ಪ್ರಾಚೀಮಭಿಮುಖಂ ಪ್ರತೀಚೀಂ ತ್ರಯ ಏವ ತು ॥ ೩೭ ॥

ನದ್ಯಾಃ ಸ್ರೋತಸ್ತು ಗಂಗಾಯಾಃ ಪ್ರತ್ಯಪದ್ಯತ ಸಪ್ತಧಾ ।
ನಲಿನೀ ಹ್ರಾದಿನೀ ಚೈವ ಪಾವನೀ ಚೈವ ಪ್ರಾಗ್ಗತಾ ॥ ೩೮ ॥

ಸೀತಾ ಚಕ್ಷುಶ್ಚ ಸಿಂಧುಶ್ಚ ಪ್ರತೀಚೀಂ ದಿಶಮಾಶ್ರಿತಾಃ ।
ಸಪ್ತಮೀತ್ವನುಗಾ ತಾಸಾಂ ದಕ್ಷಿಣೇನ ಭಗೀರಥೀ ॥ ೩೯ ॥

---

೩೬. ಆಗ ಪರಮೇಶ್ವರನು ಬ್ರಹ್ಮದೇವನ ಮಾತನ್ನು ಸ್ಮರಿಸಿಕೊಂಡು ಅವನ ಮಾತನ್ನು ನೆರವೇರಿಸುವುದಕ್ಕಾಗಿ ಸ್ವಶಕ್ತಿಯಿಂದ ತನ್ನ ಶಿರಸ್ಸಿನಲ್ಲಿ ತಡೆದಿದ್ದ ಆ ಗಂಗೆಯನ್ನು ಭಗೀರಥಮಹಾರಾಜನಿಗೋಸ್ಕರವಾಗಿ ಅವನ ಉಗ್ರತಪಸ್ಸಿಗೆ ಮೆಚ್ಚಿ ಫಲರೂಪವಾಗಿ ಬಿಟ್ಟುಕೊಟ್ಟನು.

೩೭. ಈಶ್ವರನು ತಲೆಯಿಂದ ಬಿಟ್ಟ ಗಂಗೆಯು ಏಳುವಿಧವಾಗಿ ಅವುಗಳಲ್ಲಿ ಮೂರುನದಿಗಳು ಪೂರ್ವಾಭಿಮುಖವಾಗಿಯೂ ಇತರ ಮೂರು ನದಿಗಳು ಪಶ್ಚಿಮಾಭಿಮುಖವಾಗಿಯೂ ಉಳಿದ ಒಂದು ನದಿಯು ಭಗೀರಥನ ಮಾರ್ಗಾನುಸಾರವಾಗಿಯೂ ಹೊರಟವು.

೩೮-೩೯. ಹೀಗೆ ಗಂಗಾಪ್ರವಾಹವು ಏಳುವಿಧವಾಗಿ ಹೊರಟವು. ಆ ಏಳು ನದಿಗಳಲ್ಲಿ ನಲಿನೀ, ಹ್ರಾದಿನೀ, ಪಾವನೀ ಎಂಬ ಮೂರು ನದಿಗಳು ಪೂರ್ವಕ್ಕೂ ಸೀತಾ, ಚಕ್ಷುಃ, ಸಿಂಧು ಎಂಬ ಮೂರು ನದಿಗಳು ಪಶ್ಚಿಮಕ್ಕೂ ಉಳಿದ ಒಂದು ನದಿಯು ಭಗೀರಥನ ಮಾರ್ಗವನ್ನು ಅನುಸರಿಸಿದ್ದರಿಂದ ಭಾಗೀರಥೀ ಎಂಬ ನಾಮದಿಂದ ಭಗೀರಥನನ್ನು ಅನುಸರಿಸಿ ದಕ್ಷಿಣಕ್ಕೂ ಹೊರಟವು.

ತಸ್ಮಾದ್ಭಾಗೀರಥೀ ಯಾ ಸಾ ಪ್ರವಿಷ್ಟಾ ಲವಣೋದಧಿಂ ।
ಸಪ್ತೈತಾ ಭಾವಯಂತೀಹ ಹಿಮಾಹ್ವಂ ವರ್ಷಮೇವ ತು ॥ ೪೦ ॥

ಪ್ರಸೂತಾಃ ಸಪ್ತ ನದ್ಯಸ್ತಾಃ ಶುಭಾ ಬಿಂದುಸರೋದ್ಭವಾಃ ।
ನಾನಾದೇಶಾನ್ ಭಾವಯನ್ತ್ಯೋ ಮ್ಲೇಚ್ಛಪ್ರಾಯಾಂಶ್ಚ ಸರ್ವಶಃ ॥ ೪೧ ॥

ಉಪಗಚ್ಛಂತಿ ತಾಃ ಸರ್ವಾ ಯತೋ ವರ್ಷತಿ ವಾಸವಃ ।
ಸಿರಿಂಧ್ರಾನ್ ಕುಂತಲಾಶ್ಚೀನಾನ್ ಬರ್ಬರಾನ್ಯವಸಾನ್ ದ್ರುಹಾನ್ ॥ ೪೨ ॥

ರುಷಾಣಾಂಶ್ಚ ಕುಣಿಂದಾಂಶ್ಚ ಅಂಗಲೋಕವರಾಶ್ಚಯೇ ।
ಕೃತ್ವಾ ದ್ವಿಧಾ ಸಿಂಧುಮರುಂ ಸೀತಾಗಾತ್ಪಶ್ಚಿಮೋದಧಿಂ ॥ ೪೩ ॥

ಅಥ ಚೀನಮರೂಂಶ್ಚೈವ ನಂಗಣಾನ್ ಸರ್ವಮೂಲಿಕಾನ್ ।
ಸಾಧ್ರಾಂಸ್ತುಷಾರಾಂಸ್ತಂಪಾಕಾನ್ ಪಹ್ನವಾನ್ ದರದಾನ್ ಶಕಾನ್ ।
ಏತಾನ್ ಜನಪದಾನ್ ಚಕ್ಷುಃ ಸ್ರಾವಯಂತೀ ಗತೋದಧಿಂ ॥ ೪೪ ॥

---

೪೦. ಭಾಗೀರಥೀನಾಮಕಳಾದ ಗಂಗೆಯು ಹಿಮಾಲಯದಿಂದ ಹೊರಟು ಅನೇಕ ದೇಶಗಳಲ್ಲಿ ಸಂಚರಿಸಿ ಕೊನೆಗೆ ಸಮುದ್ರವನ್ನು ಪ್ರವೇಶಮಾಡಿತು. ಹೀಗೆ ಏಳು ಗಂಗಾನದಿಗಳು ಹಿಮವರ್ಷವನ್ನು ಪವಿತ್ರವನ್ನಾಗಿ ಮಾಡುತ್ತಿರುತ್ತವೆ.

೪೧. ಅತಿ ಪವಿತ್ರವಾದ ಆ ಏಳು ನದಿಗಳು ಬಿಂದುಸರಸ್ಸಿನಲ್ಲೇ ಹುಟ್ಟಿ ಪವಿತ್ರವಾದ ನಾನಾದೇಶಗಳಲ್ಲಿಯೂ ಮ್ಲೇಂಚ್ಛದೇಶಗಳಲ್ಲಿಯೂ ಸಂಚರಿಸಿ ಸಮುದ್ರವನ್ನು ಸೇರುವುವು.

**೪೨-೪೩.** ದೇವೇಂದ್ರನು ಯಾವದೇಶದಲ್ಲಿ ವಿಶೇಷವಾಗಿ ಮಳೆಯನ್ನು ಸುರಿಸುವನೋ ಆ ದೇಶಗಳಲ್ಲಿ ಗಂಗೆಯು ಸಂಚರಿಸುವಳು. ಪಶ್ಚಿಮದಿಕ್ಕಿಗೆ ಹೋದಂಥ ಸೀತಾನದಿಯು ಸಿರಿಂಧ್ರ, ಕುಂತಲ, ಚೀನ, ಬರ್ಬರ, ಯವನ, ದ್ರುಹ, ರುಷಾಣ, ಕುಣಿಂದ, ಅಂಗ, ಲೋಕವರವೇ ಮೊದಲಾದ ದೇಶಗಳಲ್ಲಿಯೂ ಸಿಂಧುದೇಶದ ಮರುಭೂಮಿಯ ಮಧ್ಯದಲ್ಲಿಯೂ ಹರಿದು ಪಶ್ಚಿಮಸಮುದ್ರವನ್ನು ಸೇರುತ್ತದೆ.

೪೪. ತರುವಾಯ ಚಕ್ಷುರ್ನಾಮಕಗಂಗೆಯು ಚೀನ, ಮರು, ನಂಗಣ, ಸರ್ವಮೂಲಿಕ, ಸಾಂಧ್ರ, ತುಷಾರ, ತಂಪಾಕ, ಪನ್ಹವ, ದರದ, ಶಕ ಈ ದೇಶಗಳಲ್ಲಿ ಸಂಚರಿಸಿ ಪಶ್ಚಿಮಸಮುದ್ರವನ್ನು ಸೇರುತ್ತದೆ.

ದರದಾಂಶ್ಚ ಸಕಾಶ್ಮೀರಾನ್ ಗಾಂಧಾರಾನ್ ವರಪಾನ್ ಹ್ರದಾನ್ ।
ಶಿವಪೌರಾನಿಂದ್ರಹಾಸಾನ್ ವದಾತೀಂಶ್ಚ ವಿಸರ್ಜಯಾನ್ ॥ ೪೫ ॥

ಸೈಂಧವಾನ್ ರಂಧ್ರಕರಕಾನ್ ಭ್ರಮರಾಭೀರರೋಹಕಾನ್ ।
ಶುನಾಮುಖಾಂಶ್ಚೋರ್ಧ್ವಮನೂನ್ ಸಿದ್ಧಚಾರಣಸೇವಿತಾನ್ ॥ ೪೬ ॥

ಗಂಧರ್ವಾನ್ ಕಿನ್ನರಾನ್ ಯಕ್ಷಾನ್ ರಕ್ಷೋವಿದ್ಯಾಧರೋರಗಾನ್ ।
ಕಲಾಪಗ್ರಾಮಕಾಂಶ್ಚೈವ ಪಾರದಾನ್ ಸೀಗಣಾನ್ ಖಸಾನ್ ॥ ೪೭ ॥

ಕಿರಾತಾಂಶ್ಚ ಪುಲಿದಾಂಶ್ಚ ಕುರೂನ್ ಸಭರತಾನಪಿ ।
ಪಂಚಾಲಕಾಶಿಮಾತ್ಸ್ಯಾಂಶ್ಚ ಮಗಧಾಂಗಾಂಸ್ತಥೈವ ಚ ॥ ೪೮ ॥

ಬ್ರಹ್ಮೋತ್ತರಾಂಶ ವಂಗಾಶ್ಚ ತಾಮಲಿಪ್ತಾಂಸ್ತಥೈವ ಚ ।
ಏತಾನ್ ಜನಪದಾನಾರ್ಯಾನ್ ಗಂಗಾ ಭಾವಯತೇ ಶುಭಾನ್ ॥ ೪೯ ॥

ತತಃ ಪ್ರತಿಹತಾ ವಿಂಧ್ಯೇ ಪ್ರವಿಷ್ಟಾ ದಕ್ಷಿಣೋದಧಿಂ ।
ತತಶ್ಚಾಹ್ಲಾದಿನೀ ಪುಣ್ಯಾ ಪ್ರಾಚೀನಾಭಿಮುಖೀ ಯಯೌ ॥ ೫೦ ॥

---

೪೬-೫೦. ಪ್ರಸಿದ್ಧಳಾದ ಗಂಗೆಯಾದರೋ ದರದ, ಕಾಶ್ಮೀರ, ಗಾಂಧಾರ, ವರಪ, ಹ್ರದ, ಶಿವಪೌರ, ಇಂದ್ರಹಾಸ, ವದಾತೀ, ವಿಸರ್ಜಯ, ಸೈಂಧವ, ರಂಧ್ರ ಕರಕ, ಭ್ರಮರ, ಆಭೀರ, ರೋಹಕ, ಶುನಾಮುಖ, ಊರ್ಧ್ವಮನು, ಸಿದ್ಧ ಚಾರಣರು, ಗಂಧರ್ವ, ಯಕ್ಷ, ರಾಕ್ಷಸ, ವಿಧ್ಯಾಧರ, ಉರಗ, ಕಿನ್ನರ ಇವರಿಂದ ಸೇವಿತವಾದ ದೇಶ ಕಲಾಪಗ್ರಾಮ, ಪಾರದ, ಸೀಗಣ, ಖಸ, ಕಿರಾತ, ಪುಲಿಂದ, ಕುರು, ಭಾರತ, ಪಾಂಚಾಲ, ಕಾಶಿ, ಮತ್ಸ್ಯ, ಮಗಧ, ಅಂಗ, ಬ್ರಹ್ಮೋತ್ತರ, ವಂಗ, ತಾಮಲಿಪ್ತ ಇವೇ ಮೊದಲಾದ ದೇಶಗಳನ್ನು ಪವಿತ್ರವನ್ನಾಗಿಮಾಡಿ ಭಕ್ತರ ಭುಕ್ತಿಮುಕ್ತಿಗಳನ್ನು ಕೊಡುತ್ತಾ,ವಿಂಧ್ಯಗಿರಿಯನ್ನು ಹೊಕ್ಕು ದಕ್ಷಿಣಸಮುದ್ರವನ್ನು ಸೇರುವುದು. ತರುವಾಯ ಆಹ್ಲಾದಿನೀನಾಮಕಗಂಗೆಯು ಪಶ್ಚಿಮಾಭಿಮುಖವಾಗಿ ಹರಿಯುವುದು.

ಪ್ಲಾವಯಂತ್ಯುಪಭೋಗಾಂಶ್ಚ ನಿಷಧಾನಾಂಚ ಜಾತಯಃ ।
ಧೀವರಾನೃಷಿಕಾಂಶ್ಚೈವ ತಥಾ ನೀಲಮುಖಾನಪಿ ॥ ೫೧ ॥

ಕೇರಲಾನುಷ್ಟ್ರಕರ್ಣಾಂಶ್ಚ ಕಿರಾತಾನಪಿ ಚೈವ ಹಿ ।
ಕಾಲೋದರಾನ್ ವಿವರ್ಣಾಂಶ್ಚ ಕುಮಾರಾನ್ ಸ್ವರ್ಣಭೂಷಿತಾನ್ ॥ ೫೨ ॥

ಸಾ ಮಂಡಲೇ ಸಮುದ್ರಸ್ಯ ತಿರೋಭೂತಾನುಪೂರ್ವತಃ ।
ತತಸ್ತು ಪಾವನೀ ಚೈವ ಪ್ರಾಚೀಮೇವ ದಿಶಂಗತಾ ॥ ೫೩ ॥

ಅಪಥಾನ್ ಭಾವಯಂತೀಹ ಇಂದ್ರದ್ಯುಮ್ನಸರೋಪಿ ಚ ।
ತಥಾ ಖರಪಥಾಂಶ್ಚೈವ ಇಂದ್ರಶಂಕುಪಥಾನಪಿ ॥ ೫೪ ॥

ಮಧ್ಯೇನೋದ್ಯಾನಮಸ್ಕಾರಾನ್ ಕುಥಪ್ರಾವರಣಾನ್ ಯಯೌ ।
ಇಂದ್ರದ್ವೀಪಸಮುದ್ರೇ ತು ಪ್ರವಿಷ್ಟಾ ಲವಣೋದಧಿಂ ॥ ೫೫ ॥

ತತಶ್ಚ ನಲಿನೀ ಚಾಗಾತ್ ಪ್ರಾಚೀಮಾಶಾಂ ಜವೇನ ತು ।
ತೋಮರಾನ್ ಭಾವಯಂತೀಹ ಹಂಸಮಾರ್ಗಾನ್ ಸಹೂಹುಕಾನ್ ॥ ೫೬ ॥

---

೫೧–೫೩. ಹ್ಲಾದಿನೀನದಿಯು ಉಪಭೋಗ, ನಿಷಾದ, ಧೀವರ, ಋಷಿಕ, ನೀಲ, ಕೇರಲ, ಉಷ್ಟ್ರಕರ್ಣ, ಕಿರಾತ, ಕಾಲೋದರ, ವಿವರ್ಣ, ಕುಮಾರ, ಸ್ವರ್ಣಭೂಷಿತ ಇವೇ ಮೊದಲಾದ ದೇಶಗಳಲ್ಲಿ ಸಂಚರಿಸಿ ಪೂರ್ವಸಾಗರವನ್ನು ಪ್ರವೇಶಿಸುವುದು. (ಅದು ಈ ದೇಶಗಳಲ್ಲಿ ಸಂಚರಿಸಿ ಸಮುದ್ರವನ್ನು ಪ್ರವೇಶಿಸುವುದು). ಅನಂತರ ಪಾವನೀನದಿಯು ಪಶ್ಚಿಮಾಭಿಮುಖವಾಗಿ ಹರಿಯುವುದು.

೫೪–೫೫. ಪಾವನೀನದಿಯು ಅಪಥ, ಇಂದ್ರದ್ಯುಮ್ನ, ಸರಸ್ಸು, ಖರಪಥ, ಇಂದ್ರಶಂಕುಪಥ, ಮದ್ಯೋಧ್ಯಾನ, ಅಸ್ಕಾರ, ಕುಥಪ್ರಾವರಣ ಈ ದೇಶಗಳಲ್ಲಿ ಪ್ರವಹಿಸಿ ಇಂದ್ರದ್ವೀಪದ ಮೂಲಕವಾಗಿ ಸಮುದ್ರವನ್ನು ಸೇರುವುದು.

೫೬-೫೮. ಅನಂತರ ನಲಿನೀನಾಮಕ ಗಂಗೆಯು ಪೂರ್ವಾಭಿಮುಖವಾಗಿ ಹೊರಟು ತೋಮರ, ಹಂಸಮಾರ್ಗ, ಸಹೂಹುಕ ಅವುಗಳ ಮೂಲಕ ಹೊರಟು

ಪೂರ್ವಾನ್ ದೇಶಾಂಶ್ಚ ಸೇವಂತೀ ಭಿತ್ವಾ ಸಾ ಬಹುಧಾ ಗಿರೀನ್ ।
ಕರ್ಣಪ್ರಾವರಣಾಂಶ್ಚೈವ ಪ್ರಾಪ್ಯ ಚಾಶ್ವಮುಖಾನಪಿ ॥ ೫೭ ॥

ಸಿಕತಾಪರ್ವತಪರೂನ್ ಗತ್ವಾ ವಿದ್ಯಾಧರಾನ್ ಯಯೌ ।
ನೇಮಿಮಂಡಲಕೋಷ್ಠೇ ತು ಪ್ರವಿಷ್ಟಾ ಸಾ ಮಹೋದಧಿಂ ॥ ೫೮ ॥

ತಾಸಾಂ ನದ್ಯುಪನದ್ಯಶ್ಚ ಶತಶೋಽಥ ಸಹಸ್ರಶಃ ।
ಉಪಗಚ್ಛಂತಿ ತಾಃ ಸರ್ವಾ ಯತೋ ವರ್ಷತಿ ವಾಸವಃ ॥ ೫೯ ॥

ವಸ್ಯೋಕಸಾಯಾಸ್ತೀರೇ ತು ವಾರಿ ಸುರಭಿವಿಶ್ರುತೇ ।
ಹರಿಶೃಂಗೇ ತು ವಸತಿ ವಿದ್ವಾನ್ ಕೌಬೇರಕೋ ವಶೀ ॥ ೬೦ ॥

ಯಜ್ಞೋಪೇತಃ ಸ ಸುಮಹಾನಮಿತೌಜಾಃ ಸುವಿಕ್ರಮಃ ।
ತತ್ರಾಗಸ್ತ್ಯೈಃ ಪರಿವೃತೋ ವಿದ್ವದ್ಭಿರ್ಬ್ರಹ್ಮರಾಕ್ಷಸೈಃ ।
ಕುಬೇರಾನುಚರಾ ಹ್ಯೇತೇ ಚತ್ವಾರಸ್ತತ್ಸಮಾಃ ಸ್ಮೃತಾಃ ॥ ೬೧ ॥

---

ಪೂರ್ವದಿಕ್ಕಿನಲ್ಲಿ ಸಂಚರಿಸಿ ಅನೇಕ ಪರ್ವತಗಳನ್ನು ಭೇದಿಸಿಕೊಂಡು ಕರ್ಣಪ್ರಾವರಣ ಅಶ್ವಮುಖ, ಮರಭೂಮಿಯ ಸಿಕತಾಪರ್ವತ, ವಿಧ್ಯಾದರಗಿರಿಯ ಮೂಲಕ ಹರಿದು ನೇಮಿಮಂಡಲದ ಕೋಣೆಯಲ್ಲಿ ಸಮುದ್ರವನ್ನು ಸೇರುತ್ತದೆ.

೫೯. ಮೇಲೆ ಹೇಳಿದ ನದಿಗಳಿಂದ ಹುಟ್ಟಿದ ಅನೇಕ ಉಪನದಿಗಳು ಸಹಸ್ರಾರು ಸಂಖ್ಯೆಯಾಗಿ ಮಳೆಯು ವಿಶೇಷವಾಗಿ ಬೀಳುವ ದೇಶಗಳಲ್ಲಿ ಸಂಚರಿಸಿ ಸಮುದ್ರ ವನ್ನು ಸೇರುತ್ತವೆ.

೬೦. ಪಂಡಿತನೂ ಸ್ವತಂತ್ರನೂ ಆದ ಕೌಬೇರಕನು (ಕುಬೇರನ ಭೃತ್ಯನು) ವಸ್ತೌಕಸಾತೀರದಲ್ಲಿರುವ ಜಲದಿಂದಲೂ ಸುವಾಸನೆಯಿಂದಲೂ ಸಮೃದ್ಧವಾದ ಹರಿ ಶೃಂಗಗಿರಿಯಲ್ಲಿ ವಾಸಮಾಡುವನು

೬೧. ಈ ಕುಬೇರನ ಭೃತ್ಯನು ಯ ಜಮಾನಶಾಲಿಯೂ ಮಹಾತ್ಮನೂ ಅಮಿತ ಪರಾಕ್ರಮಿಯೂ ಮಹಾತೇಜಸ್ವಿಯೂ ಆಗಿ ಮಹಾಪಂಡಿತರಾದ ಅಗಸ್ತ್ಯರು, ಬ್ರಾಹ್ಮಣರು, ರಾಕ್ಷಸರು ಇವರಿಂದ ಕೂಡಿ ಬ್ರಹ್ಮವಿಚಾರವನ್ನು ಮಾಡುವನು. ಇಂತಹ ಕುಬೇರನ ಭೃತ್ಯರು ನಾಲ್ವರು ಇರುವರು.

ಏವಮೇವ ತು ವಿಜ್ಞೇಯಾ ಋದ್ಧಿಃ ಪರ್ವತವಾಸಿನಾಂ ।
ಪರಸ್ಪರೇಣ ದ್ವಿಗುಣಾ ಧರ್ಮತಃ ಕಾಮತೋಽರ್ಥತಃ ॥ ೬೨ ॥

ಹೇಮಕೂಟಸ್ಯ ಪೃಷ್ಠೇ ತು ಸಾಯನಂ ನಾಮ ತತ್ಸರಃ ।
ಮನಸ್ವಿನೀ ಪ್ರಭವತಿ ತಸ್ಮಾಜ್ಜ್ಯೋತಿಷ್ಮತೀ ಚ ಸಾ ॥ ೬೩ ॥

ಅವಗಾಹ್ಯ ಹ್ಯುಭಯತಃ ಸಮುದ್ರೌ ಪೂರ್ವಪಶ್ಚಿಮೌ ।
ಸರೋ ವಿಷ್ಣುಪದಂ ನಾಮ ನಿಷಧೇ ಪರ್ವತೋತ್ತಮೇ ॥ ೬೪ ॥

ತಸ್ಮಾದ್ದ್ವಯಂ ಪ್ರಭವತಿ ಗಾಂಧರ್ವಾ ನಾನ್ವಲೀ ಚ ಯಾ ।
ಮೇರೋಃ ಪಶ್ಚಾತ್ ಪ್ರಭವತಿ ಹ್ರದಶ್ಚಂದ್ರಪ್ರಭೋ ಮಹಾನ್ ॥ ೬೫ ॥

ತತ್ರ ಜಂಬೂನದೀ ಪುಣ್ಯಾ ಯಸ್ಯಾಂ ಜಾಂಬೂನದಂ ಶುಭಂ ।
ಪಯೋದಂತು ಸರೋ ನೀಲೇ ಸುಶುಭ್ರಂ ಪುಂಡರೀಕವತ್ ॥ ೬೬ ॥

---

೬೨. ಪರ್ವತವಾಸಿಗಳ ಮಹದೈಶ್ವರ್ಯಗಳನ್ನೂ ಸಮೃದ್ಧಿಯನ್ನೂ ಹೀಗೆಯೇ ತಿಳಿಯಬೇಕು. ಹೀಗೆಯೇ ಧರ್ಮಾರ್ಥಕಾಮಗಳ ವಿಷಯದಲ್ಲಿ ಒಬ್ಬರಿಗಿಂತ ಮತ್ತೊಬ್ಬರು ದ್ವಿಗುಣಾಧಿಕರಾಗಿರುವರು.

೬೩ ಹೇಮಕೂಟಗಿರಿಯ ಮಧ್ಯಭಾಗದಲ್ಲಿ ಸಾಯನವೆಂಬ ಸರೋವರವಿರುತ್ತದೆ. ಅದರಿಂದ ಮನಸ್ವಿನೀ ಜ್ಯೋತಿಷ್ಮತಿಗಳೆಂಬ ಎರಡು ನದಿಗಳು ಹುಟ್ಟುತ್ತವೆ.

೬೪. ಉಭಯಪಾರ್ಶ್ವಗಳಿಂದಲೂ ಪೂರ್ವಪಶ್ಚಿಮಸಮುದ್ರಗಳನ್ನು ವ್ಯಾಪಿಸಿಕೊಂಡಿರುವ ನಿಷಧಗಿರಿಯಲ್ಲಿ ವಿಷ್ಣುಪದವೆಂಬ ಮಹಾಸರೋವರವು ಪ್ರಕಾಶಿಸುತ್ತಿರುವುದು.

೬೫. ಆ ಸರೋವರದಿಂದ ಗಾಂಧರ್ವೀ, ನಲ್ವಲೀ ಎಂಬ ಎರಡು ಮಹಾನದಿಗಳು ಉದ್ಭವಿಸಿ ಬಹುದೂರವಾಗಿ ಹರಿಯುವುವು. ಮೇರುಗಿರಿಯ ಹಿಂಭಾಗದಲ್ಲಿ ಚಂದ್ರಪ್ರಭವೆಂಬ ದೊಡ್ಡ ಮಡುವಿರುವುದು.

೬೬. ಆ ನೀಲಪರ್ವತದಲ್ಲಿ ಪುಣ್ಯಕರವಾದ ಜಾಂಬೂನದಿಯು ಹರಿಯುತ್ತದೆ. ಅದರಲ್ಲಿ ಸುವರ್ಣಮಯವೂ ಶುಭಕರವೂ ಆದ ಕಮಲಗಳಿರುತ್ತವೆ. ಮತ್ತು ಪಯೋದನಾಮಕವೂ ಅತ್ಯಂತ ಶುಭ್ರವೂ ಕಮಲಗಳಿಂದ ಸಹಿತವು ಆದ ಸರೋವರವು ಇರುತ್ತದೆ.

ಪುಂಡರೀಕಾ ಪಯೋದಾ ಚ ತಸ್ಮಾನ್ನದ್ಯೌ ವಿನಿರ್ಗತೇ ।
ಶ್ವೇತಾತ್ ಪ್ರಭವತೇ ಪುಣ್ಯಂ ಸರಸ್ತೂತ್ತರಮಾನಸಂ ॥ ೬೭ ॥

ಜ್ಯೋತ್ಸ್ನಾ ಚ ಮೃಗಕಾಂತಾ ಚ ತಸ್ಮಾದ್ವೇ ಸಂಬಭೂವತುಃ ।
ಮಧುಮತ್ಸರಃ ಪುಣ್ಯಂಚ ಪದ್ಮಮೀನದ್ವಿಜಾಕುಲಂ ॥ ೬೮ ॥

ಕಲ್ಪವೃಕ್ಷಸಮಾಕೀರ್ಣಂ ಮಧುಮತ್ಸರ್ವತಃ ಸುಖಂ ।
ರುದ್ರಕಾಂತಮಿತಿ ಖ್ಯಾತಂ ನಿರ್ಮಿತಂ ತದ್ಭವೇನ ತು ॥ ೬೯ ॥

ಅನ್ಯೇ ಚಾಪ್ಯತ್ರ ವಿಖ್ಯಾತಾಃ ಪದ್ಮಮೀನದ್ವಿಜಾಕುಲಾಃ ।
ನಾಮ್ನಾ ರುದ್ರಾ ಜಯಾ ನಾಮ ದ್ವಾದಶೋದಧಿಸನ್ನಿಭಾಃ ॥ ೭೦ ॥

---

೬೭. ಆ ಸರಸ್ಸಿನಿಂದ ಪುಂಡರೀಕೆ ಪಯೊದೆಗಳೆಂಬ ಎರಡು ನದಿಗಳು ಉತ್ಪನ್ನವಾಗುವುವು. ಶ್ವೇತಪರ್ವತದಿಂದ ಪುಣ್ಯಕರವಾದ ಉತ್ತರಮಾನಸ ಸರೋವರವು ಜನಿಸುವುದು.

೬೮. ಆ ಸರೋವರದಿಂದ ಜ್ಯೋತ್ಸ್ನೆ ಮೃಗಕಾಂತೆಗಳೆಂಬ ಎರಡು ನದಿಗಳು ಉತ್ಪನ್ನವಾಗಿವೆ. ಅತಿಪವಿತ್ರವೂ ಕಮಲಗಳು, ಮೀನುಗಳು, ಪಕ್ಷಿಗಳು ಇವುಗಳಿಂದ ಸಹಿತವೂ ಮಧುಮಂತನಾಮಕವೂ ಆದ ಸರೋವರವು ಪ್ರಕಾಶಿಸುತ್ತಿದೆ.

೬೯. ಆ ಮದುಮತ್ಸರೋವರವು ಕಲ್ಪವೃಕ್ಷಗಳಿಂದ ವ್ಯಾಪ್ತವೂ, ಸರ್ವತ್ರ ಸುಖಪ್ರದವೂ ಆಗಿದೆ. ಅದಕ್ಕೆ ರುದ್ರಕಾಂತವೆಂಬ ಬೇರೊಂದು ನಾಮವನ್ನು ಈಶ್ವರನು ಕೊಟ್ಟಿರುವನು.

೭೦ ಆ ಪರ್ವತದಲ್ಲಿ ಕಮಲ, ಮೀನು, ಪಕ್ಷಿ ಇವುಗಳಿಂದ ಮಂಡಿತವೂ, ರುದ್ರಾ, ಜಯಾ, ನಾಮಕಗಳೂ ಸಮುದ್ರಕ್ಕೆ ಸಮಾನಗಳೂ ಆದ ಬೇರೆಯಾದ ಹನ್ನೆರಡು ಸರೋವರಗಳು ಬಹಳ ಪ್ರಖ್ಯಾತವಾಗಿವೆ

ತೇಭ್ಯಃ ಶಾಂತಾ ಚ ಮಾಧ್ವೀ ಚ ದ್ವೇ ನದ್ಯೌ ಸಂಬಭೂವತುಃ ।
ಯಾನಿ ಕಿಂಪುರುಷಾದ್ಯಾನಿ ತೇಷು ದೇವೋ ನ ವರ್ಷತಿ ॥ ೭೧ ॥

ಉದ್ಭಿಜ್ಜಾನ್ಯುಂದಕಾಸ್ತತ್ರ ಪ್ರವಹಂತಿ ಸರಿದ್ವರಾಃ ।
ಋಷಭೋ ದುಂದುಭಿಶ್ಚೈವ ಧೂಮ್ರಶ್ಚೈವ ಮಹಾಗಿರಿಃ ॥ ೭೨ ॥

ಪೂರ್ವಾಯತಾ ಮಹಾಭಾಗಾ ನಿಮ್ನಗಾ ಲವಣಾಂಭಸಿ ।
ಚಂದ್ರಕಂಕಸ್ತಥಾ ಪ್ರಾಣೋ ಮಹಾನಗ್ನಿಃ ಶಿಲೋಚಯಃ ।
ಉದಗ್ಯಾತಾ ಉದೀಚ್ಯಾಂತಾ ಅವಗಾಢಾ ಮಹೋದಧಿಂ ॥ ೭೩ ॥

ಸೋಮಕಶ್ಚ ವರಾಹಶ್ಚ ನಾರದಶ್ಚ ಮಹೀಧರಃ ।
ಪ್ರತೀಚೀಮಾಯತಾಸ್ತೇ ವೈ ಪ್ರವಿಷ್ಟಾ ಲವಣೋದಧಿಂ ॥ ೭೪ ॥

---

೭೧. ಆ ಸರೋವರಗಳಿಂದ ಶಾಂತಾ ಮಾಧ್ವೀ ನಾಮಕಗಳಾದ ಎರಡು ಮಹಾನದಿಗಳು ಉದ್ಭವಿಸಿವೆ. ಆ ನದಿಗಳು ಕಿಂಪುರುಷಾದಿ ಖಂಡಗಳಲ್ಲಿ ಹರಿಯುವುವು ಕಿಂಪುರುಷಾದಿ ಖಂಡಗಳಲ್ಲಿ ಇಂದ್ರನು ಮಳೆಯನ್ನು ಸುರಿಸುವುದಿಲ್ಲ.

೭೨. ಆ ಕಿಂಪುರುಷಾದಿ ಖಂಡಗಳಲ್ಲಿ ಭೂಮಿಯಿಂದಲೆ ಜಲವು ಚಿಲುಮೆಯಿಂದ ಉಂಟಾಗಿ ನದೀರೂಪವಾಗಿ ಹರಿಯುತ್ತದೆ. ಮತ್ತು ಋಷಭ, ದುಂದುಭಿ, ಧೂಮ್ರವೆಂಬ ಮಹಾಪರ್ವತಗಳು ಪ್ರಖ್ಯಾತವಾಗಿವೆ.

೭೩ ಅತ್ಯಂತ ಪ್ರಖ್ಯಾತವಾದ ಮಹಾನದಿಗಳು ಪೂರ್ವಾಭಿಮುಖಗಳಾಗಿ ಹರಿದು ಲವಣಸಮುದ್ರವನ್ನು ಸೇರುವುವು ಚಂದ್ರಕಂಕ, ಪ್ರಾಣ, ಮಹಾಗ್ನಿ ಪರ್ವತ ಇವು ಉತ್ತರದಿಕ್ಕನ್ನು ವ್ಯಾಪಿಸಿ, ಉತ್ತರಸಮುದ್ರದಲ್ಲಿ ನೀಡಿಕೊಂಡಿವೆ. (ಚಾಚಿಕೊಂಡಿವೆ).

೭೪. ಸೋಮಕ, ವರಾಹ. ನಾರದವೆಂಬ ಪರ್ವತಗಳು ಪಶ್ಚಿಮಾಭಿಮುಖವಾಗಿ ಹರಡಿ ಲವಣಸಮುದ್ರವನ್ನು ಪ್ರವೇಶಿಸುತ್ತವೆ.

ಚಕ್ರೋ ಬಲಾಹಕಶ್ಚೈವ ಮೈನಾಕಶ್ಚೈವ ಪರ್ವತಃ ।
ಆಯತಾಸ್ತೇ ಮಹಾಶೈಲಾಃ ಸಮುದ್ರಂ ದಕ್ಷಿಣಂ ಪ್ರತಿ ।
ಚಂದ್ರಮೈನಾಕಯೋರ್ಮಧ್ಯೇ ವಿದಿಶಂ ದಕ್ಷಿಣಂ ಪ್ರತಿ । ॥ ೭೫ ॥

ತತ್ರ ಸಂವರ್ತಕೋ ನಾಮ ಸೋಽಗ್ನಿಃ ಪಿಬತಿ ತಜ್ಜಲಂ ।
ನಾಮ್ನಾ ಸಮುದ್ರಪಃ ಶ್ರೀಮಾನೌರ್ವಃ ಸ ವಡವಾಮುಖಃ ॥ ೭೬ ॥

ದ್ವಾದಶೈತೇ ಪ್ರವಿಷ್ಟಾ ಹಿ ಪರ್ವತಾ ಲವಣೋದಧಿಂ ।
ಮಹೇಂದ್ರಭಯವಿತ್ರಸ್ತಾಃ ಪಕ್ಷಚ್ಛೇದ ಭಯಾತ್ತದಾ ।
ಯದೇತದ್ದೃಶ್ಯತೇ ಚಂದ್ರೇ ಶ್ವೇತೇ ಕೃಷ್ಣಶಶಾಕೃತಿಃ ॥ ೭೭ ॥

ಭಾರತಸ್ಯ ತು ವರ್ಷಸ್ಯ ಭೇದಾಸ್ತೇ ನವ ಕೀರ್ತಿತಾಃ ।
ಇಹೋಧಿತಸ್ಯ ದೃಶ್ಯಂತೇ ತಥಾಽನ್ಯೇಽನ್ಯತ್ರ ನೋದಿತೇ ॥ ೭೮ ॥

---

೭೫. ಚಕ್ರ, ಬಲಾಹಕ, ಮೈನಾಕಗಳೆಂಬ ಪರ್ವತಗಳು ಅತಿವಿಶಾಲವಾಗಿ ದಕ್ಷಿಣಸಮುದ್ರದ ವರೆಗೂ ವ್ಯಾಪ್ತವಾಗಿವೆ. ಚಂದ್ರ ಮೈನಾಕ ಪರ್ವತಗಳ ಮಧ್ಯದಲ್ಲಿ ಪೂರ್ವ ದಕ್ಷಿಣ ದಿಕ್ಕುಗಳ ಮಧ್ಯದಲ್ಲಿ ಅಂದರೆ ಆಗ್ನೇಯ ಕೋಣೆಯಲ್ಲಿ ಬಡಬಾಮುಖವಿರುತ್ತದೆ.

೭೬. ಅಲ್ಲಿ ಸಂವರ್ತಕನಾಮಕವಾದ ಅಗ್ನಿಯು (ಪ್ರಲಯಾಗ್ನಿಯು) ಸಮುದ್ರ ಜಲವನ್ನು ಪಾನಮಾಡುತ್ತದೆ. ಅದಕ್ಕೆ ಸಮುದ್ರಪವೆಂದೂ ಕಾಂತಿವಂತವಾದ ಔರ್ವಾಗ್ನಿಯೆಂದೂ ವಡವಾಮುಖವೆಂದೂ ನಾಮಗಳು ಪ್ರಾಪ್ತವಾಗಿವೆ.

೭೭. ಈ ಮೇಲೆ ಹೇಳಿದ ಹನ್ನೆರಡು ಪರ್ವತಗಳು ದೇವೇಂದ್ರನು ಪಕ್ಷಗಳನ್ನು ಭೇದಿಸುವನೆಂಬ ಭಯದಿಂದ ಸಮುದ್ರದಲ್ಲಿ ಪ್ರವೇಶಿಸಿರುತ್ತವೆ. ಅತಿಶುಭ್ರನಾದ ಚಂದ್ರನಲ್ಲಿ ಶಶಾಕಾರವಾದ ಕಳಂಕವೇ ಇದಕ್ಕೆ ಗುರುತಾಗಿದೆ.

೭೮. ಈ ರೀತಿಯಾಗಿ ಭಾರತವರ್ಷದಲ್ಲಿ ನವದ್ವೀಪಗಳಿವೆಯೆಂದು ಭೇದಗಳು ನಿರೂಪಿತಗಳಾಗಿವೆ. ಚಂದ್ರೋದಯವಾದರೆ ಕಳಂಕಗಳು ಈ ದ್ವೀಪದಲ್ಲಿ ತೋರುವಂತೆ ಬೇರೆ ಭಾಗಗಳಲ್ಲಿ ಕಾಣುವುದೂ ಇಲ್ಲ.

ಉತ್ತರೋತ್ತರಮೇತೇಷಾಂ ವರ್ಷಮುದ್ದಿಶ್ಯತೇ ಗುಣೈಃ ।
ಆರೋಗ್ಯಾಯುಃ ಪ್ರಮಾಣಾಭ್ಯಾಂ ಧರ್ಮತಃ ಕಾಮತೋಽರ್ಥತಃ ॥ ೭೯ ॥

ಸಮನ್ವಿತಾನಿ ಭೂತಾನಿ ಗುಣೈರೇತೈಸ್ತು ಭಾಗತಃ ।
ವಸಂತಿ ನಾನಾಜಾತೀನಿ ತೇಷು ವರ್ಷೇಷು ತಾನಿ ವೈ ।
ಇತ್ಯೇಷಾಽಧಾರಯಚ್ಛ್ ಸರ್ವಂ ಪೃಥ್ವೀ ವಿಶ್ವಂ ಜಗಸ್ಥಿತಾ ॥ ೮೦ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ “ ಭುವನವಿನ್ಯಾಸೋ ”
ನಾಮ ಸಪ್ತಚತ್ವಾರಿಂಶೋಽಧ್ಯಾಯಃ

---

೭೯. ಈ ಮೇಲೆ ನಿರೂಪಿಸಿರುವ ನವವರ್ಷಗಳಲ್ಲಿ ಉತ್ತರೋತ್ತರವಾಗಿ ಒಂದಕ್ಕಿಂತಲೂ ಮತ್ತೊಂದು ದ್ವೀಪವು ಆಯುಸ್ಸು, ಆರೋಗ್ಯ, ಧರ್ಮ, ಅರ್ಥಕಾಮ, ಗುಣ ಇವೇ ಮೊದಲಾದುವುಗಳ ವಿಷಯದಲ್ಲಿ ಅತ್ಯಧಿಕವಾಗಿವೆ ಮೇಲೆ ಹೇಳಿದ ಗುಣಗಳು ಒಂದಕ್ಕಿಂತ ಮತ್ತೊಂದರಲ್ಲಿ ಬಹಳ ಹೆಚ್ಚಾಗಿವೆ.

೮೦. ಮೇಲೆ ಹೇಳಿದ ಗುಣಗಳಿಂದ ಯುಕ್ತವೂ ಅನೇಕ ವಿಧವೂ ನಾನಾ ಜಾತೀಯವೂ ಆದ ಪ್ರಾಣಿಗಳು ಆ ನವದ್ವೀಪಗಳಲ್ಲಿಯೂ ವಾಸಮಾಡುವುವು. ಹೀಗೆ ಈ ಭೂಮಾತೆಯು ವಿವಿಧರೂಪವೂ ಸ್ಥಾವರಜಂಗಮರೂಪವೂ ಆದ ಈ ವಿಶ್ವವನ್ನೇ ಧರಿಸಿರುವಳೆಂದು ಸೂತರು ಮುನಿಗಳಿಗೆ ಹೇಳಿದರು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ “ ವಿಶ್ವಸ್ಥಿತಿ ಕಥನ ”ವೆಂಬ
ನಲವತ್ತೇಳನೆಯ ಅಧ್ಯಾಯವು ಸಮಾಪ್ತವಾದುದು.

## ನಲವತ್ತೇಳನೆಯ ಅಧ್ಯಾಯದ ಸಾರಾಂಶವು

ಹಿಮವತ್ಪರ್ವತದ ಎಡಭಾಗದಲ್ಲಿ ಕೈಲಾಸಪರ್ವತವೂ, ಮಂದಾಕಿನೀನದಿಯೂ, ನಂದನವನವೂ, ಉತ್ತರದಿಕ್ಕಿನಲ್ಲಿ ಚಂದ್ರಪ್ರಭಗಿರಿಯೂ, ಅಚ್ಛೋದಸರೋವರವೂ, ಅಚ್ಛೋದನದಿಯೂ, ಚೈತ್ರವನವೂ ಇರುತ್ತವೆ. ಆಗ್ನೇಯಭಾಗದಲ್ಲಿ ಹೇಮಶೃಂಗ ಗಿರಿಯಲ್ಲಿ ಮಣೀಶ್ವರಯಕ್ಷನು ವಾಸಿಸುವನು. ದಕ್ಷಿಣಭಾಗದಲ್ಲಿ ವೈದ್ಯುಗಿರಿಯು ಹೊಳೆಯುವುದು ಅಲ್ಲಿ ಭಗೀರಥನು ಗಂಗೆಯನ್ನು ಕುರಿತು ತಪಸ್ಸನ್ನು ಮಾಡಿ ಅವಳಿಂದ ಪಿತೃಗಳನ್ನುದ್ಧರಿಸಿದನು. ಆ ಗಂಗೆಯು ಈಶ್ವರನ ಶಿರಸ್ಸಿನಿಂದ ಹೊರಟು ನಲಿನೀ, ಹ್ಲಾದಿನೀ, ಪಾವನೀ, ಸೀತಾ, ಚಕ್ಷು, ಸಿಂಧು ಮತ್ತು ಭಾಗೀರಥೀ ಎಂದು ಏಳು ಭಾಗವಾಗಿ ಅನೇಕ ದೇಶಗಳಲ್ಲಿ ಸಂಚರಿಸಿ ಸಮುದ್ರವನ್ನು ಪ್ರವೇಶಿಸುವುದು. ಹೇಮಕೂಟಗಿರಿಯಲ್ಲಿ ಸಾಯನ ಸರಸ್ಸಿರುವುದು. ಅದರಿಂದ ಮನಸ್ವಿನೀ ಜ್ಯೋತಿಷ್ಮತೀ ನದಿಗಳು ಉತ್ಪನ್ನವಾಗಿವೆ. ಋಕ್ಷಭ, ದುಂದುಭಿ, ಧೂಮ್ರವೆಂಬ ಗಿರಿಗಳೂ ಸೋಮಕ, ವರಾಹ, ನಾಂದ ಪರ್ವತಗಳೂ ವಡವಾ ಮುಖವೂ ಇರುತ್ತವೆ. ಆ ಸ್ಥಳದಲ್ಲಿ ಇಂದ್ರನ ಭಯದಿಂದ ಮೈನಾಕವೇ ಮೊದಲಾದ ಅನೇಕ ಗಿರಿಗಳು ಸಮುದ್ರದಲ್ಲಿ ಅಡಗಿಕೊಂಡಿವೆ. ಹೀಗೆ ಭೂಮಿಯು ಅನೇಕ ದ್ವೀಪಗಳಿಂದ ನಾನಾವಿಧ ಚರಾಚರಾತ್ಮಕ ವಿಶ್ವಕ್ಕೆ ಆಶ್ರಯವಾಗಿದೆ ಎಂಬ ವಿಷಯಗಳು ನಿರೂಪಿತವಾಗಿವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ॥ ಅಷ್ಟಚತ್ವಾರಿಂಶೋಽಧ್ಯಾಯಃ ॥

॥ ಸೂತ ಉವಾಚ ॥

ದಕ್ಷಿಣೇನಾಪಿ ವರ್ಷಸ್ಯ ಭಾರತಸ್ಯ ನಿಬೋಧತ ।
ದಶಯೋಜನಸಾಹಸ್ರಂ ಸಮುತೀತ್ಯ ಮಹಾರ್ಣವಂ ॥ ೧ ॥

ತ್ರೀಣ್ಯೇವ ತು ಸಹಸ್ರಾಣಿ ಯೋಜನಾನಾಂ ಸಮಾಯುತಂ ।
ಅತಸ್ತ್ರಿಭಾಗವಿಸ್ತೀರ್ಣಂ ನಾನಾಪುಷ್ಪಫಲೋದಯಂ ॥ ೨ ॥

ವಿದ್ಯುದ್ವಂತಂ ಮಹಾಶೈಲಂ ತತ್ರೈಕಂ ಕುಲಪರ್ವತಂ ।
ಯೇನ ಕೂಟತಟೈರ್ನೈಕೈಸ್ತದ್ವೀಪಂ ಸಮಲಂಕೃತಂ ॥ ೩ ॥

---

## ನಲವತ್ತೆಂಟನೆಯ ಅಧ್ಯಾಯವು

೧-೨. ಸೂತಮುನಿಯು ಹೇಳಿದನು:—ಎಲೈ ಮುನಿವರ್ಯರೇ, ಈಗ ಭಾರತವರ್ಷದ ದಕ್ಷಿಣದಿಕ್ಕಿನಲ್ಲಿರುವ ದ್ವೀಪದ ವಿಷಯವನ್ನು ತಿಳಿಸುವೆನು ಕೇಳಿ. ಈ ಭಾರತವರ್ಷದ ಹತ್ತುಸಾವಿರಯೋಜನ ವಿಸ್ತೀರ್ಣವಾದ ಸಮುದ್ರದ ಆಚೆಗೆ ಮೂರುಸಾವಿರ ಯೋಜನದಷ್ಟು ಉದ್ದವೂ ಅದಕ್ಕೆ ಮೂರರಷ್ಟು ಅಂದರೆ ಒಂಭತ್ತು ಸಾವಿರಯೋಜನ ವಿಸ್ತೀರ್ಣವೂ ಆದ ನಾನಾ ಪುಷ್ಪಫಲಗಳಿಂದ ಭರಿತವೂ ಆದ ದ್ವೀಪವಿರುವುದು.

೩. ಆ ದ್ವೀಪದಲ್ಲಿ ವಿದ್ಯುತ್ವಂತವೆಂಬ ಮಹತ್ತಾದ ಕುಲಪರ್ವತವಿರುತ್ತದೆ. ಅನೇಕ ಶೃಂಗಗಳಿರುವ ಆ ಪರ್ವತದಿಂದ ಆ ದ್ವೀಪವೆಲ್ಲವೂ ಸಂಪೂರ್ಣವಾಗಿ ಅಲಂಕೃತ ವಾಗಿರುವುದು.

ಪ್ರಸನ್ನಸ್ವಾದುಸಲಿಲಾಸ್ತತ್ರ ನದ್ಯಃ ಸಹಸ್ರಶಃ ।
ವಾಪ್ಯಸ್ತಸ್ಯ ತು ದ್ವೀಪಸ್ಯ ಪ್ರವೃತ್ತಾ ವಿಮಲೋದಕಾಃ ॥ ೪ ॥

ತಸ್ಯ ಶೈಲಸ್ಯ ಛಿಗ್ರೇಷು ವಿಸ್ತೀರ್ಣೇಷ್ವಾಯತೇಷು ಚ
ಅನೇಕೇಷು ಸಮೃದ್ಧಾನಿ ನಾನಾಕಾರಾಣಿ ಸರ್ವಶಃ ॥ ೫ ॥

ನರನಾರೀಸಮಾಢ್ಯಾನಿ ಮುದಿತಾನಿ ಮಹಾಂತಿ ಚ ।
ತೇಷಾಂ ತಲಪ್ರವೇಶಾನಿ ಸಹಸ್ರಾಣಿ ಶತಾನಿ ಚ ॥ ೬ ॥

ಪುರಾಣಿ ಸನ್ನಿವಿಷ್ಟಾನಿ ಪರ್ವತಾಂತರ್ಗತಾನಿ ಚ ।
ಸುಸಂಬದ್ಧಾನಿ ಚಾನ್ಯೋನ್ಯಮೇಕದ್ವಾರಾಣಿ ಚಾನ್ಯಥ ॥ ೭ ॥

ದೀರ್ಘಶ್ಮಶ್ರುಧರಾತ್ಮಾನೋ ನಿಲಾ ಮೇಘಸಮಪ್ರಭಾಃ ।
ಜಾತಮಾತ್ರಾಃ ಪ್ರಜಾಸ್ತತ್ರ ಅಶೀತಿಪರಮಾಯುಷಃ ॥ ೮ ॥

---

೪. ಆ ದ್ವೀಪದಲ್ಲಿ ಸ್ವಚ್ಛವೂ ವಿಮಲವೂ ರುಚಿಯೂ ಶೀತಲವೂ ಆದ ಜಲದಿಂದ ಪೂರ್ಣವಾದ ಸಾವಿರಾರು ನದಿಗಳೂ ತಟಾಕಗಳೂ ಶೋಭಿಸುತ್ತಿವೆ.

೫. ಆ ಪರ್ವತದ ಅತಿವಿಸ್ತೀರ್ಣವೂ ಅತ್ಯಂತದೀರ್ಘವೂ ಆದ ಗುಹೆಗಳಲ್ಲಿ ನಾನಾಕಾರಗಳೂ ಅತಿಸಮೃದ್ಧಗಳೂ ಆದ ಅನೇಕ ನಗರಗಳೂ ಉಪವನಗಳೂ ಶೋಭಿಸುತ್ತಿವೆ.

೬. ಆ ನಗರಗಳು ಸ್ತ್ರೀಪುರುಷರಿಂದ ವ್ಯಾಪ್ತವೂ ಅನೇಕ ಸಂಪತ್ತುಗಳಿಂದ ಸಮೃದ್ಧವೂ ಧನಧಾನ್ಯಾದಿಗಳಿಂದ ಪೂರ್ಣವೂ ಅತಿವಿಶಾಲವೂ ಸಾವಿರಾರು ಕಾಲುದಾರಿಯಿಂದ ಯುಕ್ತವೂ ಆಗಿವೆ.

೭ ಆ ನಗರಗಳು ಪರಸ್ಪರಸಂಬದ್ಧಗಳಾಗಿಯೂ ಪರ್ವತಾಂತರ್ಗತವಾಗಿಯೂ ಸಾಲಾಗಿಯೂ ಕ್ರಮವಾಗಿಯೂ ಏಕಮಾರ್ಗವುಳ್ಳವುಗಳಾಗಿಯೂ ಇವೆ.

೮–೯ ಅಲ್ಲಿಯ ಪ್ರಜೆಗಳು ಕಪಿಗಳಿಗೆ ಸಮಾನಧರ್ಮವುಳ್ಳವರಾಗಿಯೂ ಫಲಮೂಲಭಕ್ಷಕರಾಗಿಯೂ ಇರುವರು ಮತ್ತು ಗೋವುಗಳಂತೆ ಸಾಧುಗಳೂ ಅಪಂಭಾವ

ಶಾಖಾಮೃಗಸಧರ್ಮಾಣಃ ಫಲಮೌಲಾಶಿನಸ್ತಥಾ ।
ಗೋಧರ್ಮಾಣೋ ಹ್ಯನಿರ್ದಿಷ್ಟಾಃ ಶೌಚಾಚಾರವಿವರ್ಜಿತಾಃ ॥ ೯ ॥

ತ ದ್ವೀಪಂ ತಾದೃಶೈಃ ಪೂರ್ಣಂ ಮನುಜೈಃ ಕ್ಷುದ್ರಮಾನುಷೈಃ ।
ಏವಮೇತೇಂತರದ್ವೀಪಾ ವ್ಯಾಖ್ಯಾತಾ ಆನುಪೂರ್ವಶಃ ॥ ೧೦ ॥

ವಿಂಶತ್ರಿಂಶಚ್ಚ ಪಂಚಾಶತ್ ಷಟ್ಯಶೀತಿಃ ಶತಂ ತಥಾ ।
ಸಹಸ್ರಮಪಿ ಚಾಪ್ಯುಕ್ತಂ ಯೋಜನಾನಾಂ ಸಮಂತತಃ ॥ ೧೧ ॥

ವಿಸ್ತೀರ್ಣಾಶ್ಚಾಯತಾಶ್ಚೈವ ನಾನಾಸತ್ವಸಮಾಕುಲಾಃ ।
ಬರ್ಹಿಣದ್ವೀಪಪರ್ವಾಣಿ ಕ್ಷುದ್ರದ್ವೀಪಾಃ ಸಹಸ್ರಶಃ ॥ ೧೨ ॥

ಜಂಬೂದ್ವೀಪಪ್ರದೇಶಾತ್ತು ಷಡನ್ಯೇ ವಿವಿಧಾಶ್ರಯಾಃ ।
ಅತ್ರ ದ್ವೀಪಾಃ ಸಮಾಖ್ಯಾತಾ ನಾನಾರತ್ನಕರಾಃ ಕ್ಷಿತೌ ॥ ೧೩ ॥

---

ಶೂನ್ಯರೂ ಶೌಚಾಚಾರವರ್ಜಿತರೂ ದೀರ್ಘವಾದ ಮೀಸೆದಾಡಿಯುಳ್ಳವರೂ ನೀಲಮೇಘಶ್ಯಾಮರೂ ಎಂಟುನೂರುವರ್ಷ ಆಯುಸ್ಸುಳ್ಳವರೂ ಪರಮುದಯಾಳುಗಳೂ ಆಗಿದ್ದರು.

೧೦. ಆ ದ್ವೀಪವು, ಹೀಗೆ ನಿರೂಪಿಸಿರುವ ಮನುಜರಿಂದಲೂ ಅಲ್ಪ ಪ್ರಾಣಿಗಳಿಂದಲೂ ಪೂರ್ಣವಾಗಿದೆ. ಇದರಂತೆಯೇ ಅನೇಕಾನೇಕ ಅವಾಂತರದ್ವೀಪಗಳು ಪ್ರಖ್ಯಾತವಾಗಿವೆ ಎಂದು ನಿರೂಪಿಸಿರುವೆನು.

೧೧-೧೨. ಅವುಗಳಲ್ಲಿ ಕೆಲಕೆಲವು ನಗರಗಳು ಇಪ್ಪತ್ತು ಮೂವತ್ತು ಐವತ್ತು ಆರವತ್ತು ಎಂಭತ್ತು ನೂರು ಸಹಸ್ರ ಯೋಜನಗಳಷ್ಟು ವಿಸ್ತೀರ್ಣವಾಗಿಯೂ ನಾನಾ ಸತ್ವಗಳಿಂದ ವ್ಯಾಪ್ತವಾಗಿಯೂ ಇವೆ. ಇದರಂತೆಯೇ ಬರ್ಹಿಣದ್ವೀಪವೇ ಮೊದಲಾದ ಸಣ್ಣಪುಟ್ಟ ದ್ವೀಪಗಳು ಸಹಸ್ರಾರು ಇವೆ

೧೩. ಜಂಬೂದ್ವೀಪಕ್ಕಿಂತಲೂ ಬೇರೆಯಾದ ಷಟ್ ದ್ವೀಪಗಳು ವಿವಿಧ ಪ್ರಾಣಿಗಳಿಗೆ ಆಶ್ರಯವಾಗಿಯೂ ನಾನಾರತ್ನಗಳಿಗೆ ಗಣಿಗಳಾಗಿಯೂ ಲೋಕಪ್ರಖ್ಯಾತವಾಗಿಯೂ, ಮಾನ್ಯವಾಗಿಯೂ ಇವೆ.

ಅಂಗದ್ವೀಪಂ ಯಮದ್ವೀಪಂ ಮಲಯದ್ವೀಮೇವ ಚ ।
ಶಂಖದ್ವೀಪಂ ಕುಶದ್ವೀಪಂ ವರಾಹದ್ವೀಪಮೇವ ಚ ॥ ೧೪ ॥

ಅಂಗದ್ವೀಪಂ ನಿಬೋಧ ತ್ವಂ ನಾನಾಸಂಭಸಮಾಕುಲಂ ।
ನಾನಾಮ್ಲೇಚ್ಛಗಣಾಕೀರ್ಣಂ ತದ್ವೀಪಂ ಬಹುವಿಸ್ತರಂ ॥ ೧೫ ॥

ಹೇಮವಿದ್ರುಮಪೂರ್ಣಾನಾಂ ರತ್ನಾನಾಮಾಕರಂ ಕ್ಷಿತೌ ।
ನದೀಶೈಲವನೈಶ್ಚಿತ್ರಂ ಸನ್ನಿಭಂ ಲವಣಾಂಭಸಾ ॥ ೧೬ ॥

ತತ್ರ ಚಕ್ರಗಿರಿರ್ನಾಮ ನೈಕನಿರ್ಝರಕಂದರಃ ।
ತತ್ರ ಸಾ ತು ದರೀ ಚಾಸ್ಯ ನಾನಾಸತ್ರಮಾಶ್ರಯಾ ॥ ೧೭ ॥

---

೧೪. ಈ ಲೋಕದಲ್ಲಿ ಅಂಗದ್ವೀಪ, ಯಮದ್ವೀಪ, ಮಲಯದ್ವೀಪ, ಶಂಖದ್ವೀಪ, ಕುಶದ್ವೀಪ, ವರಾಹದ್ವೀಪ, ಜಂಬೂದ್ವೀಪಗಳೆಂಬ ಸಪ್ತದ್ವೀಪಗಳು ಪ್ರಖ್ಯಾತವಾಗಿವೆ.

೧೫. ಇವುಗಳಲ್ಲಿ ಅಂಗದ್ವೀಪದ ವಿಚಾರಗಳನ್ನು ಹೇಳುವೆನು ಕೇಳಿ. ಅದು ಅನೇಕ ಸಂಘಗಳಿಗೆ ಆಶ್ರಯವಾಗಿಯೂ ನಾನಾ ಮ್ಲೇಂಚ್ಛಗಣಗಳಿಂದ:ವ್ಯಾಪ್ತವಾಗಿಯೂ ಅತಿವಿಸ್ತಾರವಾಗಿಯೂ ಇದೆ.

೧೬. ಆ ಅಂಗದ್ವೀಪವು ಸುವರ್ಣರತ್ನಗಳ ವಿವಿಧಗಣಿಗಳಿಗೆ ಆಶ್ರಯವೂ ನದಿಗಳು, ವನಗಳು, ಪರ್ವತಗಳು, ಇವುಗಳಿಂದ ವಿಚಿತ್ರವೂ ಲವಣಸಮುದ್ರಕ್ಕೆ ಸಮವೂ ಆಗಿದೆ.

೧೭ ಆ ದ್ವೀಪದಲ್ಲಿ ಅತಿವಿಸ್ತಾರವಾದ ಚಕ್ರಗಿರಿಯು ಅನೇಕ ಝರಿಗಳಿಂದಲೂ ಗವಿಗಳಿಂದಲೂ ಪೂರ್ಣವಾಗಿದೆ. ಆ ಪರ್ವತದ ನದಿಯಲ್ಲಿ ನಾನಾವಿಧ ಪ್ರಾಣಿಗಳೂ ವಾಸಿಸುತ್ತವೆ.

ಸ ಮಧ್ಯೇ ನಾಗದೇಶಸ್ಯ ನೈಕದೇಶೋ ಮಹಾಗಿರಿಃ ।
ಕೋಟಿಭ್ಯಾಂ ನಾಗನಿಲಯಂ ಪ್ರಾಪ್ತೋ ನದನದೀಪತಿಂ ॥ ೧೮ ॥

ಯಮದ್ವೀಪಮಿತಿ ಪ್ರೋಕ್ತಂ ನಾನಾರತ್ನಾಕರಾಚಿತಂ ।
ತತ್ರಾಪಿ ದ್ಯುತಿಮಾನ್ನಾಮ ಪರ್ವತೋ ಧಾತುಮಂಡಿತಃ ।
ಸಮುದ್ರಗಾನಾಂ ಪ್ರಭವಃ ಪ್ರಭವಃ ಕಾಂಚನಸ್ಯ ತು ॥ ೧೯ ॥

ತಥೈವ ಮಲಯದ್ವೀಪಮೇವಮೇವ ಸುಸಂವೃತಂ ।
ಮಣಿರತ್ನಾಕರಂ ಸ್ಫೀತಮಾಕರಂ ಕನಕಸ್ಯ ಚ ॥ ೨೦ ॥

ಆಕರಂ ಚಂದನಾನಾಂಚ ಸಮುದ್ರಾಣಾಂ ತಥಾಽಕರಂ ।
ನಾನಾಮ್ಲೇಚ್ಛಗಣಾಕೀರ್ಣಂ ನದೀಪರ್ವತಮಂಡಿತಂ ॥ ೨೧ ॥

---

೧೮. ಅನೇಕ ದೇಶಗಳಿಗೆ ಆಶ್ರಯವಾದ ಆ ಮಹಾಗಿರಿಯು ನಾಗದೇಶದ ಮಧ್ಯಭಾಗದಲ್ಲಿದೆ. ಆ ಗಿರಿಯು ತನ್ನ ಕೊನೆಯಿಂದ ನದನದಿಗಳಿಗೆ ಪತಿಯಾದ ಸಮುದ್ರದ ತಳವನ್ನೂ ನಾಗಲೋಕವನ್ನೂ ಮುಟ್ಟುತ್ತಿದೆ

೧೯. ಎರಡನೆಯದಾದ ಯಮದ್ವೀಪವಾದರೋ ನಾನಾರತ್ನಗಳಿಂದ ಮಂಡಿತವೂ ಫಲವೃಕ್ಷಗಳಿಂದ ಭೂಷಿತವೂ ಆಗಿದೆ. ಅದರಲ್ಲಿ ಅನೇಕ ಧಾತುಗಳಿಂದ ಭೂಷಿತವಾದ ದ್ಯುತಿಮಂತವೆಂಬ ಪರ್ವತವಿರುತ್ತದೆ. ಅದು ಸಮುದ್ರಗಾಮಿಗಳಾದ ಅನೇಕ ನದಿಗಳಿಗೆ ಜನಕವಾಗಿಯೂ ಸುವರ್ಣಗಳಿಗೆ ಆಶ್ರಯವಾಗಿಯೂ ಇರುತ್ತದೆ.

೨೦. ಈ ಯಮದ್ವೀಪದಂತೆಯೇ ಮಲಯದ್ವೀಪವೂ ಕೂಡ ಅನೇಕ ವನಗಿರಿನದಿಗಳಿಂದ ಪೂರ್ಣವೂ, ನವರತ್ನಗಳಿಗೆ ಆಶ್ರಯವೂ, ಸುವರ್ಣಮಯವೂ, ಅತಿವಿಶಾಲವೂ ಸುಪ್ರಸಿದ್ಧವೂ ಆಗಿದೆ.

೨೧. ಅದೂ ಕೂಡ ಚಂದನವನಗಳಿಂದಲಂಕೃತವೂ, ಸಮುದ್ರದಿಂದಾವೃತವೂ, ನಾನಾಮ್ಲೇಚ್ಛಜನರಿಂದ ವ್ಯಾಪ್ತವೂ ನದೀಪರ್ವತಗಳಿಂದ ಮಂಡಿತವೂ ಆಗಿದೆ.

ತತ್ರ ಶ್ರೀಮಾಂಸ್ತು ಮಲಯಃ ಪರ್ವತೋ ರಜತಾಕರಃ ।
ಮಹಾಮಲಯ ಇತ್ಯೇವಂ ವಿಖ್ಯಾತೋ ವರಪರ್ವತಃ ॥ ೨೨ ॥

ದ್ವಿತೀಯಂ ಮಂದರಂ ನಾಮ ಪ್ರಥಿತಂಚ ಸದಾ ಕ್ಷಿತೌ ।
ಅಗಸ್ತ್ಯಭವನಂ ತತ್ರ ದೇವಾಸುರನಮಸ್ಕೃತಂ ॥ ೨೩ ॥

ತಥಾ ಕಾಂಚನಪಾದಸ್ಯ ಮಲಯಸ್ಯಾಪರಸ್ಯ ಹಿ ।
ನಿಕುಂಜೈಸ್ತೃಣಸೋಮಾಂಗೈರಾಶ್ರಮಂ ಪುಣ್ಯಸೇವಿತಂ ॥ ೨೪ ॥

ನಾನಾಪುಷ್ಪಫಲೋಪೇತಂ ಸ್ವರ್ಗಾದಪಿ ವಿಶಿಷ್ಯತೇ ।
ತತ್ರಾವತರತೇ ಸ್ವರ್ಗಃ ಸದಾ ಪರ್ವಸು ಪರ್ವಸು ॥ ೨೫ ॥

ತಥಾ ತ್ರಿಕೂಟನಿಲಯೇ ನಾನಾಧಾತುವಿಭೂಷಿತೇ ।
ಅನೇಕಯೋಜನೋತ್ಸೇಧೇ ಚಿತ್ರಸಾನುದರೀಗೃಹೇ ॥ ೨೬ ॥

---

೨೨. ಆ ದ್ವೀಪದಲ್ಲಿ ಕಾಂತಿಯುತವೂ ರಜತಮಯವೂ ಪರ್ವತೋತ್ತಮವೂ ಆದ ಮಹಾಮಲಯಪರ್ವತವು ಲೋಕಪ್ರಸಿದ್ಧವಾಗಿದೆ.

೨೩. ಅದೂ ಅಲ್ಲದೇ ಆ ದ್ವೀಪದ ಭೂಮಿಯಲ್ಲಿ ಅತ್ಯಂತ ಪ್ರಖ್ಯಾತವಾದ ಎರಡನೆಯ ಮಂದರಗಿರಿಯೂ ಸಹ ಇರುತ್ತದೆ. ಮತ್ತು ದೇವಾಸುರರಿಂದ ನಮಸ್ಕೃತರಾದ ಅಗಸ್ತ್ಯಮಹರ್ಷಿಗಳ ಆಶ್ರಮವೂ ಇರುತ್ತದೆ.

೨೪-೨೫. ಮಲಯ ಮತ್ತು ಮಂದರಗಿರಿಗಳ ಪಾದಗಳು, ಅಂದರೆ ತಪ್ಪಲುಗಳು ಸುವರ್ಣಮಯಗಳಾಗಿವೆ. ಅಲ್ಲಿರುವ ಆಶ್ರಮಗಳು, ಲತಾಗೃಹ, ತೃಣಾಂಗಣ, ಸೋಮಲತೆ ಇವುಗಳಿಂದ ಪೂರ್ಣವೂ ಪುಣ್ಯಪುರುಷರಿಂದ ಸೇವ್ಯವೂ ಆಗಿವೆ. ನಾನಾ ಪುಷ್ಪಫಲಗಳಿಂದ ಪೂರ್ಣವಾಗಿರುವುದರಿಂದ ಸ್ವರ್ಗಲೋಕಕ್ಕಿಂತಲೂ ಅಧಿಕವಾಗಿಯೇ ಇವೆ. ಪ್ರತಿ ಪರ್ವಕಾಲದಲ್ಲಿಯೂ ಸ್ವರ್ಗಲೋಕವೇ ಸಾಕ್ಷಾತ್ತಾಗಿ ಅಲ್ಲಿಗೆ ಇಳಿದು ಬರುತ್ತದೆ

೨೬. ಅದರ ಸಮೀಪದಲ್ಲಿಯೇ ನಾನಾಧಾತುವಿಶೇಷಗಳಿಂದ ಮಂಡಿತವೂ ಅನೇಕ ಯೋಜನೋನ್ನತವೂ ವಿಚಿತ್ರವಾದ ಕೋಡುಕಲ್ಲುಗಳೂ ದರೀಗೃಹಗಳೂ ಇವುಗಳಿಂದ ಭೂಷಿತವೂ ಆದ ತ್ರಿಕೂಟಗಿರಿಯು ಹೊಳೆಯುತ್ತಿದೆ.

ತಸ್ಯ ಕೂಟತಟೇ ರಮ್ಯೇ ಹೇಮಪ್ರಾಕಾರತೋರಣಾ ।
ನಿರ್ಯೂಹವಲಭೀ ಚಿತ್ರಾ ಹರ್ಮ್ಯಪ್ರಾಸಾದಮಾಲಿನೀ ॥ ೨೭ ॥

ಶತಯೋಜನವಿಸ್ತೀರ್ಣಾ ತ್ರಿಂಶದಾಯಾಮಯೋಜನಾ ।
ನಿತ್ಯಪ್ರಮುದಿತಾ ಸ್ಫೀತಾ ಲಂಕಾ ನಾಮ ಮಹಾಪುರೀ ॥ ೨೮ ॥

ಸಾ ಕಾಮರೂಪಿಣಾಂ ಸ್ಥಾನಂ ರಾಕ್ಷಸಾನಾಂ ಮಹಾತ್ಮನಾಂ ।
ಆವಾಸೋ ಬಲದೃಪ್ತಾನಾಂ ತದ್ವಿದ್ಯಾದೇವವಿದ್ವಿಷಾಂ ॥
ಮಾನುಷಾಣಾಮಸಂಬಂಧಾ ಹ್ಯಗಮ್ಯಾ ಸಾ ಮಹಾಪುರೀ ॥ ೨೯ ॥

ತಸ್ಯ ದ್ವೀಪಸ್ಯ ವೈ ಪೂರ್ವೇ ತೀರೇ ನದನದೀಪತೇಃ ।
ಗೋಕರ್ಣನಾಮಧೇಯಸ್ಯ ಶಂಕರಸ್ಯಾಲಯಂ ಮಹತ್ ॥ ೩೦ ॥

---

೨೭-೨೮. ರಮ್ಯವಾದ ಆ ತ್ರಿಕೂಟಗಿರಿಯ ಪಕ್ಕದಲ್ಲಿಯೇ ಸುವರ್ಣಮಯವಾದ ಕೋಟೆಕೊತ್ತಲಗಳೂ ಪುರದ್ವಾರಗಳೂ ಬಿಡಿಬಿಡಿಯಾದ ಪಟಗೃಹಗಳೂ ಇವುಗಳಿಂದ ಮನೋಹರವೂ ಅರಮನೆಗಳೂ ಉಪ್ಪರಿಗೆಯ ಸಾಲುಗಳು ಇವುಗಳಿಂದ ಮಂಡಿತವೂ ನೂರುಯೋಜನ ವಿಸ್ತೀರ್ಣವೂ ಮುನ್ನೂರು ಯೋಜನಗಳ ಉದ್ದವೂ ನಿತ್ಯತುಷ್ಟರಾದ ಜನಗಳಿಂದ ಪೂರ್ಣವೂ ಅತಿವಿಶಾಲವೂ ಆದ ಲಂಕಾನಗರಿಯು ಪ್ರಜ್ವಲಿಸುತ್ತಿರುವುದು.

೨೯. ಆ ಲಂಕಾನಗರಿಯಲ್ಲಿ ಸ್ವೇಚ್ಛಾರೂಪಿಗಳೂ ಮಹಾತ್ಮರೂ ಬಲದಿಂದ ಗರ್ವಿತರೂ ಮಹಾನುಭಾವರಾದ ದೇವತೆಗಳಿಗೆ ದ್ವೇಷಿಗಳೂ ಆದ ಮಹಾರಾಕ್ಷಸರು ವಾಸಮಾಡುವರು ಮತ್ತು ಆ ಲಂಕಾಮಹಾನಗರಿಯು ಶತ್ರುಗಳಿಗೆ ಅಗಮ್ಯವಾಗಿಯೂ ಮನುಷ್ಯರ ಬಾಧೆಗಳಿಗೆ ಸಿಕ್ಕದೇ ಇರುವುದಾಗಿಯೂ ರಮ್ಯವಾಗಿಯೂ ಇದೆ

೩೦. ಆ ಲಂಕಾದ್ವೀಪದ ಪೂರ್ವಭಾಗದ ನದೀಪತಿಯಾದ ಸಮುದ್ರದ ತೀರದಲ್ಲಿ ಗೋಕರ್ಣನಾಮಕನಾದ ಪರಮೇಶ್ವರನ ಅತಿವಿಶಾಲವಾದ ದೇವಾಲಯವು ಹೊಳೆಯುತ್ತಿರುವುದು.

ತಥೈಕರಾಜ್ಯಂ ವಿಜ್ಞೇಯಂ ಶಂಖದ್ವೀಪಸಮಾಸ್ಥಿತಂ ।
ಶತಯೋಜನವಿಸ್ತೀರ್ಣಂ ನಾನಾಮ್ಲೇಚ್ಛಗಣಾಲಯಂ ॥ ೩೧ ॥

ತತ್ರ ಶಂಖಗಿರಿರ್ನಾಮ ಧೌತಶಂಖದಲಪ್ರಭಃ ।
ನಾನಾರತ್ನಾಕರಃ ಪುಣ್ಯಃ ಪುಣ್ಯಕೃದ್ಭಿರ್ನಿಷೇವಿತಃ ॥ ೩೨ ॥

ಶಂಖನಾಗಾ ಮಹಾಪುಣ್ಯಾ ಯಸ್ಮಾತ್ ಪ್ರಭವತೇ ನದೀ ।
ಯತ್ರ ಶಂಖಮುಖೋ ನಾಮ ನಾಗರಾಜಃ ಕೃತಾಲಯಃ ॥ ೩೩ ॥

ತಥೈವ ಕುಮುದದ್ವೀಪಂ ನಾನಾಪುಣ್ಯೋಪಶೋಭಿತಂ ।
ನಾನಾಗ್ರಾಮಸಮಾಕೀರ್ಣಂ ನಾನಾರತ್ನಾಕರಂ ಶಿವಂ ॥ ೩೪ ॥

ಕುಮುದಾ ನಾಮ ಮಹಾಭಾಗಾ ದುಷ್ಟಚಿತ್ತನಿಬರ್ಹಣೀ ।
ಮಹಾದೇವಸ್ಯ ಭಗಿನೀ ಪ್ರಭಾಭಿಸ್ತಾಭಿರಿಜ್ಯತೇ ॥ ೩೫ ॥

---

೩೧-೩೨ ಹಾಗೆಯೇ ಶಂಖದ್ವೀಪವು ಏಕಚಕ್ರಾಧಿಪತ್ಯಕ್ಕೆ ಒಳಪಟ್ಟದ್ದಾಗಿದೆ. ಅದು ನೂರುಯೋಜನ ವಿಸ್ತೀರ್ಣವಾಗಿಯೂ ನಾನಾ ಮ್ಲೇಚ್ಛರ ಗುಂಪಿಗೆ ಆಶ್ರಯವಾಗಿಯೂ ಇರುತ್ತದೆ. ಆ ಶಂಖದ್ವೀಪದಲ್ಲಿ ಅತಿ ಶುಭ್ರವಾದ ಶಂಖದಚೂರುಗಳಂತೆ ಕಾಂತಿಯುಳ್ಳ ಶಂಖಗಿರಿಯು ಹೊಳೆಯುತ್ತಿದೆ. ಅದು ನಾನಾರತ್ನಗಳಿಗೆ ಗಣಿಯಾಗಿಯೂ ಪವಿತ್ರವಾಗಿಯೂ ಮಹಾತ್ಮರಿಗೆ ಆಶ್ರಯವಾಗಿಯೂ ಇದೆ.

೩೩. ಆ ಶಂಖಗಿರಿಯಿಂದ ಮಹಾಪುಣ್ಯಪ್ರದವೂ ಅತಿ ಮಹತ್ತೂ ಆದ ಶಂಖನದಿಯು ಉತ್ಪನ್ನವಾಗಿದೆ. ಆ ನದಿಯಮಡುವಿನಲ್ಲಿ ಶಂಖಮುಖನೆಂಬ ನಾಗರಾಜನು ವಾಸಮಾಡುವನು.

೩೪. ಶಂಖದ್ವೀಪದಂತೆಯೇ ಕುಮುದದ್ವೀಪವೂ ಕೂಡ ನಾನಾವಿಧ ಪುಣ್ಯಸ್ಥಳಗಳಿಂದಲೂ ಮಹಾತ್ಮರಿಂದಲೂ ಸೇವಿತವೂ ನಾನಾಗ್ರಾಮಗಳಿಂದ ಸಂಕೀರ್ಣವೂ ನಾನಾರತ್ನಗಳಿಗೆ ಆಶ್ರಯವೂ ಮಂಗಳಕರವೂ ಆಗಿದೆ.

೩೫. ಅದರಲ್ಲಿ ಮಹಾಭಾಗ್ಯದಾಯಕಳೂ ದುಷ್ಟರ ಸಂಹಾರಕಳೂ ಮಹಾದೇವನ ಭಗಿನಿಯೂ ಆದ ಕುಮುದಾದೇವಿಯು ಮಹಾತ್ಮರಾದ ಪ್ರಜೆಗಳಿಂದ ಪೂಜಿಸಲ್ಪಡುತ್ತಾಳೆ.

ತಥಾ ವರಾಹದ್ವೀಪೇ ಚ ನಾನಾಮ್ಲೇಚ್ಛಗಣಾಕುಲೇ ।
ನಾನಾಜಾತಿಸಮಾಕೀರ್ಣೇ ನಾನಾಧಿಷ್ಠಾನಪತ್ತನೇ ॥ ೩೬ ॥

ಧನಧಾನ್ಯಯುತೇ ಸ್ಫೀತೇ ಧರ್ಮಿಷ್ಠಜನಸಂಕುಲೇ ।
ನದೀಶೈಲವನೈಶ್ಚಿತ್ರೈರ್ಬಹುಪುಷ್ಪಫಲೋಪಗೈಃ ॥ ೩೭ ॥

ವರಾಹಪರ್ವತೋ ನಾಮ ತತ್ರ ರಮ್ಯಃ ಶಿಲೋಚ್ಚಯಃ ।
ಅನೇಕಕಂದರದರೀಗುಹಾನಿರ್ಝರಶೋಭಿತಃ ॥ ೩೮ ॥

ತಸ್ಮಾತ್ಸುರಸಪಾನೀಯಾ ಪುಣ್ಯತೀರ್ಥತರಂಗಿಣೀ ।
ವಾರಾಹೀ ನಾಮ ವರದಾ ಪ್ರವೃತ್ತಾಸ್ಯ ಮಹಾನದೀ ॥ ೩೯ ॥

ವಾರಾಹರೂಪಿಣೇ ತತ್ರ ವಿಷ್ಣವೇ ಪ್ರಭವಿಷ್ಣವೇ ।
ಅನನ್ಯದೇವತಾಸ್ತಸ್ಮೈ ನಮಸ್ಕುರ್ವಂತಿ ವಿಪ್ರಜಾಃ ॥ ೪೦ ॥

---

೩೬–೩೭. ಪೂರ್ವದ್ವೀಪಗಳಂತೆ ವರಾಹದ್ವೀಪವೂ ಕೂಡ ವಿವಿಧರಾದ ಮ್ಲೇಂಚರ ಸಂಘಗಳಿಗೆ ಆಶ್ರಯವಾಗಿಯೂ ನಾನಾಜಾತೀಯ ಜನಗಳಿಗೆ ಆವಾಸಸ್ಥಾನವಾಗಿಯೂ ನಾನಾನಗರಗಳಿಂದ ಪೂರ್ಣವಾಗಿಯೂ ಧನಧಾನ್ಯಗಳಿಂದ, ಭರಿತವಾಗಿಯೂ ಅತಿವಿಸ್ತಾರವಾಗಿಯೂ ಇದೆ. ಅದರಲ್ಲಿ ಧರ್ಮಾತ್ಮರಾದ ಅನೇಕರು ವಾಸಿಸುವರು. ಬಹುವಿಧವಾದ ಫಲಪುಷ್ಪಗಳಿಂದ ಪೂರ್ಣವಾದ ಉಪವನ, ಪರ್ವತ, ನದಿ ಇವುಗಳು ವಿಶೇಷಾಕಾರವಾಗಿ ಹೊಳೆಯುವುದು.

೩೮-೩೯. ಅದರಲ್ಲಿ ವರಾಹಪರ್ವತವು ಅತಿ ರಮ್ಯವಾಗಿಯೂ ಕೇವಲ ಶಿಲಾಮಯವಾಗಿಯೂ ಅನೇಕವಾದ ಗವಿಗಳು, ಮಹಾಗುಹೆಗಳು, ಕುಂಜಗಳು, ಝರಿಗಳು ಇವುಗಳಿಂದ ಶೋಭಿತವಾಗಿಯೂ ಇದೆ. ಅದರಿಂದ ರುಚಿಯಾದ ಜಲಭರಿತವೂ ಪುಣ್ಯತೀರ್ಥಗಳಿಗೆ ಆಶ್ರಯವೂ ವರದಾಯಕವೂ ವರಾಹೀನಾಮಕವೂ ಆದ ಮಹಾನದಿಯು ಉದ್ಭವಿಸಿ ಅನೇಕ ದೇಶಗಳಲ್ಲಿ ಸಂಚರಿಸುವುದು.

೪೦. ಆ ವರಾಹ ಗಿರಿಯಲ್ಲಿ ಲೋಕಕರ್ತನೂ ವರಾಹರೂಪಿಯೂ ಆದ ಮಹಾವಿಷ್ಣುವು ವಾಸಮಾಡುವನು ಆ ಲೋಕದ ಪ್ರಜೆಗಳು ಅನನ್ಯಭಾವನೆಯಿಂದ ಮಹಾವಿಷ್ಣುವಿಗೆ ಅರ್ಚನೆ ವಂದನೆ ಮೊದಲಾದವುಗಳನ್ನು ಮಾಡುತ್ತಾರೆ.

ಏವಂ ಷಡೇತೇ ಕಥಿತಾ ಅನುದ್ವೀಪಾಃ ಸಮಂತತಃ ।
ಭಾರತದ್ವೀಪದೇಶೋ ವೈ ದಕ್ಷಿಣೇ ಬಹುವಿಸ್ತರಃ ॥ ೪೧ ॥

ಏವಮೇಕಮಿದಂ ವರ್ಷಂ ಮಹಾದ್ವೀಪಮಿಹೋಚ್ಯತೇ ।
ಸಮುದ್ರಜಲಸಂಭಿನ್ನಂ ಖಂಡಂ ಖಂಡೀಕೃತಂ ಸ್ಮೃತಂ ॥ ೪೨ ॥

ಏವಂಚಂತುರ್ಮಹಾದ್ವೀಪಃ ಸಾಂತರದ್ವೀಪಮಂಡಿತಃ ।
ಸಾನುದ್ವೀಪಃ ಸಮಾಖ್ಯಾತೋ ಜಂಬೂದ್ವೀಪಸ್ಯ ವಿಸ್ತರಃ ॥ ೪೩ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಭುವನವಿನ್ಯಾಸೋ "
ನಾಮ ಅಷ್ಟಚತ್ವಾರಿಂಶೋಽಧ್ಯಾಯಃ

---

೪೧. ಹೀಗೆ ಈ ಆರು ಉಪದ್ವೀಪಗಳ ವಿಷಯಗಳನ್ನು ವಿಶದವಾಗಿ ತಿಳಿಸಿರುವೆನು. ಈ ಆರು ದ್ವೀಪಗಳ ದಕ್ಷಿಣದಿಕ್ಕಿನಲ್ಲಿ ಭಾರತದ್ವೀಪವು ಬಹು ವಿಸ್ತಾರವಾಗಿಯೂ ರಮ್ಯವಾಗಿಯೂ ಇರುತ್ತದೆ.

೪೨. ಹೀಗೆ ಈ ಜಂಬೂದ್ವೀಪವೊಂದೇ ಅನೇಕ ಭಾಗಗಳಿಂದ ಕೂಡಿ ಬಹುದ್ವೀಪವಾಗಿದೆ. ಈ ಒಂದು ದ್ವೀಪವೇ ಸಮುದ್ರಜಲದಿಂದ ವಿಭಿನ್ನವಾದ ಸನ್ನಿವೇಶದಿಂದ ಅನೇಕ ಸಣ್ಣಸಣ್ಣ ಖಂಡಗಳಾಗಿ ವಿಭಾಗಿಸಲ್ಪಟ್ಟಿದೆ.

೪೩. ಹೀಗೆ ಅವಾಂತರ ದ್ವೀಪಗಳಿಂದ ಸಹಿತವಾದ ನಾಲ್ಕು ಮಹಾದ್ವೀಪಗಳನ್ನೂ ಮತ್ತು ಜಂಬೂದ್ವೀಪದ ವಿಸ್ತಾರವನ್ನೂ ನಿಮಗಾಗಿ ನಿರೂಪಿಸಿರುವೆನೆಂದು ಸೂತಪುರಾಣೀಕನು ಮಹರ್ಷಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಸಪ್ತದ್ವೀಪಗಳ ವರ್ಣನೆ "ಯೆಂಬ
ನಲವತ್ತೆಂಟನೆಯ ಅಧ್ಯಾಯವು ಸಮಾಪ್ತವಾದುದು.

## ನಲವತ್ತೆಂಟನೆಯ ಅಧ್ಯಾಯದ ಸಾರಾಂಶವು

ಜಂಬೂದ್ವೀಪಕ್ಕೆ ದಕ್ಷಿಣದಿಗ್ಭಾಗದಲ್ಲಿ ಅತಿವಿಸ್ತಾರವಾದ ವಿದ್ಯುತ್ಕಂತವೆಂಬ ಪರ್ವತವೂ ಅದರಲ್ಲಿ ಅನೇಕ ವನಗಳೂ ಕ್ಷುದ್ರಮನುಷ್ಯರೂ ಇರುವರು. ಜಂಬೂ ದ್ವೀಪದ ಪಕ್ಕದಲ್ಲಿ ಪ್ರಖ್ಯಾತವಾದ ಆರು ದ್ವೀಪಗಳಿವೆ. ಅಂಗದ್ವೀಪ, ಯಮದ್ವೀಪ, ಮಲಯದ್ವೀಪ, ಶಂಖದ್ವೀಪ, ಕುಶದ್ವೀಪ, ವರಾಹದ್ವೀಪಗಳೆಂದು ಆರು ದ್ವೀಪಗಳಿವೆ. ಅವುಗಳಲ್ಲಿ ಅಂಗದ್ವೀಪದಲ್ಲಿ ನಾನಾ ರತ್ನಗಳ ಗಣಿಗಳೂ, ಮ್ಲೇಚ್ಛರೂ, ನಾನಾ ಪ್ರಾಣಿಗಳೂ ವಿವಿಧ ನದೀವನಗಳೂ ಇರುತ್ತವೆ. ಯಮದ್ವೀಪವು ನವರತ್ನಗಳಿಗೆ ಆಕರವೂ, ಅತಿವಿಸ್ತಾರವೂ, ದ್ಯುತಿಮಂತ ಪರ್ವತಯುಕ್ತವೂ ಆಗಿದೆ. ಮಲಯ ದ್ವೀಪವು ಸುವರ್ಣಕ್ಕೆ ಆಕರವೂ ಚಂದನವನಗಳಿಗೆ ಆಶ್ರಯವೂ, ಮ್ಲೇಚ್ಛಜನಾ ಕೀರ್ಣವೂ ತ್ರಿಕೂಟಗಿರಿಯಿಂದ ಯುಕ್ತವೂ ಆಗಿದೆ. ಅದರ ಪಕ್ಕದಲ್ಲಿ ರಾಕ್ಷಸರಿಗೆ ಆಶ್ರಯವಾದ ಲಂಕಾನಗರವು ಇರುವುದು

ಅದರಂತೆ ಶಂಖದ್ವೀಪವು ಬಹುವಿಸ್ತೀರ್ಣವೂ ಮ್ಲೇಚ್ಛಾಶ್ರಯವೂ ನಾನಾ ರತ್ನಾಕರವೂ ಶಂಖಗಿರಿಯಿಂದ ಯುಕ್ತವೂ ನಾಗರಾಜನಿಗೆ ಮುಖ್ಯಸ್ಥಾನವೂ ಆಗಿದೆ ಕುಶದ್ವೀಪವೂ ಕೂಡ ಅನೇಕ ಪುಣ್ಯಜನಗಳಿಗೂ ನಾನಾಗ್ರಾಮ ನಗರ, ನದೀ, ವನಗಗಳು ಇವುಗಳಿಗೆ ಆಶ್ರಯವಾಗಿಯೂ ಇದೆ ಅದರಲ್ಲಿ ಈಶ್ವರನ ತಂಗಿಯಾದ ಕುಮುದ್ವತೀ ದೇವಿಯು ಭಕ್ತರಿಂದ ಸೇವಿಸಲ್ಪಡುತ್ತಿರುವಳು. ವರಾಹದ್ವೀಪವು ಧನಧಾನ್ಯಸಮೃದ್ಧವೂ ನದೀಪರ್ವತಗಳಿಂದ ಮಂಡಿತವೂ, ನಾನಾ ಜನಗಳಿಂದ ಪೂರ್ಣವೂ ಆಗಿದೆ. ಅಲ್ಲಿ ವರಾಹಗಿರಿಯಿರುವುದು. ಅದರಲ್ಲಿ ವರಾಹಸ್ವಾಮಿಯು ಭಕ್ತರಿಂದ ಸದಾ ಪೂಜಿಸಲ್ಪಡುತ್ತಿರುವನು ಎಂಬ ವಿಷಯಗಳು ಉಕ್ತವಾಗಿವೆ.

—॥ ಹರಿಃ ಓಮ್ ॥—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ॥ ಏಕೋನಪಂಚಶೋಽಧ್ಯಾಯಃ ॥

॥ ಸೂತ ಉವಾಚ ॥

ಪ್ಲಕ್ಷದ್ವೀಪಂ ಪ್ರವಕ್ಷ್ಯಾಮಿ ಯಥಾವದಿವ ಸಂಗ್ರಹಾತ್ ।
ಶೃಣುತೇಮಂ ಯಥಾತತ್ವಂ ಬ್ರುವತೋ ಮೇ ದ್ವಿಜೋತ್ತಮಾಃ ।
ಜಂಬೂದ್ವೀಪಸ್ಯ ವಿಸ್ತಾರಾದ್ವಿಗುಣಾಸ್ತಸ್ಯ ವಿಸ್ತರಃ । ॥ ೧ ॥

ವಿಸ್ತಾರಾತ್ರಿಗುಣಾಶ್ಚಾಸ್ಯ ಪರಿಣಾಹಃ ಸಮಂತತಃ ।
ತೇನಾವೃತಃ ಸಮುದ್ರೋಽಯಂ ದ್ವೀಪೇನ ಲವಣೋದಕಃ ॥ ೨ ॥

ತತ್ರ ಪುಣ್ಯಾ ಜನಪದಾಶ್ಚಿರಾಚ್ಚ ಮ್ರಿಯತೇ ಪ್ರಜಾ ।
ಕುತ ಏವ ಹಿ ದುರ್ಭಿಕ್ಷಂ ಜರಾವ್ಯಾಧಿಭಯಂ ಕುತಃ ॥ ೩ ॥

---

## ನಲವತ್ತೊಂಭತ್ತನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಎಲೈ ಮುನಿಗಳೇ, ನಿಮಗೆ ಪ್ಲಕ್ಷದ್ವೀಪ ವನ್ನು ಯಥಾಸ್ಥಿತವಾಗಿ ಸಂಗ್ರಹವಾಗಿ ಹೇಳುವೆನು ಕೇಳಿ. ಈ ನಿಜವಾದ ಸಂಗತಿ ಯನ್ನು ನಿಮಗಾಗಿ ತಿಳಿಸುವೆನು ಅದು ಸತ್ಯವಾದ ಸಂಗತಿಯಾಗಿದೆ ಎಂದನು.

೨. ಪ್ಲಕ್ಷದ್ವೀಪವು ಜಂಬೂದ್ವೀಪಕ್ಕಿಂತಲೂ ಎರಡರಷ್ಟು ವಿಸ್ತಾರವಾಗಿಯೂ ಮೂರರಷ್ಟು ಅಗಲವಾಗಿಯೂ ಇದೆ. ಲವಣಸಮುದ್ರವು ಪ್ಲಕ್ಷದ್ವೀಪದಿಂದಾವೃತ ವಾಗಿದೆ. ಅಂದರೆ ಪ್ಲಕ್ಷದ್ವೀಪದ ಸುತ್ತಲೂ ಲವಣಸಮುದ್ರವು ಇರುತ್ತದೆ.

ತತ್ರಾಪಿ ಪರ್ವತಾಃ ಶುಭ್ರಾಃ ಸಪ್ತೈವ ಮಣಿಭೂಷಣಾಃ ।
ರತ್ನಾಕರಾಸ್ತಥಾ ನದ್ಯಸ್ತಾಸಾನ್ನಾಮಾನಿ ವಚ್ಮಿಭೋಃ ॥ ೪ ॥

ಪ್ಲಕ್ಷದ್ವೀಪಾದಿಷು ತೇಷು ಸಪ್ತ ಸಪ್ತಸು ಸಪ್ತಸು ।
ಋಜ್ವಾಯತಾಃ ಪ್ರತಿದಿಶಂ ನಿವಿಷ್ಟಾಃ ಪರ್ವತಾಃ ಸದಾ ॥ ೫ ॥

ಪ್ಲಕ್ಷದ್ವೀಪೇ ತು ವಕ್ಷ್ಯಾಮಿ ಸಪ್ತ ದ್ವೀಪಾನ್ಮಹಾಚಲಾನ್ ।
ಗೋಮೇದ ಕೋತ್ರ ಪ್ರಥಮಃ ಪರ್ವತೋ ಮೇಘಸನ್ನಿಭಃ ॥
ಖ್ಯಾಯತೇ ತಸ್ಯ ನಾಮ್ನಾ ವೈ ವರ್ಷಂ ಗೋಮೇದಕಂ ತು ತತ್ ॥ ೬ ॥

ದ್ವಿತೀಯಃ ಪರ್ವತಶ್ಚಂದ್ರಃ ಸರ್ವೌಷಧಿಸಮನ್ವಿತಃ ।
ಅಶ್ವಿಭ್ಯಾಮಮೃತಸ್ಯಾರ್ಥೇ ಓಷಧ್ಯಸ್ತತ್ರ ಸಂಸ್ಥಿತಾಃ ॥ ೭ ॥

---

೩. ಆ ದ್ವೀಪದಲ್ಲಿ ದೇಶಗಳೆಲ್ಲವೂ ಪುಣ್ಯದಾಯಕವಾಗಿರುತ್ತದೆ. ಪ್ರಜೆಗಳು ಚಿರಜೀವಿಗಳಾಗಿರುವರು. ಅಕಾಲಮರಣದ ವಾರ್ತೆಯೇ ಇಲ್ಲ. ದುರ್ಭಿಕ್ಷವೆಂಬ ಹೆಸರೇ ಇಲ್ಲ. ಜರಾವ್ಯಾಧಿಗಳ ಭಯವೆಲ್ಲಿಯದು ?

೪. ಅಲ್ಲಿಯ ಪರ್ವತಗಳು ಶುಭ್ರವಾಗಿಯೂ ಮಣಿಭೂಷಿತವಾಗಿಯೂ ಸಪ್ತ ಸಂಖ್ಯಾಕಗಳಾಗಿಯೂ ಇವೆ. ಅಲ್ಲಿಯ ಸಮುದ್ರ, ನದಿ ಇವುಗಳ ನಾಮಗಳನ್ನು ಹೇಳುವೆನು ಕೇಳಿ ಎಂದನು.

೫. ಪ್ಲಕ್ಷವೇ ಮೊದಲಾದ ಸಪ್ತದ್ವೀಪಗಳಲ್ಲಿಯೂ ಏಳೇಳು ಪರ್ವತಗಳು ಋಜುವಾಗಿಯೂ ಉದ್ದವಾಗಿಯೂ ದಿಗಂತವಿಶ್ರಾಂತವಾಗಿಯೂ ಇವೆ

೬. ಮೊದಲು ಸಪ್ತದ್ವೀಪಗಳನ್ನೂ ಪ್ಲಕ್ಷದ್ವೀಪದಲ್ಲಿರುವ ಸಪ್ತಪರ್ವತಗಳನ್ನೂ ಹೇಳುತ್ತೇನೆ ಆ ಸಪ್ತಪರ್ವತಗಳಲ್ಲಿ ಮೇಘದಂತೆ ನೀಲವರ್ಣವುಳ್ಳ ಗೋಮೇಧಕಪರ್ವತವೇ ಮೊದಲನೆಯ ಪರ್ವತವಾಗಿದೆ. ಆ ಪರ್ವತದಿಂದಲೇ ಆ ವರ್ಷವೂ ಕೂಡ ಗೋಮೇದಕನಾಮದಿಂದ ಪ್ರಖ್ಯಾತವಾಗಿದೆ.

೭. ಸಮಸ್ತ ಔಷಧಿಗಳಿಗೆ ಆಶ್ರಯವೂ ಮಹತ್ತೂ ಆದ ಚಂದ್ರಪರ್ವತವೇ ಎರಡನೆಯ ಪರ್ವತವಾಗಿದೆ. ಅಶ್ವಿನೀದೇವತೆಗಳು ಅಮೃತವನ್ನು ಪಡೆಯುವುದ ಕ್ಕೋಸ್ಕರ ಔಷಧಿ ವಿಶೇಷಗಳನ್ನು ಆ ಪರ್ವತದಲ್ಲಿ ಬೆಳಸಿರುವರು.

ತೃತೀಯೋ ನಾರದೋ ನಾಮ ದುರ್ಗಶೈಲೋ ಮಹೋಚ್ಛ್ರಯಃ ।
ತತ್ರಾಚಲೇ ಸಮುತ್ಪನ್ನೌ ಪೂರ್ವಂ ನಾರದಪರ್ವತೌ ॥ ೮ ॥

ಚತುರ್ಥಸ್ತತ್ರ ವೈ ಶೈಲೋ ದುಂದುಭಿರ್ನಾಮ ನಾಮತಃ ।
ಶಬ್ದಮೃತ್ಯುಃ ಪುರಾ ತಸ್ಮಿನ್ ದುಂದುಭಿಸ್ತಾಡಿತಃ ಸುರೈಃ ॥
ರಜ್ಜುದಾರೋ ರಜ್ಜುಮಯಃ ಶಾಲ್ಮಲಶ್ಚಾಸುರಾಂತಕೃತ್ ॥ ೯ ॥

ಪಂಚಮಃ ಸೋಮಕೋ ನಾಮ ದೇವೈರ್ಯತ್ರಾಮೃತಂ ಪುರಾ ।
ಸಂಭೃತಂ ಚ ಧೃತಂ ಚೈವ ಮಾತುರರ್ಥೇ ಗರುತ್ಮತಾ ॥ ೧೦ ॥

ಷಷ್ಠಸ್ತು ಸುಮನಾ ನಾಮ ಸ ಏವರ್ಷಭ ಉಚ್ಯತೇ ।
ಹಿರಣ್ಯಾಕ್ಷೋ ವರಾಹೇಣ ತಸ್ಮಿನ್ ಶೈಲೇ ನಿಷೂದಿತಃ ॥ ೧೧ ॥

---

೮. ಅತ್ಯುನ್ನತವೂ ಕೋಟಿಗಳಂತಿರುವ ಕಲ್ಲುಬಂಡೆಗಳಿಂದ ಸಹಿತವೂ ಆದ ನಾರದವೆಂಬ ಪರ್ವತವು ಮೂರನೆಯದಾಗಿದೆ. ಪೂರ್ವಕಾಲದಲ್ಲಿ ನಾರದಪರ್ವತರೆಂಬ ಮಹರ್ಷಿಗಳು ಆ ಗಿರಿಯಲ್ಲಿ ಆವಿರ್ಭೂತರಾದರು.

೯. ನಾಲ್ಕನೆಯದು ದುಂದುಭಿನಾಮಕ ಪರ್ವತವಾಗಿದೆ. ಪೂರ್ವದಲ್ಲಿ ದೇವತೆಗಳು ಆ ಪರ್ವತದಲ್ಲಿ ನಗಾರಿಯನ್ನು ಭಾರಿಸಿದರು. ಆ ಧ್ವನಿಯು ಅತಿ ಘೋರವಾಗಿಯೂ ಶ್ರವಣಮಾತ್ರದಿಂದ ಮರಣದಾಯಕವಾಗಿಯೂ ಇತ್ತು. ಮತ್ತು ರಜ್ಜುವಿನಂತೆ ಕೃಶಾಂಗಿಯಾದ ಪತ್ನಿಯುಳ್ಳವನೂ ಪಾಶಧರನೂ ಶಾಲ್ಮಲೀವೃಕ್ಷದಂತೆಯೇ ಉನ್ನತನೂ ಆದ ಭಗವಂತನು ಆ ಗಿರಿಯಲ್ಲಿ ದುಂದುಭಿಯೆಂಬ ರಾಕ್ಷಸನನ್ನು ಸಂಹಾರಮಾಡಿದನು. ಅದರಿಂದ ಆ ನಾಮವು ಪ್ರಾಪ್ತವಾಗಿದೆ.

೧೦. ಐದನೆಯ ಪರ್ವತವು ಸೋಮಗಿರಿಯಾಗಿದೆ ಪೂರ್ವದಲ್ಲಿ ದೇವತೆಗಳು ಆ ಗಿರಿಯಲ್ಲಿ ಅಮೃತವನ್ನು ಬಚ್ಚಿಟ್ಟಿದ್ದರು. ಗರುಡದೇವನು ಅದನ್ನು ತನ್ನ ತಾಯಿಗೋಸ್ಕರವಾಗಿ ಅಪಹರಿಸಿದನು. ಇದರಿಂದ ಆ ಪರ್ವತಕ್ಕೆ ಸೋಮಗಿರಿಯೆಂಬ ನಾಮವು ಪ್ರಾಪ್ತವಾಗಿದೆ.

೧೧. ಆರನೆಯದು ಸುಮನಸವೆಂಬ ಪರ್ವತವಾಗಿದೆ. ಅದಕ್ಕೆ ಋಷಭನೆಂಬ ನಾಮಾಂತರವೂ ಪ್ರಾಪ್ತವಾಗಿದೆ ಅದೇ ಗಿರಿಯಲ್ಲಿಯೇ ವರಾಹರೂಪಿಯಾದ ಭಗವಂತನು ಅವತರಿಸಿ, ಹಿರಣ್ಯಾಕ್ಷನನ್ನು ಸಂಹಾರಮಾಡಿದನು.

ವೈಭ್ರಾಜಃ ಸಪ್ತಮಸ್ತತ್ರ ಭ್ರಾಜಿಷ್ಣುಃ ಸ್ಫಾದಿಕೋ ಮಹಾ೯ ।
ಯಸ್ಮಾದ್ವಿಭ್ರಾಜತೇಽರ್ಚಿರ್ಭಿರ್ವೈಭ್ರಾಜಸ್ತೇನ ಸ ಸ್ಮೃತಃ ॥ ೧೨ ॥

ತೇಷಾಂ ವರ್ಷಾಣಿ ವಕ್ಷ್ಯಾಮಿ ನಾಮತಸ್ತು ಯಥಾಕ್ರಮಂ ।
ಗೋಮೇದಂ ಪ್ರಥಮಂ ವರ್ಷಂ ನಾಮ್ನಾ ಶಾಂತಭಯಂ ಸ್ಮೃತಂ॥ ೧೩ ॥

ಚಂದ್ರಸ್ಯ ಶಿಖರಂ ನಾಮ ನಾರದಸ್ಯ ಸುಖೋದಯಂ ।
ಆನಂದಂ ದುಂದುಭೇರ್ವರ್ಷಂ ಸೋಮಕಸ್ಯ ಶಿವಂ ಸ್ಮೃತಂ ॥
ಕ್ಷೇಮಕಂ ಋಷಭಸ್ಯಾಪಿ ವೈಭ್ರಾಜಸ್ಯಂ ಧ್ರುವಂ ತಥಾ ॥ ೧೪ ॥

ಏತೇಷು ದೇವಗಂಧರ್ವಾಃ ಸಿದ್ಧಾಶ್ಚ ಸಹಚಾರಣೈಃ ।
ವಿಹರಂತಿ ರಮಂತೇ ಚ ದೃಶ್ಯಮಾನಾಸ್ತು ತೈಃ ಸಹ ॥ ೧೫ ॥

---

೧೨. ಏಳನೆಯದು ವೈಭ್ರಾಜಕನಾಮಕಗಿರಿಯಾಗಿದೆ ಅದರಲ್ಲಿ ಹೊಳೆಯು ತ್ತಿರುವ ಮಹತ್ತಾದ ಸ್ಫಟಿಕಶಿಲೆಯು ಇರುತ್ತದೆ. ಯಾವ ಸ್ಫಟಿಕಶಿಲೆಯ ಕಾಂತಿ ಯಿಂದ ಪರ್ವತವೆಲ್ಲವೂ ಸದಾಕಾಲದಲ್ಲಿಯೂ ಶೋಭಿಸುತ್ತದೆಯೋ, ಆದರಿಂದ ಆ ನಾಮವು ಬಂದಿದೆ

೧೩. ಹೀಗೆ ಸಪ್ತಪರ್ವತಗಳಿಂದ ಸಪ್ತವರ್ಷಗಳು ಉಂಟಾಗಿವೆ. ಅವುಗಳ ನಾಮಗಳನ್ನು ಕ್ರಮವಾಗಿ ನಿರೂಪಿಸುವೆನು ಕೇಳಿ. ಗೋಮೇದವೆಂಬುವದೇ ಮೊದಲ ನೆಯ ವರ್ಷವಾಗಿದೆ. ಅದಕ್ಕೆ ಶಾಂತಭಯವೆಂಬ ಬೇರೊಂದು ನಾಮವು ಇರುತ್ತದೆ.

೧೪. ಗೋಮೇದವರ್ಷ, ಚಂದ್ರವರ್ಷ, ನಾರದವರ್ಷ, ದುಂದುಭಿವರ್ಷ, ಸೋಕವರ್ಷ, ಋಷಭವರ್ಷ, ವೈಭ್ರಾಜಕವರ್ಷವೆಂದು ಏಳು ವರ್ಷಗಳಿವೆ.

೧೫. ಮೇಲೆ ಹೇಳಿದ ಏಳು ವರ್ಷಗಳಲ್ಲಿಯೂ, ದೇವತೆಗಳು, ಗಂಧರ್ವರು, ಸಿದ್ಧಚಾರಣರು ಸದಾ ವಿಹಾರವನ್ನೂ ಕ್ರೀಡೆಯನ್ನೂ ಆ ದೇಶಗಳ ಜನಗಳಿಗೆ ಕಾಣುವಂತೆ ಮಾಡುವರು.

ತೇಷಾಂ ನದ್ಯಶ್ಚ ಸಪ್ತೈವ ಪ್ರತಿವರ್ಷಂ ಸಮುದ್ರಗಾಃ ।
ನಾಮತಸ್ತಾಃ ಪ್ರವಕ್ಷ್ಯಾಮಿ ಸಪ್ತಗಂಗಾ ಮಹಾನದೀ ॥ ೧೬ ॥

ಅಭಿಗಚ್ಛಂತಿ ತಾ ನದ್ಯಸ್ತಾಭ್ಯಶ್ಚಾನ್ಯಾಃ ಸಹಸ್ರಶಃ ।
ಬಹೂದಕಾಶ್ಚೌಘವತ್ಯೋ ಯತೋ ವರ್ಷತಿ ವಾಸವಃ ॥ ೧೭ ॥

ತಾಃ ಪಿಬಂತಿ ಸದಾ ದೃಷ್ಟ್ವಾ ನದೀರ್ಜನಪದಾಸ್ತು ತೇ ।
ಶುಭಾಃ ಶಾಂತವಹಾಶ್ಚೈವ ಪ್ರಮೋದಾ ಯೇ ಚ ತೇ ಶಿವಾಃ ॥ ೧೮ ॥

ಆನಂದಾಶ ಧ್ರುವಾಶ್ಚೈವ ಕ್ಷೇಮಕಾಶ್ಚ ಶಿವೈಃ ಸಹ ।
ವರ್ಣಾಶ್ರಮಾಚಾರಯುಕ್ತಾಃ ಪ್ರಜಾಸ್ತೇಷ್ವಥ ಸರ್ವಶಃ ॥ ೧೯ ॥

---

೧೬. ಮೇಲೆ ನಿರೂಪಿಸಿದ ಸಪ್ತವರ್ಷಗಳಲ್ಲಿಯೂ ಸಪ್ತನದಿಗಳು ಉದ್ಭವಿಸಿ ಸಮುದ್ರವನ್ನು ಸೇರುವುದು. ಆ ಸಪ್ತಮಹಾಗಂಗಾನದಿಗಳ ನಾಮಗಳನ್ನು ಕ್ರಮವಾಗಿ ನಿರೂಪಿಸುವೆನು, ಕೇಳಿ ಎಂದನು.

೧೭. ಆ ಮಹಾನದಿಗಳ ಜೊತೆಯಲ್ಲಿ ಇನ್ನೂ ಅನೇಕ ಉಪನದಿಗಳು ಸೇರುತ್ತವೆ. ಇದರಿಂದ ಅತಿಜಲದಿಂದ ಸಮೃದ್ಧವಾಗಿ ಇಂದ್ರನು ವಿಶೇಷ ಮಳೆ ಬೆಳೆಗಳನ್ನು ಕೊಡತಕ್ಕ ದೇಶಗಳಲ್ಲಿ ಹರಿದು ಸಮುದ್ರವನ್ನು ಸೇರುವುವು.

೧೮. ಆ ನದಿಗಳು ಸಂಚರಿಸುವ ದೇಶದ ಪ್ರಜೆಗಳು ನದೀಜಲವನ್ನು ಪಾನ ಮಾಡಿ ಸದಾಕಾಲದಲ್ಲಿಯೂ ಸಂತುಷ್ಟರಾಗಿರುವರು. ಆ ನದಿಗಳು ಮಂಗಳಕರಗಳಾಗಿಯೂ, ಶಾಂತಪ್ರವಾಹವುಳ್ಳವುಗಳಾಗಿಯೂ, ಆನಂದದಾಯಕಗಳಾಗಿಯೂ, ಶುಭಕರಗಳಾಗಿಯೂ ಇರುತ್ತವೆ.

೧೯. ಆ ದೇಶಗಳಲ್ಲಿರುವ ಪ್ರದೇಶಗಳು ಸಂತುಷ್ಟರಾಗಿಯೂ, ಸ್ಥಿರಚಿತ್ತರಾಗಿಯೂ, ಕುಶಲಿಗಳಾಗಿಯೂ. ಮಂಗಳಶಾಲಿಗಳಾಗಿಯೂ, ವರ್ಣಾಶ್ರಮಾಚಾರವಂತರಾಗಿಯೂ, ಆರೋಗ್ಯದೃಢಕಾಯರಾಗಿಯೂ ಇರುವರು.

ಸರ್ವೇಹ್ಯಸ್ವರೋಗಾಃ ಸುಬಲಾಃ ಪ್ರಜಾಸ್ತ್ರಾಮಯುವರ್ಜಿತಾಃ ।
ಅಧಃಸರ್ಪಿಣೀ ನ ತೇಷ್ವಸ್ತಿ ತಥೈವೋತ್ಸರ್ಪಿಣೀ ನ ಚ ॥ ೨೦ ॥

ನ ತತ್ರಾಸ್ತಿ ಯುಗಾವಸ್ಥಾ ಚತುರ್ಯುಗಕೃತಾಕ್ವಚಿತ್ ।
ತ್ರೇತಾಯುಗಸಮಃ ಕಾಲಃ ಸರ್ವದಾ ತತ್ರ ವರ್ತತೇ ॥ ೨೧ ॥

ಪ್ಲಕ್ಷದ್ವೀಪಾದಿಷು ಜ್ಞೇಯಃ ಪಂಚಸ್ವೇತೇಷು ಸರ್ವಶಃ ।
ದೇಶಸ್ಯಾನುವಿಧಾನೇನ ಕಾಲಸ್ಯಾನುವಿಧಾಃ ಸ್ಮೃತಾಃ ॥ ೨೨ ॥

ಪಂಚವರ್ಷಸಹಸ್ರಾಣಿ ತೇಷು ಜೀವಂತಿ ಮಾನವಾಃ ।
ಸುರೂಪಾಶ್ಚ ಸುವೇಷಾಶ್ಚ ಅರೋಗಾ ಬಲಿನಸ್ತಥಾ ॥ ೨೩ ॥

ಸುಖಮಾಯುರ್ಬಲಂ ರೂಪಂ ಆರೋಗ್ಯಂ ಧರ್ಮ ಏವ ಚ ।
ಪ್ಲಕ್ಷದ್ವೀಪಾದಿಷು ಜ್ಞೇಯಂ ಶಾಕದ್ವೀಪಾಂತಕೇಷು ಚ ॥ ೨೪ ॥

---

೨೦. ಪ್ಲಕ್ಷದ್ವೀಪದ ಪ್ರಜೆಗಳೆಲ್ಲರೂ, ರೋಗರಹಿತರೂ, ಬಲಿಷ್ಠರೂ, ಉಪದ್ರವ ಶೂನ್ಯರೂ, ಸುಖಿಗಳೂ ಆಗಿರುವರು. ಆ ಜನರಲ್ಲಿ ರೋಗಾದ್ಯುಪದ್ರವಗಳಿಂದ ಅಧೋರೇತಸ್ಕನೂ ಯಾವನೊಬ್ಬನೂ ಆಗಿರಲಿಲ್ಲ.

೨೧ ಆ ದೇಶದಲ್ಲಿ ಕಲಿಯುಗಾದಿ ನಾಲ್ಕು ಯುಗಗಳ ಸ್ಥಿತಿಗತಿಗಳಿರಲಿಲ್ಲ. ಸರ್ವಕಾಲದಲ್ಲಿಯೂ ತ್ರೇತಾಯುಗದ ಅವಸ್ಥೆಯೇ ಅಂದರೆ ತ್ರೇತಾಯುಗದ ಧರ್ಮಗಳಿದ್ದುವೇ ವಿನಾ ಕಲಿಕಾಲದ ಅಧರ್ಮಾದಿದೋಷಗಳು ಯಾವಾಗಲೂ ಇರಲಿಲ್ಲ.

೨೨. ಪ್ಲಕ್ಷದ್ವೀಪವೇ ಮೊದಲಾದ ಐದು ದ್ವೀಪಗಳಲ್ಲಿಯೂ ದೇಶಾನುಗುಣ ಗಳೂ ಕಾಲಾನುಗುಣಗಳೂ ಆದ ಧರ್ಮಾದಿಗಳಿದ್ದುವೇ ವಿನಾ ಅಧರ್ಮಾದಿಗಳಿರಲಿಲ್ಲ.

೨೩. ಅಲ್ಲಿಯ ಜನಗಳು ಸುರೂಪಿಯೂ, ಸುಂದರವಾದ ವೇಷಧಾರಿಗಳೂ, ರೋಗರಹಿತರೂ ಮತ್ತು ಬಲಿಷ್ಠರೂ ಆಗಿ ಐದುಸಾವಿರ ವರ್ಷಗಳ ವರೆಗೂ ಸುಖ ವಾಗಿ ಜೀವಿಸುವರು.

೨೪. ಪ್ಲಕ್ಷದ್ವೀಪ ಮೊದಲುಗೊಂಡು ಶಾಕದ್ವೀಪದ ವರೆಗೂ ಇರುವ ಪ್ರಜೆ ಗಳೆಲ್ಲರೂ, ಏಕರೀತಿಯಾದ ಸುಖ, ಆಯುಸ್ಸು, ಬಲರೂಪ, ಆರೋಗ್ಯ ಮತ್ತು ಧರ್ಮ ಇವುಗಳುಳ್ಳವರೂ ತೇಜಸ್ವಿಗಳೂ ಆಗಿರುವರು.

ಪ್ಲಕ್ಷದ್ವೀಪಃ ಪೃಥುಃ ಶ್ರೀಮಾನ್ ಸರ್ವತೋ ಧನಧಾನ್ಯವಾನ್ ।
ದಿವ್ಯೌಷಧಿಫಲೋಪೇತಃ ಸರ್ವೌಷಧಿವನಸ್ಪತಿಃ ॥ ೨೫ ॥

ಆವೃತಃ ಪಶುಭಿಃ ಸರ್ವೈರ್ಗ್ರಾಮಾರಣ್ಯೈಃ ಸಹಸ್ರಶಃ ।
ಜಂಬೂವೃಕ್ಷೇಣ ಸಂಖ್ಯಾತಸ್ತಸ್ಯ ಮಧ್ಯೇ ದ್ವಿಜೋತ್ತಮಾಃ ॥
ಪ್ಲಕ್ಷೇ ನಾಮ್ನಾ ಮಹಾವೃಕ್ಷಸ್ತಸ್ಯ ನಾಮ್ನಾ ಸ ಉಚ್ಯತೇ ॥ ೨೬ ॥

ಸ ತತ್ರ ಪೂಜ್ಯತೇ ಸ್ಥಾಣುರ್ಮಧ್ಯೇ ಜನಪದಸ್ಯ ಹಿ ।
ಸ ಚಾಪಿಕ್ಷುರಸೋದ್ದೇಶಃ ಪ್ಲಕ್ಷದ್ವೀಪಸಮಾವೃತಃ ॥
ಪ್ಲಕ್ಷದ್ವೀಪಸ್ಯ ಚೈವೇಹ ವೈ ಫುಲ್ಯಾದ್ವಿಸ್ತರೇಣ ತು ॥ ೨೭ ॥

ಇತ್ಯೇಷ ಸನ್ನಿವೇಶೋ ವಃ ಪ್ಲಕ್ಷದ್ವೀಪಸ್ಯ ಕೀರ್ತಿತಃ ।
ಅನುಪೂರ್ವ್ಯಾ ಸಮಾಸೇನ ಶಾಲ್ಮಲಂತನ್ನಿಬೋಧತ ॥ ೨೮ ॥

---

೨೫. ಪ್ಲಕ್ಷದ್ವೀಪವು ಅತಿವಿಶಾಲವೂ, ಐಶ್ವರ್ಯಭರಿತವೂ, ಎಲ್ಲಾ ಭಾಗ ದಲ್ಲಿಯೂ ಧನಧಾನ್ಯಸಮೃದ್ಧವೂ, ದಿವ್ಯೌಷಧಿಗಳು, ಫಲಪುಷ್ಪಗಳು, ಸರ್ವಲತೆಗಳು, ವನಸ್ಪತಿಗಳು ಇವುಗಳಿಂದ ಪೂರ್ಣವೂ ಆಗಿರುವುದು.

೨೬. ಎಲೈ ವಿಪ್ರೋತ್ತಮರೇ ಆ ದ್ವೀಪವು ಗ್ರಾಮಗಳಲ್ಲಿಯೂ ಅರಣ್ಯ ಗಳಲ್ಲಿಯೂ ವಾಸಮಾಡುವ ಸಾವಿರಾರು ಪಶುಗಳಿಂದಲೂ ಮೃಗಗಳಿಂದಲೂ ವ್ಯಾಪ್ತ ವಾಗಿದೆ. ಜಂಬೂವೃಕ್ಷದಿಂದ ದ್ವೀಪಕ್ಕೆ ಜಂಬೂದ್ವೀಪವೆಂದು ಹೆಸರು ಬಂದಿದೆ. ಈ ದ್ವೀಪದಲ್ಲಿಯೂ ವಿಶಾಲವಾದ ಆಲದಮರವಿರುವುದರಿಂದ ಪ್ಲಕ್ಷದ್ವೀಪವೆಂಬ ನಾಮವು ಪ್ರಾಪ್ತವಾಗಿದೆ.

೨೭. ಆ ಪ್ಲಕ್ಷದ್ವೀಪದ ಮಧ್ಯದೇಶದಲ್ಲಿ ಈಶ್ವರನು ಸರ್ವದಾ ಪ್ರಜೆಗಳಿಂದ ಪೂಜೆಯನ್ನು ಹೊಂದುತ್ತಿರುವನು. ವಿಶೇಷವಾಗಿ ಕಬ್ಬು ಬೆಳೆಯತಕ್ಕ ಇಕ್ಷುದ್ವೀಪವು ಪ್ಲಕ್ಷದ್ವೀಪದಿಂದಾವೃತವಾಗಿದೆ. ಇಕ್ಷುದ್ವೀಪದಂತೆ ಪ್ಲಕ್ಷದ್ವೀಪವು ಸಹ ವಿಶಾಲ ವಾಗಿಯೂ, ವಿಸ್ತಾರವಾಗಿಯೂ ಇರುತ್ತದೆ.

೨೮. ಈ ರೀತಿಯಾಗಿ ಪ್ಲಕ್ಷದ್ವೀಪದ ಸನ್ನಿವೇಶಗಳನ್ನು ನಿಮಗಾಗಿ ಕ್ರಮ ವಾಗಿಯೂ ಯಥಾಸ್ಥಿತವಾಗಿಯೂ ಹೇಳಿರುತ್ತೇನೆ. ಈಗ ಕ್ರಮವಾಗಿಯೂ ಸಂಕ್ಷೇಪ ವಾಗಿಯೂ ಶಾಲ್ಮಲೀ ದ್ವೀಪವನ್ನು ತಿಳಿಸುವೆನು ಕೇಳಿ ಎಂದು ಸೂತನು ಹೇಳಿದನು.

ತತಸ್ತೃತೀಯಂ ದ್ವೀಪಾನಾಂ ಶಾಲ್ಮಲಂ ದ್ವೀಪಮುತ್ತಮಂ ।
ಶಾಲ್ಮಲೇನ ಸಮುದ್ರಸ್ತು ದ್ವೀಪೇನೇಕ್ಷುರಸೋದಕಃ ॥
ಪ್ಲಕ್ಷದ್ವೀಪಸ್ಯ ವಿಸ್ತಾರಾ ದ್ವಿಗುಣೇನ ಸಮಾವೃತಃ ॥ ೨೯ ॥

ತತ್ರಾಪಿ ಪರ್ವತಾಃ ಸಪ್ತ ವಿಜ್ಞೇಯಾ ರತ್ನಯೋನಯಃ ।
ರತ್ನಾಕರಾಸ್ತಥಾ ನದ್ಯಸ್ತೇಷು ವರ್ಷೇಷು ಸಪ್ತಸು ॥ ೩೦ ॥

ಪ್ರಥಮಃ ಸೂರ್ಯಸಂಕಾಶಃ ಕುಮುದೋ ನಾಮ ಪರ್ವತಃ ।
ಸರ್ವಧಾತುಮಯೈಃ ಶೃಂಗೈಃ ಶಿಲಾಜಾಲಸಮುದ್ಗತೈಃ ॥ ೩೧ ॥

ದ್ವಿತೀಯಃ ಪರ್ವತಸ್ತಸ್ಯ ಉನ್ನತೋ ನಾಮ ವಿಶ್ರುತಃ ।
ಹರಿತಾಲಮಯೈಃ ಶೃಂಗೈರ್ದಿವಮಾವೃತ್ಯ ತಿಷ್ಠತಿ ॥ ೩೨ ॥

ತೃತೀಯಃ ಪರ್ವತಸ್ತಸ್ಯ ಬಲಾಹಕ ಇತಿ ಶ್ರುತಃ ।
ಜಾತ್ಯಂಜನಮಯೈಃ ಶೃಂಗೈರ್ದಿವಮಾವೃತ್ಯ ತಿಷ್ಠತಿ ॥ ೩೩ ॥

---

೨೯. ಮೇಲೆ ನಿರೂಪಿಸಿದ ಸಪ್ತದ್ವೀಪಗಳಲ್ಲಿ ಶಾಲ್ಮಲೀ ದ್ವೀಪವು ಮೂರನೆಯ ದ್ವೀಪವಾಗಿಯೂ ಉತ್ತಮವಾಗಿಯೂ ಇರುತ್ತದೆ. ಈ ಶಾಲ್ಮಲೀ ದ್ವೀಪದ ಸುತ್ತಲೂ ಕಬ್ಬಿನ ರಸದಂತೆ ರುಚಿಯಾದ ಜಲವಿರುವ ಸಮುದ್ರವಿರುವುದು. ಈ ದ್ವೀಪವು ಪ್ಲಕ್ಷದ್ವೀಪಕ್ಕಿಂತಲೂ ಎರಡರಷ್ಟು ವಿಸ್ತಾರವಾಗಿರುತ್ತದೆ.

೩೦ ಆ ಶಾಲ್ಮಲೀ ದ್ವೀಪದಲ್ಲಿಯೂ ಕೂಡ ರತ್ನಾಕರಗಳೂ ಅನೇಕ ನದಿಗಳೂ ಉಪವನಗಳೂ ಇರುವ ಸಪ್ತವರ್ಷಗಳು ಇರುವುವು. ಮೂವತ್ತು ಸಪ್ತಪರ್ವತಗಳಿರುವುವು.

೩೧. ಅವುಗಳಲ್ಲಿ ಮೊದಲನೆಯದು ಸೂರ್ಯನಂತೆ ಹೊಳೆಯುವ ಕುಮುದ ನಾಮಕ ಪರ್ವತವಾಗಿದೆ. ಅದರಲ್ಲಿ ಸಮಸ್ತಧಾತುಗಳಿಂದಲೂ ಶಿಲಾಜಾಲಗಳಿಂದಲೂ ಸಹಿತವಾದ ಅನೇಕ ಶಿಖರಗಳಿವೆ

೩೨ ಎರಡನೆಯ ಪರ್ವತವು ಉನ್ನತನಾಮಕವೂ ಅತಿವಿಶಾಲವೂ ಆಗಿದೆ. ಹರಿತಾಳಮಯವಾದ ಅದರ ಶಿಖರಗಳು ಸ್ವರ್ಗದವರೆಗೂ ವ್ಯಾಪ್ತವಾಗಿದೆ.

೩೩. ಆ ವರ್ಷದ ಮೂರನೆಯ ಪರ್ವತವು ಬಲಾಹಕನಾಮಕವಾಗಿದೆ. ಅದು ಅಂಜನಮಯವಾದ ಶಿಖರಗಳಿಂದ ಸ್ವರ್ಗಲೋಕವನ್ನೇ ಆವರಿಸಿಕೊಂಡಿದೆ.

ಚತುರ್ಥಃ ಪರ್ವತೋ ದ್ರೋಣೋ ಯತ್ರೌಷಧ್ಯೋ ಮಹಾಬಲಾಃ ।
ವಿಶಲ್ಯಕರಣೀ ಚೈವ ಮೃತಸಂಜೀವನೀ ತಥಾ ॥ ೩೪ ॥

ಕಂಕಸ್ತು ಪಂಚಮಸ್ತತ್ರ ಪರ್ವತಃ ಸುಮಹೋದಯಃ ।
ದಿವ್ಯಪುಷ್ಪಫಲೋಪೇತೋ ವೃಕ್ಷವೀರುತ್ಸಮಾವೃತಃ ॥ ೩೫ ॥

ಷಷ್ಠಸ್ತು ಪರ್ವತಸ್ತತ್ರ ಮಹಿಷೋ ಮೇಘಸನ್ನಿಭಃ ।
ಯಸ್ಮಿನ್ ಸೋಽಗ್ನಿರ್ನಿವಸತಿ ಮಹಿಷೋ ನಾಮ ವಾರಿಜಃ ॥ ೩೬ ॥

ಸಪ್ತಮಃ ಪರ್ವತಸ್ತತ್ರ ಕಕುದ್ಮಾನ್ನಾಮ ಭಾಷ್ಯತೇ ।
ತತ್ರ ರತ್ನಾನ್ಯನೇಕಾನಿ ಸ್ವಯಂ ವರ್ಷತಿ ವಾಸವಃ ॥
ಪ್ರಜಾಪತಿಮುಪಾದಾಯ ಪ್ರಜಾಪತ್ಯೇ ವಿಧಿಸ್ತ್ವಯಂ ॥ ೩೭ ॥

---

೩೪. ದ್ರೋಣಾಚಲವು ನಾಲ್ಕನೆಯ ಪರ್ವತವಾಗಿದೆ. ಆ ದ್ರೋಣಾಚಲದಲ್ಲಿ ಅತಿಬಲಪ್ರದವಾದ ಮಹೌಷಧಿಗಳೂ ವಿಶಲ್ಯಕರಿಣೀ ಮೃತಸಂಜೀವಿನೀ ಎಂಬ ದಿವ್ಯೌಷಧಿಗಳೂ ಹೊಳೆಯುತ್ತಿರುತ್ತವೆ.

೩೫. ಅತ್ಯುನ್ನತವಾದ ಕಂಕಪರ್ವತವೇ ಐದನೆಯ ಪರ್ವತವಾಗಿದೆ. ಅದರಲ್ಲಿ ದಿವ್ಯವಾದ ಪುಷ್ಪಗಳು ಫಲಗಳು ಇವುಗಳಿಂದ ಮಂಡಿತಗಳಾದ ವೃಕ್ಷಗಳೂ ಲತೆಗಳೂ ಕುಂಜಗಳೂ ವಿಶೇಷವಾಗಿವೆ.

೩೬. ನೀಲಮೇಘದಂತೆ ಅತ್ಯುನ್ನತವೂ ಶ್ಯಾಮಕಾಂತಿಯುತವೂ ಆದ ಮಹಿಷಗಿರಿಯೇ ಐದನೆಯ ಪರ್ವತವಾಗಿದೆ. ಅದರಲ್ಲಿ ಜಲೋತ್ಪನ್ನವೂ ಮಹಿಷ ನಾಮಕವೂ ಆದ ಅಗ್ನಿಯು ಇರುತ್ತದೆ.

೩೭. ಕಕುದ್ಮಂತವೆಂಬ ಗಿರಿಯೇ ಏಳನೆಯ ಪರ್ವತವಾಗಿದೆ. ಅದರಲ್ಲಿ ದೇವೇಂದ್ರನು ಸಾಕ್ಷಾತ್ತಾಗಿ ರತ್ನಗಳ ವೃಷ್ಟಿಗಳನ್ನು ಕರೆಯುತ್ತಾನೆ. ಬ್ರಹ್ಮದೇವನ (ಪ್ರಾಜಾಪತ್ಯವು) ಸೃಷ್ಟಿಕ್ರಮವು ಆ ಗಿರಿಯಿಂದಲೇ ಪ್ರಾರಂಭವಾಯಿತು

ಇತ್ಯೇತೇ ಪರ್ವತಾಃ ಸಪ್ತ ಶಾಲ್ಮಲೇ ಮಣಿಭೂಷಿತಾಃ ।
ತೇಷಾಂ ವರ್ಷಾಣಿ ವಕ್ಷ್ಯಾಮಿ ಸಪ್ತೈವ ತು ಶುಭಾನಿ ವೈ ॥
ಕುಮುದಾತ್ ಪ್ರಥಮಂ ಶ್ವೇತಮುನ್ನತಸ್ಯ ತು ಲೋಹಿತಂ ॥ ೩೮ ॥

ಬಲಾಹಕಸ್ಯ ಜೀಮೂತಂ ದ್ರೋಣಸ್ಯ ಹರಿತಂ ಸ್ಮೃತಂ ।
ಕಂಕಸ್ಯ ವೈದ್ಯುತಂ ನಾಮ ಮಹಿಷಸ್ಯ ತು ಮಾನಸಂ ॥ ೩೯ ॥

ಕಕುದಃ ಸುಪ್ರಭಂ ನಾಮ ಸಪ್ತೈತಾನಿ ತು ಸಪ್ತಧಾ ।
ವರ್ಷಾಣಿ ಪರ್ವತಾಂಶ್ಚೈವ ನದೀಸ್ತೇಷು ನಿಬೋಧತ ॥ ೪೦ ॥

ಪಾನಿತೋಯಾ ವಿತೃಷ್ಣಾ ಚ ಚಂದ್ರಾ ಶುಕ್ರಾ ವಿಮೋಚನೀ ।
ನಿವೃತ್ತಿಃ ಸಪ್ತಮೀ ತಾಸಾಂ ಪ್ರತಿವರ್ಷಂ ತು ತಾಃ ಸ್ಮೃತಾಃ ॥ ೪೧ ॥

---

೩೮. ಈ ರೀತಿಯಾಗಿ ಶಾಲ್ಮಲೀದ್ವೀಪದಲ್ಲಿ ಸಪ್ತಸಂಖ್ಯಾಕಗಳೂ ರತ್ನಭೂಷಿತಗಳೂ ಆದ ಪರ್ವತಗಳಿವೆ ಈಗ ಅದರಲ್ಲಿರುವ ಸಪ್ತವರ್ಷಗಳನ್ನು ನಾಮಸಹಿತವಾಗಿ ತಿಳಿಸುವೆನು ಅವುಗಳ ನಾಮಗಳೇ ಮಂಗಳದಾಯಕವಾಗಿವೆ

೩೯-೪೦. ಕುಮುದಪರ್ವತವಿರುವುದೇ ಶ್ವೇತವರ್ಷವಾಗಿದೆ. ಉನ್ನತಗಿರಿಯಿರುವುದು ಲೋಹಿತವರ್ಷವೂ, ಬಲಾಹಕಗಿರಿಯಿರುವುದು ಜೀಮೂತವರ್ಷವೂ, ದ್ರೋಣಾಚಲವಿರುವುದು ಹರಿತವರ್ಷವೂ, ಕಂಕಪರ್ವತವಿರುವುದು ವೈದ್ಯುತವರ್ಷವೂ ಮಹಿಷಗಿರಿಯಿರುವುದು ಮಾನಸವರ್ಷವೂ, ಕಕುದಪರ್ವತವಿರುವುದು ಸುಪ್ರಭವರ್ಷವೂ ಆಗಿವೆ. ಹೀಗೆ ಸಪ್ತಪರ್ವತಗಳನ್ನೂ ಮತ್ತು ಏಳು ವರ್ಷಗಳನ್ನೂ ತಿಳಿಸಿರುವೆನು. ಅವುಗಳಲ್ಲಿರುವ ನದಿಗಳನ್ನು ತಿಳಿಸುವೆನು ಕೇಳಿ ಎಂದು ಸೂತಮುನಿಯು ಹೇಳಿದನು.

೪೧-೪೨. ಮೇಲೆ ಹೇಳಿದ ಸಪ್ತವರ್ಷಗಳಲ್ಲಿಯೂ ಕ್ರಮವಾಗಿ ಪಾನಿ, ತೋಯಾ, ವಿತೃಷ್ಣಾ, ಚಂದ್ರಾ, ಶುಕ್ರಾ, ವಿಮೋಚಿನೀ, ನಿವೃತ್ತಿ ಎಂಬ ಸಪ್ತನದಿಗಳು ಉತ್ಪನ್ನವಾಗಿ ಹರಿಯುತ್ತವೆ. ಅವುಗಳಿಗೆ ಬಂದು ಸೇರುವ ಉಪನದಿಗಳು

ತಾಸಾಂ ಸಮೀಪಗಾಶ್ಚಾನ್ಯಾಃ ಶತಶೋಽಥ ಸಹಸ್ರಶಃ ।
ಅಶಕ್ಯಾಃ ಪರಿಸಂಖ್ಯಾತುಂ ಶ್ರದ್ಧೇಯಾಸ್ತು ಬುಭೂಷತಾ ॥ ೪೨ ॥

ಇತ್ಯೇಷ ಸನ್ನಿವೇಶೋ ವಃ ಶಾಲ್ಮಲಸ್ಯಾಪಿ ಕೀರ್ತಿತಃ ।
ಪ್ಲಕ್ಷವೃಕ್ಷೇಣ ಸಂಖ್ಯಾತಸ್ತಸ್ಯ ಮಧ್ಯೇ ಮಹಾದ್ರುಮಃ ॥ ೪೩ ॥

ಶಾಲ್ಮಲಿರ್ವಿಪುಲಸ್ಕಂಧಸ್ತಸ್ಯ ನಾಮ್ನಾ ಸ ಉಚ್ಯತೇ ।
ಶಾಲ್ಮಲಿಸ್ತು ಸಮುದ್ರೇಣ ಸುರೋದೇನ ಸಮಂತತಃ ॥
ವಿಸ್ತಾರಾಚ್ಛಾಲ್ಮಲಸ್ಯೈವ ಸಮೇನ ತು ಸಮಂತತಃ ॥ ೪೪ ॥

ಉತ್ತರೇಷು ತು ಧರ್ಮಜ್ಞಾ ದ್ವೀಪೇಷು ಶೃಣುತ ಪ್ರಜಾಃ ।
ಯಥಾಶ್ರುತಂ ಯಥಾನ್ಯಾಯಂ ಬ್ರುವತೋ ಮೇ ನಿಬೋಧತ ॥ ೪೫ ॥

---

ಸಹಸ್ರಾರು ಇವೆ. ಅವುಗಳನ್ನು ನಾಮಪೂರ್ವಕವಾಗಿ ಎಣಿಸಿ ಹೇಳುವು ್ ಅಸಾಧ್ಯ ವಾಗಿದೆ. ತಿಳಿಯಬೇಕೆಂಬ ಇಚ್ಛೆಯುಳ್ಳವರು ಜ್ಞಾನಿಗಳು ಹೇಳುವುದನ್ನು ನಂಬ ಬೇಕು.

೪೩. ಎಲೈ ವಿಪ್ರವರ್ಯರೇ, ಈ ರೀತಿಯಾಗಿ ಶಾಲ್ಮಲೀದ್ವೀಪವನ್ನು ನಿಮ ಗಾಗಿ ತಿಳಿಸಿರುವೆನು. ಪ್ಲಕ್ಷದ್ವೀಪದಂತೆ ಶಾಲ್ಮಲೀದ್ವೀಪದ ಮಧ್ಯದಲ್ಲಿ ಶಾಲ್ಮಲೀ ವೃಕ್ಷವು ಶೋಭಿಸುತ್ತಿರುವುದು.

೪೪. ಆ ಶಾಲ್ಮಲೀವೃಕ್ಷದ ರೆಂಬೆಗಳು ದಿಗಂತಲಂಬಿಗಳಾಗಿಯೂ ಗಗನಚುಂಬಿ ಗಳಾಗಿಯೂ ಇವೆ. ಆ ವೃಕ್ಷದಿಂದಲೇ ಆ ದ್ವೀಪಕ್ಕೆ ಶಾಲ್ಮಲಿದ್ವೀಪವೆಂಬ ನಾಮವು ಪ್ರಾಪ್ತವಾಗಿದೆ ಆ ದ್ವೀಪದ ಸುತ್ತಲೂ ಸುರೋದಸಮುದ್ರವಿರು ವುದು. ಆ ದ್ವೀಪವು ಪೂರ್ವದ್ವೀಪದಂತೆಯೇ ವಿಶಾಲವಾಗಿಯೂ ಇರುತ್ತದೆ

೪೫. ಎಲೈ ಧರ್ಮಾತ್ಮರೇ, ಮುಂದಿನ ದ್ವೀಪಗಳ ಪ್ರಜಾಸ್ಥಿತಿಗಳನ್ನು ನಾನು ಕೇಳಿದಹಾಗೆ, ಮತ್ತು ನನಗೆ ತಿಳಿದಷ್ಟು, ನ್ಯಾಯವಾದ ರೀತಿಯಲ್ಲಿ ಸತ್ಯವಾಗಿ ಹೇಳುವೆನು ಕೇಳಿರೆಂದು ಸೂತನು ಹೇಳಿದನು.

ಕುಶದ್ವೀಪಂ ಪ್ರವಕ್ಷ್ಯಾಮಿ ಚತುರ್ಥಂ ತಂ ಸಮಾಸತಃ ।
ಸುರೋದಕಃ ಪರಿವೃತಃ ಕುಶದ್ವೀಪೇನ ಸರ್ವತಃ ॥ ೪೬ ॥

ಸಪ್ತೈವ ಗಿರಯಸ್ತತ್ರ ವರ್ಣ್ಯಮಾನಾನ್ನಿಬೋಧತ ।
ಶಾಲ್ಮಲಸ್ಯ ತು ವಿಸ್ತಾರಾದ್ವಿಗುಣೇನ ಸಮಂತತಃ ॥ ೪೭ ॥

ಕುಶದ್ವೀಪೇ ತು ವಿಜ್ಞೇಯಃ ಪರ್ವತೋ ವಿದ್ರುಮೋಚ್ಚಯಃ ।
ದ್ವೀಪಸ್ಯ ಪ್ರಥಮಸ್ತಸ್ಯ ದ್ವಿತೀಯೋ ಹೇಮಪರ್ವತಃ ॥ ೪೮ ॥

ತೃತೀಯೋ ದ್ಯುತಿಮಾನ್ನಾಮ ಜೀಮೂತಸದೃಶೋ ಗಿರಿಃ ।
ಚತುರ್ಥಃ ಪುಷ್ಪವಾನ್ನಾಮ ಪಂಚಮಸ್ತು ಕುಶೇಶಯಃ ॥ ೪೯ ॥

ಷಷ್ಠೋ ಹರಿಗಿರಿರ್ನಾಮ ಸಪ್ತಮೋ ಮಂದರಃ ಸ್ಮೃತಃ ।
ಮಂದಾ ಇತಿ ಹ್ಯಪಾಂ ನಾಮ ಮಂದರೋ ದಾರಣಾದಪಾಂ ॥ ೫೦ ॥

---

೪೬. ಈಗ ನಾಲ್ಕನೆಯದಾದ ಕುಶದ್ವೀಪವನ್ನು ಸಂಕ್ಷೇಪವಾಗಿ ತಿಳಿಸುವೆನು ಕೇಳಿ. ಆ ಕುಶದ್ವೀಪದ ಸುತ್ತಲೂ ಸುರಾಮಯ ಉದಕವಿರುವ ಸುರಾಸಮುದ್ರವು ಇರುವುದು.

೪೭. ಅದರಲ್ಲಿಯೂ ಕೂಡ ಸಪ್ತಸಮುದ್ರಗಳಿರುವುವು. ಅವುಗಳನ್ನು ಕ್ರಮ ವಾಗಿ ವರ್ಣಿಸುವೆನು ಕೇಳಿರಿ. ಶಾಲ್ಮಲೀದ್ವೀಪಕ್ಕಿಂತಲೂ ಕುಶದ್ವೀಪವು ಎರಡರಷ್ಟು ವಿಸ್ತಾರವಾಗಿರುತ್ತದೆ.

೪೮-೫೦. ಆ ಕುಶದ್ವೀಪದಲ್ಲಿ ಹವಳಗಳ ರಾಶಿಯಂತೆ ಹೊಳೆಯುವ ವಿದ್ರುಮ ಗಿರಿಯು ಮೊದಲನೆಯದಾಗಿದೆ. ಎರಡನೆಯದೇ ಹೇಮಗಿರಿಯು. ಮೂರನೆಯದು ಮೇಘಗಳಂತೆ ಅತ್ಯುನ್ನತವಾದ ದ್ಯುತಿಮಂತವೆಂಬ ಗಿರಿಯಾಗಿದೆ. ನಾಲ್ಕನೆಯ ಗಿರಿಯು ಪುಷ್ಪವಂತವೆಂಬ ಪರ್ವತವಾಗಿದೆ. ಐದನೆಯದು ಕುಶೇಶಯವೆಂಬ ಪರ್ವತವು. ಆರನೆಯದು ಹರಿಗಿರಿಯು. ಏಳನೆಯದು ಮಂದರಗಿರಿಯಾಗಿದೆ. ಮಂದರವೆಂದರೆ ನೀರಿಗೆ ಹೆಸರು. ಜಲಕ್ಕೆ ಆಶ್ರಯವಾದಕಾರಣ ಆ ಗಿರಿಗೆ ಆ ನಾಮವು ಬಂದಿದೆ

ತೇಷಾಮಂತರವಿಷ್ಕಂಭೋ ದ್ವಿಗುಣಃ ಪರಿವಾರಿತಃ ।
ಉದ್ಭಿದಂ ಪ್ರಥಮಂ ವರ್ಷಂ ದ್ವಿತೀಯಂ ವೇಣುಮಂಡಲಂ ॥ ೫೧ ॥

ತೃತೀಯಂ ಸ್ವೈರಥಾಕಾರಂ ಚತುರ್ಥಂ ಲವಣಂ ಸ್ಮೃತಂ ।
ಪಂಚಮಂ ಧೃತಿಮದ್ವರ್ಷಂ ಷಷ್ಠವರ್ಷಂ ಪ್ರಭಾಕರಂ ॥
ಸಪ್ತಮಂ ಕಪಿಲಂ ನಾಮ ಸಪ್ತೈತೇ ವರ್ಷಪರ್ವತಾಃ ॥ ೫೨ ॥

ಏತೇಷು ದೇವಗಂಧರ್ವಾಃ ಪ್ರಭಾಸ್ಸು ಜಗದೀಶ್ವರಾಃ ।
ವಿಹರಂತಿ ರಮಂತೇ ಚ ದೃಶ್ಯಮಾನಾಸ್ತು ವರ್ಷಶಃ ॥ ೫೩ ॥

ನ ತೇಷು ದಸ್ಯವಃ ಸಂತಿ ಮ್ಲೇಚ್ಛಜಾತ್ಯಸ್ತಥೈವ ಚ ।
ಗೌರಪ್ರಾಯೋ ಜನಃ ಸರ್ವಃ ಕ್ರಮಾಚ್ಚ ಮ್ರಿಯತೇ ತಥಾ ॥ ೫೪ ॥

---

೫೧-೫೨. ಆ ಪರ್ವತದ ಅಂತರಭಾಗವು ಎರಡರಷ್ಟು ವಿಸ್ತಾರವಾಗಿದೆ. ಈ ಕುಶದ್ವೀಪದಲ್ಲಿಯೂ ಕೂಡ ಸಪ್ತವರ್ಷಗಳಿವೆ. ಅವುಗಳಲ್ಲಿ ಮೊದಲನೆಯದು ಉದ್ಭಿದವರ್ಷವು. ಎರಡನೆಯದು ವೇಣುಮಂಡಲವರ್ಷವು. ಮೂರನೆಯದು ಸ್ವೈರಥಾಕಾರವೆಂಬ ವರ್ಷವು. ನಾಲ್ಕನೆಯದು ಲವಣವರ್ಷವು. ಐದನೆಯದು ಧೃತಿಮದ್ವರ್ಷವು. ಆರನೆಯದು ಪ್ರಭಾಕರವರ್ಷವು. ಏಳನೆಯದು ಕಪಿಲವರ್ಷವು. ಹೀಗೆ ಸಪ್ತವರ್ಷಗಳು ಆ ದ್ವೀಪದಲ್ಲಿ ಇರುತ್ತವೆ.

೫೩. ಮೇಲೆ ನಿರೂಪಿಸಿರುವ ಸಪ್ತವರ್ಷಗಳಲ್ಲಿಯೂ ದೇವಗಂಧರ್ವರೂ ಜಗದೀಶ್ವರರೂ ಕೂಡ ಆ ವರ್ಷಗಳಲ್ಲಿ ವಾಸಿಸುವ ಜನಗಳಿಗೆ ಕಾಣಿಸುತ್ತಾ ನಾನಾ ರೀತಿಯಾಗಿ ವಿಹಾರಗಳನ್ನೂ ಕ್ರೀಡೆಗಳನ್ನೂ ಮಾಡುವರು

೫೪. ಆ ವರ್ಷಗಳಲ್ಲಿ ಕಳ್ಳಕಾರರ ಭೀತಿಯೂ ಮ್ಲೇಂಚ್ಛಯವನಾದಿಗಳ ಉಪದ್ರವಗಳೂ ಲೇಶಮಾತ್ರವೂ ಇಲ್ಲ. ಎಲ್ಲಾ ಜನಗಳೂ ಅತಿ ಶುಭ್ರರಾಗಿ ಹೊಳೆಯುತ್ತಿರುವರು. ತಮ್ಮ ಆಯುಷ್ಯದ ಕೊನೆಯಲ್ಲಿ ಮೃತರಾಗುವರು. ಅಂದರೆ ಅಕಾಲಮರಣವು ಮಾತ್ರವಿಲ್ಲ.

ತತ್ರಾಪಿ ನದ್ಯಃ ಸಪ್ತೈವ ಧುತಪಾಪಾಃ ಶಿವಾಸ್ತಥಾ ।
ಪವಿತ್ರಾ ಸಂತತಿಶ್ಚೈವ ದ್ಯುತಿಗರ್ಭಾ ಮಹೀ ತಥಾ ॥ ೫೫ ॥

ಅನ್ಯಾಸ್ತಾಭ್ಯಃ ಪರಿಜ್ಞಾತಾಃ ಶತಶೋಽಥ ಸಹಸ್ರಶಃ ।
ಅಭಿಗಚ್ಛಂತಿ ತಾಃ ಸರ್ವಾ ಯತೋ ವರ್ಷತಿ ವಾಸವಃ ॥ ೫೬ ॥

ಘೃತೋದೇನ ಕುಶದ್ವೀಪೋ ಬಾಹ್ಯತಃ ಪರಿವಾರಿತಃ ।
ವಿಜ್ಞೇಯಃ ಸ ತು ವಿಸ್ತಾರಾತ್ ಕುಶದ್ವೀಪಸಮೇನ ತು ॥ ೫೭ ॥

ಇತ್ಯೇಷ ಸನ್ನಿವೇಶೋ ವಃ ಕುಶದ್ವೀಪಸ್ಯ ವರ್ಣಿತಃ ।
ಕ್ರೌಂಚದ್ವೀಪಸ್ಯ ವಿಸ್ತಾರಂ ವಕ್ಷ್ಯಾಮ್ಯಹಮತಃ ಪರಂ ॥ ೫೮ ॥

ಕುಶದ್ವೀಪಸ್ಯ ವಿಸ್ತಾರಾದ್ದ್ವಿಗುಣಃ ಸ ತು ವೈ ಸ್ಮೃತಃ ।
ಘೃತೋದಕಸಮುದ್ರೋ ವೈ ಕ್ರೌಂಚದ್ವೀಪೇನ ಸಂವೃತಃ ॥ ೫೯ ॥

---

೫೫. ಆ ಸಪ್ತವರ್ಷಗಳಲ್ಲಿ ಪಾಪನಾಶಕವೂ ಮಂಗಳಕರವೂ ಆದ ಅನೇಕ ನದಿಗಳಿರುತ್ತವೆ. ಅಲ್ಲಿಯ ಪ್ರಜೆಗಳು ಅತಿ ಪವಿತ್ರರಾಗಿರುವರು. ಭೂಮಿಯು ಕಾಂತಿಮತ್ತಾಗಿಯೂ ಸಮೃದ್ಧವಾಗಿಯೂ ಇರುತ್ತದೆ.

೫೬. ಆ ಮಹಾನದಿಗಳಿಂದ ಅನೇಕ ಸಹಸ್ರಾರು ಉಪನದಿಗಳು ಹುಟ್ಟಿ ಇಂದ್ರನು ಮಳೆಯನ್ನು ಸುರಿಸುವ ದೇಶಗಳಲ್ಲೆಲ್ಲಾ ಹರಿಯುವುವು.

೫೭. ಆ ಕುಶದ್ವೀಪದ ಸುತ್ತಲೂ ಘೃತಸಮುದ್ರವು ಆವರಿಸಿಕೊಂಡಿರುವುದು. ಆ ಘೃತಸಮುದ್ರವು ಕುಶದ್ವೀಪದಷ್ಟು ವಿಸ್ತಾರವಾಗಿರುವುದು.

೫೮. ಈ ರೀತಿಯಾಗಿ ಕುಶದ್ವೀಪದ ವಿಷಯಗಳನ್ನು ತಿಳಿಯಬೇಕು. ಈಗ ಕ್ರೌಂಚದ್ವೀಪವನ್ನು ವಿಸ್ತಾರವಾಗಿಯೂ ಯಥಾಸ್ಥಿತವಾಗಿಯೂ ವರ್ಣಿಸುವೆನು ಕೇಳಿ, ಎಂದು ಹೇಳಿದನು.

೫೯. ಆ ಕ್ರೌಂಚದ್ವೀಪವು ಕುಶದ್ವೀಪಕ್ಕಿಂತಲೂ ಎರಡರಷ್ಟು ವಿಸ್ತಾರವಾಗಿರುತ್ತದೆ ಅದರ ಸುತ್ತಲೂ ಘೃತಮಯವಾದ ಸಮುದ್ರವಿರುವುದು.

ತಸ್ಮಿನ್ ದ್ವೀಪೇ ನಗಶ್ರೇಷ್ಠಃ ಕ್ರೌಂಚಸ್ಥಃ ಪ್ರಥಮೋ ಗಿರಿಃ ।
ಕ್ರೌಂಚಾತ್ಪರೋ ವಾಮನಕೋ ವಾಮನಾದಂಧಕಾರಕಃ ॥ ೬೦ ॥

ಅಂಧಕಾರಾತ್ಪರಶ್ಚಾಪಿ ದಿವಾವೃನ್ನಾಮ ಪರ್ವತಃ ।
ದಿವಾವೃತಃ ಪರಶ್ಚಾಪಿ ದಿವಿಂದೋ ಗಿರಿರುಚ್ಯತೇ ॥ ೬೧ ॥

ದಿವಿಂದಾತ್ಪರತಶ್ಚಾಪಿ ಪುಂಡರೀಕೋ ಮಹಾಗಿರಿಃ ।
ಪುಂಡರೀಕಾತ್ಪರಶ್ಚಾಪಿ ಪ್ರೋಚ್ಯತೇ ದುಂದುಭಿಸ್ವನಃ ॥ ೬೨ ॥

ಏತೇ ರತ್ನಮಯಾಃ ಸಪ್ತ ಕ್ರೌಂಚದ್ವೀಪಸ್ಯ ಪರ್ವತಾಃ ।
ಬಹುವೃಕ್ಷ ಫಲೋಪೇತಾ ನಾನಾವೃಕ್ಷಲತಾ ವೃತಾಃ ॥ ೬೩ ॥

ಪರಸ್ಪರೇಣ ದ್ವಿಗುಣಾ ವಿಷ್ಕಂಭಾದ್ವರ್ಷಪರ್ವತಾಃ ।
ವರ್ಷಾಣಿ ತತ್ರ ವಕ್ಷ್ಯಾಮಿ ನಾಮತಸ್ತು ನಿಬೋಧತ ॥ ೬೪ ॥

---

೬೦. ಆ ಕ್ರೌಂಚದ್ವೀಪದಲ್ಲಿ ಪರ್ವತೋತ್ತಮವೂ ಕ್ರೌಂಚನಾಮಕವೂ ಆದ ಗಿರಿಯು ಪ್ರಕಾಶಿಸುತ್ತಿರುವುದು. ಅದೇ ಮೊದಲನೆಯ ಗಿರಿಯು. ಆ ಕ್ರೌಂಚದ ಪಕ್ಕದಲ್ಲಿ ವಾಮನಗಿರಿಯೂ, ಅದರಿಂದಾಚೆಗೆ ಅಂಧಕಾರಪರ್ವತವೂ ಪ್ರಕಾಶಿಸುವುದು

೬೧-೬೨. ಅಂಧಕಾರ ಗಿರಿಗಿಂತಾಚೆಗೆ ದಿವಾವೃತಗಿರಿಯೂ ಅದರನಂತರ ದಿವಂದಪರ್ವತವೂ ಅದರ ತರುವಾಯ ಪುಂಡರೀಕಮಹಾಗಿರಿಯೂ, ಅದರ ತರುವಾಯ ದುಂದುಭಿಸ್ವನವೆಂಬ ಮಹಾಪರ್ವತವೂ ಇರುವುವು.

೬೩. ಕ್ರೌಂಚದ್ವೀಪದ ಪರ್ವತಗಳೆಲ್ಲವೂ ರತ್ನಮಯವಾಗಿಯೂ ಫಲಪುಷ್ಪ ಗಳಿಂದ ಭರಿತವಾದ ವೃಕ್ಷಗಳಿಂದಲೂ ವಿವಿಧಲತಾಗೃಹಪುಂಜಗಳಿಂದಲೂ ವ್ಯಾಪ್ತ ವಾಗಿಯೂ ಇವೆ.

೬೪. ಆ ವರ್ಷಗಳಲ್ಲಿರುವ ಪರ್ವತಗಳು ಒಂದಕ್ಕಿಂತ ಮತ್ತೊಂದು ದ್ವಿಗುಣ ವಾಗಿ ವಿಸ್ತಾರವಾಗಿವೆ. ಆ ದ್ವೀಪದಲ್ಲಿರುವ ವರ್ಷಗಳ ಹೆಸರನ್ನು ತಿಳಿಸುವೆನು ಕೇಳಿ ಎಂದನು.

ಕ್ರೌಂಚಸ್ಯ ಕುಶಲೀ ದೇಶೋ ವಾಮನಸ್ಯ ಮನೋಽನುಗಃ ।
ಮನೋಽನುಗಾತ್ಪರಶ್ಚೋಽಷ್ಣಸ್ಸ್ಮೃತೀಽಯೋ ದೇಶ ಉಚ್ಯತೇ ॥ ೬೫ ॥

ಉಷ್ಣಾತ್ಪರಃ ಪ್ರಾವರಕಃ ಪ್ರಾವರಾದಂಧಕಾರಕಃ ।
ಅಂಧಕಾರಕದೇಶಾತ್ತು ಮುನಿದೇಶಃ ಪರಃ ಸ್ಮೃತಃ ॥ ೬೬ ॥

ಮುನಿದೇಶಾತ್ಪರಶ್ಚೈವ ಪ್ರೋಽಚ್ಯತೇ ದುಂದುಭಿಸ್ವನಃ ।
ಸಿದ್ಧಚಾರಣಸಂಕೀರ್ಣೋ ಗೌರಪ್ರಾಯೋ ಜನಃ ಸ್ಮೃತಃ ॥ ೬೭ ॥

ತತ್ರಾಪಿ ನದ್ಯಃ ಸಪ್ತೈವ ಪ್ರತಿವರ್ಷಂ ಸ್ಮೃತಾಃ ಶುಭಾಃ ।
ಗೌರೀ ಕುಮುದ್ವತೀ ಚೈವ ಸಂಧ್ಯಾ ರಾತ್ರಿರ್ಮನೋಽಜವಾ ॥
ಖ್ಯಾತಿಶ್ಚ ಪುಂಡರೀಕಾ ಚ ಗಂಗಾ ಸಪ್ತವಿಧಾ ಸ್ಮೃತಾಃ ॥ ೬೮ ॥

ತಾಸಾಂ ಸಮುದ್ರಗಾಶ್ಚಾನ್ಯಾ ನದ್ಯೋಽಯಾಸ್ತು ಸಮೀಪಗಾಃ ।
ಅನುಗಚ್ಛಂತಿ ತಾಃ ಸರ್ವಾ ವಿಪುಲಾಃ ಸುಬಹೂದಕಾಃ ॥ ೬೯ ॥

---

೬೫-೬೭ ಕ್ರೌಂಚಗಿರಿಯಲ್ಲಿ ಕುಶಲೀವರ್ಷವೂ, ವಾಮನಪರ್ವತದಲ್ಲಿ ಮನೋಽನುಗವರ್ಷವೂ ಆ ಮನೋಽನುಗವರ್ಷಕ್ಕಿಂತಲೂ ಆಮೇಲೆ ಉಷ್ಣೀಽಷವರ್ಷವೂ ಆದರ ತರುವಾಯ ಪ್ರಾವರಕವರ್ಷವೂ ಅದರನಂತರ ಅಂಧಕಾರಕವರ್ಷವೂ ಆ ಅಂಧಕಾರದೇಶಾನಂತರ ಮುನಿದೇಶವೂ ಆ ಮುನಿದೇಶವಾದಮೇಲೆ ದುಂದುಭಿಸ್ವನ ದೇಶವೂ ಇರುವುವು. ಇವೆಲ್ಲವೂ ಸಿದ್ಧಚಾರಣರಿಂದ ಪೂರ್ಣವಾಗಿಯೂ ಶುಭ್ರವರ್ಣ ಜನರಿಂದ ಭರಿತವಾಗಿಯೂ ಇರುತ್ತವೆ.

೬೮. ಆ ಪ್ರತಿವರ್ಷಗಳಲ್ಲಿಯೂ ಒಂದೊಂದು ನದಿಯಂತೆ ಸಪ್ತನದಿಗಳು ಹರಿಯುತ್ತವೆ. ಆ ನದಿಗಳಿಂದ ಆ ದೇಶಗಳು ಅತಿಪವಿತ್ರವಾಗಿಯೂ ಶುಭ್ರವಾಗಿಯೂ ಇವೆ. ಪ್ರಸಿದ್ಧವಾದ ದೇವಗಂಗೆಯೇ ಗೌರಿ, ಕುಮುದ್ವತೀ, ಸಂಧ್ಯಾ, ರಾತ್ರಿ, ಮನೋಽಜವಾ, ಖ್ಯಾತಿ, ಪುಂಡರೀಕವೆಂಬುದಾಗಿ ಸಪ್ತವಿಧಗಳಾಗಿ ಆ ಏಳು ವರ್ಷಗಳಲ್ಲಿಯೂ ಹರಿಯುತ್ತವೆ.

೬೯. ಆ ನದಿಗಳೆಲ್ಲ ವಿಪುಲವಾದ ಜಲದಿಂದ ಪೂರ್ಣವಾಗಿಯೂ ಸಮುದ್ರಗಾಮಿಯಾಗಿಯೂ ಇರುತ್ತವೆ. ಈ ನದಿಗಳಿಂದ ಅನೇಕ ಉಪನದಿಗಳು ಜನ್ಯವಾಗಿ ಅತಿವಿಶಾಲವೂ ಸಮೀಪಪಗತವೂ ಆಗಿ ಸಮುದ್ರವನ್ನು ಪ್ರವೇಶಿಸುವುವು.

ಕ್ರೌಂಚದ್ವೀಪಃ ಸಮುದ್ರೇಣ ದಧಿಮಂಡೋದಕೇನ ತು ।
ಆವೃತಃ ಸರ್ವತಃ ಶ್ರೀಮಾನ್ ಕ್ರೌಂಚದ್ವೀಪಸಮೇನ ತು ॥ ೭೦ ॥

ಪ್ಲಕ್ಷದ್ವೀಪಾದಯೋ ಹ್ಯೇತೇ ಸಮಾಸೇನ ಪ್ರಕೀರ್ತಿತಾಃ ।
ತೇಷಾಂ ನಿಸರ್ಗೋ ದ್ವೀಪಾನಾಂ ಆನುಪೂರ್ವ್ಯೇಣ ಸರ್ವಶಃ ॥ ೭೧ ॥

ನ ಶಕ್ಯಂ ವಿಸ್ತರಾದ್ವಕ್ತುಮಪಿ ವರ್ಷಶತೈರಪಿ ।
ನಿಸರ್ಗೋಯಂ ಪ್ರಜಾನಾಂ ತು ಸಂಹಾರೋ ಯಶ್ಚ ತಾಸು ವೈ ॥ ೭೨ ॥

ಅತ ಊರ್ಧ್ವಂ ಪ್ರವಕ್ಷ್ಯಾಮಿ ಶಾಕದ್ವೀಪಸ್ಯ ಯೋ ವಿಧಿಃ ।
ಶಾಕದ್ವೀಪಸ್ಯ ಕೃತ್ಸ್ನಸ್ಯ ಯಥಾವದಿಹ ನಿಶ್ಚಯಾತ್ ॥
ಶೃಣುಧ್ವಂ ವೈ ಯಥಾತತ್ತ್ವಂ ಬ್ರುವತೋ ಮೇ ಯಥಾರ್ಥವತ್ ॥ ೭೩ ॥

---

೭೦. ಆ ಕ್ರೌಂಚದ್ವೀಪವು ಮಹಾಸಂಪತ್ಸಮನ್ವಿತವೂ ವಿಸ್ತಾರದಲ್ಲಿ ಕ್ರೌಂಚ ದ್ವೀಪಕ್ಕೆ ಸಮಾನವೂ ಮೊಸರಿನ ಕೆನೆಯಂತಿರುವ ಉದಕದಿಂದ ಪೂರ್ಣವೂ ದಧಿ ಸಮುದ್ರದಿಂದ ಆವೃತವೂ ಆಗಿದೆ.

೭೧. ಪ್ಲಕ್ಷದ್ವೀಪವೇ ಆದಿಯಾದ ದ್ವೀಪಗಳನ್ನು ಸಂಕ್ಷೇಪವಾಗಿ ವರ್ಣಿಸಿರುತ್ತೇನೆ. ಅವುಗಳ ಸ್ವರೂಪಗಳನ್ನು ಯಥಾಸ್ಥಿತವಾಗಿ ತಿಳಿಸಿರುವೆನು ಅವು ಕ್ರಮವಾಗಿಯೂ ಯಥಾವತ್ತಾಗಿಯೂ ನಿರೂಪಿತವಾಗಿವೆ.

೭೨. ಅವುಗಳನ್ನು ವಿಸ್ತಾರವಾಗಿ ವರ್ಣಿಸಲು ನೂರಾರು ವರ್ಷಗಳೂ ಸಾಲದು. ಇದ್ದ ಕಾಲದಲ್ಲಿ ಆ ದೇಶಗಳ ಸ್ಥಿತಿಗತಿಗಳನ್ನು ಸಂಕ್ಷೇಪವಾಗಿ ನಿಮಗೆ ನಿರೂಪಿಸಿರುವೆನು. ಮಿಕ್ಕ ಸಂಗತಿಗಳನ್ನು ನೀವೇ ಊಹಿಸಿಕೊಳ್ಳಿರಿ.

೭೩. ಈಗ ಶಾಕದ್ವೀಪದ ವಿಷಯಗಳನ್ನು ವಿವರಿಸುವೆನು ಕೇಳಿ, ಸಂಪೂರ್ಣವಾಗಿ ಶಾಕದ್ವೀಪದ ಯಥಾಸ್ಥಿತ ವಿಷಯಗಳನ್ನು ನಿಶ್ಚಿತವಾಗಿಯೂ ತಿಳಿಸುವೆನು. ನಿಜವಾಗಿಯೂ ಪ್ರಮಾಣವತ್ತಾಗಿಯೂ ಹೇಳುವ ನನ್ನ ಮಾತುಗಳನ್ನು ಕೇಳಿರಿ ಎಂದನು.

ಕ್ರೌಂಚದ್ವೀಪಸ್ಯ ವಿಸ್ತಾರಾದ್ವಿಗುಣಸ್ತಸ್ಯ ವಿಸ್ತರಃ ।
ಪರಿವಾರ್ಯ ಸಮುದ್ರಂ ಸ ದಧಿಮಂಡೋದಕಂ ಸ್ಥಿತಃ ॥ ೨೪ ॥

ತತ್ರ ಪುಣ್ಯಾ ಜನಪದಾಶ್ಚಿರಾಚ್ಚ ಮ್ರಿಯತೇ ಜನಾಃ ।
ಕುತ ಏವ ತು ದುರ್ಭಿಕ್ಷಂ ಜರಾವ್ಯಾಧಿಭಯಂ ಕುತಃ ॥ ೨೫ ॥

ತತ್ರಾಪಿ ಪರ್ವತಾಃ ಶುಭ್ರಾಃ ಸಪ್ತೈವ ಮಣಿಭೂಷಿತಾಃ ।
ರತ್ನಾಕರಾಸ್ತಥಾ ನದ್ಯಸ್ತಾಸಾಂ ನಾಮಾನಿ ಮೇ ಶೃಣು ॥ ೨೬ ॥

ದೇವರ್ಷಿಗಂಧರ್ವಯುತಃ ಪ್ರಥಮೋ ಮೇರುರುಚ್ಯತೇ ।
ಪ್ರಾಗಾಯತಃ ಸ ಸೌವರ್ಣ ಉದಯೋ ನಾಮ ಪರ್ವತಃ ॥ ೨೭ ॥

---

೨೪ ಶಾಕದ್ವೀಪವು ಕ್ರೌಂಚ ದ್ವೀಪಕ್ಕಿಂತಲೂ ಎರಡರಷ್ಟು ವಿಸ್ತಾರವಾಗಿದೆ. ಮೊಸರಿನ ಕೆನೆಯಿಂದ ಹೆಪ್ಪುಕಟ್ಟಿರುವ ದಧಿ ಸಮುದ್ರದಿಂದ ಶಾಕದ್ವೀಪವು ಆವರಿಸಲ್ಪಟ್ಟಿದೆ ಶಾಕದ್ವೀಪದ ಸುತ್ತಲೂ ದಧಿ ಸಮುದ್ರವು ಇರುತ್ತದೆ.

೨೫. ಆ ದ್ವೀಪದಲ್ಲಿರುವ ದೇಶಗಳು ಸಮೃದ್ಧವಾಗಿಯೂ ಪುಣ್ಯಕರವಾಗಿಯೂ ಇರುತ್ತವೆ. ಅಲ್ಲಿಯ ಜನರು ಚಿರಜೀವಿಗಳೂ ದೀರ್ಘಾಯುಷ್ಯವಂತರೂ ಆಗಿರುವರು. ಅಲ್ಲಿ ದುರ್ಭಿಕ್ಷ, ಮುದಿತನ, ರೋಗ ಇವುಗಳ ಭಯವು ಲೇಶಮಾತ್ರವೂ ಇಲ್ಲ.

೨೬ ಆ ಶಾಕದ್ವೀಪದಲ್ಲಿಯೂ ಸಹ ಶುಭ್ರವೂ ರತ್ನರಂಜಿತವೂ ಆದ ಸಪ್ತ ಪರ್ವತಗಳಿವೆ. ಅಲ್ಲಿ ಅನೇಕ ರತ್ನಗಳ ಗಣಿಗಳೂ ನದಿಗಳೂ ವಿಶೇಷವಾಗಿವೆ ಅವುಗಳ ನಾಮಗಳನ್ನು ಹೇಳುವೆನು ಕೇಳಿ ಎಂದನು.

೨೭. ದೇವತೆಗಳು, ಋಷಿಗಳು, ಗಂಧರ್ವರು ಇವರಿಂದ ಯುಕ್ತವೂ, ಅತ್ಯಂತ ವಿಶಾಲವೂ, ಸುವರ್ಣಮಯವೂ ಆದ ಮೇರುಗಿರಿಯು ಹೊಳೆಯುತ್ತಿದೆ. ಅದೇ ಮೊದಲನೆಯ ಪರ್ವತವಾಗಿದೆ. ಅದಕ್ಕೆ ಉದಯಗಿರಿಯೆಂಬ ನಾಮಾಂತರವಿರುತ್ತದೆ.

ತತ್ರ ಮೇಘಾಸ್ತು ವೃಷ್ಟ್ಯರ್ಥಂ ಪ್ರಭವಂತಿ ಚ ಯಾಂತಿ ಚ ।
ತಸ್ಯಾಪರೇಣ ಸುಮಹಾನ್ ಜಲಧಾರೋ ಮಹಾಗಿರಿಃ ॥ ೭೮ ॥

ತಸ್ಮಾನ್ನಿತ್ಯಮುಪಾದತ್ತೇ ವಾಸವಃ ಪರಮಂ ಜಲಂ ।
ತತೋ ವರ್ಷಂ ಪ್ರಭವತಿ ವರ್ಷಾಕಾಲೇ ಪ್ರಜಾಸ್ವಿಹ ॥ ೭೯ ॥

ತಸ್ಯಾಪರೇ ರೈವತಕೋ ಯತ್ರ ನಿತ್ಯಂ ಪ್ರತಿಷ್ಠಿತಾ ।
ರೇವತೀ ದಿವಿ ನಕ್ಷತ್ರಂ ಪಿತಾಮಹಕೃತೋ ಗಿರಿಃ ॥ ೮೦ ॥

ತಸ್ಯಾಪರೇಣ ಸುಮಹಾನ್ ಶ್ಯಾಮೋ ನಾಮ ಮಹಾಗಿರಿಃ ।
ತಸ್ಮಾಚ್ಛ್ಯಾಮತ್ವಮಾಪನ್ನಾಃ ಪ್ರಜಾಃ ಪೂರ್ವಮಿಮಾಃ ಕಿಲ ॥ ೮೧ ॥

---

೭೮ ಮೇಘಗಳೆಲ್ಲವೂ ಅಲ್ಲಿಗೆ ಬಂದನಂತರವೇ ಮಳೆಯನ್ನು ಕರೆಯಲು ಶಕ್ತವಾಗುತ್ತವೆ. ಅಲ್ಲಿಗೆ ಬಂದು ನೀರನ್ನು ತುಂಬಿಕೊಂಡು ಹೋಗುತ್ತವೆ. ಆದರ ಪಕ್ಕದಲ್ಲಿಯೇ ಅತ್ಯಂತ ಉನ್ನತವಾದ ಜಲಧಾರವೆಂಬ ಮಹಾಗಿರಿಯು ಪ್ರಕಾಶಿಸುತ್ತಿರುವುದು.

೭೯. ದೇವೇಂದ್ರನು ಆ ಜಲಧಾರಗಿರಿಯಿಂದಲೇ ನೀರನ್ನು ನಿತ್ಯವೂ ತೆಗೆದುಕೊಂಡು ಮಳೆಕರೆಸುವನು. ಅನಂತರ ವರ್ಷಾಕಾಲದಲ್ಲಿ ಪ್ರಜೆಗಳ ಉಪಕಾರಕ್ಕಾಗಿ ಮಳೆಯನ್ನು ಕರೆದು ರಕ್ಷಣೆಗೆ ಸಹಕಾರಿಯಾಗುವನು.

೮೦. ಆ ಜಲಧಾರಗಿರಿಯ ಸಮೀಪದಲ್ಲಿಯೇ ರೈವತಕವೆಂಬ ಮಹಾಗಿರಿಯು ಸ್ಥಾಪಿತವಾಗಿದೆ ಆದರ ಶಿಖರದಲ್ಲಿಯೇ (ಆದರ ಸಮೀಪದಲ್ಲಿರುವ ಆಕಾಶದಲ್ಲಿಯೇ) ರೇವತೀ ನಕ್ಷತ್ರವು ಹೊಳೆಯುತ್ತಿರುವುದು. ಆ ಗಿರಿಯು ಬ್ರಹ್ಮದೇವನಿಗೆ ಅತಿ ಪ್ರಿಯವಾಗಿದೆ

೮೧. ಆದರ ಪಕ್ಕದಲ್ಲಿಯೇ ಅತಿ ಮಹತ್ತೂ ಶ್ಯಾಮವರ್ಣವೂ ಆದ ಶ್ಯಾಮಗಿರಿಯು ಇರುವುದು. ಆ ಪರ್ವತದಿಂದಲೇ ಪೂರ್ವದಲ್ಲಿ ಸೃಷ್ಟರಾದ ಪ್ರಜೆಗಳು ಶ್ಯಾಮವರ್ಣರಾಗಿರುವರು.

ತಸ್ಯಾಪರೇಣ ರಜತೋ ಮಹಾನಸ್ತೋ ಗಿರಿಃ ಸ್ಮೃತಃ ।
ತಸ್ಯಾಪರೇಣಾಂಬಿಕೇಯೋ ದುರ್ಗಃ ಶೈಲೋ ಹಿಮಾಚಿತಃ ॥ ೬೨ ॥

ಆಂಬಿಕೇಯಾತ್ಪರೋ ರಮ್ಯಃ ಸರ್ವೌಷಧಿಸಮನ್ವಿತಃ ।
ಸ ಚೈವ ಕೇಶರೀತ್ಯುಕ್ತೋ ಯತೋ ವಾಯುಃ ಪ್ರವಾಯತಿ ॥ ೬೩ ॥

ಶೃಣುಧ್ವಂ ನಾಮತಸ್ತಾನಿ ಯಥಾವದನುಪೂರ್ವಶಃ ।
ಉದಯಸ್ಯೋದಯಂ ವರ್ಷಂ ಜಲದಂ ನಾಮ ವಿಶ್ರುತಂ ॥ ೬೪ ॥

ದ್ವಿತೀಯಂ ಜಲಧಾರಸ್ಯ ಸುಕುಮಾರಮಿತಿ ಸ್ಮೃತಂ ।
ರವೈತಸ್ಯ ತು ಕೌಮಾರಂ ಶ್ಯಾಮಸ್ಯ ತು ಮಣೀಚಕಂ ॥ ೬೫ ॥

---

೬೨ ಅದರ ಅನಂತರದಲ್ಲಿ ಅತಿವಿಶಾಲವೂ ರಜತಮಯವೂ ಆದ ಅಸ್ತಾಚಲ ವಿರುವುದು. ಅದರ ಸಮೀಪದಲ್ಲಿಯೇ ಮಹಾದುರ್ಗಗಳೂ ಅತಿಹಿಮವೂ ಇರುವ ಅಂಬಿಕೇಯನೆಂಬ ಮಹಾಗಿರಿಯಿರುವುದು.

೬೩. ಆ ಅಂಬಿಕೇಯ ಪರ್ವತದ ಸಮೀಪದಲ್ಲಿಯೇ ಅತಿಸುಂದರವೂ, ಸರ್ವೌಷಧಿಗಳಿಗೆ ಆಶ್ರಯವೂ ಆದ ಕೇಸರೀ ಎಂಬ ಮಹಾಪರ್ವತವಿರುವುದು ಆ ಗಿರಿಯಿಂದಲೇ ವಾಯುವು ಉತ್ಪನ್ನವಾಗಿ ಎಲ್ಲಾ ಲೋಕಗಳಲ್ಲಿಯೂ ಬೀಸುವುದು.

೬೪. ಈಗ ಆ ದ್ವೀಪದಲ್ಲಿರುವ ವರ್ಷಗಳ ನಾಮಗಳನ್ನು ಹೇಳುವೆನು ಕೇಳಿರಿ. ಕ್ರಮವಾಗಿ ತಿಳಿಸುವೆನು. ಉದಯಗಿರಿಯು ಇರುವ ವರ್ಷವು ಉದಯ ವರ್ಷವೆಂತಲೂ ಮತ್ತು ಜಲದ ವರ್ಷವೆಂತಲೂ ಪ್ರಖ್ಯಾತವಾಗಿದೆ.

೬೫-೬೬. ಜಲಧಾರಗಿರಿಯಿರುವ ವರ್ಷಕ್ಕೆ ಸುಕುಮಾರವರ್ಷವೆಂಬ ನಾಮವೂ ರೈವತಕಗಿರಿಯಿರುವ ವರ್ಷಕ್ಕೆ ಕೌಮಾರವರ್ಷವೆಂದೂ, ಶ್ಯಾಮಪರ್ವತವಿರುವ ವರ್ಷಕ್ಕೆ ಮಣೀಚಕವರ್ಷವೆಂದೂ, ಅಸ್ತಾಚಲವಿರುವ ವರ್ಷಕ್ಕೆ ಮಂಗಳದಾಯಕ

ಅಸ್ತ್ರಸ್ಯಾಪಿ ಶುಭಂ ವರ್ಷಂ ವಿಜ್ಞೇಯಂ ಕುಸುಮೋತ್ತರಂ ।
ಅಂಬಿಕೇಯಸ್ಯ ಮೋದಾಕಂ ಕೇಸರೇಷು ಮಹಾದ್ರುಮಂ ॥ ೮೬ ॥

ದ್ವೀಪಸ್ಯ ಪರಿಮಾಣಂ ಚ ಹ್ರಸ್ವದೀರ್ಘತ್ವಮೇವ ಚ ।
ಶಾಕದ್ವೀಪೇನ ವಿಖ್ಯಾತಸ್ತಸ್ಯ ಮಧ್ಯೇ ವನಸ್ಪತಿಃ ॥
ಶಾಕೋ ನಾಮ ಮಹಾವೃಕ್ಷಸ್ತಸ್ಯ ಪೂಜಾಂ ಪ್ರಯುಂಜತೇ ॥ ೮೭ ॥

ಏತೇನ ದೇವಗಂಧರ್ವಾಃ ಸಿದ್ಧಾಶ್ಚ ಸಹ ಚಾರಣೈಃ ।
ವಿಹರಂತಿ ರಮಂತೇ ಚ ದೃಶ್ಯಮಾನಾಶ್ಚ ತೈಃ ಸಹ ॥ ೮೮ ॥

ತತ್ರ ಪುಣ್ಯಾ ಜನಪದಾಶ್ಚಾತುರ್ವರ್ಣ್ಯಸಮನ್ವಿತಾಃ ।
ತೇಷು ನದ್ಯಶ್ಚ ಸಪ್ತೈವ ಪ್ರತಿವರ್ಷಂ ಸಮುದ್ರಗಾಃ ॥
ವಿದ್ಧಿ ನಾಮ್ನಶ್ಚ ತಾಃ ಸರ್ವಾ ಗಂಗಾಸ್ತಾಃ ಸಪ್ತಧಾ ಸ್ಮೃತಾಃ ॥ ೮೯ ॥

---

ವಾದ ಕುಸುಮೋತ್ತರವರ್ಷವೆಂದೂ, ಅಂಬಿಕೇಯ ಗಿರಿಯಿರುವ ವರ್ಷಕ್ಕೆ ಮೋದಾಕ ವರ್ಷವೆಂದೂ, ಕೇಸರಾದ್ರಿಯಿರುವ ವರ್ಷಕ್ಕೆ ಮಹಾದ್ರುಮವರ್ಷವೆಂದೂ ನಾಮಗಳು ಪ್ರಾಪ್ತವಾಗಿವೆ.

೮೭. ಶಾಕದ್ವೀಪದ ಪರಿಮಾಣದಂತೆಯೇ ಆಯಾ ವರ್ಷಗಳ ಉದ್ದ, ಅಗಲ, ಸುತ್ತಳತೆ, ಇವೇ ಮೊದಲಾದವುಗಳನ್ನು ತಿಳಿಯಬೇಕು. ಶಾಕದ್ವೀಪದಿಂದ ಅತ್ಯಂತ ಪ್ರಖ್ಯಾತವೂ ಅತಿವಿಶಾಲವೂ ಆದ ಶಾಕನಾಮಕ ಮಹಾವೃಕ್ಷವು ಆ ಶಾಕದ್ವೀಪದ ಮಧ್ಯದಲ್ಲಿದೆ. ಆ ದ್ವೀಪವಾಸಿ ಜನಗಳು ನಿರಂತರವಾಗಿ ನಿತ್ಯವೂ ಆ ವೃಕ್ಷವನ್ನು ಪೂಜಿಸುತ್ತಿರುವರು.

೮೮ ಆ ದ್ವೀಪದಲ್ಲಿ ಸಿದ್ಧರೂ, ದೇವಗಂಧರ್ವರೂ, ಚಾರಣರೂ ಇವರೇ ಮೊದಲಾದ ದೇವತೆಗಳು ಆ ಜನಗಳಿಗೆ ಪ್ರತ್ಯಕ್ಷರಾಗಿ ಕಾಣಿಸಿಕೊಂಡು ನಾನಾವಿಧ ವಿಹಾರಗಳನ್ನು ಮಾಡುವರು.

೮೯. ಆ ಶಾಕದ್ವೀಪದಲ್ಲಿರುವ ದೇಶಗಳು ಪುಣ್ಯಕರವಾಗಿಯೂ, ಬ್ರಾಹ್ಮಣಾದಿ ಚಾತುರ್ವರ್ಣ್ಯಗಳಿಂದ ಪೂರ್ಣವಾಗಿಯೂ ಇವೆ ಪ್ರತಿವರ್ಷಗಳಲ್ಲಿಯೂ ಸಪ್ತ ನದಿಗಳು ಜನಿಸಿ ಸಮುದ್ರವನ್ನು ಸೇರುತ್ತವೆ. ಆ ಸಪ್ತನದಿಗಳ ನಾಮಗಳನ್ನು ತಿಳಿಸುವೆನು ಕೇಳಿ ಆ ಸಪ್ತನದಿಗಳೂ ಕೂಡ ಗಂಗಾನದಿಯಿಂದ ಉತ್ಪನ್ನಗಳಾಗಿಯೇ ಇರುತ್ತವೆ.

ಪ್ರಥಮಾ ಸುಕುಮಾರೀತಿ ಗಂಗಾ ಶಿವಜಲಾ ತಥಾ ।
ಅನುತಪ್ತಾ ಚ ನಾಮ್ನೈವ ನದೀ ಸಂಪರಿಕೀರ್ತಿತಾಃ ॥ ೯೦ ॥

ಕುಮಾರೀ ನಾಮತಃ ಸಿದ್ಧಾ ದ್ವಿತೀಯಾ ಸಾ ಪುನಃ ಸತೀ ।
ನಂದಾ ಚ ಪಾರ್ವತೀ ಚೈವ ತೃತೀಯಾ ಪರಿಕೀರ್ತಿತಾ ॥ ೯೧ ॥

ಶಿವೇತಿಕಾ ಚತುರ್ಥೀ ಸ್ಯಾತ್ ತ್ರಿದಿವಾ ಚ ಪುನಃ ಸ್ಮೃತಾ ।
ಇಕ್ಷುಶ್ಚ ಪಂಚಮೀ ಜ್ಞೇಯಾ ತಥೈವ ಚ ಪುನಃ ಕ್ರತುಃ ॥ ೯೨ ॥

ಧೇನುಕಾ ಚ ಮೃತಾ ಚೈವ ಷಷ್ಠೀ ಸಂಪರಿಕೀರ್ತಿತಾ ।
ಏತಾಃ ಸಪ್ತ ಮಹಾಗಂಗಾಃ ಪ್ರತಿವರ್ಷಂ ಶಿವೋದಕಾಃ ॥
ಭಾವಯಂತಿ ಜನಂ ಸರ್ವಂ ಶಾಕದ್ವೀಪನಿವಾಸಿನಂ ॥ ೯೩ ॥

ಅನುಗಚ್ಛಂತಿ ತಾಸ್ತ್ವನ್ಯಾ ನದೀರ್ನದ್ಯಃ ಸಹಸ್ರಶಃ ।
ಬಹೂದಕ ಪರಿಸ್ರಾವಾ ಯತೋ ವರ್ಷತಿ ವಾಸವಃ ॥ ೯೪ ॥

---

೯೦. ಮಂಗಳಪ್ರದವಾದ ಜಲವಿರುವ ಗಂಗೆಯಿಂದ ಉತ್ಪನ್ನವಾದ ಮೊದಲನೆಯ ನದಿಯು ಸುಕುಮಾರೀನಾಮಕವಾಗಿದೆ. ಆ ಕಾರಣದಿಂದಲೇ ಅನುತಪ್ತೆಯೆಂಬ ಬೇರೊಂದು ನಾಮವು ಲೋಕವಿಖ್ಯಾತವಾಗಿದೆ.

೯೧-೯೩. ಎರಡನೆಯ ನದಿಗೆ ಕುಮಾರೀ ಎಂಬ ನಾಮವೂ ಸತೀ ಎಂಬ ಬೇರೊಂದು ನಾಮವೂ ಸಿದ್ಧವಾಗಿದೆ ಮೂರನೆಯ ನದಿಗೆ ನಂದೆ-ಪಾರ್ವತೀ ಎಂಬ ಉಭಯನಾಮಗಳೂ ಬಂದಿವೆ. ನಾಲ್ಕನೆಯ ನದಿಗೆ ಶಿವಾ ತ್ರಿದಿವಾ ಎಂಬ ಎರಡು ಹೆಸರೂ, ಐದನೆಯದಕ್ಕೆ ಇಕ್ಷು ಕ್ರತುವೆಂಬ ಉಭಯ ನಾಮಗಳೂ ಬಂದಿವೆ. ಆರನೆಯ ನದಿಗೆ ಧೇನುಕಾ ಎಂದೂ, ಏಳನೆಯ ನದಿಗೆ ಮೃತಾ ಎಂದೂ ನಾಮಗಳು ಸಂಭವಿಸಿವೆ. ಈ ಏಳು ನದಿಗಳೂ ಗಂಗೆಯ ಉಪನದಿಗಳಾಗಿ ಅನೇಕ ನಾಮಗಳಿಂದ ಶಾಕದ್ವೀಪದಲ್ಲಿ ಸಂಚರಿಸಿ ತಮ್ಮ ಪವಿತ್ರವಾದ ಜಲದಿಂದ ಆ ದ್ವೀಪವಾಸಿಗಳಾದ ಪ್ರಜೆಗಳನ್ನು ಪೂತರನ್ನಾಗಿ ಮಾಡುತ್ತಿವೆ.

೯೪. ಪ್ರಖ್ಯಾತವಾದ ಈ ಏಳು ನದಿಗಳನ್ನು ಸಾವಿರಾರು ಉಪನದಿಗಳು ಅನುಸರಿಸಿ ಜನರನ್ನು ಪರಿಶುದ್ಧರನ್ನಾಗಿ ಮಾಡುತ್ತವೆ. ಆ ನದಿಗಳ ಪ್ರವಾಹವು ಎಲ್ಲಿಯೂ ಮಳೆಬೀಳುವ ದೇಶಗಳಲ್ಲಿ ಹರಿದು ಸಮುದ್ರವನ್ನು ಸೇರುವುವು

ತಾಸಾಂ ತು ನಾಮಧೇಯಾನಿ ಪರಿಮಾಣಂ ತಥೈವ ಚ ।
ನ ಶಕ್ಯಂ ಪರಿಸಂಖ್ಯಾತುಂ ಪುಣ್ಯಾಸ್ತಾಃ ಸರಿದುತ್ತಮಾಃ ॥
ತಾಃ ಪಿಬಂತಿ ಸದಾ ಹೃಷ್ಟಾ ನದೀರ್ಜನಪದಾಸ್ತು ತೇ ॥ ೯೫ ॥

ಶಾಂಶಪಾಯನ ವಿಸ್ತೀರ್ಣೋ ದ್ವೀಪೋಽಸೌ ಚಕ್ರಸಂಸ್ಥಿತಃ ।
ನದೀಜಲೈಃ ಪ್ರತಿಚ್ಛನ್ನಃ ಪರ್ವತೈಶ್ಚಾಭ್ರಸನ್ನಿಭೈಃ ॥ ೯೬ ॥

ಸರ್ವಧಾತುವಿಚಿತ್ರೈಶ್ಚ ಮಣಿವಿದ್ರುಮಭೂಷಿತೈಃ ।
ಪುರೈಶ್ಚ ವಿವಿಧಾಕಾರೈಃ ಸ್ಫೀತೈರ್ಜನಪದೈರಪಿ ॥ ೯೭ ॥

ವೃಕ್ಷೈಃ ಪುಷ್ಪಫಲೋಪೇತೈಃ ಸಮಂತಾದ್ಧನಧಾನ್ಯವಾನ್ ।
ಕ್ಷೀರೋದೇನ ಸಮುದ್ರೇಣ ಸರ್ವತಃ ಪರಿವಾರಿತಃ ॥
ಶಾಕದ್ವೀಪಸ್ತು ವಿಸ್ತಾರಾತ್ ಸಮೇನ ತು ಸಮಂತತಃ ॥ ೯೮ ॥

---

೯೫. ಸಾವಿರಾರು ಸಂಖ್ಯೆಗಳೂ ಅತಿಪರಿಶುದ್ಧಗಳೂ ಅತ್ಯುತ್ತಮಗಳೂ ಆದ ಆ ನದಿಗಳ ನಾಮಗಳನ್ನೂ ವಿಸ್ತಾರವನ್ನೂ ನಿರೂಪಿಸುವುದು ಅಶಕ್ಯವಾಗಿವೆ. ಶಾಕದ್ವೀಪದ ಜನರು ಪವಿತ್ರಗಳಾದ ಆ ನದಿಗಳ ಜಲದಲ್ಲಿ ಸ್ನಾನಪಾನಾದಿಗಳನ್ನು ಮಾಡಿ ನಿತ್ಯತುಷ್ಟರೂ ಗತಪಾಪಿಗಳೂ ಆಗುವರು.

೯೬-೯೭. ಎಲೈ ಶಾಂಶಪಾಯನಮುನಿಯೇ, ಆ ಶಾಕದ್ವೀಪವು ಅತಿವಿಸ್ತೀರ್ಣವಾಗಿಯೂ ಚಕ್ರಾಯುಧದಂತೆ ದುಂಡಾಗಿಯೂ ನದೀ ಜಲದಿಂದ ಸಮೃದ್ಧವೂ ಪವಿತ್ರವೂ ಆಗಿಯೂ ಮೇಘದಂತೆ ಅತ್ಯುನ್ನತಗಳಾದ ಪರ್ವತಗಳಿಂದ ಮಂಡಿತವಾಗಿಯೂ ಇದೆ. ಮತ್ತು ಸರ್ವಧಾತುಗಳಿಂದ ಚಿತ್ರಿತವೂ, ರತ್ನಗಳು ಹವಳಗಳು ಇವುಗಳಿಂದಲಂಕೃತವೂ, ವಿವಿಧಾಕಾರಗಳೂ ಆದ ನಗರಗಳಿಂದ ಭೂಷಿತವೂ, ಪೂರ್ಣವಾದ ದೇಶಗಳಿಂದ ಸಹಿತವೂ ಆಗಿದೆ.

೯೮. ಆ ಶಾಕದ್ವೀಪದಲ್ಲಿ ಫಲಪುಷ್ಪಗಳಿಂದ ಪೂರ್ಣವಾದ ನಾನಾ ಫಲ ವೃಕ್ಷಗಳೂ, ಧನಧಾನ್ಯಗಳ ಸಮೃದ್ಧಿಗಳೂ ವಿಶೇಷವಾಗಿವೆ. ಆ ಶಾಕದ್ವೀಪವನ್ನು ಕ್ಷೀರಸಾಗರವು ಆವರಿಸಿಕೊಂಡಿದೆ. ಆ ಕ್ಷೀರಸಾಗರವೂ ಕೂಡ ಶಾಕದ್ವೀಪದಷ್ಟು ವಿಸ್ತಾರವಾಗಿದೆ

ತಸ್ಮಿನ್ ಜನಪದಾಃ ಪುಣ್ಯಾಃ ಪರ್ವತಾಂತರಿತೇ ಶುಭಾಃ ।
ವರ್ಣಾಶ್ರಮಸಮಾಕೀರ್ಣಾ ದೇಶಾಸ್ತೇ ಸಪ್ತ ವೈ ಸ್ಮೃತಾಃ ॥ ೯೯ ॥

ನ ಸಂಕರಶ್ಚ ತೇಷ್ವಸ್ತಿ ವರ್ಣಾಶ್ರಮಕೃತಃ ಕ್ವಚಿತ್ ।
ಧರ್ಮಸ್ಯ ಚಾವ್ಯಭೀಚಾರಾದೇಕಾಂತಸುಖಿತಾಃ ಪ್ರಜಾಃ ॥ ೧೦೦ ॥

ನ ತೇಷು ಲೋಭೋ ಮಾಯಾ ವಾ ಈರ್ಷ್ಯಾಸೂಯಾಧೃತಿಃ ಕುತಃ ।
ವಿಪರ್ಯಯೋ ನ ತೇಷ್ವಸ್ತಿ ಏತತ್ ಸ್ವಾಭಾವಿಕಂ ಸ್ಮೃತಂ ॥ ೧೦೧ ॥

ಕರೋತ್ಪತ್ತಿರ್ನ ತೇಷ್ವಸ್ತಿ ನ ದಂಡೋ ನ ಚ ದಂಡಕಾಃ ।
ಸ್ವಧರ್ಮೇಣೈವ ಧರ್ಮಜ್ಞಾಸ್ತೇ ರಕ್ಷಂತಿ ಪರಸ್ಪರಂ ॥ ೧೦೨ ॥

ಏತಾವದೇವ ಶಕ್ಯಂ ವೈ ತಸ್ಮಿನ್ ದ್ವೀಪೇ ನಿವಾಸಿನಾಂ ।
ಪುಷ್ಕರಂ ಸಪ್ತಮಂ ದ್ವೀಪಂ ಪ್ರವಕ್ಷ್ಯಾಮಿ ನಿಬೋಧತ ॥ ೧೦೩ ॥

---

೯೯. ಪರ್ವತಗಳಿಂದ ಆವೃತವಾದ ಆ ದ್ವೀಪದಲ್ಲಿ ಏಳು ದೇಶಗಳು ಪವಿತ್ರವಾಗಿಯೂ, ಶುಭಜನಕವಾಗಿಯೂ, ವರ್ಣಗಳು, ಆಶ್ರಮಗಳು, ಆಚಾರಪದ್ಧತಿಗಳು ಇವುಗಳಿಂದ ಸಹಿತವಾಗಿಯೂ ಸಮೃದ್ಧವಾಗಿಯೂ ಇವೆ.

೧೦೦. ಆ ದೇಶಗಳಲ್ಲಿ ವರ್ಣಸಾಂಕರ್ಯವಾಗಲೀ, ಆಶ್ರಮತ್ಯಾಗವಾಗಲೀ, ಧರ್ಮವ್ಯತ್ಯಾಸವಾಗಲೀ, ಲೇಶಮಾತ್ರವೂ ಇಲ್ಲದಿರುವುದರಿಂದ ಪ್ರಜೆಗಳು ನಿತ್ಯ ಸುಖಿಯಾಗಿಯೂ, ಆರೋಗದೃಢಕಾಯರಾಗಿಯೂ, ಪೂರ್ಣಾಯುಷ್ಯವುಳ್ಳವರಾಗಿಯೂ ಇರುವರು.

೧೦೧-೧೦೨. ಶಾಕದ್ವೀಪದ ಪ್ರಜೆಗಳಲ್ಲಿ ಲೋಭ, ಮೋಹ, ಕಪಟ, ಈರ್ಷ್ಯ, ಅಸೂಯಾ, ಅಧೈರ್ಯ, ಸ್ವಧರ್ಮತ್ಯಾಗಗಳು ಲೇಶಮಾತ್ರವೂ ಇರುವುದಿಲ್ಲ. ಅವರು ಸ್ವಾಭಾವಿಕವೂ ಸಹಜವೂ ಆದ ಧರ್ಮಾವಲಂಬಿಗಳಾಗಿಯೇ ಇದ್ದರು. ಆ ಪ್ರಜೆಗಳಲ್ಲಿ ಲಂಚಕೋರತನವೂ, ಶಿಕ್ಷೆಯೂ ದಂಡವಿಧಿಯೂ ಇರಲೇ ಇಲ್ಲ. ಅವರೆಲ್ಲರೂ ಧರ್ಮಜ್ಞರೂ ಸ್ವಧರ್ಮನಿರತರೂ ಆಗಿ ದೀನರನ್ನೂ ಅನಾಥರನ್ನೂ ಪಾಲಿಸುತ್ತಿದ್ದರು ಪರಸ್ಪರ ರಕ್ಷಕರೂ ಆಗಿರುವರು.

೧೦೩. ಆ ಶಾಕದ್ವೀಪ ಮತ್ತು ಆ ದ್ವೀಪದ ಪ್ರಜೆಗಳು ಇವರ ವಿಷಯವಾಗಿ ನಾನು ನಿಮಗೆ ತಿಳಿಸಿರುವುದಕ್ಕಿಂತಲೂ ಹೆಚ್ಚಾಗಿ ತಿಳಿಸಲು ಸಾಧ್ಯವಿಲ್ಲ. ಈಗ ಏಳನೆಯದಾದ ಪುಷ್ಕರದ್ವೀಪವನ್ನು ವಿವರಿಸುವೆನು ಕೇಳಿರೆಂದನು.

ಪುಷ್ಕರೇಣ ತು ದ್ವೀಪೇನ ವೃತಃ ಕ್ಷೀರೋದಕೋ ಬಹಿಃ ।
ಶಾಕಾದ್ವೀಪಸ್ಯ ವಿಸ್ತಾರಾದ್ವಿಗುಣೇನ ಸಮಂತತಃ ॥ ೧೦೪ ॥

ಪುಷ್ಕರೇ ಪರ್ವತಃ ಶ್ರೀಮಾನ್ ಏಕ ಏವ ಮಹಾಶಿಲಃ ।
ಚಿತ್ರೈರ್ಮಣಿಮಯೈಃ ಶೀಲೈಃ ಶಿಖರೈಸ್ತು ಸಮುಚ್ಛ್ರಿತೈಃ ॥ ೧೦೫ ॥

ದ್ವೀಪಸ್ಯ ತಸ್ಯ ಪೂರ್ವಾರ್ಧೇ ಚಿತ್ರಸಾನುಃ ಸ್ಥಿತೋ ಮಹಾನ್ ।
ಪರಿಮಂಡಲಸಹಸ್ರಾಣಿ ವಿಸ್ತೀರ್ಣಃ ಪಂಚವಿಂಶತಿಃ ॥ ೧೦೬ ॥

ಊರ್ಧ್ವಂ ಚೈವ ಚತುಸ್ತ್ರಿಂಶತ್ಸಹಸ್ರಾಣಿ ಸಮಾಚಿತಃ ।
ದ್ವೀಪಾರ್ಧಸ್ಯ ಪರಿಕ್ಷೇಪಃ ಪರ್ವತೋ ಮಾನಸೋತ್ತರಃ ॥ ೧೦೭ ॥

ಸ್ಥಿತೋ ವೇಲಾಸಮೀಪೇ ತು ನವಚಂದ್ರ ಇವೋದಿತಃ ।
ಯೋಜನಾನಾಂ ಸಹಸ್ರಾಣಿ ಊರ್ಧ್ವಂ ಪಂಚಾಶದುಚ್ಛ್ರಿತಃ ॥ ೧೦೮ ॥

ತಾವದೇವ ಸ ವಿಸ್ತೀರ್ಣಃ ಸರ್ವತಃ ಪರಿಮಂಡಲಃ ।
ಸ ಏವಂ ದ್ವೀಪಪಶ್ಚಾರ್ಧೇ ಮಾನಸಃ ಪೃಥಿವೀಧರಃ ॥ ೧೦೯ ॥

---

೧೦೪. ಪುಷ್ಕರದ್ವೀಪದ ಸುತ್ತಮುತ್ತಲೂ ಕ್ಷೀರಸಮುದ್ರವು ಆವರಿಸಿಕೊಂಡಿದೆ. ಈ ಪುಷ್ಕರದ್ವೀಪವು ಶಾಕದ್ವೀಪಕ್ಕಿಂತಲೂ ಎರಡರಷ್ಟು ವಿಸ್ತಾರವಾಗಿದೆ.

೧೦೫. ಪುಷ್ಕರದ್ವೀಪದಲ್ಲಿ ಸಂಪದ್ಯುಕ್ತವೂ ಏಕಮಹಾಶಿಲಾಮಯವೂ ವಿಚಿತ್ರಗಳೂ, ರತ್ನಮಯಗಳೂ ಸುಂದರಗಳೂ ಅತ್ಯುನ್ನತಗಳೂ ಆದ ಶಿಖರಗಳಿಂದ ಮಂಡಿತವೂ ಆದ ಮಾನಸಪರ್ವತವು ದೇದೀಪ್ಯಮಾನವಾಗಿದೆ.

೧೦೬. ಆ ದ್ವೀಪದ ಪೂರ್ವಭಾಗದಲ್ಲಿ ಮಹತ್ತೂ ವಿಚಿತ್ರವೂ ಆದ ಸಾನುಗಳಿವೆ. ಆ ಪರ್ವತದ ಸುತ್ತಳತೆಯು ಇಪ್ಪತ್ತೈದುಸಾವಿರಯೋಜನಗಳಷ್ಟು ವಿಶಾಲವಾಗಿದೆ.

೧೦೭-೧೦೯. ಆ ಮಾನಸಗಿರಿಯು ಮೂವತ್ತನಾಲ್ಕುಸಹಸ್ರಯೋಜನಗಳಷ್ಟು ಎತ್ತರವಾಗಿರುತ್ತದೆ. ಆ ಮಾನಸಪರ್ವತೋತ್ತಮವು ಪುಷ್ಕರದ್ವೀಪದ ಅರ್ಧಭಾಗದಷ್ಟು ವಿಶಾಲವಾಗಿದೆ. ಮತ್ತು ಸಮುದ್ರದ ಸಮೀಪದಲ್ಲಿ ನವೀನವಾಗಿ ಉದಯಿಸಿರುವ ನೂತನ ಚಂದ್ರನಂತೆ ಹೊಳೆಯುತ್ತಿರುತ್ತದೆ. ಅದು ಐವತ್ತು ಸಾವಿರ ಯೋಜನದಷ್ಟು, ಎತ್ತರವಾಗಿಯೂ ಇರುತ್ತದೆ. ಆ ಮಾನಸ ಪರ್ವತದ ಸುತ್ತಳತೆಯೂ ಸಹ ಐವತ್ತುಸಾವಿರಯೋಜನ ವಿಸ್ತಾರವಾಗಿದೆ. ಹೀಗೆ ಆ ಪರ್ವತವು ಸೌಂದರ್ಯಯುಕ್ತವಾಗಿ ದ್ವೀಪದ ಒಂದು ಭಾಗದಲ್ಲಿ ಶೋಭಿಸುತ್ತಿದೆ.

ಏಕ ಏವ ಮಹಾಸಾನುಃ ಸನ್ನಿವೇಶಾದ್ವಿಧಾ ಕೃತಃ ।
ಸ್ವಾದೂದಕೇನೋದಧಿನಾ ಸರ್ವತಃ ಪರಿವಾರಿತಃ ॥ ೧೧೦ ॥

ಪುಷ್ಕರದ್ವೀಪವಿಸ್ತಾರಾದ್ವಿಸ್ತೀರ್ಣೋಽಸೌ ಸಮಂತತಃ ।
ತಸ್ಮಿನ್ ದ್ವೀಪೇ ಸ್ಮೃತೌ ದ್ವೌ ತು ಪುಣ್ಯೌ ಜನಪದೌ ಶುಭೌ ॥
ಅಭಿತೋ ಮಾನಸಸ್ಯಾಥ ಪರ್ವತಸ್ಯಾನುಮಂಡಲೌ ॥ ೧೧೧ ॥

ಮಹಾವೀತಂತು ಯದ್ವರ್ಷಂ ಬಾಹ್ಯತೋ ಮಾನಸಸ್ಯ ತತ್ ।
ತಸ್ಯೈವಾಭ್ಯಂತರೇ ಯತ್ತು ಧಾತಕೀಖಂಡಮುಚ್ಯತೇ ॥ ೧೧೨ ॥

ದಶವರ್ಷಸಹಸ್ರಾಣಿ ತತ್ರ ಜೀವಂತಿ ಮಾನವಾಃ ।
ಆರೋಗ್ಯಸುಖಭೂಯಿಷ್ಠಾ ಮಾನಸೀಂ ಸಿದ್ಧಿಮಾಸ್ಥಿತಾಃ ॥ ೧೧೩ ॥

ಸಮಮಾಯುಶ್ಚ ರೂಪಂಚ ತಸ್ಮಿನ್ ವರ್ಷದ್ವಯೇ ಸ್ಥಿತಂ ।
ಅಧಮೋತ್ತಮೌ ನ ತೇಷ್ವಾಸ್ತಾಂ ತುಲ್ಯಾಸ್ತೇ ರೂಪಶೀಲತಃ ॥ ೧೧೪ ॥

---

೧೧೦. ಆ ಪರ್ವತವು ಒಂದೇ ಪ್ರಸ್ಥಭೂಮಿಯಲ್ಲಿದ್ದರೂ ಕೂಡ ಸನ್ನಿವೇಶ ವಿಶೇಷದಿಂದ ಎರಡು ಭಾಗಗಳಾಗಿವೆಯೋ ಎಂಬಂತೆ ತೋರುತ್ತಿವೆ. ಅದು ಸ್ವಾದೂದಕ ಸಮುದ್ರದಿಂದ ಸುತ್ತುವರಿಯಲ್ಪಟ್ಟಿದೆ. ಸುತ್ತಲೂ ಸ್ವಾದೂದಕಸಮುದ್ರವಿದೆ.

೧೧೧. ಪುಷ್ಕರದ್ವೀಪದಂತೆ ಆ ಪರ್ವತವೂ ಸಹ ಸುತ್ತಲೂ ಅತಿವಿಶಾಲ ವಾಗಿರುತ್ತದೆ. ಆ ದ್ವೀಪದಲ್ಲಿ ಪುಣ್ಯಕರವೂ ಮಂಗಳಪ್ರದವೂ ಆದ ಎರಡು ದೇಶಗಳು ಶೋಭಿಸುತ್ತವೆ. ಆ ದೇಶಗಳು ಮಾನಸಪರ್ವತದ ಸುತ್ತಲೂ ಮಂಡಲಾಕಾರಗಳಾಗಿವೆ.

೧೧೨. ಮಾನಸಪರ್ವತದ ಬಾಹ್ಯಭಾಗದಲ್ಲಿ ಮಹಾವೀತವೆಂಬ ಖಂಡ ವಿರುತ್ತದೆ. ಅದರ ಒಳಭಾಗದಲ್ಲಿ ಧಾತಕೀಖಂಡವೆಂಬ ಮತ್ತೊಂದು ಖಂಡವು ಪ್ರಕಾಶಿಸುತ್ತಿರುವುದು.

೧೧೩. ಆ ಖಂಡದಲ್ಲಿ ಪ್ರಜೆಗಳು ಹತ್ತುಸಾವಿರವರ್ಷಗಳು ಜೀವಂತ ರಾಗಿಯೂ ಆರೋಗ್ಯಸುಖಸಂಪನ್ನರಾಗಿಯೂ ಮಾನಸಿಕಸಿದ್ಧಿಗಳನ್ನು ಪಡೆದವ ರಾಗಿಯೂ ಇರುವರು.

೧೧೪. ಮಹಾವೀತ ಧಾತಕೀ ಎಂಬ ಎರಡು ಖಂಡಗಳ ಜನಗಳಿಗೆ ಆಯುಸ್ಸು ರೂಪವು ಒಂದೇ ಸಮನಾಗಿರುವುವು. ಅವರಲ್ಲಿ ಉತ್ತಮಾಧಮಭಾವವು ಇರವುದಿಲ್ಲ. ಅವರೆಲ್ಲರೂ ಸೌಂದರ್ಯಸ್ವಭಾವಗಳಿಂದ ಸಮನಾಗಿರುವರು.

ನ ತತ್ರ ವಂಚಕೋ ನೇಷ್ಯಾರ್ನ ಸ್ತೇನಾ ನ ಭಯಂ ತಥಾ ।
ನಿಗ್ರಹೋ ನ ಚ ದಂಡೋಽಸ್ತಿ ನ ಲೋಭೋ ನ ಪರಿಗ್ರಹಃ ॥ ೧೧೫ ॥

ಸತ್ಯಾನೃತಂ ನ ತತ್ರಾಸ್ತಿ ಧರ್ಮಾಧರ್ಮೌ ತಥೈವ ಚ ।
ವರ್ಣಾಶ್ರಮಾಣಾಂ ವಾರ್ತಾ ವಾ ಪಾಶುಪಾಲ್ಯಂ ವಣಿಕ್ರಿಯಾ ॥ ೧೧೬ ॥

ತ್ರಯೀ ವಿದ್ಯಾ ದಂಡನೀತಿಃ ಶುಶ್ರೂಷಾ ಶಲ್ಯಮೇವ ಚ ।
ವರ್ಷದ್ವಯೇ ಸರ್ವಮೇತತ್ ಪುಷ್ಕರಸ್ಯ ನ ವಿದ್ಯತೇ ॥ ೧೧೭ ॥

ನ ತತ್ರ ನದ್ಯೋ ವರ್ಷಂಚ ಶೀತೋಷ್ಣಂ ವಾ ನ ವಿದ್ಯತೇ ।
ಉದ್ಭಿಜ್ಜಾನ್ಯುದಕಾನ್ಯತ್ರ ಗಿರಿಪ್ರಸವಣಾನಿ ಚ ॥ ೧೧೮ ॥

ಉತ್ತರಾಣಾಂ ಕುರೂಣಾಂಚ ತುಲ್ಯಕಾಲೋ ಜನಃ ಸದಾ ।
ಸರ್ವತ್ರ ಸುಸುಖಸ್ತತ್ರ ಜರಾಕ್ಲಮವಿವರ್ಜಿತಃ ॥ ೧೧೯ ॥

---

೧೧೫. ಆ ದೇಶದಲ್ಲಿ ವಂಚಕರೂ ಅಸೂಯೆಯುಳ್ಳವರೂ ಚೋರರೂ, ರೋಗಾದಿಗಳ ಭಯವೂ, ಪ್ರಾಣಿಹಿಂಸೆಯೂ, ಶಿಕ್ಷೆಯೂ, ಲೋಭವೂ, ಬಲಾತ್ಕಾರದಿಂದ ಪರಸ್ತ್ರೀಪರಿಗ್ರಹವೂ, ಇವುಗಳು ಲೇಶಮಾತ್ರವೂ ಇರುವುದಿಲ್ಲ.

೧೧೬-೧೧೭. ಶಾಕದ್ವೀಪದ ಎರಡುವರ್ಷಗಳಲ್ಲಿಯೂ ಸತ್ಯಾನೃತಗಳೂ ಧರ್ಮಾಧರ್ಮಗಳೂ, ವರ್ಣಾಶ್ರಮಾಚಾರಗಳೂ ಪಶುಪಾಲನೆಯೂ ವ್ಯಾಪಾರವೂ ವೇದತ್ರಯುಗಳೂ ದಂಡನೀತಿ ಪರಸೇವೆ ಹಿಂಸೆ ಇವೇ ಮೊದಲಾದವುಗಳು ಸರ್ವದಾ ಇಲ್ಲವು

೧೧೮. ಅಲ್ಲಿ ನದಿ ಮಳೆ ಶೀತೋಷ್ಣಗಳಾವುವೂ ಇರುವುದಿಲ್ಲ. ಭೂಮಿಯ ಊಟೆಯಿಂದಲೂ ಗಿರಿಗಳ ಝರಿಗಳಿಂದಲೂ ನೀರು ಯಥೇಚ್ಛವಾಗಿರುತ್ತದೆ.

೧೧೯. ಉತ್ತರ ಕುರುದೇಶದ ಜನರಂತೆ ಈ ಖಂಡದ ಜನರೂ ಸಹ ಬಹು ಕಾಲ ಜೀವಿಸುವರು. ಆ ಜನರು ನಿತ್ಯಸುಖಿಗಳೂ ಜರಾಮರಣವರ್ಜಿತರೂ ಆಗಿರುವರು.

ಇತ್ಯೇಷ ಧಾತಕೀಖಂಡೋ ಮಹಾವೀತೇ ತಥೈವ ಚ ।
ಅನುಪೂರ್ವ್ಯಾದ್ವಿಧಿಃ ಕೃತ್ಸ್ನಃ ಪುಷ್ಕರಸ್ಯ ಪ್ರಕೀರ್ತಿತಃ ॥ ೧೨೦ ॥

ಸ್ವಾದೂದಕೇನೋದಧಿನಾ ಪುಷ್ಕರಃ ಪರಿವಾರಿತಃ ।
ವಿಸ್ತಾರಾನ್ಮಂಡಲಾಚ್ಚೈವ ಪುಷ್ಕರಸ್ಯ ತಥೈವ ಚ ॥ ೧೨೧ ॥

ಏವಂ ದ್ವೀಪಾಃ ಸಮುದ್ರೈಸ್ತು ಸಪ್ತ ಸಪ್ತಭಿರಾವೃತಾಃ ।
ದ್ವೀಪಸ್ಯಾನಂತರೋ ಯಸ್ತು ಸಮುದ್ರಸ್ತು ಸಮಂತತಃ ॥ ೧೨೨ ॥

ಏವಂ ದ್ವೀಪಸಮುದ್ರಾಣಾಂ ವೃದ್ಧಿರ್ಜ್ಞೇಯಾ ಪರಸ್ಪರಾತ್ ।
ಅಪಾಂ ಚೈವ ಸಮುದ್ರೇಕಾತ್ ಸಮುದ್ರಾ ಇತಿ ಸಂಜ್ಞಿತಾಃ ॥ ೧೨೩ ॥

---

೧೨೦ ಹೀಗೆ ಪುಷ್ಕರದ್ವೀಪದಲ್ಲಿರುವ ಧಾತುಕೀ ಮಹಾವೀತವೆಂಬ ಎರಡು ಖಂಡಗಳಲ್ಲಿಯೂ ಇರತಕ್ಕ ಸಕಲ ವಿಷಯಗಳನ್ನೂ ನಿಮಗಾಗಿ ಯಥಾಸ್ಥಿತವಾಗಿಯೂ ಕ್ರಮವಾಗಿಯೂ ನಿರೂಪಿಸಿರುತ್ತೇನೆ

೧೨೧. ಪುಷ್ಕರದ್ವೀಪವು ಸ್ವಾದೂದಕಸಮುದ್ರದಿಂದ ಆವೃತ್ತವಾಗಿದೆ. ಧಾತಕೀಖಂಡ, ಮಹಾವೀರಖಂಡವೆಂಬ ಎರಡು ಖಂಡಗಳೂ ಪುಷ್ಕರದ್ವೀಪದಂತೆಯೇ ಸರ್ವವಿಷಯಗಳಲ್ಲಿಯೂ ಸಮನಾಗಿಯೇ ಇರುತ್ತವೆ. ಅವುಗಳಿಗೆ ಅನೇಕ ಭಾಗಗಳಲ್ಲಿ ಹೋಲಿಕೆಯಿದೆ

೧೨೨. ಹೀಗೆ ಸಪ್ತಸಮುದ್ರಗಳು ಸಪ್ತದ್ವೀಪಗಳನ್ನು ಆವರಿಸಿಕೊಂಡಿವೆ. ಆಯಾ ದ್ವೀಪಗಳು ಎಷ್ಟು ವಿಸ್ತಾರವಾಗಿವೆಯೋ ಆಯಾ ದ್ವೀಪಗಳನ್ನು ಸುತ್ತಿಕೊಂಡಿರುವ ಸಮುದ್ರಗಳೂ ಕೂಡ ಅಷ್ಟೇ ವಿಸ್ತಾರವಾಗಿರುತ್ತವೆ.

೧೨೩. ಹೀಗೆ ದ್ವೀಪಸಮುದ್ರಗಳ ವಿಸ್ತಾರಾದಿಗಳನ್ನು ತಿಳಿಯಬೇಕು. ಏತರಲ್ಲಿ ಬಲವು ಉದ್ರೇಕಗೊಂಡಿದೆಯೋ ಮತ್ತು ಉಕ್ಕಿದೆಯೋ ಅದಕ್ಕೆ ಸಮುದ್ರವೆಂಬ ನಾಮವು ಸಂಭವಿಸಿದೆ.

ಋಷಯೋ ನಿವಸಂತ್ಯಸ್ಮಿನ್ ಪ್ರಜಾ ಯಸ್ಮಾಚ್ಚತುರ್ವಿಧಾಃ ।
ತಸ್ಮಾದ್ವರ್ಷಮಿತಿ ಪ್ರೋಕ್ತಂ ಪ್ರಜಾನಾಂ ಸುಖದಂತು ತತ್ ॥ ೧೨೪ ॥

ಋಷ ಇತ್ಯೇವ ಋಷಯಃ ವೃಷಃ ಶಕ್ತಿಪ್ರಬಂಧನೇ ।
ಇತಿ ಪ್ರಬಂಧನಾತ್ ಸಿದ್ಧಂ ವರ್ಷತ್ವಂ ತೇನ ತೇಷು ತತ್ ॥ ೧೨೫ ॥

ಶುಕ್ಲಪಕ್ಷೇ ಚಂದ್ರವೃದ್ಧೌ ಸಮುದ್ರಃ ಪೂರ್ಯತೇ ತದಾ ।
ಪ್ರಕ್ಷೀಯಮಾಣೇ ಬಹುಲೇ ಕ್ಷೀಯತೇಽಸ್ತಮಿತೇ ಋಗೇ ॥ ೧೨೬ ॥

ಆಪೂರ್ಯಮಾಣೇ ಉದಧಿಃ ಸ್ವತ ಏವಾಭಿಪೂರ್ಯತೇ ।
ತತೋಽಪಕ್ಷೀಯಮಾಣೇಽಪಿ ಸ್ವಾತ್ಮನ್ಯೆವಾಪಕೃಷ್ಯತೇ ॥ ೧೨೭ ॥

---

೧೨೪. ಯಾವ ಪ್ರದೇಶಗಳಲ್ಲಿ ಋಷಿಗಳೂ, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂಬ ಚತುರ್ವಿಧ ಪ್ರಜೆಗಳೂ ವಾಸಿಸುತ್ತಾರೆಯೋ ಆ ಸ್ಥಳಕ್ಕೆ ವರ್ಷವೆಂಬ ನಾಮವು ಪ್ರಾಪ್ತವಾಗಿದೆ.

೧೨೫. ಋಷಿ ಜ್ಞಾನೇ, ವೃಷ ಶಕ್ತಿಪ್ರಬಂಧನೇ ಎಂಬ ಧಾತು ವಿಶೇಷಗಳಿಂದ ವರ್ಷವೆಂಬ ಶಬ್ದವು ಉತ್ಪನ್ನವಾಗಿದೆ. ಇದರಿಂದ ವರ್ಷವೆಂದರೆ ಜ್ಞಾನ ಶಕ್ತಿ ಇವುಗಳುಳ್ಳದ್ದೆಂದು ಅರ್ಥವಾಗುವುದು. ಈ ನಿಮಿತ್ತದಿಂದ ವರ್ಷವೆಂದರೆ ಜ್ಞಾನಿಗಳೂ ಶಕ್ತಿವಂತರೂ ಇರುವ ಸ್ಥಳವೆಂಬ ಅಭಿಪ್ರಾಯವು ವ್ಯಕ್ತವಾಗಿರುವುದು.

೧೨೬. ಶುಕ್ಲಪಕ್ಷದ ಚಂದ್ರನು ಆಕಾಶದಲ್ಲಿ ಕಲೆಗಳಿಂದ ಪೂರ್ಣನಾಗುವಂತೆ ಸಮುದ್ರವೂ ಕೂಡ ಉಕ್ಕಿ, ವೃದ್ಧಿಯಾಗುವುದು. ಕೃಷ್ಣಪಕ್ಷದಲ್ಲಿ ಚಂದ್ರನು ಕ್ಷಯಿಸುವಂತೆ ಸಮುದ್ರವೂ ಕೂಡ ಕ್ಷಯಿಸುವುದು. ನೀರು ದಡದಿಂದ ಸ್ವಲ್ಪ ಕೆಳಗೆ ಇಳಿಯುವುದು.

೧೨೭. ಚಂದ್ರನು ಕಲೆಗಳಿಂದ ವೃದ್ಧಿಹೊಂದಿದರೆ ಸಮುದ್ರವು ಜಲದಿಂದ ವೃದ್ಧಿಯಾಗುವುದು. ಚಂದ್ರನ ಕಲೆ ಕುಂದಿದರೆ ಸಮುದ್ರದ ಜಲವು ಬತ್ತುವುದು.

**ಉಖಾಸ್ಥಮಗ್ನಿಸಂಯೋಗಾತ್ ಜಲಮುದ್ರಿಚ್ಯತೇ ಯಥಾ ।**
**ತಥಾ ಮಹೋದಧಿಗತಂ ತೋಯಮುದ್ರಿಚ್ಯತೇ ತತಃ ॥ ೧೨೮ ॥**

**ಅನ್ಯೂನಾ ಹ್ಯತಿರಿಕ್ತಾಶ್ಚ ವರ್ಧಂತ್ಯಾಪೋ ಹ್ರಸಂತಿ ಚ ।**
**ಉದಯಾಸ್ತಮಿತೇಶ್ಚೇಂದೋಃ ಪಕ್ಷಯೋಃ ಶುಕ್ಲಕೃಷ್ಣಯೋಃ ॥**
**ಕ್ಷಯವೃದ್ಧಿರೇವಮುದಧೇಃ ಸೋಮವೃದ್ಧಿಕ್ಷಯಾತ್ಮನಃ ॥ ೧೨೯ ॥**

**ದಶೋತ್ತರಾಣಿ ಪಂಚೈವ ಅಂಗುಲೀನಾಂ ಶತಾನಿ ತು ।**
**ಅಪಾಂ ವೃದ್ಧಿಃ ಕ್ಷಯೋ ದೃಷ್ಟಃ ಸಮುದ್ರಾಣಾಂ ತು ಪರ್ವಸು ॥ ೧೩೦ ॥**

**ದ್ವಿರಾಪತ್ವಾತ್ ಸ್ಮೃತಾ ದ್ವೀಪಾಃ ಸರ್ವತಶ್ಚೋದಕಾವೃತಾಃ ।**
**ಉದಕಸ್ಯಾಧಾನಂ ಯಸ್ಮಾಚ್ಚ ತಸ್ಮಾದದುಧಿರುಚ್ಯತೇ ॥ ೧೩೧ ॥**

---

೧೨೮. ಪಾತ್ರೆಯಲ್ಲಿರುವ ಜಲವು ಅಗ್ನಿಯ ಸಂಬಂಧದಿಂದ ಉಕ್ಕುವಂತೆ ಸಮುದ್ರದ ನೀರು ಚಂದ್ರಕಿರಣಗಳ ಸಂಬಂಧದಿಂದ ವೃದ್ಧಿಯಾಗುವುದು.

೧೨೯. ಚಂದ್ರನು ಉದಯಿಸಿದರೆ ಸಮುದ್ರವು ಉಕ್ಕುವುದು. ಚಂದ್ರನು ಅಸ್ತಮಯವಾದರೆ ಸಮುದ್ರವು ಕುಗ್ಗುವುದು. ಹೀಗೆ ವೃದ್ಧಿಕ್ಷಯಗಳು ಅನ್ಯೂನಾನತಿರಿಕ್ತವಾಗಿ ಒಂದೇ ಸಮನಾಗಿರುವುದು. ಹೀಗೆ ಸಮುದ್ರದ ವೃದ್ಧಿಕ್ಷಯಗಳು ಚಂದ್ರನ ವೃದ್ಧಿಕ್ಷಯಗಳ ಅಧೀನಗಳಾಗಿವೆ.

೧೩೦. ಪರ್ವಕಾಲಗಳಲ್ಲಿ ಸಮುದ್ರದ ಜಲವು ವೃದ್ಧಿಯಾಗುವುದೆಂದರೆ ೫೧೦ (ಐದುನೂರಹತ್ತು) ಅಂಗುಲ, ಅಂದರೆ (೪೨) ನಲವತ್ತೆರಡೂವರೆ ಅಡಿಗಳಷ್ಟು ಜಲವು ಹೆಚ್ಚಾದರೆ ವೃದ್ಧಿಯೆಂದೂ, ಅಷ್ಟು ಕಡಿಮೆಯಾದರೆ ಕ್ಷಯವೆಂದೂ, ಸಂಕೇತವು ಶಾಸ್ತ್ರಸಮ್ಮತವಾಗಿದೆ.

೧೩೧. ಯಾವ (ದೇಶಕ್ಕೆ) ಸ್ಥಳಕ್ಕೆ ಎರಡು ಭಾಗದಲ್ಲಿಯೂ ಜಲವು ಇರುತ್ತದೆಯೋ ಅದಕ್ಕೆ ದ್ವೀಪವೆಂದು ನಾಮವು ಬಂದಿದೆ. ಸರ್ವಭಾಗದಿಂದಲೂ ಯಾವುದು ಜಲಕ್ಕೆ ಆಧಾರವಾಗಿದೆಯೋ ಅದಕ್ಕೆ ಉದಧಿ ಎಂಬ ಹೆಸರು ಬಂದಿದೆ.

ಅಪರ್ವಾಣಸ್ತು ಗಿರಯಃ ಪರ್ವಭಿಃ ಪರ್ವತಾಃ ಸ್ಮೃತಾಃ ।
ಪ್ಲಕ್ಷದ್ವೀಪೇ ತು ಗೋಮೇದಃ ಪರ್ವತಸ್ತೇನ ಚೋಚ್ಯತೇ ॥ ೧೩೨ ॥

ಶಾಲ್ಮಲಿಃ ಶಾಲ್ಮಲದ್ವೀಪೇ ಪೂಜ್ಯತೇ ಚ ಮಹಾದ್ರುಮಃ ।
ಕುಶದ್ವೀಪೇ ಕುಶಸ್ತಂಬಸ್ತಸ್ಯ ನಾಮ್ನಾ ಸ ಉಚ್ಯತೇ ॥ ೧೩೩ ॥

ಕ್ರೌಂಚದ್ವೀಪೇ ಗಿರಿಃ ಕ್ರೌಂಚೋ ಮಧ್ಯೇ ಜನಪದಸ್ಯ ಹ ।
ಶಾಕದ್ವೀಪೇ ದ್ರುಮಃ ಶಾಕಸ್ತಸ್ಯ ನಾಮ್ನಾ ಸ ಉಚ್ಯತೇ ॥ ೧೩೪ ॥

ನ್ಯಗ್ರೋಧಃ ಪುಷ್ಕರದ್ವೀಪೇ ತತ್ರ ತೈಃ ಸ ನಮಸ್ಕೃತಃ ।
ಮಹಾದೇವಃ ಪುಷ್ಕರೇ ತು ಬ್ರಹ್ಮಾ ತ್ರಿಭುವನೇಶ್ವರಃ ॥ ೧೩೫ ॥

---

೧೩೨. ಗಂಟುಗುಡ್ಡಗಳಿಲ್ಲದೆ ಒಂದೇಸಮನಾಗಿದ್ದರೆ ಗಿರಿಯೆಂದೂ, ಗಂಟುಗಳಿದ್ದರೆ ಪರ್ವತವೆಂದೂ, ಅನ್ವರ್ಥಕವಾದ ನಾಮಗಳು ಬಂದಿವೆ. ಪ್ಲಕ್ಷದ್ವೀಪದಲ್ಲಿ ಗೋಮೇಧಗಿರಿಯಿರುವುದರಿಂದ ಆ ದ್ವೀಪಕ್ಕೂ ಆ ನಾಮವೇ ಉಂಟಾಗಿದೆ.

೧೩೩. ಶಾಲ್ಮಲೀದ್ವೀಪದಲ್ಲಿ ಶಾಲ್ಮಲೀವೃಕ್ಷವು ಬಹಳವಾಗಿ ಪೂಜ್ಯವಾಗಿದೆ. ಕುಶದ್ವೀಪದಲ್ಲಿ ಕುಶಸ್ತಂಭವು ವಿಶೇಷವಾಗಿರುವುದರಿಂದ ಆ ಹೆಸರು ಬಂದಿದೆ

೧೩೪. ಕ್ರೌಂಚದ್ವೀಪದ ಮಧ್ಯದೇಶದಲ್ಲಿ ಕ್ರೌಂಚವೆಂಬ ಮಹಾಪರ್ವತವಿರುವುದರಿಂದ ಆ ದ್ವೀಪಕ್ಕೆ ಕ್ರೌಂಚದ್ವೀಪವೆಂಬ ನಾಮವು ಪ್ರಾಪ್ತವಾಗಿದೆ. ಶಾಕದ್ವೀಪದಲ್ಲಿ ಶಾಕವೆಂಬ ವೃಕ್ಷವಿರುವುದರಿಂದ ಆ ದ್ವೀಪಕ್ಕೆ ಶಾಕದ್ವೀಪವೆಂಬ ನಾಮವು ಬಂದಿದೆ.

೧೩೫. ಪುಷ್ಕರದ್ವೀಪದಲ್ಲಿ ನ್ಯಗ್ರೋಧವೃಕ್ಷವು ಬಹಳವಾಗಿ ಪೂಜ್ಯವಾಗಿದೆ. ಆದುದರಿಂದ ಆ ದ್ವೀಪಕ್ಕೆ ಆ ಮಹಿಮೆಯು ಬಂದಿದೆ. ಪುಷ್ಕರದ್ವೀಪದಲ್ಲಿ ತ್ರಿಲೋಕೇಶ್ವರನೂ ಮಹಾದೇವನೂ ಆದ ಬ್ರಹ್ಮದೇವನ ಸನ್ನಿಹಿತನಾಗಿರುವನು.

ತಸ್ಮಿನ್ನಿವಸತಿ ಬ್ರಹ್ಮಾ ಸಾಧ್ಯೈಃ ಸಾರ್ಧಂ ಪ್ರಜಾಪತಿಃ ।
ಉಪಾಸತೇ ತತ್ರ ದೇವಾಸ್ತ್ರಯಸ್ತ್ರಿಂಶನ್ಮಹರ್ಷಿಭಿಃ ॥
ಸ ತತ್ರ ಪೂಜ್ಯತೇ ಚೈವ ದೇವೈರ್ದೇವೋತ್ತಮಃ ಸದಾ ॥ ೧೩೬ ॥

ಜಂಬೂದ್ವೀಪಾತ್ಪ್ರವರ್ತಂತೇ ರತ್ನಾನಿ ವಿವಿಧಾನಿ ಚ ।
ದ್ವೀಪೇಷು ತೇಷು ಸರ್ವೇಷು ಪ್ರಜಾನಾಂ ಹಿ ಕ್ರಮಾಸ್ತ್ವಿಹ ॥ ೧೩೭ ॥

ಸರ್ವಶೋ ಬ್ರಹ್ಮಚರ್ಯೇಣ ಸತ್ಯೇನ ಚ ದಮೇನ ಚ ।
ಆರೋಗ್ಯಾಯುಃ ಪ್ರಮಾಣಾದ್ಧಿ ದ್ವಿಗುಣಂ ಚ ಸಮಂತತಃ ॥ ೧೩೮ ॥

ಏತಸ್ಮಿನ್ ಪುಷ್ಕರದ್ವೀಪೇ ಯದುಕ್ತಂ ವರ್ಷಕದ್ವಯಂ ।
ಗೋಪಾಯತಿ ಪ್ರಜಾಸ್ತತ್ರ ಸ್ವಯಂ ಸಜ್ಜನಮಂಡಿತಾಃ ॥ ೧೩೯ ॥

---

೧೩೬. ಪುಷ್ಕರದ್ವೀಪದಲ್ಲಿ ಬ್ರಹ್ಮದೇವನು ಸಾಧ್ಯರ ಸಂಗಡ ವಾಸಿಸುವನು. ಮೂವತ್ತುಮೂರುಕೋಟಿ ದೇವತೆಗಳೂ ಮಹರ್ಷಿಗಳೂ ಕೂಡ ದೇವೋತ್ತಮನೂ ಪುಷ್ಕರದ್ವೀಪವಾಸಿಯೂ ಆದ ಬ್ರಹ್ಮನನ್ನು ಸದಾಕಾಲದಲ್ಲಿಯೂ ಭಕ್ತಿಯಿಂದ ಪೂಜಿಸುತ್ತಿರುವರು.

೧೩೭. ಜಂಬೂದ್ವೀಪದಲ್ಲಿ ನಾನಾವಿಧವಾದ ರತ್ನಗಳು ವಿಶೇಷವಾಗಿ ಸಿಕ್ಕುತ್ತವೆ. ಈ ಮೇಲೆ ನಿರೂಪಿಸಿರುವ ಸಪ್ತದ್ವೀಪಗಳ ಪ್ರಜೆಗಳು ಸಾಧಾರಣವಾಗಿ ಮುಂದೆ ತಿಳಿಸುವಂತಿರುವರು.

೧೩೮. ಸರ್ವಪ್ರಜೆಗಳೂ ಬ್ರಹ್ಮಚರ್ಯಸಂಪನ್ನರೂ ಸತ್ಯವಂತರೂ ಜಿತೇಂದ್ರಿಯರೂ ಆಯುರಾರೋಗ್ಯವಂತರೂ ಅತ್ಯಧಿಕವಾದ ಗುಣವಂತರೂ ಆಗಿರುವರು.

೧೩೯. ಪುಷ್ಕರದ್ವೀಪದಲ್ಲಿರುವ ಮಹಾವೀತಖಂಡ ಧಾತುಕೀಖಂಡವೆಂಬ ಎರಡು ಖಂಡಗಳಲ್ಲಿಯೂ ಸಜ್ಜನರು ವಿಶೇಷವಾಗಿ ಭೂಷಣಪ್ರಾಯವಾಗಿರುವರು. ಅವರನ್ನು ಬ್ರಹ್ಮಾದಿತ್ರಿಮೂರ್ತಿಗಳೂ ರಕ್ಷಿಸಿಕೊಂಡಿರುವರು.

ಈಶ್ವರೋ ದಂಡಮುದ್ಯಮ್ಯ ಬ್ರಹ್ಮಾ ತ್ರಿಭುವನೇಶ್ವರಃ ।
ಸವಿಷ್ಣುಃ ಸಶಿವೋ ದೇವಃ ಸಪಿತಾ ಸಪಿತಾಮಹಃ ॥ ೧೪೦ ॥

ಭೋಜನಂಚಾ ಪ್ರಯತ್ನೇನ ತತ್ರ ಸ್ವಯಮುಪಸ್ಥಿತಂ ।
ಷಡ್ರಸಂ ಸುಮಹಾವೀರ್ಯಂ ಭುಂಜತೇ ಚ ಪ್ರಜಾಃ ಸದಾ ॥ ೧೪೧ ॥

ಪರೇಣ ಪುಷ್ಕರಸ್ಯಾಥ ಆವೃತ್ಯಾ ಯಃ ಸ್ಥಿತೋ ಮಹಾನ್ ।
ಸ್ವಾದೂದಕಃ ಸಮುದ್ರಸ್ತು ಸಮಂತಾತ್ಪರಿವೇಷ್ಟಿತಃ ॥ ೧೪೨ ॥

ಪರೇಣ ತಸ್ಯ ಮಹತೀ ದೃಶ್ಯತೇ ಲೋಕಸಂಸ್ಥಿತಿಃ ।
ಕಾಂಚನೀ ದ್ವಿಗುಣಾ ಭೂಮಿಃ ಸರ್ವಾ ಚೈಕಶಿಲೋಪಮಾ ॥ ೧೪೩ ॥

---

೧೪೦. ಪರಮೇಶ್ವರನು ದಂಡವನ್ನು ಎತ್ತಿ ಹಿಡಿದು ದುಷ್ಟರನ್ನು ಶಿಕ್ಷಿಸುತ್ತಿರುವನು. ತ್ರಿಭುವನೇಶ್ವರನಾದ ಬ್ರಹ್ಮನೂ ದೇವದೇವೇಶನಾದ ವಿಷ್ಣುವೂ ಕೂಡ ಆ ಪ್ರಜೆಗಳನ್ನು ಕಾಪಾಡುತ್ತಿರುವರು. ಹೀಗೆ ಲೋಕವಂದಿತವಾದ ಬ್ರಹ್ಮ, ವಿಷ್ಣು, ಮಹೇಶ್ವರರೂ ಕೂಡ ಪ್ರತ್ಯಕ್ಷವಾಗಿ ಜಾಗರೂಕತೆಯಿಂದ ಪ್ರಜೆಗಳನ್ನು ಕಾಪಾಡುತ್ತಿರುವರು.

೧೪೧. ಆ ಪುಷ್ಕರದ್ವೀಪದಲ್ಲಿ ಪ್ರಜೆಗಳು ತಮ್ಮ ಪ್ರಯತ್ನವಿಲ್ಲದೆಯೇ ಕೇವಲ ಸ್ಮರಣಮಾತ್ರದಿಂದಲೇ ಷಡ್ರಸೋಪೇತವೂ ಅತಿವೀರ್ಯದಾಯಕವೂ ಶಕ್ತಿಪ್ರದವೂ ಸ್ವತಃಸಿದ್ಧವೂ ಆದ ದಿವ್ಯಾಹಾರಗಳನ್ನು ಸದಾಕಾಲದಲ್ಲಿಯೂ ಪಡೆಯುವರು.

೧೪೨. ಆ ಪುಷ್ಕರದ್ವೀಪದ ಸುತ್ತಲೂ ಅತಿ ವಿಶಾಲವೂ ದಿವ್ಯಸ್ವಾದೂದಕವೂ ಇರುವ ಸಮುದ್ರವಿರುವುದು. ಆ ಸ್ವಾದೂದಕಸಮುದ್ರವು ಪುಷ್ಕರದ್ವೀಪವನ್ನು ಆವರಿಸಿಕೊಂಡಿದೆ.

೧೪೩. ಸ್ವಾದೂದಕಸಮುದ್ರದ(ಆಚೆಗೆ) ಪಕ್ಕದಲ್ಲಿ ಆ ಸಮುದ್ರಕ್ಕಿಂತಲೂ ದ್ವಿಗುಣವಿಸ್ತಾರವೂ ಸುವರ್ಣಮಯವೂ ಒಂದೇ ಹಾಸುಕಲ್ಲಿನಂತೆ ಅತಿ ವಿಶಾಲವೂ ಆದ ಲೋಕವಿರುವುದು.

ತಸ್ಮಾತ್ಪರೇಣ ಶೈಲಸ್ತು ಮರ್ಯಾದಾಂತೇ ತು ಮಂಡಲಂ ।
ಪ್ರಕಾಶಶ್ಚಾಪ್ರಕಾಶಶ್ಚ ಲೋಕಾಲೋಕಃ ಸ ಉಚ್ಯತೇ ॥ ೧೪೪ ॥

ಆಲೋಕಸ್ತಸ್ಯ ಚಾರ್ವಾಕ್ತು ನಿರಾಲೋಕಸ್ತತಃ ಪರಂ ।
ಯೋಜನಾನಾಂ ಸಹಸ್ರಾಣಿ ದಶ ತಸ್ಯೋಚ್ಛ್ರಯಃ ಸ್ಮೃತಃ ॥ ೧೪೫ ॥

ತಾವಾಂಶ್ಚ ವಿಸ್ತರಸ್ತಸ್ಯ ಪೃಥಿವ್ಯಾಂ ಕಾಮಗಶ್ಚ ಸಃ ।
ಆಲೋಕೇ ಲೋಕಶಬ್ದಸ್ತು ನಿರಾಲೋಕೇ ಸಲೋಕತಾ ।
ಲೋಕಾರ್ಥಂ ಸಮ್ಮತೋ ಲೋಕೋ ನಿರಾಲೋಕಸ್ತು ಬಾಹ್ಯತಃ ॥ ೧೪೬ ॥

ಲೋಕವಿಸ್ತಾರಮಾತ್ರಂ ತು ಆಲೋಕಃ ಸರ್ವತೋ ಬಹಿಃ ।
ಪರಿಚ್ಛಿನ್ನಃ ಸಮಂತಾಚ್ಚ ಉದಕೇನಾವೃತಶ್ಚ ಸಃ ।
ನಿರಾಲೋಕಾತ್ಪರಶ್ಚಾಪಿ ಅಂಡಮಾವೃತ್ಯ ತಿಷ್ಠತಿ ॥ ೧೪೭ ॥

---

೧೪೪. ಆ ಸುವರ್ಣಮಯಭೂಮಿಯ ಸಮೀಪದಲ್ಲಿ ಲೋಕದ ಎಲ್ಲೆಯನ್ನು ಸೂಚಿಸುವಂತೆ ಮಂಡಲಾಕಾರವೂ ಒಂದು ಭಾಗವು ಪ್ರಕಾಶವುಳ್ಳದ್ದೂ ಮತ್ತೊಂದು ಭಾಗವು ಪ್ರಕಾಶರಹಿತವೂ ಲೋಕಾಲೋಕನಾಮಕವೂ ಆದ ಪರ್ವತೋತ್ತಮವಿರುತ್ತದೆ.

೧೪೫. ಆ ಲೋಕಾಲೋಕಪರ್ವತದ ಮುಂಭಾಗದಲ್ಲಿ ಬೆಳಕೂ ಮತ್ತೊಂದು ಭಾಗದಲ್ಲಿ ಅಂಧಕಾರವೂ ಇರುವುವು ಆ ಪರ್ವತವು ಹತ್ತುಸಾವಿರಯೋಜನಗಳಷ್ಟು ಎತ್ತರವಾಗಿದೆ.

೧೪೬. ಆ ಪರ್ವತವು ಹತ್ತುಸಾವಿರಯೋಜನ ವಿಸ್ತಾರವಾಗಿದೆ. ಅದು ಭೂಮಿಯಲ್ಲಿ ಸ್ವೇಚ್ಛಾಚಾರಿಯಾಗಿಯೂ ಆಗಿದೆ. ಪ್ರಕಾಶರೂಪಾರ್ಥದಲ್ಲಿ ಲೋಕಶಬ್ದವನ್ನೂ ಅಪ್ರಕಾಶವೆಂಬ ಅರ್ಥದಲ್ಲಿ ನಿರಾಲೋಕಶಬ್ದವನ್ನೂ ಉಪಯೋಗಿಸಿರುತ್ತಾರೆ ಪ್ರಕಾಶವು ಜನಗಳಿಗೆ ಇಷ್ಟವಾಗಿದೆ ಅಪ್ರಕಾಶವು ಲೋಕಗಳಿಗೆ ಅನಿಷ್ಟವಾಗಿದೆ. ಆದುದರಿಂದ ಪ್ರಕಾಶವು ಒಳಭಾಗದಲ್ಲಿಯೂ ಅಪ್ರಕಾಶವು ಹೊರಭಾಗದಲ್ಲಿಯೂ ಇರುತ್ತವೆ.

೧೪೭. ಆ ಪರ್ವತದ ಲೋಕವಿರುವ ಭಾಗವೆಲ್ಲವೂ ಜನಗಳು ವಾಸಮಾಡುವುದಕ್ಕೆ ಅರ್ಹವಾಗಿದೆ. ಬೆಳಕಿಲ್ಲದೆ ನಿರಾಲೋಕಭಾಗವು ಜನಗಳ ವಾಸಕ್ಕೆ ಅನರ್ಹವಾಗಿದೆ ಆ ಪರ್ವತವು ಜಲದಿಂದ ಆವೃತವಾಗಿದೆ. ನಿರಾಲೋಕಪ್ರದೇಶವು ಬ್ರಹ್ಮಾಂಡದವರೆಗೂ ವ್ಯಾಪಿಸಿಕೊಂಡಿದೆ. ಬ್ರಹ್ಮಾಂಡವನ್ನೂ ಆವರಿಸಿಕೊಂಡಿದೆ.

ಅಂಡಸ್ಯಾಂತಸ್ತ್ವಿಮೇ ಲೋಕಾಃ ಸಪ್ತದ್ವೀಪಾ ಚ ಮೇದಿನೀ ।
ಭೂರ್ಲೋಕೋಽಥ ಭುವರ್ಲೋಕಃ ಸ್ವರ್ಲೋಕೋಽಥ ಮಹಸ್ತಥಾ ॥

ಜನಸ್ತಪಸ್ತಥಾ ಸತ್ಯ ಏತಾವಾನ್ ಲೋಕಸಂಗ್ರಹಃ ।
ಏತಾವಾನೇವ ವಿಜ್ಞೇಯೋ ಲೋಕಾಂತಶ್ಚೈವ ತತ್ಪರಃ ॥ ೧೪೯ ॥

ಕುಂಭಸ್ಥಾಯೀ ಭವೇದ್ಯಾದೃಕ್ ಪ್ರತೀಚ್ಯಾಂ ದಿಶಿ ಚಂದ್ರಮಾಃ ।
ಆದಿತಃ ಶುಕ್ಲಪಕ್ಷಸ್ಯ ವಪುರಂಡಸ್ಯ ತದ್ವಿಧಿಂ ॥ ೧೫೦ ॥

ಅಂಡಾನಾಮೀದೃಶಾನಾಂತು ಕೋಟ್ಯೋ ಜ್ಞೇಯಾಃ ಸಹಸ್ರಶಃ ।
ತಿರ್ಯಗೂರ್ಧ್ವಮಧಸ್ತಾಚ್ಚ ಕಾರಣಸ್ಯಾವ್ಯಯಾತ್ಮನಃ ।
ಕಾರಣೈಃ ಪ್ರಾಕೃತೈಸ್ತತ್ರ ಹ್ಯಾವೃತಂ ಪ್ರತಿಸಪ್ತಭಿಃ ॥ ೧೫೧ ॥

---

೧೪೮-೧೪೯. ಬ್ರಹ್ಮಾಂಡದ ಒಳಭಾಗದಲ್ಲಿ ಈ ಲೋಕಗಳೂ ಸಪ್ತದ್ವೀಪಗಳಿಂದ ಸಹಿತವಾದ ಭೂಮಂಡಲವೂ ಇರುವುವು. ಭೂಲೋಕ, ಭುವರ್ಲೋಕ, ಸ್ವರ್ಗಲೋಕ, ಮಹರ್ಲೋಕ, ಜನಲೋಕ, ತಪೋಲೋಕ ಮತ್ತು ಸತ್ಯಲೋಕವೆಂಬ ಸಪ್ತಲೋಕಗಳೂ ಇವೆ. ಹೀಗೆ ಲೋಕಗಳನ್ನು ಸಂಗ್ರಹಿಸಿ ಹೇಳಿರುತ್ತೇನೆ. ಸಪ್ತಲೋಕಗಳು ಮಾತ್ರವೇ ಇರುವುವು ಅವುಗಳ ತರುವಾಯ ಯಾವ ಲೋಕವೂ ಇಲ್ಲ.

೧೫೦. ಬ್ರಹ್ಮಾಂಡದ ಪಶ್ಚಿಮಭಾಗದಲ್ಲಿ ಕುಂಭದ ಮೇಲೆ ಒಂದು ವಸ್ತುವಿರುವಂತೆ ಶುಕ್ಲಪಕ್ಷದಲ್ಲಿ ಚಂದ್ರನು ಅಂಡಾಕಾರವಾಗಿ ಹೊಳೆಯುವನು. ಶುಕ್ಲಪಕ್ಷದ ಆದಿಯಲ್ಲಿ ಚಂದ್ರನು ಅಂಡಾಕಾರವಾಗಿರುವನು.

೧೫೧. ಇವುಗಳಿಗೆಲ್ಲ ಕಾರಣನೂ ನಾಶರಹಿತನೂ, ಜ್ಞಾನಿಯೂ ಆದ ಭಗವಂತನ ಅಪರಿಮಿತವಾದ ಶಕ್ತಿಯಿಂದ ಚಂದ್ರನಂತೆ ಅಂಡಾಕಾರವಾದ ಗ್ರಹಗಳು ಸಹಸ್ರ ಸಂಖ್ಯಾಕಗಳಾಗಿಯೂ ಕೋಟಿ ಸಂಖ್ಯಾಕಗಳಾಗಿಯೂ ಇರುತ್ತವೆ. ಅಂಡಾದಿಗಳು ತಮಗೆ ಕಾರಣಗಳಾದ ಸಪ್ತಪ್ರಕೃತಿಗಳ ಆವರಣಗಳಿಂದ ಕೂಡಿವೆ.

ದಶಾಧಿಕ್ಯೇನ ಚಾನ್ಯೋನ್ಯಂ ಧಾರಯಂತಿ ಪರಸ್ಪರಂ ।
ಪರಸ್ಪರಾವೃತಾಃ ಸರ್ವೇ ಉತ್ಪನ್ನಾಶ್ಚ ಪರಸ್ಪರಾತ್ ॥ ೧೫೨ ॥

ಅಂಡಸ್ಯಾಸ್ಯ ಸಮಂತಾತ್ತು ಸನ್ನಿವಿಷ್ಟೋ ಘನೋದಧಿಃ ।
ಸಮಂತಾದ್ಯೇನ ತೋಯೇನ ಧಾರ್ಯಮಾಣಃ ಸ ತಿಷ್ಠತಿ ॥ ೧೫೩ ॥

ಬಾಹ್ಯತೋ ಘನತೋಯಸ್ಯ ತಿರ್ಯಗೂರ್ಧ್ವ್ವಮನುಮಂಡಲಂ ।
ಧಾರ್ಯಮಾಣಂ ಸಮಂತಾತ್ತು ತಿಷ್ಠತೇ ಘನತೇಜಸಾ ॥ ೧೫೪ ॥

ಆಯೋಗುಡನಿಭೋ ವಹ್ನಿಃ ಸಮಂತಾನ್ಮಂಡಲಾಕೃತಿಃ ।
ಸಮಂತಾದ್ಘನವಾತೇನ ಧಾರ್ಯಮಾಣಃ ಸ ತಿಷ್ಠತಿ ।
ಘನವಾತಸ್ತಥಾಕಾಶಂ ಧಾರಯಾಣಸ್ತು ತಿಷ್ಠತಿ ॥ ೧೫೫ ॥

ಭೂತಾದಿಶ್ಚ ತಥಾಕಾಶಂ ಭೂತಾದ್ಯಂಚಾಪ್ಯಸೌ ಮಹಾನ್ ।
ಮಹಾನ್ ವ್ಯಾಪ್ತೋ ಹ್ಯನಂತೇನ ಅವ್ಯಕ್ತೇನ ತು ಧಾರ್ಯತೇ ॥ ೧೫೬ ॥

---

೧೫೨. ಅಂಡಾದಿಗಳು ತನಗಿಂತಲೂ ಹತ್ತರಷ್ಟು ಅಧಿಕವಾದ ಘನೋದಕಾದಿಗಳಿಂದ ಆವೃತವಾಗಿವೆ ಆಮದರಿಂದ ಯಾವ ವಸ್ತುವು ಉತ್ಪನ್ನವಾಗಿದೆಯೋ ಅದು ಅದರಿಂದ ಆವೃತವಾಗಿದೆ. ಹೀಗೆ ಪರಸ್ಪರೋತ್ಪನ್ನಗಳಾದುವು ಪರಸ್ಪರಾವೃತಗಳಾಗಿವೆ.

೧೫೩. ಬ್ರಹ್ಮಾಂಡದ ಹೊರಗೆ ಬ್ರಹಾಂಡಕ್ಕಿಂತಲೂ ಹತ್ತರಷ್ಟು ಅಧಿಕವಾದ ಘನೋದಕಸಮುದ್ರವಿರುತ್ತದೆ ಈ ಬ್ರಂಹ್ಮಾಂಡವು ಆ ಘನೋದಕಸಮುದ್ರದಿಂದಲೇ ಧರಿಸಲ್ಪಟ್ಟು ನಿಂತಿದೆ. ಆ ಘನೋದಕಸಮುದ್ರದ ಶಕ್ತಿಯಿಂದ ಬ್ರಹ್ಮಾಂಡವು ನಿಂತಿದೆ.

೧೫೪. ಆ ಘನೋದಕಸಮುದ್ರದ ಸುತ್ತಮುತ್ತಲೂ ಅದಕ್ಕಿಂತ ದಶಭಾಗಾಧಿಕವಾದ ಮಂಡಲಾಕಾರದ ಘನತೇಜಸ್ಸು ಇರುತ್ತದೆ. ಆ ಘನತೇಜಸ್ಸಿನ ಶಕ್ತಿಯಿಂದ ಧರಿಸಲ್ಪಟ್ಟು ಘನೋದಕಸಮುದ್ರವು ನಿಂತಿದೆ. ಘನೋದಕಕ್ಕೆ ಘನವಾದ ತೇಜಸ್ಸೇ ಆಧಾರವಾಗಿದೆ.

೧೫೫-೧೫೬. ಆ ಘನತೇಜಸ್ಸು ಕಾದ ಕಬ್ಬಿಣದ ಗುಂಡಿನಂತೆ ಮಂಡಲಾಕಾರವಾಗಿ ಜಲಕ್ಕೆ ಆಶ್ರಯವಾಗಿದೆ. ಆ ಘನತೇಜಸ್ಸು ದಶಭಾಗಾಧಿಕವಾದ ಘನವಾತದಿಂದ ಧರಿಸಲ್ಪಟ್ಟು ನಿಂತಿದೆ. ಅಗ್ನಿಗೆ ವಾಯುವು ಆಧಾರವಾಗಿದೆ. ಆ ಘನವಾತವೂ ಕೂಡ ಆಕಾಶದ ಆಧಾರದಿಂದ ನಿಂತಿದೆ. ಆ ಆಕಾಶವೂ ಕೂಡ ಭೂತಾದಿಗಳನ್ನು ಆಶ್ರಯಿಸಿ

ಅನಂತಮಪರಿವ್ಯಕ್ತಂ ದಶಧಾ ಸೂಕ್ಷ್ಮ ಏವ ಚ ।
ಅನಂತಮಕೃತಾತ್ಮಾನಮನಾದಿನಿಧನಂಚ ತತ್ ॥ ೧೫೭ ॥

ಅತೀತ್ಯ ಪರತೋ ಘೋರಮನಾಲಂಬಮನಾಮಯಂ ।
ನೈಕಯೋಜನಸಾಹಸ್ರಂ ವಿಪ್ರಕೃಷ್ಟಂ ತಮೋವೃತಂ ॥ ೧೫೮ ॥

ತಮ ಏವ ನಿರಾಲೋಕಮಮರ್ಯಾದಮದೇಶಿಕಂ ॥
ದೇವಾನಾಮಪ್ಯವಿದಿತಂ ವ್ಯವಹಾರವಿವರ್ಜಿತಂ ॥ ೧೫೯ ॥

ತಮಸೋಽಂತೇ ಚ ವಿಖ್ಯಾತಮಾಕಾಶಾಂತೇ ಚ ಭಾಸ್ವರಂ ।
ಮರ್ಯಾದಾಯಾಮತಸ್ತಸ್ಯ ಶಿವಸ್ಯಾಯತನಂ ಮಹತ್ ॥ ೧೬೦ ॥

---

ಕೊಂಡಿವೆ. ಪಂಚಭೂತಗಳು ಪಂಚತನ್ಮಾತ್ರೆಗಳ ಅಧೀನವಾಗಿವೆ. ಪಂಚತನ್ಮಾತ್ರೆಗಳೂ ಸಹ ಮಹತ್ತತ್ತ್ವದ ಆಧಾರದಿಂದ ಇರುತ್ತವೆ ಆ ಮಹತ್ತತ್ತ್ವವೂ ಕೂಡ ಅನಂತವಾದ ಅವ್ಯಕ್ತತತ್ವವನ್ನು ಅಂದರೆ ಪ್ರಕೃತಿಯನ್ನು ಆಶ್ರಯಿಸುತ್ತದೆ. ಅಂದರೆ,

ಸೂಚನೆ:—ಶ್ರೀ ಭಗವಂತನು ತನ್ನಧೀನವೂ ಮಾಯಾರೂಪಿಯೂ ಆದ ಪ್ರಕೃತಿಯಿಂದ ಮಹತ್ತತ್ತ್ವವನ್ನೂ ಅದರಿಂದ ಅಹಂಕಾರತತ್ವವನ್ನೂ ಅದರಿಂದ ಪಂಚತನ್ಮಾತ್ರೆಗಳನ್ನೂ ಅವುಗಳಿಂದ ಪೃಥಿವ್ಯಾದಿ ಪಂಚಭೂತಗಳನ್ನೂ ಕ್ರಮವಾಗಿ ಸಕಲ ಲೋಕಗಳನ್ನೂ ಸೃಷ್ಟಿಸಿರುವನು.

೧೫೭. ಅನಂತವಾದ ಅವ್ಯಕ್ತತತ್ವವು (ಪ್ರಕೃತಿಯು) ದಶವಿಧವೂ ಸೂಕ್ಷ್ಮವೂ, ಅಂತರಹಿತವೂ, ಅನ್ಯರಿಂದ ಅಜನ್ಯವೂ, ಆದ್ಯಂತಶೂನ್ಯವೂ, ನಾಶರಹಿತವೂ, ಸರ್ವಾಧಾರಿಯೂ, ಲೋಕವಿಖ್ಯಾತವೂ ಆಗಿದೆ.

೧೫೮-೧೫೯. (ಅದರಿಂದ ಆಚೆಗೆ) ಅದರನಂತರ ನಿರಾಲಂಬವೂ, ಘೋರವೂ, ನಾಶರಹಿತವೂ ಆದ ತಮಸ್ಸು (ಅಂಧಕಾರವು) ಅನೇಕಯೋಜನ ವಿಸ್ತಾರವೂ ವಿಪ್ರಕೃಷ್ಟವೂ ಆಗಿದೆ. ಅಂತಹ ತಮಸ್ಸು ಆಲೋಕಶೂನ್ಯವಾಗಿಯೂ, ಮರ್ಯಾದಾತೀತವಾಗಿಯೂ, ಉಪದೇಶಿಸಲಶಕ್ಯವಾಗಿಯೂ, ದೇವತೆಗಳಿಂದಲೂ ಸಹ ತಿಳಿಯಲಶಕ್ಯವಾಗಿಯೂ, ವ್ಯವಹಾರಶೂನ್ಯವಾಗಿಯೂ ಇದೆ.

೧೬೦. ಆ ಅಂಧಕಾರಾನಂತರದಲ್ಲಿ ಅತ್ಯಂತ ಪ್ರಖ್ಯಾತವೂ, ಆಕಾಶದ ಸಮೀಪದಲ್ಲಿ ಅತ್ಯಂತ ದೇದೀಪ್ಯಮಾನವೂ ಅತಿವಿಸ್ತಾರವೂ ಆದ ಪ್ರದೇಶದಲ್ಲಿ ಪರಮೇಶ್ವರನ ದಿವ್ಯಾಲಯವು ಹೊಳೆಯುತ್ತಿರುವುದು.

**ತ್ರಿದಶಾನಾಮಗಮ್ಯಂ ತು ಸ್ಥಾನಂ ದಿವ್ಯಮಿತಿ ಶ್ರುತಿಃ ।**
**ಮಹತೋ ದೇವದೇವಸ್ಯ ಮರ್ಯಾದಾಯಾಂ ವ್ಯವಸ್ಥಿತಂ ॥ ೧೬೦ ॥**

**ಚಂದ್ರಾದಿತ್ಯಾವತತ್ಪಾಸ್ತು ಯೇ ಲೋಕಾಃ ಪ್ರಥಿತಾ ಬುಧೈಃ ।**
**ತೇ ಲೋಕಾ ಇತ್ಯಭಿಹಿತಾ ಜಗತಶ್ಚ ನ ಸಂಶಯಃ ॥ ೧೬೨ ॥**

**ರಸಾತಲತಲಾತ್ ಸಪ್ತ ಸಪ್ತೈವೋರ್ಧ್ವತಲಾಃ ಕ್ಷಿತೌ ।**
**ಸಪ್ತಸ್ಕಂಧಾಸ್ತಥಾ ವಾಯೋಃ ಸಬ್ರಹ್ಮಸದನಾ ದ್ವಿಜಾಃ ॥ ೧೬೩ ॥**

**ಆಪಾತಾಲಾದ್ದಿವಂ ಯಾವದತ್ರ ಪಂಚವಿಧಾ ಗತಿಃ ।**
**ಪ್ರಮಾಣಮೇತಜ್ಜಗತ ಏಷ ಸಂಸಾರಸಾಗರಃ ॥ ೧೬೪ ॥**

---

೧೬೧. ಆ ಸ್ಥಾನವು ದೇವತೆಗಳಿಗೆ ಅಗಮ್ಯವಾಗಿದೆ. ಎಂದು ಶ್ರುತಿಗಳು ಸಾರಿ ಹೇಳುತ್ತವೆ ಮಹಾತ್ಮನೂ ದೇವದೇವನೂ ಆದ ಪರಮೇಶ್ವರನ ಆಜ್ಞೆಗೆ ಒಳಪಟ್ಟಿದ್ದಾಗಿದೆ ಅವನ ಆಜ್ಞೆಯನ್ನು ಯಾರೂ ಮೀರುವುದಿಲ್ಲ.

೧೬೨ ಯಾವ ಲೋಕದಲ್ಲಿ ಸೂರ್ಯಚಂದ್ರರ ಸಂಚಾರವಿಲ್ಲವೋ ಮತ್ತು ಅದೇ ದೇವಲೋಕವೆಂದು ಜ್ಞಾನಿಗಳು ಹೇಳುವರೋ, ಆ ಲೋಕವೇ ಈಶ್ವರನ ಲೋಕವಾಗಿದೆಯೆಂದು ಜನರು ನಂಬಬೇಕು ಇದರಲ್ಲಿ ಸಂಶಯವಿಲ್ಲ.

೧೬೩ ರಸಾತಲದಿಂದ ಭೂಲೋಕದವರೆಗೂ ಏಳು ಲೋಕಗಳೂ ಭೂತಲ ದಿಂದ ಮೇಲಕ್ಕೆ ಏಳು ಲೋಕಗಳೂ ಇರುತ್ತವೆ. ಎಲೈ ದ್ವಿಜರೇ, ಈ ಹದಿನಾಲ್ಕು ಲೋಕಗಳಲ್ಲಿ ವಾಯುದೇವನ ಸಪ್ತಸ್ಕಂಧಗಳೂ ಬ್ರಹ್ಮದೇವನ ವಿದ್ಯಾಲಯವೂ ಇರುವುವು.

೧೬೪. ಪಾತಾಳಲೋಕದಿಂದ ಸ್ವರ್ಗಲೋಕಕ್ಕೆ ಹೋಗಲು ಐದು ಮಾರ್ಗ ಗಳಿವೆ ಇದು ಲೋಕಕ್ಕೆ ಪ್ರಮಾಣವಾಗಿದೆ. ಇದೇ ಸಂಸಾರಸಾಗರವು.

ಅನಾದ್ಯಂತಾ ಪ್ರಯಾತ್ಯೇವಂ ನೈಕಜಾತಿಸಮುದ್ಭವಾಃ ।
ವಿಚಿತ್ರಾ ಜಗತಃ ಸಾ ವೈ ಪ್ರವೃತ್ತಿರನವಸ್ಥಿತಾ ॥ ೧೬೫ ॥

ಯಥೈತದ್ಭೌತಿಕಂ ನಾಮ ನಿಸರ್ಗಬಹುವಿಸ್ತರಂ ।
ಅತೀಂದ್ರಿಯೈರ್ಮಹಾಭಾಗೈಃ ಸಿದ್ಧೈರಪಿ ನ ಲಕ್ಷ್ಯತೇ ॥ ೧೬೬ ॥

ಪೃಥಿವ್ಯಾಂಚಾಗ್ನಿವಾಯೂನಾಂ ಮಹತಸ್ತಮಸಸ್ತಥಾ ।
ಈಶ್ವರಸ್ಯ ತು ದೇವಸ್ಯ ಅನಂತಸ್ಯ ದ್ವಿಜೋತ್ತಮಾಃ ॥ ೧೬೭ ॥

ಕ್ಷಯೋ ವಾ ಪರಿಮಾಣಂ ವಾ ಅಂತೋ ವಾಪಿ ನ ವಿದ್ಯತೇ ।
ಅನಂತ ಏಷ ಸರ್ವತ್ರ ಸರ್ವಸ್ಥಾನೇಷು ಪಠ್ಯತೇ ।
ತಸ್ಯ ಚೋಕ್ತಂ ಮಯಾ ಪೂರ್ವಂ ತಸ್ಮಿನ್ನಾಮಾನುಕೀರ್ತನೇ ॥ ೧೬೮ ॥

ಯ ಏಷ ಶಿವನಾಮ್ನಾ ಹಿ ತದ್ವಃ ಕಾರ್ತ್ಸ್ನ್ಯೇನ ಕೀರ್ತಿತಂ ।
ಸ ಏಷ ಸರ್ವತ್ರ ಗತಃ ಸರ್ವಸ್ಥಾನೇಷು ಪೂಜ್ಯತೇ ॥ ೧೬೯ ॥

---

೧೬೫. ಸೃಷ್ಟಿಯ ಆದಿಯಿಂದ ಪ್ರಲಯಕಾಲದವರೆಗೂ ಜೀವನು ಸ್ವಕರ್ಮಾನುಸಾರ ಅನೇಕ ಜಾತಿಗಳಲ್ಲಿ ಜನನ ಮರಣಗಳನ್ನು ಹೊಂದುವನು. ಆದುದರಿಂದ ಜಗತ್ತಿನ ಸ್ಥಿತಿಗತಿಗಳು ವಿಚಿತ್ರವಾಗಿವೆ. ಈ ಪ್ರವೃತ್ತಿಯು ಅನವಸ್ಥಿತವಾಗಿದೆ.

೧೬೬. ಅತೀಂದ್ರಿಯರೂ ಮಹಾನುಭಾವರೂ ಆದ ಸಿದ್ಧಪುರುಷರೂ ಸಹ ಸ್ವಾಭಾವಿಕವಾಗಿ ಅತಿವಿಸ್ತಾರವೂ ವಿಚಿತ್ರವೂ ಆದ ಈ ಭೌತಿಕ ಸೃಷ್ಟಿಯನ್ನು ತಿಳಿಯಲು ಅಸಮರ್ಥರಾಗಿರುವರು. ಅವರಿಗೂ ತಿಳಿಯಲಶಕ್ಯವಾಗಿದೆ.

೧೬೭-೧೬೮. ಎಲೈ ವಿಪ್ರೋತ್ತಮರೇ, ಪೃಥಿವೀ, ಅಗ್ನಿ, ವಾಯು, ಮಹತ್ತತ್ವ, ತಮಸ್ಸು, ಅನಂತನೂ, ದೇವನೂ ಆದ ಈಶ್ವರ ಇವರಿಗೆ ಕ್ಷಯವೂ, ಪರಿಮಾಣವೂ, ಅಂತವೂ, ಆದಿಯೂ ಇರುವುದಿಲ್ಲ ಎಲ್ಲರೂ ಅಂತರಹಿತರೆಂದು ಸಮಸ್ತ ಶ್ರುತಿ ಸ್ಮೃತಿಗಳಲ್ಲಿ ಉಕ್ತವಾಗಿವೆ ಈ ವಿಷಯಗಳನ್ನು ನಾನು ಮೊದಲೇ ನಿಮಗೆ ತಿಳಿಸಿರುತ್ತೇನೆ.

೧೬೯. ಯಾವ ಭಗವಂತನು ಶಿವನಾಮದಿಂದ ಪ್ರಖ್ಯಾತನಾಗಿರುವನೋ ಆ ನಾಮಗಳನ್ನು ಸಂಪೂರ್ಣವಾಗಿ ತಿಳಿಸಿರುತ್ತೇನೆ. ಆ ಪರಮೇಶ್ವರನೇ ಎಲ್ಲೆಲ್ಲಿಯೂ ವ್ಯಾಪ್ತನಾಗಿರುವನು. ಸರ್ವರಿಂದ ಪೂಜ್ಯನಾಗಿಯೂ ಇರುವನು.

**ಭೂಮೌ ರಸಾತಲೇ ಚೈವ ಆಕಾಶೇ ಪವನೇಽನಲೇ ।**
**ಅರ್ಣವೇಷು ಚ ಸರ್ವೇಷು ದಿವಿ ಚೈವ ನ ಸಂಶಯಃ ॥ ೧೭೦ ॥**

**ತಥಾ ತಪಸಿ ವಿಜ್ಞೇಯ ಏಷ ಏವ ಮಹಾದ್ಯುತಿಃ ।**
**ಅನೇಕಧಾ ವಿಭಕ್ತಾಂಗೋ ಮಹಾಯೋಗೀ ಮಹೇಶ್ವರಃ ।**
**ಸರ್ವಲೋಕೇಷು ಲೋಕೇಶ ಇಜ್ಯತೇ ಬಹುದಾ ಪ್ರಭುಃ ॥ ೧೭೧ ॥**

**ಏವಂ ಪರಸ್ಪರೋತ್ಪನ್ನಾ ಧಾರ್ಯಂತೇ ಚ ಪರಸ್ಪರಾತ್ ।**
**ಆಧಾರಾಧೇಯಭಾವೇನ ವಿಕಾರಾಸ್ತೇ ವಿಕಾರಿಣಃ ॥ ೧೭೨ ॥**

**ಪೃಥ್ವ್ಯಾದಯೋ ವಿಕಾರಾಸ್ತೇ ಪರಿಚ್ಛಿನ್ನಾಃ ಪರಸ್ಪರಂ ।**
**ಪರಸ್ಪರಾಧಿಕಾಶ್ಚೈವ ಪ್ರವಿಷ್ಟಾಚ ಪರಸ್ಪರಂ ॥ ೧೭೩ ॥**

**ಯಸ್ಮಾದ್ವಿಷ್ಟಾಚ ತೇನ್ಯೋಽನ್ಯಂ ತಸ್ಮಾತ್ ಸ್ಥೈರ್ಯಮುಪಾಗತಾಃ ।**
**ಪ್ರಾಗಾಸನ್ ಹ್ಯವಿಶೇಷಾಸ್ತು ವಿಶೇಷಾನ್ಯೋಽನ್ಯವೇಶನಾತ್ ।**
**ಪೃಥಿವ್ಯಾದ್ಯಾಶ್ಚ ವಾಯ್ವಂತಾಃ ಪರಿಚ್ಛಿನ್ನಾಸ್ತ್ರಯಸ್ತು ತೇ ॥ ೧೭೪ ॥**

---

೧೭೦-೧೭೧ ಯಾವ ಭಗವಂತನು ಭೂಮಿ, ಪಾತಾಲ, ಆಕಾಶ, ಅಗ್ನಿ, ವಾಯು, ಸಮುದ್ರ, ತಪಸ್ಸು ಮತ್ತು ಸ್ವರ್ಗ ಇವೇ ಮೊದಲಾದ ಸ್ಥಳಗಳಲ್ಲಿ ವ್ಯಾಪ್ತನಾಗಿರುವನೋ, ಅಂತಹ ಭಗವಂತನೇ ಮಹಾಕಾಂತಿವಂತನೂ, ಅನೇಕವಾಗಿ ವಿಭಕ್ತವಾದ ಅವಯವವುಳ್ಳವನೂ, ಮಹಾಯೋಗಿಯೂ, ಮಹೇಶ್ವರನೂ, ಲೋಕೇಶನೂ, ಸರ್ವಲೋಕವಂದಿತನೂ, ಪೂಜ್ಯನೂ ಆಗಿರುವನು.

೧೭೨. ಹೀಗೆ ಪರಸ್ಪರವಾಗಿ ಉತ್ಪನ್ನಗಳಾದ ವಸ್ತುಗಳು ಒಂದನ್ನೊಂದು ಆಶ್ರಯಿಸಿಕೊಂಡಿವೆ. ವಿಕಾರವಾದ ಕುಂಡಲಾದಿಗಳು ವಿಕಾರಿಯಾದ ಸುವರ್ಣಾದಿಗಳನ್ನು ಆಧಾರಾಧೇಯಭಾವದಿಂದ ಆಶ್ರಯಿಸಿಕೊಂಡಿವೆ.

೧೭೩. ಹೀಗೆ ಪೃಥಿವಿಯೇ ಮೊದಲಾದ ಪಂಚಭೂತಾದಿಗಳು ಪರಸ್ಪರಾಶ್ರಯವಾಗಿಯೂ, ಅಧಿಕವಾಗಿಯೂ, ಪ್ರವೇಶಾರ್ಹವಾಗಿಯೂ, ಆಧಾರಾಧೇಯರೂಪವಾಗಿಯೂ ಇವೆ.

೧೭೪ ಆ ಭೂತಗಳು ಒಂದನ್ನೊಂದು ಆಶ್ರಯಿಸಿಕೊಂಡಿರುವುದರಿಂದ ಸ್ಥಿರವಾಗಿವೆ. ಮೊದಲು ಸೂಕ್ಷ್ಮರೂಪವಾಗಿದ್ದು ಪರಸ್ಪರ ಪ್ರವೇಶದಿಂದ ವಿಶೇಷವಾಗಿವೆ. ಪೃಥಿವೀ, ಜಲ, ತೇಜಸ್ಸು ಇವು ಮೂರೂ ಪರಿಚ್ಛಿನ್ನಗಳಾಗಿವೆ. ಅಂದಗೆ ಇಷ್ಟೆಂದು ಅಳೆಯಲು ಸಾಧ್ಯಗಳಾಗಿವೆ.

ಗುಣಾಪಚಯಸಾರೇಣ ಪರಿಚ್ಛೇದೋ ವಿಶೇಷತಃ ।
ಶೇಷಾಣಾಂ ತು ಪರಿಚ್ಛೇದಃ ಸೌಕ್ಷ್ಮ್ಯಾನ್ನೇಹ ವಿಭಾವ್ಯತೇ ॥ ೧೭೫ ॥

ಭೂತೇಭ್ಯಃ ಪರತಸ್ತೇಭ್ಯೋ ಹ್ಯಾಲೋಕಃ ಪರತಃ ಸ್ಮೃತಃ ।
ಭೂತಾನ್ಯಾಲೋಕ ಆಕಾಶೇ ಪರಿಚ್ಛಿನ್ನಾನಿ ಸರ್ವಶಃ ॥ ೧೭೬ ॥

ಪಾತ್ರೇ ಮಹತಿ ಪಾತ್ರಾಣಿ ಯಥೈವಾಂತರ್ಗತಾನಿ ತು ।
ಭವಂತ್ಯನ್ಯೋನ್ಯಹೀನಾನಿ ಪರಸ್ಪರಸಮಾಶ್ರಯಾತ್ ॥
ತಥಾ ಹ್ಯಾಲೋಕ ಆಕಾಶೇ ಭೇದಾಸ್ತ್ವಂತರ್ಗತಾ ಮತಾಃ ॥ ೧೭೭ ॥

ಕೃತ್ಸ್ನಾನ್ಯೇತಾನಿ ಚತ್ವಾರಿ ಅನ್ಯೋನ್ಯಸ್ಯಾಧಿಕಾನಿ ತು ।
ಯಾವದೇತಾನಿ ಭೂತಾನಿ ತಾವದುತ್ಪತ್ತಿರುಚ್ಯತೇ ॥ ೧೭೮ ॥

---

೧೭೫. ಗುಣಗಳ ವೃದ್ಧಿಕ್ಷಯಗಳಿಂದ ವಸ್ತುಗಳು ಪರಿಚ್ಛೇದ್ಯವಾಗುವುವು. ವಿಶೇಷಗಳು ಅತಿಸೂಕ್ಷ್ಮವಾಗಿರುವುದರಿಂದ ಅಪರಿಚ್ಛೇದ್ಯಗಳಾಗಿವೆ. ಇಷ್ಟು ಉದ್ದ ಅಗಲವೆಂದು ತಿಳಿಯಲಸಾಧ್ಯವಾಗಿವೆ.

೧೭೬. ಭೂತಗಳನಂತರ ಆಕಾಶದಲ್ಲಿ ಆಲೋಕವಿರುವುದರಿಂದ ಭೂತಾಲೋಕಗಳೆರಡೂ ಪರಿಚ್ಛಿನ್ನಗಳಾಗಿವೆ. ಆಕಾಶವು ಅಪರಿಚ್ಛಿನ್ನವಾಗಿದೆ. ಇಷ್ಟೆಂದು ತಿಳಿಯಲಶಕ್ಯವಾಗಿದೆ.

೧೭೭ ದೊಡ್ಡ ಪಾತ್ರೆಯಲ್ಲಿ ಸಣ್ಣಸಣ್ಣ ಪಾತ್ರೆಗಳು ಸೇರುವಂತೆ ದೊಡ್ಡ ವಸ್ತುಗಳಲ್ಲಿ ಸಣ್ಣಸಣ್ಣ ವಸ್ತುಗಳು ಸೇರಿಕೊಂಡು ಹೋಗುತ್ತವೆ. ಹಾಗೆಯೇ ಭೂತಗಳು ಆ ಲೋಕದಲ್ಲಿಯೂ ಆ ಲೋಕವು ಆಕಾಶದಲ್ಲಿಯೂ ಸೇರಿರುತ್ತವೆ. ಸಣ್ಣದೂ ದೊಡ್ಡದೂ ಎರಡೂ ಒಂದೇ ಆಗುವುದಿಲ್ಲ. ಪರಸ್ಪರ ಭೇದವು ಇದ್ದೇ ಇರುತ್ತದೆ.

೧೭೮. ಪೃಥಿವೀ, ಜಲ, ಅಗ್ನಿ, ಆಕಾಶ ಇವು ನಾಲ್ಕೂ ಒಂದಕ್ಕಿಂತ ಮತ್ತೊಂದು ದೊಡ್ಡದಾಗಿವೆ. ಈ ನಾಲ್ಕು ಭೂತಗಳೂ ಎಲ್ಲಿಯವರೆಗೂ ಇರುತ್ತವೆಯೋ ಅಲ್ಲಿಯವರೆಗೂ ಸೃಷ್ಟಿಯು ನಡೆಯುತ್ತಲೇ ಇರುತ್ತವೆ.

ಜಂತೂನಾಮಿಹ ಸಂಸ್ಕಾರೋ ಭೂತೇಷ್ವಂತರ್ಗತೋ ಮತಃ ।
ಪ್ರತ್ಯಾಖ್ಯಾಯ ಚ ಭೂತಾನಿ ಕಾರ್ಯೋತ್ಪತ್ತಿರ್ನ ವಿದ್ಯತೇ ॥ ೧೭೯ ॥

ತಸ್ಮಾತ್ಪರಿಮಿತಾ ಭೇದಾಃ ಸ್ಮೃತಾಃ ಕಾರ್ಯಾತ್ಮಕಾಸ್ತು ತೇ ।
ಕಾರಣಾತ್ಮಕಾಸ್ತಥೈವ ಸ್ಯುರ್ಭೇದಾ ಯೇ ಮಹದಾದಯಃ ॥ ೧೮೦ ॥

ಇತ್ಯೇಷ ಸನ್ನಿವೇಶೋ ವೋ ಮಯಾ ಪ್ರೋಕ್ತೋ ವಿಭಾಗಶಃ ।
ಸಪ್ತದ್ವೀಪಸಮುದ್ರಾಯಾ ಯಥಾತಥ್ಯೇನ ವೈ ದ್ವಿಜಾಃ ॥ ೧೮೧ ॥

ವಿಸ್ತಾರಾನ್ಮಂಡಲಾಚ್ಚೈವ ಪ್ರಸಂಖ್ಯಾತೇನ ಚೈವ ಹಿ ।
ವೈಶ್ವರೂಪಂ ಪ್ರಧಾನಸ್ಯ ಪರಿಮಾಣೈಕದೇಶಿಕಂ ॥ ೧೮೨ ॥

ಅಧಿಷ್ಠಾನಂ ಭಗವತೋ ಯಸ್ಯ ಸರ್ವಮಿದಂ ಜಗತ್ ।
ಏವಂ ಭೂತಗಣಾಃ ಸಪ್ತ ಸನ್ನಿವಿಷ್ಟಾಃ ಪರಸ್ಪರಂ ॥ ೧೮೩ ॥

---

೧೭೯. ಭೂತಗಳ ಸಂಸ್ಕಾರವೆಂದರೆ ಮತ್ತೊಂದು ವಸ್ತುವಿನಿಂದ ರೂಪಾಂತರವನ್ನು ಹೊಂದುವುದು. ಅಂತಹ ಭೂತಗಳೇ ಇಲ್ಲದಿದ್ದರೆ ಕಾರ್ಯೋತ್ಪತ್ತಿಯು ಹೇಗೆ ತಾನೆ ಆಗುವುದು.

೧೮೦. ಆದುದರಿಂದ ಮಹದಾದಿಗಳಿಗೂ ಭೂತಾದಿಗಳೂ ಕಾರ್ಯಕಾರಣ ರೂಪದಿಂದ ಭೇದಗಳು ವ್ಯಕ್ತವಾಗಿವೆ. ಭೂತಾದಿಗಳು ಮಹತ್ತದ ಕಾರ್ಯವಾಗಿದ್ದರೂ ಶರೀರಾದಿಗಳಿಗೆ ಕಾರಣಗಳಾಗಿವೆ

೧೮೧. ಎಲೈ ವಿಪ್ರೋತ್ತಮರೇ, ಈ ರೀತಿಯಾಗಿ ಭೂಮಂಡಲದ ವಿಭಾಗಗಳನ್ನು ಕ್ರಮವಾಗಿಯೂ ವಿಸ್ತಾರವಾಗಿಯೂ ನಿರೂಪಿಸಿರುತ್ತೇನೆ. ಆ ಭೂಮಂಡಲವು ಸಪ್ತದ್ವೀಪಗಳು, ಸಪ್ತಸಮುದ್ರ ಇವುಗಳಿಂದ ವ್ಯಾಪ್ತವಾಗಿದೆ. ಎಂಬ ಸರ್ವವಿಷಯಗಳನ್ನೂ ಯಥಾರ್ಥವಾಗಿ ನಿರೂಪಿಸಿರುವೆನು

೧೮೨. ಈ ಭೂಮಂಡಲದ ವಿಸ್ತಾರ, ಸುತ್ತಳತೆ, ಸಪ್ತದ್ವೀಪಗಳ ಸಂಖ್ಯೆ ಮೊದಲಾದುವನ್ನು ಹೇಳಿರುವುದರಿಂದ ಪ್ರಧಾನಪರಿಣಾಮರೂಪವಾದ ವಿಶ್ವದ ಸ್ವರೂಪವನ್ನು ನಿರೂಪಿಸಿದಂತೆಯೇ ಆಗಿದೆ.

೧೮೩. ಈ ಸಮಸ್ತವಾದ ಜಗತ್ತೆಲ್ಲ ಶ್ರೀಭಗವಂತನಿಗೆ ಅಧಿಷ್ಠಾನಭೂತವಾಗಿದೆ. ಹೀಗೆ ಸಪ್ತಭೂತಗಳೂ ಪರಸ್ಪರಸಂಬಂಧಗಳಾಗಿ ಆ ಭಗವಂತನಲ್ಲಿ ಪಾತ್ರೆಗಳಂತೆ ಅಡಗಿಕೊಂಡಿವೆ.

ಏತಾವಾನ್ ಸನ್ನಿವೇಶಸ್ತು ಮಯಾಶಕ್ಯಃ ಪ್ರಭಾಷಿತುಂ ।
ಏತಾವದೇವ ಶ್ರೋತವ್ಯಂ ಸನ್ನಿವೇಶೇ ತು ಪಾರ್ಥಿವ ॥ ೧೮೪ ॥

ಸಪ್ತ ಪ್ರಕೃತಯಸ್ತ್ವೇತಾ ಧಾರಯಂತಿ ಪರಸ್ಪರಂ ।
ತಾಸ್ವಲ್ಪಪರಿಮಾಣೇನ ಪ್ರಸಂಖ್ಯಾತುಮಿಹೋಚ್ಯತೇ ॥
ಅಸಂಖ್ಯೇಯಾಃ ಪ್ರಕೃತಯಸ್ತಿರ್ಯಗೂರ್ಧ್ವಮಧಶ್ಚ ಯಾಃ ॥ ೧೮೫ ॥

ತಾರಕಾಸನ್ನಿವೇಶಶ್ಚ ಯಾವದ್ದಿವ್ಯಂ ತು ಮಂಡಲಂ ।
ಮರ್ಯಾದಾಸನ್ನಿವೇಶಸ್ತು ಭೂಮೇಸ್ತದನುಮಂಡಲಂ ॥
ಅತಃ ಪರಂ ಪ್ರವಕ್ಷ್ಯಾಮಿ ಪೃಥಿವ್ಯಾಂ ವೈ ದ್ವಿಜೋತ್ತಮಾಃ ॥ ೧೮೬ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಭುವನವಿನ್ಯಾಸೋ" ನಾಮ ಏಕೋನಪಂಚವಿಂಶೋಽಧ್ಯಾಯಃ

---

೧೮೪. ನಾನು ತಿಳಿದ ಇಷ್ಟು ವಿಷಯಗಳನ್ನು ಮಾತ್ರ ನಿಮಗೆ ತಿಳಿಸಲು ಸಾಧ್ಯವೇ ಹೊರತು ಹೆಚ್ಚಿಗೆ ತಿಳಿಸಲು ಸಾಧ್ಯವಿಲ್ಲ. ಎಲೈ ರಾಜನೇ, ನೀನು ಕೇಳತಕ್ಕದ್ದೂ ತಿಳಿಯಬೇಕಾದುದೂ ಇಷ್ಟೇ ಸರಿ. ಹೆಚ್ಚಿಗೆ ಏನೂ ಇಲ್ಲವೆಂದನು.

೧೮೫. ಪಂಚಭೂತ ಮಹತ್ತತ್ವಪ್ರಕೃತಿಯೆಂಬ ಈ ಏಳು ಪ್ರಕೃತಿಗಳು ಅಶ್ರ ಯಾಶ್ರಯಭಾವದಿಂದಿವೆ. ಅವುಗಳಲ್ಲಿ ದೊಡ್ಡದು, ಸಣ್ಣದು ಎಂಬ ಸಾಮಾನ್ಯ ಪರಿ ಮಾಣದಿಂದ ನಿರೂಪಿತವಾಗಿವೆ. ಮೇಲೆ, ಕೆಳಗೆ, ಸುತ್ತಮುತ್ತಲೂ ಇರುವ ಸಣ್ಣಪ್ರಕೃತಿ ಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ತಿಳಿಸಲು ಸಾಧ್ಯವಿಲ್ಲ. ಅವು ಅಪರಿಮಿತಗಳಾಗಿವೆ.

೧೮೬. ಎಲೈ ಮಹರ್ಷಿಗಳಿರಾ, ಇದುವರೆಗೂ ಜಂಬೂದ್ವೀಪವೇ ಮೊದಲಾದ ಸಪ್ತದ್ವೀಪಗಳನ್ನೂ ಸಮುದ್ರಗಳನ್ನೂ ನಿಮಗಾಗಿ ತಿಳಿಸಿರುವೆನು. ಈಗ ನಕ್ಷತ್ರಗಳೇ ಮೊದಲಾದ ಖಗೋಳಗತವಾದ ವಿಷಯಗಳನ್ನೂ, ನಕ್ಷತ್ರಾದಿಮಂಡಲಗಳನ್ನೂ ಅವು ಗಳ ಪರಿಮಾಣ, ಸನ್ನಿವೇಶವೇ ಮೊದಲಾದವನ್ನೂ, ಭೂಮಿಗೂ ನಕ್ಷತ್ರಾದಿಮಂಡಲ ಗಳಿಗೂ ಇರುವ ಪರಿಮಾಣಾದಿಗಳನ್ನೂ ವಿವರಿಸುವೆನು ಕೇಳಿರಿ ಎಂದು ಸೂತ ಮುನಿಯು ಮುನಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಸಪ್ತದ್ವೀಪ ನಿರೂಪಣೆ" ಯೆಂಬ ನಲವತ್ತೊಂಬತ್ತನೆಯ ಅಧ್ಯಾಯವು ಸಮಾಪ್ತವಾದುದು.

# ನಲವತ್ತೊಂಬತ್ತನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಪ್ಲಕ್ಷದ್ವೀಪವೇ ಮೊದಲಾದ ದ್ವೀಪಗಳ ವಿಷಯವು ನಿರೂಪಿತಗಳಾಗಿವೆ. ಪ್ಲಕ್ಷದ್ವೀಪವು ಜಂಬೂದ್ವೀಪಕ್ಕಿಂತಲೂ ದ್ವಿಗುಣ ವಿಸ್ತಾರವಾಗಿದೆ. ಅದರಲ್ಲಿ ಸಪ್ತವರ್ಷಗಳೂ ಪರ್ವತಗಳೂ ಇವೆ. ಅವು ಗೋಮೇದ, ಚಂದ್ರದ್ವೀಪ, ನಾರದ, ದುಂದುಭಿ, ಸೋಮಕ. ಸುಮನಸ್ಸು, ವೈಭ್ರಾಜವೆಂಬ ಏಳುಪರ್ವತಗಳಾಗಿವೆ ಆಯಾ ವರ್ಷಗಳಿಗೆ ಆಯಾ ಪರ್ವತಗಳ ನಾಮಗಳೇ ಬಂದಿವೆ. ಅವುಗಳಲ್ಲಿ ದೇವಾದಿಗಳೂ ಮಹರ್ಷಿಗಳೂ ವಾಸಿಸುವರು. ಅನೇಕ ನದಿಗಳೂ ಇರುತ್ತವೆ.

ಶಾಲ್ಮಲೀದ್ವೀಪವು ಪ್ಲಕ್ಷದ್ವೀಪಕ್ಕಿಂತಲೂ ದೊಡ್ಡದು. ಅದರಲ್ಲಿ ಕುಮುದ, ಉನ್ನತ, ಬಲಾಹಕ, ದ್ರೋಣ, ಕಂಕ, ಮಹಿಷ, ಕಕುದ್ಮಂತವೆಂಬ ಏಳು ಗಿರಿಗಳೂ ಮಹಾನದಿಗಳೂ ರತ್ನಗಳ ಗಣಿಗಳೂ ಇವೆ ಮುತ್ತು, ಶ್ವೇತ, ಲೋಹಿತ, ಜೀಮೂತ, ಹರಿತ, ವೈದ್ಯುತ, ಮಾನಸ, ಸುಪ್ರಭೆ, ಎಂಬ ವರ್ಷಗಳೂ ಇವುಗಳಲ್ಲಿ ಕ್ರಮವಾಗಿ ಪಾನಿತೋಯಾ, ವಿತೃಷ್ಣಾ, ಚಂದ್ರಾ, ಶುಕ್ರಾ, ವಿಮೋಚಿನೀ, ನಿವೃತ್ತಿ ಸಪ್ತನದಿಗಳೂ ಇವೆ. ಈ ಶಾಲ್ಮಲೀದ್ವೀಪದ ಸುತ್ತಲೂ ಸುರಾಸಮುದ್ರವಿರುವುದು

ಹೀಗೆಯೇ ಕುಶದ್ವೀಪದಲ್ಲಿಯೂ ವಿದ್ರುಮ, ಹೇಮ, ದ್ಯುತಿಮಂತ, ಪುಷ್ಪವಂತ, ಕುಶೇಶಯ, ಹರಿಮಂದರವೆಂಬ ಸಪ್ತ ಪರ್ವತಗಳೂ ಉದ್ಭಿದ, ವೇಣುಮಂಡಲ ಸ್ವೈರಥ, ಲವಣ, ಧೃತಿಮಂತ, ಪ್ರಭಾಕರ, ಕಪಿಲವೆಂಬ ಸಪ್ತ ವರ್ಷಗಳೂ ಇವೆ. ಅದರಲ್ಲಿ ದೇವಗಂಧರ್ವರೇ . ಮೊದಲಾದವರು ವಾಸಿಸುವರು. ಅದರ ಸುತ್ತಲೂ ಘೃತ ಸಮುದ್ರವಿರುವುದು

ಕ್ರೌಂಚದ್ವೀಪವು ಕುಶದ್ವೀಪಕ್ಕಿಂತಲೂ ದ್ವಿಗುಣ ವಿಸ್ತಾರವಾಗಿದೆ. ಅದರ ಸುತ್ತಲೂ ಘೃತ ಸಮುದ್ರವಿರುವುದು. ಅದರಲ್ಲಿ ಕ್ರೌಂಚವೇ ಮೊದಲಾದ ಸಪ್ತ ಗಿರಿಗಳೂ ಕುಶಲಿಯೇ ಮೊದಲಾದ ಸಪ್ತ ವರ್ಷಗಳೂ ಇವೆ. ಅದರ ಸುತ್ತಲೂ ದೊಡ್ಡದಾದ ಮೊಸರಿನ ಸಮುದ್ರವಿರುತ್ತದೆ. ಶಾಕದ್ವೀಪವು ಕ್ರೌಂಚಕ್ಕಿಂತಲೂ ದೊಡ್ಡದು.

ಅಲ್ಲಿಯೂ ಮೇರುಗಿರಿಯೇ ಮೊದಲಾದ ಸಪ್ತ ಗಿರಿಗಳೂ ಜಲದವೇ ಮೊದಲಾದ ಸಪ್ತವರ್ಷಗಳೂ ಶಾಕವೃಕ್ಷವೂ ಸುಕುಮಾರವೇ ಮೊದಲಾದ ನದಿಗಳೂ ಸುತ್ತಲೂ ಕ್ಷೀರಸಾಗರವೂ ವರ್ಣಾಶ್ರಮಾಚಾರಧರ್ಮಗಳೂ ಇವೆ. ಪುಷ್ಕರದ್ವೀಪವು ಶಾಕ ದ್ವೀಪಕ್ಕೆ ದ್ವಿಗುಣವಾಗಿದೆ. ಅದರ ಸುತ್ತಲೂ ಸ್ವಾದೂದಕ ಸಮುದ್ರವಿದೆ. ಬ್ರಹ್ಮ ವಿಷ್ಣು ಮಹೇಶ್ವರರು ಸಾಕ್ಷಾತ್ತಾಗಿ ನಿಂತು ಪ್ರಜಾರಕ್ಷಣೆಮಾಡುವುದರಿಂದ ಜಾತಿ ಸಾಂಕರ್ಯಾದಿಗಳಿರುವುದಿಲ್ಲ ಆ ದ್ವೀಪದ ಸುತ್ತಲೂ ಕಾಂಚನಭೂಮಿಯೂ ಅನಂತರ ಲೋಕಾಲೋಕಪರ್ವತವೂ ತರುವಾಯ ಬ್ರಹ್ಮಾಂಡವು ಅದರಲ್ಲಿ ಭೂತಾದಿ ಲೋಕಗಳೂ ಸಪ್ತದ್ವೀಪಗಳೂ ಇವೆ. ಬ್ರಹ್ಮಾಂಡದ ಹೊರಗೆ ಘನೋದಧಿಯೂ ಅದರ ಸುತ್ತಲೂ ನಿಬಿಡತೇಜಸ್ಸೂ ತರುವಾಯ ನಿಬಿಡವಾತವು ಆಮೇಲೆ ಆಕಾಶವೂ ಅನಂತರ ಭೂತಗಳೂ ನಂತರ ಮಹತ್ತತ್ವವೂ ಇವೆ. ಇವು ಒಂದಕ್ಕೊಂದು ಆಶ್ರಯ ವಾಗಿದೆ. ಇವೆಲ್ಲಕ್ಕೂ ಅನಂತ ನಾಮಕನಾದ ಶ್ರೀ ಭಗವಂತನೇ ಆಶ್ರಯನಾಗಿರುವನು ಎಂಬ ಈ ವಿಷಯಗಳು ಈ ಅಧ್ಯಾಯದಲ್ಲಿ ವರ್ಣಿತಗಳಾಗಿವೆ.